# ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ/ದೇವಾಂಗ ಸಮುದಾಯದ ಅಧ್ಯಯನ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾ ಪ್ರಬಂಧ

ಸಂಶೋಧಕರು

ಮೀನಾಕ್ಷಿ ಕೆ.

ಮಾರ್ಗದರ್ಶಕರು

ಡಾ. ಎ. ಸುಬ್ಬಣ್ಣ ರೈ





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ

ವಿದ್ಯಾರಣ್ಯ - ೫೮೩.೨೭೬

ಮೇ, ೨೦೦೩.

# ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ / ದೇವಾಂಗ ಸಮುದಾಯದ ಅಧ್ಯಯನ

*ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್. ಡಿ) ಪದವಿಗಾಗಿ*
*ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾ ಪ್ರಬಂಧ*

*ಸಂಶೋಧಕರು*
ಮೀನಾಕ್ಷಿ ಕೆ.



*ಮಾರ್ಗದರ್ಶಕರು*
ಡಾ. ಎ. ಸುಬ್ಬಣ್ಣ ರೈ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ,
ಭಾಷಾ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ- ೫೮೩೨೭೬
ಮೇ, ೨೦೦೩.

15

# ಪ್ರಮಾಣ ಪತ್ರ

**ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ/ದೇವಾಂಗ ಸಮುದಾಯದ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್. ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. ಡಾ. ಎ. ಸುಬ್ಬಣ್ಣ ರೈ, ಪ್ರವಾಚಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಇವರು ಈ ಅಧ್ಯಯನಕ್ಕೆ ಮಾರ್ಗದರ್ಶನ ನೀಡಿದ್ದಾರೆ. ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪ್ರಕಟಣೆಗಳಲ್ಲಿ ಬಳಸಿಕೊಂಡಿಲ್ಲವೆಂದು ಪ್ರಮಾಣಿಸುತ್ತೇನೆ.

ಕೆ. ಮೀನಾಕ್ಷಿ

ಮೀನಾಕ್ಷಿ ಕೆ.
ಉಪನ್ಯಾಸಕಿ
ಬೆಸೆಂಟ್ ಮಹಿಳಾ ಕಾಲೇಜು
ಮಂಗಳೂರು

ಮಂಗಳೂರು
ದಿನಾಂಕ: ೨೧. ೧೧ ೨೦೦೨

# ದೃಢೀಕರಣ ಪತ್ರ

ಶ್ರೀಮತಿ ಮೀನಾಕ್ಷಿ ಕೆ, ಇವರು **ದಕ್ಷಿಣ ಕನ್ನಡ ಹಾಗೂ ಕಾಸಗೋಡಿನ ಶಾಲಿಯಾ/ದೇವಾಂಗ ಸಮುದಾಯದ ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಾದರಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ ಇದರಲ್ಲಿನ ಯಾವುದೇ ಭಾಗವನ್ನು ಈ ಮೊದಲು ಪದವಿಗಾಗಲಿ, ಪ್ರಕಟಣೆಗಾಗಲಿ ಬಳಸಿಕೊಂಡಿಲ್ಲವೆಂದು ದೃಢಪಡಿಸುತ್ತಿದ್ದೇನೆ.

ವಿದ್ಯಾರಣ್ಯ
ದಿನಾಂಕ: ೨೧.೦೧.೨೦೧೩

ಡಾ. ಎ. ಸುಬ್ಬಣ್ಣ ರೈ
ಪ್ರವಾಚಕ
ದ್ರಾವಿಡ ಸಂಸ್ಕೃತಿ ಅಧ್ಯಯನ
ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ,
ವಿದ್ಯಾರಣ್ಯ. ೫೮೩೨೭೬

# ಕೃತಜ್ಞತೆ

ಈ ಅಧ್ಯಯನಕ್ಕೆ ಸರ್ವ ವಿಧದಲ್ಲಿ ಸಹಕರಿಸಿದ

ಕನ್ನಡ ವಿಶ್ವವಿದ್ಯಾಲಯದ

ಕುಲಪತಿಗಳಿಗೆ

ಕುಲಸಚಿವರಿಗೆ

ಅಧ್ಯಯನಾಂಗದ ನಿರ್ದೇಶಕರಿಗೆ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಮುಖ್ಯಸ್ಥರಿಗೆ

ಸಂಶೋಧನಾ ಮಾರ್ಗದರ್ಶಕರಾದ ಡಾ. ಎ. ಸುಬ್ಬಣ್ಣ ರೈ

ಇವರಿಗೆ

ಹಾಗೂ

ಹಿತೈಷಿಗಳಿಗೆ, ಕೃತಜ್ಞತೆಗಳು.

# ಪರಿವಿಡಿ

## ಅಧ್ಯಾಯ – ೧

## ಪ್ರಸ್ತಾವನೆ



## ಅಧ್ಯಾಯ – ೨

## ಶಾಲಿಯಾ/ದೇವಾಂಗ ಸಮಾಜದ ಚರಿತ್ರೆ



## ಅಧ್ಯಾಯ – ೩

## ಶಾಲಿಯಾ/ದೇವಾಂಗರ ಸಾಂಸ್ಕೃತಿಕ ಜೀವನದ ಅಂಗವಾಗಿ "ತೆರು ಹಾಗೂ ನಗರಂ ವ್ಯವಸ್ಥೆ"

## ಅಧ್ಯಾಯ – ೪

### ಸಾಮಾಜಿಕ ಜೀವನ



## ಅಧ್ಯಾಯ –೫

### ಜೀವನಾವರ್ತನ ಆಚರಣೆಗಳು



## ಅಧ್ಯಾಯ – ೬

### ಧಾರ್ಮಿಕ ಜೀವನಾಚರಣೆ

## ಅಧ್ಯಾಯ – ೭

## ಜಾನಪದ ಲೋಕ



## ಅಧ್ಯಾಯ – ೮

## ವೃತ್ತಿ ಜಾನಪದ

# ಅಧ್ಯಾಯ – ೧

## ಪ್ರಸ್ತಾವನೆ

೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨. ಭಾರತೀಯ ಜಾತಿ ಪದ್ಧತಿ

೩. ಸಂಸ್ಕೃತಿ ಮತ್ತು ಸಮಾಜ

೪. ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಸಂಕ್ಷಿಪ್ತ ಪರಿಚಯ

೫. ಶಾಲಿಯಾ ಮತ್ತು ದೇವಾಂಗ ಪದದ ನಿಷ್ಪತ್ತಿ

## ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಕಡೆಗೆ ನೇಕಾರರು ವಲಸೆ ಬಂದಿರುವ ಸಾಧ್ಯತೆಯ ಭೂಪಟ ವಿವರ



ಭಾರತದ ಹತ್ತಿ ಬೆಳೆಯುವ ಪ್ರದೇಶಗಳು



ಕಪ್ಪು ಮಣ್ಣಿನ ಹತ್ತಿ ಬೆಳೆಗೆ ಅನುಕೂಲವಾದ ದಕ್ಷಿಣದ ಪೀಠಭೂಮಿ



ನೇಕಾರ ಜನಾಂಗವು ಬೇರೆ ಬೇರೆ ಪ್ರದೇಶಗಳಿಗೆ ವಲಸೆಯಾಗುತ್ತಾ ದ.ಕ. ಹಾಗೂ ಕಾಸರಗೋಡಿಗೆ ಆಗಮಿಸಿದ ಸಾಧ್ಯತೆ

ಗೋದಾವರಿ — ಉಗಮಸ್ಥಾನ

ಹಂಪಿ ತುಂಗಭದ್ರಾ ತೀರ — ಕೇಂದ್ರಸ್ಥಾನ

# ಪ್ರಸ್ತಾವನೆ

ಮಾನವನ ಮೂಲಭೂತ ಅವಶ್ಯಕತೆಗಳಾದ ಅಶನ, ವಸನ ಮತ್ತು ವಸತಿಗಳಲ್ಲಿ ವಸನಕ್ಕೆ ದ್ವಿತೀಯ ಸ್ಥಾನವಿದೆ. ಭಾರತದಲ್ಲಿ ವಸ್ತ್ರೋದ್ಯಮ ಯಾವಾಗ ಆರಂಭವಾಯಿತು ಎಂದು ನಿಖರವಾಗಿ ಹೇಳಲು ಸಾಧ್ಯವಾಗದಿದ್ದರೂ ಸಾವಿರಾರು ವರ್ಷಗಳ ಪ್ರಾಚೀನತೆ ಈ ಉದ್ಯಮಕ್ಕೆ ಇದೆ ಎನ್ನುವುದನ್ನು ನಾವು ಒಪ್ಪಿಕೊಳ್ಳಲೇಬೇಕಾಗುತ್ತದೆ. ವೃತ್ತಿಯ ಆಧಾರದಿಂದ ಜಾತಿ ನಿರ್ಮಾಣವಾಗುವ ಭಾರತೀಯ ಜಾತಿ ಪದ್ಧತಿಯ ಹಿನ್ನೆಲೆಯಲ್ಲಿ ನೇಕಾರ ವೃತ್ತಿಯನ್ನವಲಂಬಿಸಿಕೊಂಡ ವರ್ಗವು ಬೇರೆ ಬೇರೆ ಪ್ರದೇಶಗಳಲ್ಲಿ ವಿಭಿನ್ನ ಹೆಸರುಗಳಿಂದ ಕರೆಯಲ್ಪಟ್ಟಿರುವುದನ್ನು ಕಾಣಬಹುದು. ಒಂದೇ ಪ್ರದೇಶದಲ್ಲಿ ಒಂದೇವೃತ್ತಿಯನ್ನು ಅವಲಂಬಿಸಿಕೊಂಡಿದ್ದರೂ, ವಿಭಿನ್ನ ಹೆಸರಿನಿಂದ ಕರೆಯಲ್ಪಟ್ಟು, ಸಂಸ್ಕಾರ ಸಂಸ್ಕೃತಿಯಲ್ಲಿ ವಿಭಿನ್ನತೆಯನ್ನು ರೂಢಿಸಿಕೊಂಡು ನೇಕಾರ ಸಮುದಾಯವು ಜೀವಿಸುತ್ತಿರುವುದು ಕುತೂಹಲಕಾರಿಯಾಗಿ ಕಂಡುಬರುತ್ತದೆ. ಇದನ್ನು ಪ್ರಾದೇಶಿಕತೆ ಎನ್ನಬೇಕೇ? ಸಂಪ್ರದಾಯ ಎನ್ನಬೇಕೇ? ಮೂಲ ಸಂಸ್ಕೃತಿ ಎನ್ನಬೇಕೇ? ಎನ್ನುವುದು ಒಡೆಯಲಾರದ ಸಮಸ್ಯೆಯಾಗಿದೆ. ಸಾಮಾಜಿಕ ಹಾಗೂ ವೈಯುಕ್ತಿಕ ಕಾರಣಗಳಿಂದ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗಬೇಕಾಗಿ ಬಂದ ಈ ಸಮುದಾಯ, ಎಲ್ಲಿಂದಲೋ ಹುಟ್ಟಿ ಅಲ್ಲಿಂದ ತನ್ನ ಸಂಸ್ಕೃತಿಯ ಅನನ್ಯತೆಯನ್ನು ಉಳಿಸಿಕೊಂಡು, ವಲಸೆಬರುತ್ತಾ ತಾನು ನೆಲೆಸುತ್ತಾಬಂದ ಪ್ರದೇಶದ ಸಂಸ್ಕೃತಿಯನ್ನು ಸೇರಿಸಿಕೊಂಡು "ಮಿಶ್ರ ಸಂಸ್ಕೃತಿ"ಯೊಂದನ್ನು ರೂಪಿಸಿಕೊಳ್ಳುತ್ತಿರುವುದನ್ನು ಕಾಣಬಹುದು. ಹೀಗೆ ಬಂದಂತಹ "ಮಿಶ್ರ ಸಂಸ್ಕೃತಿ"ಯ ನೇಕಾರರ ಒಂದು ಗುಂಪು ಹಿಂದೆ "ತುಳುನಾಡು" ಎಂದು ಕರೆಯಲ್ಪಡುತ್ತಿದ್ದ ಪ್ರದೇಶದಲ್ಲಿ ಹರಡಿಕೊಂಡಿರುವುದು ಕಾಣಬಹುದು. (ತುಳುನಾಡು ಎಂದರೆ ಪಯಸ್ವಿನೀ ನದಿಯ ಉತ್ತರಕ್ಕೆ ತುಳು ಮೂವತ್ತೆರಡು ಗ್ರಾಮಗಳು, ದಕ್ಷಿಣಕ್ಕೆ ಮೂವತ್ತೆರಡು ಗ್ರಾಮಗಳು ಎಂದು ಇಲ್ಲಿನ ಭೂತಗಳ ನುಡಿಗಟ್ಟುಗಳು ಹೇಳುತ್ತವೆ). ತಮ್ಮೊಳಗೆ ತಮ್ಮ ಜಾತಿಯ ಹೆಸರಿನ ಬಗೆಗೆ ನಿರ್ದಿಷ್ಟತೆಯನ್ನು ಉಳಿಸಿಕೊಳ್ಳಲಾಗದ ಇವರು ಒಮ್ಮೆ "ಶಾಲಿಯಾ" ಇನ್ನೊಮ್ಮೆ "ಚಾಲಿಯಾ" ಮಗದೊಮ್ಮೆ "ದೇವಾಂಗ" ಇತ್ತೀಚೆಗೆ "ಪದ್ಮಶಾಲಿಯಾ" ಎಂದೆಲ್ಲಾ ಕರೆದುಕೊಳ್ಳುತ್ತಾರೆ. (ಕೆಲವೆಡೆ ಬರಿಯ "ಚೆಟ್ಟಿಯಾರ್" ಎಂದೂ ಹೇಳಿಕೊಳ್ಳುತ್ತಾರೆ). ಮೂಲ ಸಮುದಾಯದಿಂದ ಯಾವುದೋ ಕಾಲದಲ್ಲಿ ಕೊಂಡಿಯನ್ನು ಕಳಚಿಕೊಂಡಿರುವಂತಹ ಈ ಸಮುದಾಯದ ವೃತ್ತಿ ನೇಕಾರಿಕೆಯಾದರೂ ದಕ್ಷಿಣ ಭಾರತದ ಬಹು ಸಂಖ್ಯೆಯ ನೇಕಾರ ಸಮುದಾಯಗಳಾದ ದೇವಾಂಗ, ಪದ್ಮಶಾಲಿ, ಕೈಕೋಳರ್ ಮುಂತಾದ ವರ್ಗಗಳಲ್ಲಿ ಇವರು ಯಾವ ಸಮುದಾಯಕ್ಕೆ ಸೇರಿದವರು ಎನ್ನುವುದೇ ಇನ್ನೂ ಸ್ಪಷ್ಟವಾಗಿಲ್ಲ.

ಪ್ರಾದೇಶಿಕ ಹಿನ್ನೆಲೆಯಿಂದ ನೋಡಿದರೆ, ಇವರ ಭಾಷೆ ಹಾಗೂ ಆಚಾರ ವಿಚಾರಗಳಲ್ಲಿ ಬಹು ಮಟ್ಟಿಗೆ ಕೇರಳದ ಪ್ರಭಾವವಿದೆ. ಆದರೆ ಇವರಿಗೇ ವಿಶಿಷ್ಟವಾದ 'ತೆರು' ಮತ್ತು 'ನಗರ' ವ್ಯವಸ್ಥೆಯನ್ನು ಇವರು ರೂಢಿಸಿಕೊಂಡಿರುವುದನ್ನು ಅವಲೋಕಿಸಿದಾಗ, ಇವರು ತಮಿಳುನಾಡಿನ ಕಡೆಯಿಂದ ಇತ್ತ ಕಡೆಗೆ ವಲಸೆ ಬಂದಿರುವ ಸಾಧ್ಯತೆಗಳಿಗೇ ಹೆಚ್ಚಿನ ಒತ್ತು ಕೊಡಬೇಕಾಗುತ್ತದೆ.

'ಶಾಲಿಯಾ' ಸಮುದಾಯದ 'ತೆರು'ಗಳು ವಿಭಿನ್ನ ದೈವ ದೇವತೆಗಳ ಆರಾಧನಾ ಕೇಂದ್ರಗಳಾಗಿವೆ. ಕಾಸರಗೋಡಿನ ಚಂದ್ರಗಿರಿ ಹೊಳೆಯ ದಕ್ಷಿಣದಲ್ಲೂ, ಉತ್ತರದಲ್ಲೂ ಕೆಲವು 'ಶಾಲಿಯಾ ತೆರು'ಗಳನ್ನು ಕಾಣಬಹುದು.

ಇವರ ದರ್ಶನ ಪಾತ್ರಿಗಳು (ಆವೇಶ) ಬಂದ ಸಮಯದಲ್ಲಿ ಹೇಳುವ "ತೊನ್ನೂಟ್ಟಾರ್ ನಗರಂ ಪಿನ್ನೆ ಪಟ್ಟುವಂ ತೊಟ್ಟ್ ಪಣಂಬೂರುವರೆ ಪತ್ತುಂ ನಾಲುಂ ಪದಿನಾಲ್ ನಗರಂ" ( ತೊಂಬತ್ತಾರು ನಗರ ಮತ್ತು ಪಟ್ಟುವದಿಂದ ಪಣಂಬೂರುವರೆಗೆ ಹದಿನಾಲ್ಕು ನಗರ) ಎನ್ನುವ ಹೇಳಿಕೆಯು ಕುತೂಹಲಕಾರಿಯಾದ ಅಂಶವಾಗಿದೆ. 'ಶಾಲಿಯಾ' ಸಮುದಾಯದ ಒಳಗಿನ ಎರಡು ವಿಭಿನ್ನ ಗುಂಪುಗಳನ್ನು ಇದು ಸೂಚಿಸುತ್ತದೆ. '೯೬' ನಗರಗಳಾಗಿ ವಿಭಜನೆಯಾದ 'ಶಾಲಿಯಾ' ಸಮುದಾಯದಲ್ಲಿ ಕೇರಳದ ಪಟ್ಟುವಂ ಪ್ರದೇಶದಿಂದ ದಕ್ಷಿಣಕ್ಕೆ '೮೨' ಹಾಗೂ ಉತ್ತರಕ್ಕೆ '೧೪' ನಗರಗಳೂ ಪ್ರತ್ಯೇಕ ಪ್ರತ್ಯೇಕವಾಗಿವೆ ಎನ್ನುವುದನ್ನು ಇದರಿಂದ ತಿಳಿದುಕೊಳ್ಳಬಹುದು ನೀಲೇಶ್ವರದ ಕವಾಯಿ ಹೊಳೆಯಿಂದ ದಕ್ಷಿಣ ಕನ್ನಡದ ಬಾರಕೂರಿನವರೆಗೆ ತುಳುನಾಡು ಎಂದು ಹಿಂದೆ ಗುರುತಿಸಲ್ಪಡುತ್ತಿತ್ತು. (ಉತ್ತರದ ಹದಿನಾಲ್ಕು ನಗರಗಳಲ್ಲಿ ಹೆಚ್ಚಿನವು ತುಳುನಾಡಿನಲ್ಲಿದೆ). ತಮಿಳುನಾಡಿನಲ್ಲಿ ಹನ್ನೊಂದನೇ ಶತಮಾನದಲ್ಲಿ ಉಂಟಾದ ಬ್ರಾಹ್ಮಣೇತರ ಜಾತಿಗಳ ವಿವಾದದಿಂದಲಾಗಿ 'ಎಡಂಗೈ-ಬಲಂಗೈ` ವಿಭಾಗಗಳು ಹುಟ್ಟಿಕೊಂಡಿತು ಎನ್ನುವುದು ಶಾಸನಗಳಲ್ಲಿ ಉಕ್ತವಾಗಿವೆ. ಈ ವಿವಾದವೇ ಶಾಲಿಯಾರಲ್ಲಿ 'ಎಡಂಗ` ಮತ್ತು 'ಬಲಂಗ` ಎಂಬ ಪ್ರಭೇದಗಳು ಹುಟ್ಟಲು ಮೂಲ ಕಾರಣವಾಯಿತು ಎಂದು ಊಹಿಸಬಹುದು. ಪಟ್ಟುವಂ ಪ್ರದೇಶದಿಂದ ದಕ್ಷಿಣಕ್ಕೆ ಇರುವವರು 'ಬಲಂಗ ಶಾಲಿಯ` ರೆಂದು ಉತ್ತರಕ್ಕಿರುವವರು 'ಎಡಂಗ ಶಾಲಿಯ` ರೆಂದು ಗುರುತಿಸಲ್ಪಡುತ್ತಾರೆ. ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಬರುವ ಕಾಲದಲ್ಲಿ ಜನಾಂಗವು ಆಚಾರ- ವಿಚಾರ-ಆಲೋಚನೆಗಳೊಂದಿಗೆ ವಿವಾದಗಳನ್ನು ತರುತ್ತವೆ ಎನ್ನುವುದನ್ನು ಇದರಿಂದ ತಿಳಿದುಕೊಳ್ಳಬಹುದು. 'ಶಾಲಿಯ` ರು ತಮಿಳುನಾಡಿನವರು ಎಂದು ಊಹಿಸಲು ಇದು ಒಂದು ಪ್ರಮುಖ ಆಧಾರವಾಗಬಹುದು ಎಂದು ಅನಿಸುತ್ತದೆ.

ಚಂದ್ರಗಿರಿ ತೀರದಿಂದ ದಕ್ಷಿಣ ಭಾಗದಲ್ಲಿ ಹತ್ತು ಮತ್ತು ಉತ್ತರ ಭಾಗದಲ್ಲಿ ನಾಲ್ಕು ನಗರಗಳಿವೆ ಎಂದು 'ತೋಜ್ಜಂ` (ಪಾಡ್ದನ) ಹೇಳುತ್ತದೆ. ಇವುಗಳನ್ನು 'ಎಡಂಗ ಶಾಲಿಯಾ ತೆರು` ಗಳೆಂದು ಗುರುತಿಸಲಾಗಿದೆ. ಈ ಎರಡೂ ಪ್ರದೇಶಗಳಲ್ಲಿ ಸಾಮ್ಯತೆ ಹಾಗೂ ವಿಭಿನ್ನತೆ ಬಹಳಷ್ಟು ಕಂಡುಬರುತ್ತದೆ. ಚಂದ್ರಗಿರಿ ಹೊಳೆಯ ಉತ್ತರದ 'ಶಾಲಿಯ ತೆರು` ಗಳಲ್ಲಿ 'ತುಳು, ಕನ್ನಡ, ಮಲಯಾಳ` ಮಿಶ್ರಿತವಾದ ಸಂಸ್ಕೃತಿಯನ್ನು ರೂಢಿಸಿಕೊಂಡ ತುಳುನಾಡಿನ ಶಾಲಿಯಾ ಸಮುದಾಯವು ಎಲ್ಲಾ ವಿಧದಿಂದಲೂ ಮಿಶ್ರ ಸಂಸ್ಕೃತಿಗೆ ಉದಾಹರಣೆಯಾಗಿದೆ.

ಈ ಪ್ರದೇಶದಲ್ಲಿ 'ಪದ್ಮಶಾಲಿ` ಅಥವಾ 'ಶೆಟ್ಟಿಗಾರ` ಎನ್ನುವ ಹೆಸರಿನಿಂದ ಕರೆಯಲ್ಪಡುವ ನೇಕಾರರೂ ಇದ್ದಾರೆ. ಆಚಾರ ವಿಚಾರಗಳಲ್ಲಿ 'ಶಾಲಿಯಾ/ದೇವಾಂಗ` ಸಮುದಾಯಕ್ಕೂ 'ಪದ್ಮಶಾಲಿಯ`ರಿಗೂ ವ್ಯತ್ಯಾಸವಿದೆ. 'ಪದ್ಮಶಾಲಿ` ಗಳಲ್ಲಿ ತುಳು ಸಂಸ್ಕೃತಿಯ ಪ್ರಭಾವ ಹೆಚ್ಚಾಗಿ ಕಂಡು ಬಂದರೆ, 'ಶಾಲಿಯಾ` ಸಮುದಾಯದಲ್ಲಿ ತುಳು ಮತ್ತು ಮಲಯಾಳ ಮಿಶ್ರ ಸಂಸ್ಕೃತಿಯಿದೆ. 'ಪದ್ಮಶಾಲಿ` ಗಳು ಅವಿಭಜಿತ ದಕ್ಷಿಣ ಕನ್ನಡದ ಭಾಗಗಳಲ್ಲಿ ಅಧಿಕವಾಗಿ ಕಂಡುಬಂದರೆ 'ಶಾಲಿಯಾ/ದೇವಾಂಗ`ರು ದ.ಕ. ದಕ್ಷಿಣಕ್ಕೆ ಕಾಸರಗೋಡು ಹಾಗೂ ಅದರ ದಕ್ಷಿಣ ಭಾಗದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಈ ಅಧ್ಯಯನವು 'ಶಾಲಿಯಾ` ಸಮುದಾಯಕ್ಕೆ ಮೀಸಲಾದುದಾದರೂ, 'ಪದ್ಮಶಾಲಿಯ`ರ ಬಗ್ಗೆಯೂ ಇಲ್ಲಿ ಗಮನ ಹರಿಸಲಾಗಿದೆ.

ಈ ಸಮುದಾಯದ ಮೂಲ, ಆರಾಧನೆ, ಆಚಾರ-ವಿಚಾರ, ಸಂಸ್ಕೃತಿ, ವೃತ್ತಿ ಹಾಗೂ ಜಾನಪದ ಅಧ್ಯಯನ ಯೋಗ್ಯ ವಿಷಯವಾಗಿದೆ. ಅದಕ್ಕೆ ತಕ್ಕ ಲಿಖಿತ ಮಾಹಿತಿಗಳ ಕೊರತೆ ನೇರವಾದ ನಿಗಮನ ಬಂದಕ್ಕೆ ಬರುವಲ್ಲಿ ಅಡ್ಡಿಯಾಗುತ್ತದೆ ಎನ್ನುವುದನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ. ಕೆಲವು ಐತಿಹ್ಯಗಳು, ಮೌಖಿಕ ಹೇಳಿಕೆಗಳು,

ದಂತಕಥೆಗಳು ದೊರಕುತ್ತವೆ. ಅವುಗಳನ್ನೇ ಆಧರಿಸಿ ಕೆಲವನ್ನು ಊಹಿಸಿ ದಾಖಲಿಸಬೇಕಾಗುತ್ತದೆ.

ನೇಕಾರಿಕೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡು ಬಂದ ಈ ಸಮುದಾಯ ಕಾಲಾನುಕಾಲಕ್ಕೆ ತನ್ನ ವೃತ್ತಿಯಲ್ಲಿ ಬಹಳಷ್ಟು ಬದಲಾವಣೆಯನ್ನೂ, ಪ್ರಗತಿಯನ್ನೂ, ಏರುಪೇರುಗಳನ್ನೂ ಎದುರಿಸುತ್ತಾ ಬಂದಿರುವುದನ್ನು ಕಾಣಬಹುದು. ಭಾರತದಂತಹ ಮುಂದುವರಿಯುತ್ತಿರುವ ದೇಶಗಳಲ್ಲಿ ವಿಜ್ಞಾನವು ಒಂದೆಡೆ ವರದಾನವಾದರೆ, ಇನ್ನೊಂದೆಡೆ ಶಾಪವೂ ಆಗುತ್ತದೆ ಎನ್ನುವುದಕ್ಕೆ 'ನೇಕಾರಿಕೆ` ಸಾಕ್ಷಿಯಾಗುತ್ತದೆ. ಯಂತ್ರಗಳ ಆಗಮನವು ಅತ್ಯಮೂಲ್ಯವಾದ ವೃತ್ತಿ ಸಂಸ್ಕೃತಿಯನ್ನು ಮೂಲೆಗೆ ತಳ್ಳುವುದರೊಂದಿಗೆ ಅದರ ಜೊತೆಗೆ ಬೆಳೆದು ಬಂದ ಮಾನವನ ಭಾವನಾತ್ಮಕ ಸಂಬಂಧವನ್ನೂ ಮುರಿಯುತ್ತಾ ಬಂದಿದೆ. ನೇಕಾರಿಕೆಯನ್ನು ಅವಲಂಬಿಸಿದವರಂತೂ ಇತ್ತೀಚೆಗೆ ಹಲವಾರು ಸಮಸ್ಯೆಗಳಿಗೆ ಬಲಿಯಾಗುತ್ತಿರುವುದನ್ನು ಕಾಣಬಹುದು. ತುಳುನಾಡಿನ ನೇಕಾರರ ಜೀವನವನ್ನು ಸನಿಹದಿಂದ ನೋಡಿದರೆ ಅದರ ಕಟು ವಾಸ್ತವದ ಅರಿವಾಗುತ್ತದೆ.

ಭಾರತದಂತಹ ಸಾವಿರಾರು ಜಾತಿಗಳಿರುವ ದೇಶದಲ್ಲಿ ಒಂದೊಂದು ಜಾತಿ ರೂಢಿಸಿಕೊಂಡು ಬರುವ ಆಚಾರ-ವಿಚಾರಗಳು ವಿಭಿನ್ನತೆಯಿಂದ ಕೂಡಿಕೊಂಡು ಅವುಗಳದೇ ಆದ ವೈಶಿಷ್ಟ್ಯವನ್ನು ಒಳಗೊಂಡಿರುವವುಗಳಾಗಿವೆ. ಪಾಶ್ಚಾತ್ಯರನ್ನು ನಿಬ್ಬೆರಗು ಮಾಡುವ ಇಂತಹ ಆಚರಣೆಗಳ ಹಿಂದೆ ತರ್ಕಶುದ್ಧವಾದ ಕಾರಣಗಳೊಂದಿಗೆ ಅರ್ಥಹೀನವಾದ ವಿಚಾರಗಳೂ ಇವೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ತುಳುನಾಡಿನ 'ಶಾಲಿಯಾ/ದೇವಾಂಗ` ಸಮಾಜದ ಕೆಲವು ಆಚರಣೆಗಳು ವಿಶಿಷ್ಟವಾಗಿ ಕಾಣುತ್ತವೆ. ಉದಾಹರಣೆಗೆ : ಚಪ್ಪರ ಮದುವೆ, ಎಡಂಗಾಜಾರ (ಎಡಂಗ ಆಚಾರ ?), ಪುಳಿಕುಡಿ ಮುಂತಾದವುಗಳು.

ಭಾರತವನ್ನು ಜಾತ್ಯಾತೀತ ರಾಷ್ಟ್ರವೆಂದು ಕರೆದರೂ ಭಾರತೀಯರಿಗೆ ರಕ್ತಗತವಾಗಿ ಬಂದ ಜಾತಿ ಭಾವವನ್ನು ಅಷ್ಟು ಸುಲಭವಾಗಿ ನೀಗಿಸಲು ಸಾಧ್ಯವಿಲ್ಲ. ಒಂದೇ ಜಾತಿ, ಹಲವು ಪಂಗಡಗಳಾಗಿ ಒಡೆಯುವಂತಹ ಪ್ರಕ್ರಿಯೆಯಿಂದಲಾಗಿ ಜಾತಿ ರೂಢಿಸಿಕೊಂಡು ಬರುವ ಸಂಸ್ಕೃತಿಯಲ್ಲಿ ವಿಭಿನ್ನತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಇವೆಲ್ಲವುಗಳ ಆಧಾರದಿದ ಭಾರತೀಯ ಜನಾಂಗದ ಮೂಲ ಸಂಸ್ಕೃತಿಯೊಂದರ ಹುಡುಕಾಟವನ್ನು ನಡೆಸಲು ಸಾಧ್ಯವಾಗಬಹುದು. ಆ ಹಿನ್ನಲೆಯಲ್ಲಿ "ತುಳುನಾಡಿನ ಶಾಲಿಯಾ/ದೇವಾಂಗ ಸಮುದಾಯದ ಅಧ್ಯಯನ"ವು ಸಾಗರದ ನೀರಿಗೆ ಒಂದು ಹನಿ ನೀರನ್ನು ಸೇರಿಸುವ ಪ್ರಯತ್ನ ಎನ್ನಬಹುದು. ಇದೊಂದು ಸಮಗ್ರ ಹಾಗೂ ಪರಿಪೂರ್ಣವಾದ ಅಧ್ಯಯನವಲ್ಲವಾದರೂ ಸ್ಥೂಲವಾದ ಈ ಅಧ್ಯಯನವು ಮುಂದಿನ ಸಂಶೋಧಕರ ಸೂಕ್ಷ್ಮ ಅಧ್ಯಯನಕ್ಕೆ ಸಹಕಾರಿಯಾಗಬಹುದು ಅನ್ನಿಸುತ್ತದೆ.

## ಅಧ್ಯಯನಕ್ಕಾಗಿ ಬಳಸಿಕೊಂಡ ಕ್ಷೇತ್ರವ್ಯಾಪ್ತಿ



## ೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

'ಪರಿವರ್ತನೆ' ಎನ್ನುವುದು ವಸ್ತುವಿನ ಮೂಲ ಗುಣ ಅದರಲ್ಲೂ ಜೀವಿಗಳು ತಮ್ಮ ಜೀವಿತಾವಧಿಯ ಹಲವು ಹಂತಗಳಲ್ಲಿ ಹಲವು ಪರಿವರ್ತನೆಗಳಿಗೆ ಒಳಗಾಗುವುದನ್ನು ಕಾಣಬಹುದು. ಭೂತದಿಂದ ವರ್ತಮಾನದೆಡೆಗೆ ಸಾಗುವ ಪ್ರತಿಯೊಂದು ವಸ್ತುವೂ ಪರಿವರ್ತನೆಗೆ ಒಳಗಾಗಲೇಬೇಕು. ಭೂಮಿ ಹುಟ್ಟಿದಂದಿನಿಂದ, ಅದು ತನ್ನ ಜೀವಸೃಷ್ಟಿಗಳೊಂದಿಗೆ ಹಲವಾರು ಪರಿವರ್ತನೆಗಳಿಗೆ ತನ್ನನ್ನು ಒಳಗಾಗಿಸುತ್ತಾ ಬಂದಿರುವುದನ್ನು ಕಾಣಬಹುದು. 'ಮಾನವ ಜೀವ ವಿಕಾಸ' ವಾದುದಂದೂ ಬಹಳ ಕುತೂಹಲಕಾರಿಯಾದಂತಹ ರೀತಿಯಲ್ಲಿ. ಕಾಲಾನುಕಾಲಕ್ಕೆ ಮಾನವನು ವಿಕಾಸಹೊಂದುತ್ತಾ ಪರಿವರ್ತನೆಗೆ ಒಳಗಾಗುತ್ತಾ ಹಲವು ಹಂತಗಳನ್ನು ದಾಟಿ ಬಂದಿರುವುದನ್ನು ಕಾಣಬಹುದು. ದೇಶ, ಪ್ರದೇಶ, ವರ್ಗ, ಜನಾಂಗ, ಜಾತಿ, ಕುಟುಂಬ ಹೀಗೇ ವಿಭಜನೆಯಾಗಿ ಪರಿವರ್ತನೆಗೆ ತನ್ನನ್ನು ಒಳಗಾಗಿಸುತ್ತಾ ಮಾನವನು ಭೂತದಿಂದ ವರ್ತಮಾನಕ್ಕೆ, ಅಲ್ಲಿಂದ ಭವಿಷ್ಯದೆಡೆಗೆ ಸಾಗುತ್ತಾ ಬಂದಿರುವನು. ಕಾಲ, ಪ್ರದೇಶ, ವ್ಯಕ್ತಿತ್ವ ಇವೆಲ್ಲವೂ ಕೂಡಾ ಅವನ ಜೀವನ ಶೈಲಿಯಲ್ಲಿ ಪರಿವರ್ತನೆಯನ್ನು ತರುತ್ತವೆ. ಭೌಗೋಳಿಕ, ಸಾಮಾಜಿಕ, ವೈಯಕ್ತಿಕ ಕಾರಣಗಳು ಅವನನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಕೊಂಡೊಯ್ಯುತ್ತವೆ. ಈ ಸಂದರ್ಭದಲ್ಲಿ ತನ್ನೊಂದಿಗೆ ಅವನು ಒಂದೆಡೆಯ ಸಂಸ್ಕೃತಿಯನ್ನು ಇನ್ನೊಂದೆಡೆಗೆ ಕೊಂಡೊಯ್ದರೂ ಕಾಲಕ್ರಮೇಣ ತಾನು ಬದುಕುತ್ತಿರುವ ಪರಿಸರಕ್ಕೆ ತಕ್ಕ ಹಾಗೇ ಅವನು ಮಾನಸಿಕವಾಗಿಯೂ, ಭೌತಿಕವಾಗಿಯೂ, ಆಚರಣಾತ್ಮಕವಾಗಿಯೂ, ಸಾಮಾಜಿಕವಾಗಿಯೂ ಪರಿವರ್ತನೆಗೆ ಒಳಗಾಗುತ್ತಾನೆ.

ಇಂತಹ ಸಾಮಾಜಿಕ, ಸಾಂಸ್ಕೃತಿಕ, ಪ್ರಾದೇಶಿಕ ಪರಿವರ್ತನೆಗೆ ಒಳಗಾಗಿಸಿಕೊಂಡು ಬಂದ ಭಾರತದ ಹಲವು ಜಾತಿಗಳಲ್ಲಿ ಬಹು ಮುಖ್ಯವಾದ ಜಾತಿ ನೇಕಾರ ವರ್ಗ. ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಮುಖ್ಯವಾದ 'ವಸನ' ಅಥವ 'ವಸ್ತ್ರ' ನಿರ್ಮಾಣ ಕಲೆ ಯಾವಾಗ ಆರಂಭಗೊಂಡಿತು ಎನ್ನುವುದಕ್ಕೆ ನಿಖರವಾದ ಆಧಾರ ದೊರೆಯುವುದಿಲ್ಲ. ವೃತ್ತಿಯ ಹಿನ್ನೆಲೆಯಲ್ಲಿ 'ಜಾತಿ' ನಿರ್ಧರಿತವಾದ ಭಾರತೀಯ ಜಾತಿ ಪದ್ಧತಿಯಲ್ಲಿ 'ನೇಯ್ಗೆ' ಕಾಯಕವನ್ನು ಅವಲಂಬಿಸಿಕೊಂಡು ಬಂದ ಒಂದು ವರ್ಗವನ್ನು 'ನೇಕಾರರು' ಎಂದು ಗುರುತಿಸುವುದು ಕಂಡು ಬಂದಿದೆ.

ಭಾರತೀಯ ಜಾತಿ ವ್ಯವಸ್ಥೆ ವೃತ್ತಿಯ ಹಿನ್ನೆಲೆಯಿಂದ ವಿಂಗಡಿಸಲ್ಪಟ್ಟರೂ ಕ್ರಮೇಣ ನಿರ್ದಿಷ್ಟ ವೃತ್ತಿಯನ್ನವಲಂಬಿಸಿದವರು ಪುನಃ ವಿಭಜನೆಯಾಗುತ್ತಾ ಬೇರೆ ಬೇರೆ ಹೆಸರಿನ ಜಾತಿಗಳು ಹುಟ್ಟಿಕೊಂಡು ಬಂದುದು ಕುತೂಹಲಕಾರವಾದ ಮಾತ್ರವಲ್ಲ ಅಧ್ಯಯನಯೋಗ್ಯವಾದ ಒಂದು ವಿಷಯವಾಗಿದೆ. ಇದಕ್ಕೆ ಪ್ರಾದೇಶಿಕ, ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳು [illegible] ಇಂತಹ [illegible] ನಿರಂತರವಾಗಿ ನಡೆದು ಇಂದೀಗ ಭಾರತದಲ್ಲಿ ಅದೆಷ್ಟೋ ಜಾತಿಗಳ ಸೃಷ್ಟಿಯಾದುದನ್ನು ನಾವು ಕಾಣುತ್ತೇವೆ

ಪ್ರಾದೇಶಿಕ ಹಾಗೂ ಭೌಗೋಳಿಕ ಹಿನ್ನೆಲೆಯಿಂದ ನೋಡಿದರೆ ಭಾರತದಂತಹ ದೇಶದಲ್ಲಿ ಆಯಾಯ ವೃತ್ತಿಗೆ ಆವಶ್ಯಕವಾದ ಭೂಮಿ, ಪರಿಸರಕ್ಕೆ ತಕ್ಕ ಹಾಗೆಯೇ ವೃತ್ತಿಗೆ ಆವಶ್ಯಕವಾದ ಕಚ್ಚಾ ಸಾಮಾಗ್ರಿಗಳು ಎಲ್ಲಿ ದೊರಕುತ್ತದೆಯೋ ಅಥವಾ ಬೆಳೆಯುತ್ತವೆಯೋ ಅಲ್ಲಿ ಆ ವೃತ್ತಿಯವರು ಮೂಲತಃ ವಾಸಿಸಿಕೊಂಡು ಬಂದಿರುವ ಸಾಧ್ಯತೆಯಿದೆ. ಪ್ರಾಕೃತಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದ ಅವರು ಮತ್ತೊಂದೆಡೆಗೆ ವಲಸೆ ಹೋಗಿರುವ ಸಾಧ್ಯತೆಗಳೂ ಇರುತ್ತವೆ. ಆದುದರಿಂದ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಜೀವಿಸುತ್ತಿರುವ, ನಿರ್ದಿಷ್ಟ ವೃತ್ತಿಯನ್ನು ಅವಲಂಬಿಸಿಕೊಂಡು ಬಂದಿರುವ ಸಮಾಜದ ಅಧ್ಯಯನವನ್ನು ಕೈಗೊಳ್ಳುವಂತಹ ಸಂದರ್ಭದಲ್ಲಿ ಅವರು ಕೈಗೊಳ್ಳುವ ವೃತ್ತಿಗೆ ಸಂಬಂಧಪಟ್ಟ ಕಚ್ಚಾ ಸಾಮಾಗ್ರಿಗಳು ಆ ಪ್ರದೇಶದಲ್ಲಿ ದೊರಕುವಂತಹುದೇ? ಎಂಬುದನ್ನು ಮುಖ್ಯವಾಗಿ ಅಧ್ಯಯನಕ್ಕೆ ಒಳಪಡಿಸಬೇಕು ಎಂದೆನಿಸುತ್ತದೆ. ಕಾಸರಗೋಡು ಹಾಗೂ ದಕ್ಷಿಣ ಕನ್ನಡದಂತಹ ಕರಾವಳಿ ಪ್ರದೇಶವು ಮುಖ್ಯವಾಗಿ ತೆಂಗು ಹಾಗೂ ಭತ್ತದ ಬೆಳೆಗೆ ಯೋಗ್ಯವಾದ ಪ್ರದೇಶ. ಹೀಗಿರುವಾಗ ಬಟ್ಟೆ ನಿರ್ಮಾಣಕ್ಕೆ ಅತೀ ಅವಶ್ಯಕವಾದ ಹತ್ತಿಯು ಬೆಳೆಯಲು ಯೋಗ್ಯವಾದ ಕಪ್ಪು ಮಣ್ಣು ಇಲ್ಲಿನದ್ದಲ್ಲ. ಒಂದು ವೇಳೆ ಬೆಳೆದರೂ ನಿರೀಕ್ಷಿತ ಫಸಲು ಕೊಡುವ ಸಾಧ್ಯತೆಗಳು ಇಲ್ಲ. ಮಾತ್ರವನಲ್ಲದೆ ರೇಶಿಮೆ ಉದ್ದಿಮೆಯಂತೂ ಇಂದೂ ಇಲ್ಲಿಗೆ ಹೊಂದಿಕೊಂಡಿಲ್ಲ. ಆದುದರಿಂದ "ಹತ್ತಿ"ಯಿಂದ ತಯಾರಿಸಿದ ನೂಲಿನ ಬಟ್ಟೆಯನ್ನು ನೇಯುವುದನ್ನೇ ವೃತ್ತಿಯನ್ನಾಗಿಸಿಕೊಂಡ ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ನೇಕಾರ ವರ್ಗವು ಮೂಲತಃ ಇಲ್ಲಿನವರಾಗಿರುವ ಸಾಧ್ಯತೆಗಳು ಬಹಳ ಕಡಿಮೆ. ಉತ್ತರ ಕೇರಳದ ಭಾಗವಾದ ಕಾಸರಗೋಡು ಹಾಗೂ ಕರ್ನಾಟಕದ ದಕ್ಷಿಣ ಭಾಗವಾದ ದಕ್ಷಿಣ ಕನ್ನಡದಲ್ಲಿ 'ನೇಕಾರ' ವೃತ್ತಿಯನ್ನು ಅವಲಂಬಿಸಿಕೊಂಡು ಬಂದಿರುವ ಹಾಗೂ ಇಲ್ಲಿನ ಮೂಲ ಜನಾಂಗದವರು ಎಂದು ಭಾವಿಸಲಾಗುವ ಜನಾಂಗದಿಂದ ವಿಭಿನ್ನ ಜೀವನ ಹಾಗೂ ಆರಾಧನಾ ಪದ್ಧತಿಯನ್ನು ರೂಢಿಸಿಕೊಂಡು ಬಂದಿರುವ ದೇವಾಂಗ, ಶಾಲಿಯಾ, ಚಾಲಿಯಾ, ತಾಲಿಯಾ, ಪದ್ಮಶಾಲಿಯಾ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ವರ್ಗದ ವೈಶಿಷ್ಟ್ಯ ಪೂರ್ಣವಾದ ಜೀವನವು ಕುತೂಹಲಭರಿತವಾದುದರಿಂದ ಹಾಗೂ ಇದುವರೆಗೆ ಅವರ ಕುರಿತಾದ ಯಾವುದೇ ಅಧ್ಯಯನವು ಕನ್ನಡದಲ್ಲಿ ನಡೆಯದೇ ಇರುವುದರಿಂದ ಅದರೆಡೆಗೆ ಬೆಳಕು ಚೆಲ್ಲುವ ಒಂದು ಪ್ರಯತ್ನವೇ ಈ ಅಧ್ಯಯನದ ಮೂಲ ಉದ್ದೇಶವಾಗಿದೆ.

ಭಾರತದ ಉದ್ದಗಲಕ್ಕೂ ವ್ಯಾಪಿಸಿಕೊಂಡು ನೇಕಾರ ವರ್ಗವು ಬೇರೆ ಬೇರೆಡೆಗಳಲ್ಲಿ ವಿಭಿನ್ನ ಹೆಸರುಗಳಿಂದ ಕರೆಯಲ್ಪಡುತ್ತಿರುವುದು ಕಂಡು ಬರುತ್ತದೆ. ಅವರಲ್ಲಿ ಪ್ರಮುಖವಾಗಿ 'ಪದ್ಮಶಾಲಿ' ಮತ್ತು 'ದೇವಾಂಗ' ಎನ್ನುವ ಎರಡು ಪಂಗಡಗಳು ಅಪಾರ ಸಂಖ್ಯೆಯಲ್ಲಿರುವುದು ಕಂಡು ಬರುತ್ತದೆ. ವಿಭಿನ್ನ ಪ್ರದೇಶಗಳಲ್ಲಿ ವಿಭಿನ್ನ ಸಂಸ್ಕೃತಿಗಳನ್ನು, ಜೀವನ ಪದ್ಧತಿಗಳನ್ನೂ ರೂಢಿಸಿಕೊಂಡು ಬಂದಿರುವ ಇವರ ಕುರಿತಾದ ಒಂದು ಸಮಗ್ರ ಅಧ್ಯಯನವು ಕ್ಲಿಷ್ಟಕರವೆನ್ನಿಸುವ ಕಾರಣ, ಅಧ್ಯಯನಕ್ಕೆ ಸೀಮಿತ ಪ್ರದೇಶವನ್ನು ಆಯ್ದುಕೊಳ್ಳಲಾಗಿದೆ. ಆದುದರಿಂದ ಸಾಧ್ಯವಾದಷ್ಟೂ ನಿರ್ದಿಷ್ಟತೆ ಹಾಗೂ ಏಕ ಸೂತ್ರತೆಯನ್ನು

ಪ್ರಬಂಧದಲ್ಲಿ ಕಾಪಾಡಿಕೊಂಡು ಬರುವ ಉದ್ದೇಶದಿಂದ ಈ ಪ್ರಬಂಧಕ್ಕೆ ಆಯ್ಕೆ ಮಾಡಿದ ದೇವಾಂಗ / ಶಾಲಿಯ / ಪದ್ಮಶಾಲಿ ಸಮಾಜವು ದಕ್ಷಿಣ ಕನ್ನಡ ಜಿಲ್ಲೆಯಿಂದ ಕಾಸರಗೋಡಿನ ಚಂದ್ರಗಿರಿ ನದಿಯು ದಕ್ಷಿಣಕ್ಕೆ ತಳಿಪ್ಪರಂಬದವರೆಗೆ ಇದೆ.

ಇದಿಷ್ಟೇ ಅಲ್ಲದೆ, ಈ ಪ್ರದೇಶವನ್ನೇ ಆಯ್ದುಕೊಳ್ಳಲು ಬಲವಾದ ಇನ್ನೊಂದು ಕಾರಣವೂ ಇದೆ. ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ದ್ರಾವಿಡ ಅಧ್ಯಯನ ವಿಭಾಗದ ಮೂಲಕವಾಗಿ ಈ ಅಧ್ಯಯನವನ್ನು ಕೈಗೊಳ್ಳುತ್ತಿರುವುದರಿಂದ, ಕಾಸರಗೋಡು ಪ್ರದೇಶವು ಕನ್ನಡ ನಾಡಿನ ಒಂದು ಭಾವನಾತ್ಮಕ ಅಂಗವಾಗಿರುವುದರಿಂದ, ಕೇರಳ ಹಾಗೂ ಕರ್ನಾಟಕದ ಮಿಶ್ರ ಸಂಸ್ಕೃತಿಯನ್ನು ರೂಢಿಸಿಕೊಂಡು ಬಂದಿರುವ ಈ ವರ್ಗದ ಜನಾಂಗೀಯ ಅಧ್ಯಯನವು ಕರ್ನಾಟಕದ ಜನಾಂಗೀಯ ಅಧ್ಯಯನಕ್ಕೆ ಪೂರಕವಾಗಬಹುದು ಎನ್ನುವ ಉದ್ದೇಶವೂ ಈ ಅಧ್ಯಯನದ ಹಿನ್ನೆಲೆಯಲ್ಲಿದೆ.

ಕಾಸರಗೋಡಿನ ಚಂದ್ರಗಿರಿ ನದಿಯ ದಕ್ಷಿಣ ತೀರದಿಂದ ದಕ್ಷಿಣಕ್ಕೆ ಹೋದಂತೆ ಈ ಜನಾಂಗವು ಮಲಯಾಳಿ ಸಂಸ್ಕೃತಿಯನ್ನು ರೂಢಿಸಿಕೊಂಡು ಬರುತ್ತಿದೆ. ತಮ್ಮ ಬೇರುಗಳನ್ನು ಅಲ್ಲಿ ಊರಿಕೊಂಡು ಇಲ್ಲಿ ಬೆಳೆಯುತ್ತಿರುವ ಕಾಸರಗೋಡಿನ ನೇಕಾರರ ಬಗ್ಗೆ ಬರೆಯುವಾಗ ಸಾಂದರ್ಭಿಕವಾಗಿ ಅಲ್ಲಿನ ವಿಷಯಗಳನ್ನೂ ತರುವ ಪ್ರಯತ್ನವಿದೆ. ಅದೇ ರೀತಿಯಲ್ಲಿ ಒಮ್ಮೆ ದೇವಾಂಗ, ಒಮ್ಮೆ ಪದ್ಮಶಾಲಿ ಮತ್ತೊಮ್ಮೆ ಶಾಲಿಯಾ ಎಂದೆಲ್ಲಾ ಕರೆಯಲ್ಪಡುವ ಇವರ ಮೂಲದ ಬಗ್ಗೆ ಅಧ್ಯಯನ ನಡೆಸುವಾಗ ಮೂಲ ದೇವಾಂಗ ಹಾಗೂ ಪದ್ಮಶಾಲಿ ಸಮಾಜದ ಬಗ್ಗೆಯೂ ಇಲ್ಲಿ ಕಿರು ಅಧ್ಯಯನವೊಂದನ್ನು ನಡೆಸುವ ಉದ್ದೇಶವಿದೆ.

ಕಾಸರಗೋಡು ಹಾಗೂ ದಕ್ಷಿಣದಲ್ಲಿ ಹರಡಿಕೊಂಡಿರುವ ಮಿಶ್ರ ಮಲಯಾಳೀ ಭಾಷೆಯನ್ನು ಆಡುತ್ತಿರುವ ಈ ಸಮಾಜವು ತಮ್ಮನ್ನು ನಿರ್ದಿಷ್ಟವಾದ ಜಾತಿಯ ಹೆಸರಿನಿಂದ ಗುರುತಿಸಿಕೊಳ್ಳದಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ 'ಚೆಟ್ಟಿಯಾರ್' ಎಂಬ ಉಪನಾಮವನ್ನು ಬಳಸಿಕೊಳ್ಳುವ ಇವರು ಇದೇ ಪ್ರದೇಶದ ನೇಕಾರ ವೃತ್ತಿಯನ್ನೆ ಅವಲಂಬಿಸಿದ 'ಶೆಟ್ಟಿಗಾರ' ಎನ್ನುವ ಉಪನಾಮವನ್ನು ಬಳಸಿಕೊಳ್ಳುತ್ತಿರುವವರು ತಮ್ಮನ್ನು 'ಪದ್ಮಶಾಲಿ' ಎಂದು ನಿರ್ದಿಷ್ಟವಾದ ಜಾತಿಯ ಹೆಸರಿನಿಂದ ಗುರುತಿಸಿಕೊಳ್ಳುತ್ತಿರುವಾಗ, ಇವರು ಮಾತ್ರ ತಮ್ಮನ್ನು 'ಶಾಲಿಯ, ಚಾಲಿಯ, ದೇವಾಂಗ, ಕುವಿಂದ, ಪದ್ಮಶಾಲಿಯ' ಎಂದು ವಿವಿಧ ನಾಮಗಳಿಂದ ಗುರುತಿಸಲ್ಪಡುತ್ತಿರುವುದನ್ನು ಕಾಣಬಹುದು. ಹಾಗೆಯೆ ಉಪನಾಮಗಳನ್ನು ಇರಿಸಿಕೊಳ್ಳುವಾಗಲೂ ತಮಗೆ ಇಷ್ಟವಾದವುಗಳನ್ನು ಹಾಕಿಕೊಳ್ಳುವುದು ಕಂಡು ಬರುತ್ತದೆ. ಹೀಗಿರಲು ಇವರು ಮೂಲತಃ ಯಾವ ನೇಕಾರ ವರ್ಗಕ್ಕೆ ಸೇರಿದವರಾಗಿರಬಹುದು ? ಈ ವಿಭಿನ್ನ ಹೆಸರುಗಳನ್ನು ಇವರು ಇಟ್ಟುಕೊಳ್ಳಲು ಕಾರಣವೇನಿರಬಹುದು ? ಎನ್ನುವುದನ್ನು ಶೋಧಿಸುವ ಉದ್ದೇಶವೂ ಈ ಅಧ್ಯಯನದಲ್ಲಿದೆ. ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುತ್ತಾ ಬಂದಿರುವ ಈ ಸಮುದಾಯ

ತನ್ನೊಂದಿಗೆ ಯಾವುದೇ ಪುರಾವೆಗಳನ್ನು ಇರಿಸಿಕೊಳ್ಳದೇ ಇರುವುದರಿಂದ ಸಂಶೋಧನೆಗೆ ಬೇಕಾದ ಅವಶ್ಯಕ ಸಾಮಾಗ್ರಿಗಳ ಕೊರತೆಯನ್ನು ಸಂಶೋಧಕ ಎದುರಿಸಬೇಕಾಗುತ್ತದೆ. ಆಚಾರ, ವಿಚಾರ, ಸಂಸ್ಕಾರಗಳಲ್ಲಿ ತಮ್ಮದು ಎಂದು ಅಧಿಕಾರಿಕವಾಗಿ ಯಾವುದನ್ನೂ ಸ್ಪಷ್ಟವಾಗಿ ಒಳಗೊಳ್ಳದ ಇವರ ಮೂಲದ ಬಗ್ಗೆ ಹುಡುಕುವುದೇ ಒಂದು ಸಮಸ್ಯೆಯಾಗಿ ಕಾಡುವುದರಿಂದ ಕೇವಲ ಊಹಾಪೋಹಗಳಿಗೆ ಮಾತ್ರ ಅಂಟಿಕೊಳ್ಳಬೇಕಾದ ಪರಿಸ್ಥಿತಿಯು ಸಂಶೋಧನೆಯ ಸಂದರ್ಭದಲ್ಲಿ ಒದಗಿ ಬರುತ್ತದೆ. ಅದರಲ್ಲೂ ಕಾಸರಗೋಡು ಪ್ರದೇಶದಲ್ಲಿ ಕಂಡುಬರುವ ಈ ಮಿಶ್ರ ಸಂಸ್ಕೃತಿಯ ಜನಾಂಗದ ಬಗ್ಗೆ ಅಧ್ಯಯನ ಕೈಗೊಳ್ಳುವಾಗ ವೃತ್ತಿಯನ್ನು ಮೂಲವಾಗಿಸಿಕೊಂಡು, ಕರ್ನಾಟಕ, ತಮಿಳುನಾಡು, ಆಂಧ್ರ ಮತ್ತು ಕೇರಳದ ದಕ್ಷಿಣ ಭಾಗದಲ್ಲಿ ಇದೇ ವೃತ್ತಿಯನ್ನವಲಂಬಿಸಿಕೊಂಡು ಬಂದ ಬೇರೆ ಬೇರೆ ಹೆಸರಿನಲ್ಲಿ ಗುರುತಿಸಲ್ಪಡುವ ಸಮುದಾಯದಲ್ಲಿ ಇದರ ಮೂಲವನ್ನು ಹುಡುಕುವ ಒಂದು ಸಣ್ಣ ಪ್ರಯತ್ನವಿದು.

ಈ ಅಧ್ಯಯನಕ್ಕೆ ಕೆಲವು ಐತಿಹ್ಯಗಳನ್ನು ಬಳಸಿಕೊಳ್ಳಲಾಗಿದೆ. ಜನಾಂಗಗಳ ಅಧ್ಯಯನಕ್ಕೆ ಕೆಲವೊಮ್ಮೆ ಐತಿಹ್ಯಗಳು ಸಹಾಯಕವಾಗುತ್ತವೆ. ಅವುಗಳಲ್ಲಿ ಚರಿತ್ರೆಯಿದೆ, ಸಂಸ್ಕಾರವಿದೆ, ಸಂಸ್ಕೃತಿ ಇದೆ, ಆಚರಣೆಯಿದೆ. ಅವುಗಳನ್ನು ಶೋಧಿಸಿ, ಅವುಗಳಲ್ಲಿರುವ ಅವಾಸ್ತವಿಕತೆಯ ಮೇಲು ಮುಸುಕನ್ನು ಸರಿಸಿ ನೋಡಿದಾಗ ವಾಸ್ತವದ ಸಣ್ಣ ಅಂಶವು ಒಳಗೆ ಹುದುಗಿರುವುದು ಕಾಣುತ್ತದೆ. ಬರಹ ರೂಪದಲ್ಲಿ ಲಭ್ಯವಾಗದುದನ್ನು ಐತಿಹ್ಯಗಳ ಆಧಾರದಿಂದ ಹುಡುಕುವ ಪ್ರಯತ್ನ ಇಲ್ಲಿ ಇದೆ. ಅವರೊಂದಿಗೆ ಶಾಲಿಯಾ ತೆರುಗಳ ದೇವಾಲಯಗಳೂ, ಅಲ್ಲಿನ ಆಚರಣೆಗಳೂ ಇಲ್ಲಿನ ಶೋಧನೆಗೆ ಸಹಾಯಕವಾಗಿವೆ. ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನಲ್ಲಿ ಸಾಮಾನ್ಯವಾಗಿ ಕಾಣಸಿಗುವ ಇತರ ಜಾತಿಯವರಿಗಿಂತ ವಿಭಿನ್ನವಾದ ಇವರ ಜೀವನ ಪದ್ಧತಿ, ಜಾನಪದ ಆರಾಧನೆಗಳು ಅಧ್ಯಯನ ಯೋಗ್ಯವಾದವುಗಳು ಅನ್ನಿಸುತ್ತದೆ. ಅದರಲ್ಲೂ ಮುಖ್ಯವಾಗಿ 'ತೆರು' ಮತ್ತು ನಗರ ಎನ್ನುವ ಇವರ 'ಸಮಾಜ ವ್ಯವಸ್ಥೆ' ಬಹಳಷ್ಟು ಕುತೂಹಲಕಾರಿಯಾಗಿ ಕಂಡು ಬರುತ್ತದೆ. ಪಾಶ್ಚಾತ್ಯೀಕರಣ ಹಾಗೂ ಆಧುನಿಕತೆಯಿಂದ ನಶಿಸಿ ಹೋಗುತ್ತಿರುವ ಶ್ರೀಮಂತವಾದ ಈ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಂಡು ಅದನ್ನು ಬರಹ ರೂಪಕ್ಕೆ ಇಳಿಸುವ ಒಂದು ಪ್ರಯತ್ನವೂ ಇಲ್ಲಿದೆ.

'ಪಟ್ಟುವಂ ತೊಟ್ಟು ಪಣಂಬೂರುವರೆ ಪದಿನಾಲ್ ನಗರಂ' ಎಂಬ ಮಾತನ್ನು ದೃಢವಾಗಿ ನಂಬಿಕೊಂಡು ಬಂದ ಇವರ ಕೇಂದ್ರ ಸ್ಥಾನ ಚಂದ್ರಗಿರಿಯ ದಕ್ಷಿಣ ತೀರದ 'ಕೀಟೂರು' ಎಂಬಲ್ಲಿದೆ. ಕೇರಳದ ಪಟ್ಟುವದಿಂದ ದಕ್ಷಿಣ ಕನ್ನಡದ ಪಣಂಬೂರುವರೆಗಿನ ಹದಿನಾಲ್ಕು ನಗರಗಳ ಹಿರಿಯರು ವರ್ಷಂಪ್ರತಿ ವೃಶ್ಚಿಕ ಮಾಸದ ಎರಡನೆಯ ಶನಿವಾರದಂದು ಸೇರಿಕೊಳ್ಳುವುದು 'ನಿಟಲ್ ವಿರಿಕ್ಕಲ್' (ನೆಳಲು ಹಾಸುವುದು) ಎನ್ನುವ ವಿಶಿಷ್ಟ ಕ್ರಮವನ್ನು ಆಚರಿಸುವುದು ಇವೆಲ್ಲವೂ ಸಮಾಜದೊಳಗೆ ಏಕಸೂತ್ರತೆಯನ್ನು ಉಳಿಸಿಕೊಳ್ಳುವ ಒಂದು ಪ್ರಯತ್ನವಾಗಿ ಕಂಡು ಬರುತ್ತದೆ. ಮಾನವರು ಸಮೂಹ ಜೀವನದಿಂದ ವೈಯಕ್ತಿಕ ಜೀವನದ ಕಡೆಗೆ ಮುಖ ತಿರುಗಿಸುತ್ತಿರುವ ಇಂದಿನ ಯುಗದಲ್ಲಿ ಇವರು ಮಾತ್ರ

ಸಾಮೂಹಿಕವಾಗಿ ಒಂದೆಡೆ ಸೇರಿಕೊಂಡು ಸಾಮೂಹಿಕ ಜೀವನದ ಪ್ರಾಮುಖ್ಯತೆಯನ್ನು ಸಾರಿ ಹೇಳುವುದು ಭಾರತೀಯ ಸಂಸ್ಕೃತಿಯಲ್ಲಿ ಒಂದಾದ ಸಮೂಹ ಜೀವನ ಪದ್ಧತಿಗೆ ಕನ್ನಡಿ ಹಿಡಿಯುವುದನ್ನು ಕಾಣಬಹುದು. ಆದುದರಿಂದ ಕೇರಳ ಹಾಗೂ ದಕ್ಷಿಣ ಕನ್ನಡದಲ್ಲಿ ಬೇರಾವ ಸಮುದಾಯದಲ್ಲೂ ಕಾಣದ ಈ 'ತೆರು' ಹಾಗೂ 'ನಗರ' ಸಂಸ್ಕೃತಿ ಯಾವ ಮೂಲದಿಂದ ಬಂದಿರಬಹುದು ಎನ್ನುವುದನ್ನು ಕುರಿತು ಅಧ್ಯಯನ ಮಾಡುವುದು ಈ ಸಂಶೋಧನೆಯ ಉದ್ದೇಶವಾಗಿದೆ.

ಪ್ರತಿಯೊಂದು ವೃತ್ತಿಯ ಹಿಂದೆ ಒಂದು ಜಾನಪದ ಅಂಶವಿದೆ. ಕುಂಬಾರಿಕೆ, ಕಮ್ಮಾರಿಕೆ, ನೇಯ್ಗೆ ಮೊದಲಾದ ಕುಶಲ ಕಲೆಗಳ ಹಿಂದೆ ಹೇರಳವಾದ ವೃತ್ತಿ ಜಾನಪದ ಇರುವುದನ್ನು ಕಾಣಬಹುದು. ಇಂದಿನ ಯಂತ್ರಯುಗದಲ್ಲಿ ವೃತ್ತಿ ಹಾಗೂ ಅದರೊಂದಿಗಿನ ಭಾವನಾತ್ಮಕ ಸಂಬಂಧವು ನಶಿಸಿ ಹೋಗುತ್ತಿರುವುದರ ಜತೆಗೆ, ಅದರೊಂದಿಗೆ ಬೆಳೆದು ಬಂದಿರುವ ಜಾನಪದ ಸಂಸ್ಕೃತಿಯೂ ನಾಶವಾಗುತ್ತಿದೆ. ಪ್ರತಿಯೊಂದು ಪ್ರದೇಶದಲ್ಲಿ ಅನುಸರಿಸುತ್ತಿರುವ ವೃತ್ತಿಗೆ ಮೂಲ ಜಾನಪದ ವಿಷಯಗಳ ಜತೆಗೆ ಪ್ರಾದೇಶಿಕತೆಯೂ ಸೇರಿಕೊಂಡು ವಿಶಿಷ್ಟವಾದ ಒಂದು ವೃತ್ತಿ ಜಾನಪದವು ಸೃಷ್ಟಿಯಾಗುತ್ತದೆ. ನೇಕಾರಿಕೆಯನ್ನು ಅವಲಂಭಿಸಿದ ಜನರು ದಕ್ಷಿಣ ಭಾರತದ ವಿವಿದೆಡೆಗಳಲ್ಲಿ ಜೀವಿಸುವಾಗ ಅಲ್ಲಲ್ಲಿನ ಪ್ರಾದೇಶಿಕತೆಗೆ ಅನುಗುಣವಾಗಿ ತಮ್ಮ ಮೂಲ ವೃತ್ತಿ ಜಾನಪದದೊಂದಿಗೆ ಪ್ರಾದೇಶಿಕ ಭಿನ್ನತೆಯುಳ್ಳ ವೃತ್ತಿ ಜಾನಪದವೊಂದನ್ನು ಬೆಳೆಸಿಕೊಂಡಿದ್ದಾರೆ. ಹೀಗಿರುವಾಗ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶದಲ್ಲಿ ವಾಸಿಸುತ್ತಿರುವ ಈ ಜನಾಂಗವು ತಾವು ರೂಢಿಸಿಕೊಂಡು ಬಂದಿರುವ ವೃತ್ತಿ ಜಾನಪದದ ವೈಶಿಷ್ಟ್ಯವನ್ನು ಶೋಧನೆ ಮಾಡಿ ಸಂಗ್ರಹಿಸುವುದೂ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ವಿಶೇಷತಃ ಹಾಸ್ಯಪ್ರಜ್ಞೆಯುಳ್ಳ ಇವರು ತೆರುಗಳಲ್ಲಿ ನಡೆಸುವ 'ಪೊರಾಟ್' ಎನ್ನುವುದು ವಿಶಿಷ್ಟವಾದ ಒಂದು ಜಾನಪದ ಕಲೆಯಾಗಿದೆ. ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಯನ್ನು ವಿಡಂಬಿಸುವುದನ್ನೇ ವಸ್ತುವನ್ನಾಗಿಸಿಕೊಂಡ ಈ 'ಪೊರಾಟ್'ಗಳನ್ನು ಎಲ್ಲಾ ಸಮುದಾಯದ ಕ್ಷೇತ್ರಗಳಲ್ಲೂ ಜಾತ್ರೆಗಳ ಸಂದರ್ಭದಲ್ಲಿ ನೀಡಲಾಗುತ್ತಿತ್ತು. ಅದು ಈ ಸಮುದಾಯದ ಒಂದುಹಕ್ಕೂ ಆಗಿತ್ತು. ಅದನ್ನು 'ಜಾಲ್ಯಪ್ಪೊರಾಟ್' ಎಂದೇ ಕರೆಯುತ್ತಿದ್ದರು. ದಕ್ಷಿಣ ಕನ್ನಡ ಮತ್ತು ಕಾಸರಗೋಡಿನಲ್ಲಿ ಶ್ರೀಮಂತವಾದ ಯಕ್ಷಗಾನ ಕಲೆಯಲ್ಲಿ ಬರುವ 'ಹಾಸ್ಯಗಾರ' ಪಾತ್ರಗಳಿಗೆ ಹೆಚ್ಚಾಗಿ ಇವರೇ ಆಯ್ಕೆಯಾಗುತ್ತಿದ್ದುದು ಬಹುಶಃ ಈ ಕಾರಣದಿಂದ ಆಗಿರಬಹುದು. ಇದರೊಂದಿಗೆ 'ಪೂರಕ್ಕಳಿ' ಎನ್ನುವ ಜಾನಪದ ಕುಣಿತವೂ ಇವರಲ್ಲಿ ಬೆಳೆದು ಬಂದಿರುವುದು ಕಂಡು ಬರುತ್ತದೆ. ವಿಶಿಷ್ಟವಾದ ಈ ಕಲೆಗಳ ಬಗ್ಗೆ ಇದುವರೆಗೆ ಸರಿಯಾದ ವಿವರಗಳು ಸಿಗದಿರುವುದರಿಂದ ಅದನ್ನು ಸಂಶೋಧನೆಗೆ ಒಳಪಡಿಸುವ ಉದ್ದೇಶವೂ ಇದೆ.

ಇತ್ತೀಚೆಗೆ ಕೆಲವು ವರ್ಷಗಳಿಂದ ಈ ಪ್ರದೇಶದಲ್ಲಿ ನೇಕಾರಿಕೆ ಗಣನೀಯವಾಗಿ ಇಳಿಮುಖವಾಗುತ್ತಿದೆ. ಸ್ವತಂತ್ರವಾಗಿಯೋ, ನೇಯ್ಗೆ ಕಾರ್ಖಾನೆಗಳಲ್ಲಿಯೋ, ನೇಕಾರರ ಸಹಕಾರಿ ಸಂಘಗಳ ಮುಖಾಂತರವೋ ಈ ಹಿಂದೆ ಈ ಸಮಾಜದವರು ನೇಕಾರಿಕೆಯನ್ನು ನಡೆಸಿಕೊಂಡು ಬಂದಿದ್ದರು. ಒಂದು ಕಾಲದಲ್ಲಿ

ಸಹಸ್ರಾರು ನೇಕಾರರಿಗೆ ಜೀವನೋಪಾಯವನ್ನು ಒದಗಿಸಿಕೊಟ್ಟಂತಹ ಕಾಸರಗೋಡಿನ ನೇಕಾರರ ಸಹಕಾರಿ ಸಂಘವು ಇತ್ತೀಚೆಗೆ ಮುಚ್ಚುವ ಸ್ಥಿತಿಯಲ್ಲಿದ್ದು, ಸಾವಿರಾರು ನೇಕಾರರು ನಿರ್ಗತಿಕರಾಗಿ ಹೋಗಿದ್ದಾರೆ. ಕುಶಲ ಕಲೆಯೊಂದು ಮೂಲೆ ಗುಂಪಾಗಿ, ಶ್ರೀಮಂತವಾದ ಜಾನಪದ ಸಂಸ್ಕೃತಿಯೊಂದು ನಶಿಸುತ್ತಿರುವುದು. ಭಾರತೀಯ ಸಂಸ್ಕೃತಿಯ ನಶಿಸುವಿಕೆಗೆ ಸಾಕ್ಷಿಯಾಗಿ ಕಂಡುಬರುತ್ತದೆ. ಆದುದರಿಂದ ನಾಶವಾಗುತ್ತಿರುವ ಅವರ ಬಗ್ಗೆ ಒಂದು ಅಧ್ಯಯನದ ಅಗತ್ಯವಿದೆ ಎಂದನ್ನಿಸಿ, ನೇಕಾರರ ಸಮಸ್ಯೆಗಳ ಕಡೆಗೂ ದೃಷ್ಟಿ ಹರಿಸುವ ಉದ್ದೇಶ ಈ ಅಧ್ಯಯನದಲ್ಲಿದೆ.

ಪ್ರಾದೇಶಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಹಾಗೂ ವಿದ್ಯಾಭ್ಯಾಸ ಇವೆಲ್ಲವೂ ಒಂದು ಪ್ರದೇಶದ ಮೂಲ ಸಂಸ್ಕೃತಿಯನ್ನು ಕ್ರಮೇಣ ಮರೆಯಾಗಿಸುತ್ತದೆ. ಭೂತಕಾಲದಿಂದ ಭವಿಷ್ಯದೆಡೆಗೆ ಸಾಗುವ ಯಾವುದೇ ಜನಾಂಗವೂ ನಿಧಾನವಾಗಿ ತಮ್ಮ ಜೀವನ ಪದ್ಧತಿಯಲ್ಲಿಯೂ, ಆಚರಣೆಯಲ್ಲಿಯೂ ಬದಲಾವಣೆಗಳನ್ನು ಹೊಂದುತ್ತಲೇ ಹೋಗುತ್ತದೆ. ಆದುದರಿಂದ ಸಾಧ್ಯವಾದಷ್ಟೂ ಮೂಲ ಸಂಸ್ಕೃತಿಯನ್ನು ಸ್ವಲ್ಪ ಮಟ್ಟಿಗಾದರೂ ಮುಂದಿನ ಜನಾಂಗವು ಅರಿಯಲು ಇಂತಹ ಅಧ್ಯಯನಗಳು ಅನುಕೂಲವಾಗುತ್ತದೆ ಎನ್ನುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಈ ಮೊದಲು ನೇಕಾರ ಸಮುದಾಯಗಳ ಬಗ್ಗೆ ಎಡ್ಗರ್ ಥರ್ಸ್ಟನ್, ಹಯವದನ ರಾವ್, ತಿರುವೆಂಕಟ ಅಯ್ಯಂಗಾರ್, ಶೆರಿಂಗ್ ಮೊದಲಾದವರ ಗ್ರಂಥಗಳಲ್ಲಿ ಚರ್ಚೆಗಳು ಬಂದಿವೆ. ಆದರೆ ಕಾಸರಗೋಡು ಹಾಗೂ ದಕ್ಷಿಣ ಕನ್ನಡದ ದೇವಾಂಗ / ಶಾಲಿಯಾ ಸಮಾಜದ ಬಗ್ಗೆ ಪ್ರತ್ಯೇಕವಾದ ಅಧ್ಯಯನ ಯಾವ ಭಾಷೆಯಲ್ಲೂ ನಡೆದಿಲ್ಲ. ಈ ಸಮಾಜದ ಕೆಲವು ಸಂಸ್ಮರಣ ಗ್ರಂಥಗಳಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಜನಾಂಗದ ಕೆಲವು ಮುಖಗಳ ಪರಿಚಯವಾಗಿದೆ. ಉಳಿದೆಲ್ಲಾ ವಿಷಯಗಳಿಗಿಂತಲೂ ಇವರ ಸಾಮಾಜಿಕ ಜೀವನದಲ್ಲಿ, ಸಾಮೂಹಿಕ ಅಥವಾ ಸಾಮುದಾಯಿಕ ವ್ಯವಸ್ಥೆಯಲ್ಲಿ ಕಂಡು ಬರುವ ವೈಶಿಷ್ಟ್ಯತೆಯೇ ಈ ಅಧ್ಯಯನದ ಕೇಂದ್ರ ವಿಷಯವಾಗಿದೆ ಆದುದರಿಂದಲೇ ಇದು 'ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ದೇವಾಂಗ / ಶಾಲಿಯಾ ಸಮುದಾಯದ ಅಧ್ಯಯನ'ವಾಗಿದೆ.

## ೨. ಭಾರತೀಯ ಜಾತಿ ಪದ್ಧತಿ

ಸುಮಾರು ಐದು ಸಾವಿರಕ್ಕಿಂತಲೂ ಹೆಚ್ಚು ಜಾತಿಗಳು ಕಂಡು ಬರುವ ಭಾರತದಲ್ಲಿ ಜಾತಿ ವ್ಯವಸ್ಥೆಯು ಯಾವಾಗ ಪ್ರಾರಂಭವಾಯಿತು ಎನ್ನುವುದರ ಬಗ್ಗೆ ನಿಖರವಾದ ಅಭಿಪ್ರಾಯಗಳಿಲ್ಲದಿದ್ದರೂ, ಹಲವಾರು ಊಹೆಗಳಿರುವುದು ಕಂಡು ಬರುತ್ತದೆ. ಹಲವು ಅಧ್ಯಯನಗಳ ಹಿನ್ನೆಲೆಯಲ್ಲಿ ತಿಳಿದು ಬರುವ ವಿಷಯವೇನೆಂದರೆ, ಭಾರತದಲ್ಲಿ ಜಾತಿಗಳು ಒಂದೇ ಬಾರಿ ಉದಿಸಿ ಬರಲಿಲ್ಲ. ನಿಧಾನವಾಗಿ ಹುಟ್ಟಿ, ಕ್ರಮೇಣ ವ್ಯಾಪಿಸುತ್ತಾ ಬಂದಿರುವ ಸಾಧ್ಯತೆಗಳೇ ಹೆಚ್ಚು. ಜಾತಿ-ಜಾತಿಗಳು ಒಂದಾಗುವ ಹಾಗೂ ವಿಭಜನೆಯಾಗುವ ಈ ಪ್ರಕ್ರಿಯೆ ಇಂದಿಗೂ ಮುಂದುವರಿಯುತ್ತಿದೆ ಎಂದರೆ ತಪ್ಪಾಗಲಾರದು.

'ಜಾತಿ' ಎನ್ನುವ ಪದವನ್ನು ದೇಶೀಯ ಭಾಷೆಯಲ್ಲಿ ಎರಡು ರೀತಿಯಲ್ಲಿ ಅರ್ಥವಿಸಿ ಕೊಳ್ಳಲಾಗುತ್ತವೆ. ಮೊದಲನೆಯದು 'ಝಾತ್' ಎಂದರೆ ತಳಿ (Breed) ಅಥವಾ ಪಂಗಡ (Tribe). ಇನ್ನೊಂದು 'ಪರಿವಾರ' - 'ಪಂಗಡ' ಎನ್ನುವುದು ಒಂದು ಇಡೀ ವರ್ಗವನ್ನೇ ಗಣನೆಗೆ ತೆಗೆದುಕೊಂಡು ಅವರ ಆಚಾರ ವಿಚಾರಗಳನ್ನು ಪ್ರತ್ಯೇಕಿಸಿ ನೋಡಲಾಗುತ್ತದೆ. 'ಪರಿವಾರ' ಅಥವಾ 'ಬಣ' ಎನ್ನುವುದು ಅದರ ಕಿರಿಯ ರೂಪ. ಜಾತಿಯ ಒಳಗೆಯೇ ಇರುವ ಉಪಪಂಗಡಗಳು 'ಬಣ' ಎಂದನ್ನಿಸಿಕೊಳ್ಳುತ್ತದೆ. ಹೀಗಿರುವಾಗ ಒಂದು ಬಣದವರು ಇನ್ನೊಂದು ಬಣದವರಿಗಿಂತಲೂ ವ್ಯತ್ಯಸ್ತವಾಗಿದ್ದರೂ ಅವರು ಮೂಲತಃ ಒಂದೇ ಪಂಗಡದವರಾಗಿರುತ್ತಾರೆ. (Blunt : 1931).

ಈ ಹಿನ್ನೆಲೆಯಲ್ಲಿ ಜನಾಂಗ ⟶ ಜಾತಿ ⟶ ಬಣ ಎನ್ನುವುದನ್ನು

ಜನಾಂಗ



ಜಾತಿ



ಬಣ

ಎಂದು ಮಾಡಬಹುದು. ಒಂದೇ ವೃತ್ತಿಯನ್ನು ಅವಲಂಬಿಸಿ ಕೆಲವೊಂದು ಸಮಾನಾಂಶಗಳನ್ನು ಒಳಗೊಂಡ ಒಂದು ಗುಂಪು 'ಜನಾಂಗ' ಎಂದನ್ನಿಸಿಕೊಳ್ಳುತ್ತದೆ. ಅದರಿಂದ ಪ್ರಾದೇಶಿಕ ಹಾಗೂ ಸಾಮಾಜಿಕ ಕಾರಣಗಳಿಂದ ವಿಭಿನ್ನತೆಯನ್ನು ಪಡೆದು ಗುಂಪು ವಿಭಜನೆಯಾದಾಗ 'ಜಾತಿ' ಎಂದನ್ನಿಸಿಕೊಳ್ಳುತ್ತದೆ. ಅದರಲ್ಲಿ ಉಪಪಂಗಡಗಳು ಹುಟ್ಟಿಕೊಂಡಾಗ 'ಬಣ' ಅನ್ನಿಸಿಕೊಳ್ಳುತ್ತದೆ.

ಪ್ರಸಿದ್ಧ ಸಮಾಜ ಶಾಸ್ತ್ರಜ್ಞರಾದ ಶ್ರೀ G.S. Ghurye ಅವರು 'ಜಾತಿ ಎನ್ನುವುದಕ್ಕೆ ನಿಖರವಾದ ಸಿದ್ಧಾಂತವನ್ನು ಕೊಡಲಾಗುವುದಿಲ್ಲ' ಎನ್ನುತ್ತಾರೆ.

ಶ್ರೀ ಎಲ್. ಜಿ. ಹಾವನೂರರು ತಮ್ಮ ಹಾವನೂರ ವರದಿಯಲ್ಲಿ 'ಜಾತಿ ಒಬ್ಬ ವ್ಯಕ್ತಿ ಯಾರೆಂಬುದನ್ನೂ ಸಮಾಜದಲ್ಲಿ ಅವನ ಸ್ಥಾನಮಾನವೇನೆಂಬುದನ್ನು ಸೂಚಿಸುತ್ತದೆ' ಎನ್ನುತ್ತಾರೆ. ಡಿ. ಎನ್. ಮಾಜುಮ್‌ದಾರರ ಅಭಿಪ್ರಾಯದಲ್ಲಿ 'ಜಾತಿ ಎನ್ನುವುದು ಗಂಗಾ ತೀರದಲ್ಲಿ ಆರ್ಯನರ ಹಾಗೂ ಭಾರತದ ಮೂಲ ನಿವಾಸಿಗಳ ಮಧ್ಯದಲ್ಲಿ ಬ್ರಾಹ್ಮಣ ದೃಷ್ಟಿಕೋನದಿಂದ ಹುಟ್ಟಿದ ಸಾಮಾಜಿಕ ವಿಂಗಡಣೆ. ಕ್ರಮೇಣ ಭಾರತದ ಇತರ ಪ್ರದೇಶಗಳಿಗೆ ಅದು ವ್ಯಾಪಿಸಿದಂತೆ ಕಾಣುತ್ತದೆ'. (D. N. majumdar : 'Races and Cultures of India')

ನಿರ್ದಿಷ್ಟ ಜೀವನ ಪದ್ಧತಿಗಳನ್ನೂ, ಆಚರಣೆಗಳನ್ನೂ ರೂಢಿಸಿಕೊಂಡು ಬರುವವರು ಒಂದು ಜಾತಿಗೆ ಸೇರಿದವರಾಗಿರುತ್ತಾರೆ. ಜಾತಿ ಎನ್ನುವುದು ಆಯ್ಕೆಯಿಂದ ಬರುವುದಲ್ಲ; ಹುಟ್ಟಿನಿಂದ ಬರುವುದು. ಹಿಂದೆ ಒಬ್ಬ ವ್ಯಕ್ತಿಯ ಘನತೆಯು ಅವನ ಆರ್ಥಿಕ ಸ್ಥಿತಿಯಿಂದ ಅಳೆಯಲ್ಪಡದೆ, ಅವನು ಹುಟ್ಟಿದ ಜಾತಿಯಿಂದ ಅಳೆಯಲ್ಪಡುತ್ತಿತ್ತು.

ಜಾತಿ ಪದ್ಧತಿಯ ಪ್ರಪ್ರಥಮ ದಾಖಲೆಗಳು ಋಗ್ವೇದದಲ್ಲಿ ಸಿಗುತ್ತವೆ. ಅಲ್ಲಿ ಬ್ರಾಹ್ಮ, ಕ್ಷಾತ್ರ ಮತ್ತು ವಿಶ (ಸಾಮಾನ್ಯ ಜನತೆ) ಹೀಗೆ ಮೂರು ವರ್ಣಗಳ ಉಲ್ಲೇಖವಿದೆ. ಸೃಷ್ಟಿಕರ್ತನ ಶರೀರದ ನಾಲ್ಕು ಭಾಗಗಳಿಂದ ಮೈದಳೆಯುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಬಗ್ಗೆ ತೈತ್ತಿರೀಯ ಉಪನಿಷತ್ತಿನಲ್ಲಿದೆ. ಅತೀ ಪ್ರಾಚೀನ ಸಾಹಿತ್ಯದಲ್ಲಿ 'ವರ್ಣ' ಎಂಬ ಪದವು ಈ ಗುಂಪುಗಳಿಗೆ ಅನ್ವಯಿಸಲ್ಪಟ್ಟಂತೆ ಕಾಣುವುದಿಲ್ಲ. ಆದರೆ ಮುಂದಿನ ಸಾಹಿತ್ಯದಲ್ಲಿ ಇವು ಚಾತುರ್ವರ್ಣವೆಂದೇ ಸಂಭೋದಿಸಲ್ಪಟ್ಟಿವೆ. ಗೌರವರ್ಣದ ಆರ್ಯರಿಂದ ಕಪ್ಪು ಬಣ್ಣದ ದ್ರಾವಿಡರನ್ನು ವಿಂಗಡಿಸಲು ಮಾತ್ರ ಅದು ಉಪಯೋಗಿಸಲ್ಪಡುತ್ತಿತ್ತು. ಜನರಲ್ಲಿ ಪ್ರಾರಂಭಿಕವಾಗಿ ಇದ್ದ ದ್ವಿವಿಧ ವಿಂಗಡಣೆಯು ಮುಂದೆ ತ್ರಿವಿಧವಾಗಿ, ಹಾಗೂ ಕೊನೆಗೆ ಚತುರ್ವಿಧವಾಗಿ ರೂಪುಗೊಂಡಿತು. ಮೊದಲಿನ ಎರಡು ವರ್ಣಗಳ ವೃತ್ತಿಗಳು ಅನುಕ್ರಮವಾಗಿ ಪೌರೋಹಿತ್ಯ ಹಾಗೂ ಆಡಳಿತ ಮತ್ತು ಸೈನಿಕ ಕಾರ್ಯಗಳೆಂದು ಸ್ಪಷ್ಟವಾಗಿ ನಿರ್ದೇಶಿಸಲ್ಪಟ್ಟಿದೆ. ಆದರೆ ವೈಶ್ಯ ಶೂದ್ರರ ಕಾಯಕಗಳು ಅಷ್ಟೊಂದು ನಿಚ್ಚಳವಾಗಿಲ್ಲ. ( ಭಾರತದ ಗೆಜೆಟಿಯರ್ : ೧೯೮೬ )

ಸೃಷ್ಟಿಕರ್ತನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ಹೊಟ್ಟೆಯಿಂದ ವೈಶ್ಯ, ಕಾಲಿನಿಂದ ಶೂದ್ರ ಎನ್ನುವ ವಿಚಾರವು ಆರಂಭಿಕ ಹಂತದಲ್ಲಿಯೇ ಉದ್ಯೋಗದ ಹಿನ್ನೆಲೆಯಲ್ಲಿ ಜನಾಂಗದ ವರ್ಗೀಕರಣ ನಡೆದಿರುವುದನ್ನು ಸೂಚಿಸುತ್ತದೆ. ಮೂಲತಃ ನಾಲ್ಕು ಇದ್ದ ವೃತ್ತಿಯ ಹಿನ್ನೆಲೆಯ ವರ್ಗೀಕರಣವು ಕ್ರಮೇಣ ಆಂತರಿಕವಾಗಿ ವೃತ್ತಿಯ ಹಿನ್ನೆಲೆಯಿಂದಲೇ ವಿಭಜನೆಯಾಗುತ್ತಾ ಕ್ರಮೇಣ ಹಲವು ಜಾತಿಗಳು ಹುಟ್ಟಲು ಕಾರಣವಾಯಿತು. ಇನ್ನೂ ಮುಂದಕ್ಕೆ ಸಾಗಿದಂತೆ ಪ್ರಾದೇಶಿಕತೆಯೂ ಕೂಡಾ ಜಾತಿಯ ವಿಭಜನೆಗೆ ತನ್ನದೇ ಕೊಡುಗೆಯನ್ನು ಕೊಟ್ಟಿರುವುದು ಕಂಡುಬರುತ್ತದೆ.

ವೇದಕಾಲದಲ್ಲಿ ಸೃಷ್ಟಿಯಾದ ಈ ಚತುರ್ವರ್ಣ ವ್ಯವಸ್ಥೆಯು ಆ ಕಾಲದಲ್ಲಿ ನಿರ್ದಿಷ್ಟವಾಗಿ ಗುರುತಿಸಲ್ಪಡುತ್ತಿದ್ದರೆ, ಕ್ರಮೇಣ 'ಬ್ರಾಹ್ಮಣ' ಹಾಗೂ 'ಕ್ಷತ್ರಿಯ' ಮಾತ್ರ ಪ್ರತ್ಯೇಕವಾಗಿ ಗುರುತಿಸಲ್ಪಟ್ಟು

'ವೈಶ್ಯ' ಹಾಗೂ 'ಶೂದ್ರ'ರಲ್ಲಿ ವ್ಯತ್ಯಾಸಗಳು ಕಡಿಮೆಯಾಗುತ್ತಾ ಬಂದವು. ರಾಜ ಮನೆತನಗಳು ಅಳಿದು ಹೋದಂತೆ, ಯುದ್ಧವೇ ಮೊದಲಾದ ವೃತ್ತಿಯನ್ನು ಇತರರೂ ನಡೆಸಲು ಆರಂಭಿಸಿದರು. ಮುಂದೆ ದೈಹಿಕ ಶಕ್ತಿ ಉಳ್ಳವರೆಲ್ಲರೂ ಯುದ್ಧದಲ್ಲಿ ಪಾಲುಗೊಳ್ಳುವುದೂ, ರಾಜರಾಗಿ ಬರುವುದೂ, ಕ್ಷತ್ರಿಯರು ವಿವಿಧ ವೃತ್ತಿಗಳನ್ನು ಅವಲಂಬಿಸಬೇಕಾಗಿ ಬಂದುದೂ, ವೈಶ್ಯ ಹಾಗೂ ಶೂದ್ರರಿಂದ ಕ್ಷತ್ರಿಯರನ್ನು ಪ್ರತ್ಯೇಕವಾಗಿ ಗುರುತಿಸಲು ಅಸಾಧ್ಯವಾಗುವಂತೆ ಮಾಡಿತು. ಆಗ ವಿವಿಧ ವೃತ್ತಿಗಳ ಆಧಾರದಿಂದಲೇ ಜಾತಿಯನ್ನು ನಿರ್ಧರಿಸುವುದೇ ಸರಿ ಎಂದೆನ್ನಿಸಿತು. ಆದರೆ ಅತ್ಯುಚ್ಛ ಎಂದೆನ್ನಿಸಿದ ಬ್ರಾಹ್ಮಣ ವರ್ಗವೊಂದು ಮಾತ್ರ ತನ್ನಲ್ಲೇ ಹಲವು ಪಂಗಡಗಳನ್ನು ಒಳಗೊಂಡಿದ್ದರೂ ಪ್ರತ್ಯೇಕವಾಗಿ ಇಂದೂ ಗುರುತಿಸಲ್ಪಡುತ್ತಿದೆ.

ಸುಮಾರು ಐದು ಸಾವಿರಕ್ಕಿಂತಲೂ ಹೆಚ್ಚು ಜಾತಿಗಳು ಕಂಡುಬರುವ ಭಾರತದಲ್ಲಿ ಪ್ರತಿಯೊಂದು ಜಾತಿಗೂ ಇತರ ಜಾತಿಯಿಂದ ವಿಭಿನ್ನವಾದ ತನ್ನದೇ ಆದ ಪ್ರತ್ಯೇಕತೆಯಿದೆ. ಕೆಲವೊಮ್ಮೆ ಮತ ಪರಿವರ್ತನೆಯಾದರೂ ಜಾತಿ ಪದ್ಧತಿಯನ್ನು ಬಿಡುವ ಹಾಗಿಲ್ಲ. (ಬಂಗಾಲದಲ್ಲಿ 'ಜುಲಾಹಾ' ಎನ್ನುವ ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಿದ ನೇಕಾರ ವರ್ಗವು ಈಗಲೂ ನೇಕಾರಿಕೆಯನ್ನೇ ಮುಂದುವರಿಸಿಕೊಂಡು ಬರುವುದೂ, ಕೆಲವು ಜಾತಿ ಪದ್ಧತಿಗಳನ್ನು ಉಳಿಸಿಕೊಂಡಿರುವುದು ಕಂಡು ಬರುತ್ತದೆ). ಜಾತಿ ಬಾಂಧವರನ್ನು ಪರಸ್ಪರ ಬಂಧಿಸುವ ರೀತಿ-ನೀತಿ, ಸಂಪ್ರದಾಯಗಳೂ ಕೂಡಾ ಆಯಾ ಜಾತಿಗಳಿಗೆ ವಿಶಿಷ್ಟವಾಗಿರುವುದು ಕಂಡುಬರುತ್ತದೆ.

ವೃತ್ತಿಯು ಜಾತಿಯ ಉಗಮಕ್ಕೆ ಅಡಿಪಾಯವಾಗಿ, ಮುಂದೆ ಅದರ ಸುತ್ತಲೂ ಅದು ಬೆಳೆದು ಬಂದರೂ, ವೃತ್ತಿಗೂ ಜಾತಿಯ ಹೆಸರಿಗೂ ಮೊದಲು ಇದ್ದ ಸಂಬಂಧಗಳು ಕ್ರಮೇಣ ಕಡಿಮೆಯಾಗಿ, ಕೆಲವೊಮ್ಮೆ ಜಾತಿಯ ಹೆಸರುಗಳು ವೃತ್ತಿಯನ್ನು ಅವಲಂಬಿಸದೇ ಇರುವುದನ್ನು ಕಾಣಬಹುದು. ಒಂದೇ ಪ್ರದೇಶದಲ್ಲಿ ಒಂದೇ ವೃತ್ತಿಯನ್ನು ಅವಲಂಬಿಸಿದವರು ಬೇರೆ ಬೇರೆ ಜಾತಿಯ ಹೆಸರಿನಿಂದ ಕರೆಯಲ್ಪಡುವುದೂ ಅವರಲ್ಲಿಯೇ ಮೇಲು-ಕೀಳು ಇರುವುದೂ ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಗುರುತಿಸಲು ಸಾಧ್ಯವಾಗುವ ಸಂಗತಿಯಾಗಿದೆ.

ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಕಂಡುಬರುವ ಈ ಮೇಲು-ಕೀಳು ಎನ್ನುವ ವರ್ಗ ಭೇದವು ಆರಂಭದಲ್ಲಿ ಬೌದ್ಧಿಕ ಮಟ್ಟದ ಹಿನ್ನೆಲೆಯಿಂದಲೂ ಕ್ರಮೇಣ ವರ್ಣ ಭೇದದ ಹಿನ್ನೆಲೆಯಿಂದಲೂ, ಮುಂದೆ ದೈಹಿಕ ಸಾಮರ್ಥ್ಯದ ಹಿನ್ನೆಲೆಯಿಂದಲೂ ಕ್ರಮೇಣ ಆರ್ಥಿಕ ಮಟ್ಟ ಹಾಗೂ ಸಾಮಾಜಿಕ ಸ್ಥಾನ-ಮಾನಗಳ ಹಿನ್ನೆಲೆಯಿಂದಲೂ ಅಳೆಯಲ್ಪಟ್ಟಿರುವುದು ಕಂಡು ಬರುತ್ತದೆ. ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಪ್ರಥಮರಾದ ಬ್ರಾಹ್ಮಣ ಹಾಗೂ ಕೊನೆಯವರಾದ ಪಂಚಮರನ್ನು ಬಿಟ್ಟರೆ ಮಧ್ಯೆಯಿರುವ ಹಲವು ಜಾತಿಗಳಲ್ಲಿ ಪರಸ್ಪರ ಸ್ಥಾನದ ಕುರಿತು ವಿವಾದಕ್ಕೆ ಸಾಕಷ್ಟು ಅವಕಾಶವಿದೆ. ಶ್ರೇಣಿಯ ಕುರಿತಾದ ಈ ವಿವಾದದಲ್ಲಿ, ಪ್ರತಿ ಜಾತಿಯೂ ತನ್ನ ಹಿರಿಮೆಯ ದ್ಯೋತಕವಾಗಿ ತನ್ನ ಆಹಾರ ಪದಾರ್ಥಗಳು ಹಾಗೂ ತಾನು ಬೇಯಿಸಿದ ಆಹಾರ-ನೀರುಗಳನ್ನು ಸ್ವೀಕರಿಸುವ ಇಲ್ಲವೇ ನಿರಾಕರಿಸುವ ಅನ್ಯ ಜಾತಿ-ಪಂಗಡಗಳು ; ತಾನು ಆಚರಿಸುವ, ಸಂಪ್ರದಾಯಗಳು, ಪರಂಪರಾಗತವಾದ ತನ್ನ ವಿಶೇಷವಾದ

ಅಧಿಕಾರಗಳು, ತನ್ನ ಮೂಲದ ಬಗೆಗೆ ಹೇಳಿಕೊಳ್ಳುವ ದಂತಕತೆಗಳು ಇವುಗಳನ್ನು ಮಾಪನಕ್ಕೆ ಒಳಪಡಿಸಿ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಪ್ರಯತ್ನವನ್ನು ಮಾಡುತ್ತದೆ. ಹಾಗೆಂದು ಬ್ರಾಹ್ಮಣರಲ್ಲಿಯೂ, ಪಂಚಮರಲ್ಲಿಯೂ ಈ ವಿವಾದಗಳು ಇಲ್ಲ ಎಂದು ಅರ್ಥವಲ್ಲ.

ಮೇಲು-ಕೀಳು ಎನ್ನುವ ಈ ವರ್ಗೀಕರಣದ ಹಿಂದೆ ಇನ್ನೊಂದು ಅಂಶವೂ ಕಂಡುಬರುತ್ತದೆ. "ಎಮಿಲೆ ಸೇನ್ ಆರ್ಟ್" ಎಂಬ ಸಮಾಜ ವಿಜ್ಞಾನಿ "ಪ್ರತಿಯೊಂದು ಜಾತಿ ಅಥವಾ ಗುಂಪು ಒಂದು ದೇಶದ ಸಂಸ್ಕೃತಿಯ ಬೆಳವಣಿಗೆಯನ್ನೂ ಮಾನವ ಕುಲದ ಕೈಗಾರಿಕೆಯ ಪ್ರಗತಿಯನ್ನು ಸೂಚಿಸಿ ಕೊಡುತ್ತದೆ" ಎನ್ನುತ್ತಾರೆ. (Emile Senart:-caste in India -1988) ಈ ದೃಷ್ಟಿಯಿಂದ ನೋಡಿದರೆ ಮೇಲು-ಕೀಳು ಎನ್ನುವ ವರ್ಗ ಭೇದವು ಆ ಜಾತಿ ಕೈಗೊಂಡ ವೃತ್ತಿಯಿಂದ ಉತ್ಪನ್ನವಾಗುವ ವಸ್ತುವಿನ ಅವಶ್ಯಕತೆಯ ಶ್ರೇಣಿಯನ್ನು ಅವಲಂಬಿಸಿದೆ ಎನ್ನಬಹುದು. ಆದುದರಿಂದ ಮೂಲಭೂತ ಅವಶ್ಯಕತೆಗಳಾದ ಅಸನ-ವಸನ-ವಸತಿಗಳಿಗೆ ಸಂಬಂಧಿಸಿದವುಗಳನ್ನು ಉತ್ಪತ್ತಿ ಮಾಡುವವರು ಮತ್ತು ಇತರರು ಎಂದು ಇಲ್ಲಿ ಶ್ರೇಣೀಕರಣ ನಡೆದಿದೆ ಎನ್ನ ಬಹುದು. ಅದನ್ನು ಹೀಗೆ ಸೂಚಿಸಬಹುದು.

| ಮೂಲಭೂತ ಅವಶ್ಯಕತೆಯ ಶ್ರೇಣಿ | ಉತ್ಪಾದಕನ ಶ್ರೇಣಿ |
|---|---|
| ೧ = ಅಶನ | ಕೃಷಿಕ = ೧ |
| ೨ = ವಸನ | ನೇಕಾರ = ೨ |
| ೩ = ವಸತಿ | ಕಮ್ಮಾರ, ಕುಂಬಾರ ಇತ್ಯಾದಿ ಮನೆಗೆ ಅವಶ್ಯಕ ವಸ್ತು ತಯಾರಿಸುವ ವೃತ್ತಿಯವರು |
| ೪ =ಇತರ | ಐಚ್ಛಿಕ ಅವಶ್ಯಕತೆಗಳನ್ನು ಉತ್ಪಾದಿಸುವ ವೃತ್ತಿಯವರು. ಉದಾ;- ಕುರುಬ, ಗೊಲ್ಲ, ಚಮ್ಮಾರ, ಮಾದರ ಇತ್ಯಾದಿ |

ಮೇಲೆ ಸೂಚಿಸಿದ ಹಿನ್ನೆಲೆಯಲ್ಲಿ ನೋಡಿದರೆ ಮೇಲು-ಕೆಳ ಸ್ತರಗಳ ವಿಂಗಡಣೆ ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ಆಹಾರ ಉತ್ಪಾದನೆಯನ್ನು ವೃತ್ತಿಯನ್ನಾಗಿಕೊಂಡವರು

ಅತ್ಯುಚ್ಚ ಸ್ತರದಲ್ಲಿ, ಎರಡನೇ ಅವಶ್ಯಕತೆಯಾದ ಬಟ್ಟೆ ಉತ್ಪಾದನೆಯನ್ನು ವೃತ್ತಿಯನ್ನಾಗಿಸಿಕೊಂಡವರು ದ್ವಿತೀಯ ಸ್ತರದಲ್ಲಿ, ಮೂರನೆಯ ಅವಶ್ಯಕತೆಯಾದ ವಸತಿ ನಿರ್ಮಾಣಕ್ಕೆ ಬೇಕಾದುದನ್ನು ತಯಾರಿಸುವ ವೃತ್ತಿಯವರು ಮೂರನೆಯ ಸ್ತರದಲ್ಲಿ ಇರುವುದನ್ನು ಸೂಚಿಸುತ್ತದೆ.

ಇಷ್ಟು ಮಾತ್ರವಲ್ಲದೆ ಭಾರತೀಯ ಸಮಾಜವು ನಿಮ್ನವರ್ಗ, ಮಧ್ಯಮವರ್ಗ ಮತ್ತು ಉನ್ನತವರ್ಗವೆಂದು ವಿಭಜಿತವಾಗಿರುವ ಹಿನ್ನೆಲೆಯಲ್ಲಿ, ಅತ್ಯಂತ ನಿಮ್ನವರ್ಗ ಮತ್ತು ಅತ್ಯಂತ ಮೇಲು ವರ್ಗಗಳಲ್ಲಿ ಅಲ್ಪವಾಗಿ ಕಾಣುವ, ಜಾತಿಯಲ್ಲಿ ಮೇಲ್ಮೆಯನ್ನು ಸಂಪಾದಿಸಲಿಕ್ಕಾಗಿರುವ ಮಾನವನ ಹೋರಾಟವು ಮಧ್ಯಮವರ್ಗದಲ್ಲಿ ಒಂದು ರೀತಿಯ ಸಾಂಸ್ಕೃತಿಕ ಪರಿವರ್ತನೆಯನ್ನು ಉಂಟು ಮಾಡುವುದರೊಂದಿಗೆ, ಸಂಪ್ರದಾಯದ ಕಟ್ಟುಪಾಡುಗಳಿಗೆ ಅವನನ್ನು ಬಂಧಿಸುತ್ತದೆ. ಕೆಲವೆಡೆ ಅವನಿಗೆ ಜಾತಿಯ ಶ್ರೇಣೀಕರಣದಲ್ಲಿ ಸ್ಥಾನವನ್ನು ನೀಡುವಾಗ ಅವನಿರುವ ಪ್ರದೇಶದಲ್ಲಿ ಅವನ ಉತ್ಪಾದನೆಯ ವಸ್ತುವಿನ ಅವಶ್ಯಕತೆಯೊಂದಿಗೆ, ಅವನ ಆರ್ಥಿಕ ಸ್ಥಿತಿಯೂ ಗಣಿಸಲ್ಪಡುತ್ತದೆ. ಆದುದರಿಂದ ಒಂದೆಡೆ ಆತ ಸಾಮಾಜಿಕ ಶ್ರೇಣೀಕರಣದಲ್ಲಿ ಮೇಲ್ಸ್ತರಗತಿಯಲ್ಲಿದ್ದರೆ ಮತ್ತೊಂದೆಡೆ ಕೆಳಸ್ತರದಲ್ಲಿರುತ್ತಾನೆ. ವಿವಿಧ ವೃತ್ತಿಗಳನ್ನವಲಂಬಿಸಿದವರು ಒಮ್ಮೆ ಬ್ರಾಹ್ಮಣತ್ವದ ಹತ್ತಿರಕ್ಕೆ ಏರಿದರೆ, ಮತ್ತೊಮ್ಮೆ ಶೂದ್ರತ್ವದ ಹತ್ತಿರಕ್ಕೆ ಇಳಿದು ಬಿಡುತ್ತಾರೆ.

# ೩. ಸಂಸ್ಕೃತಿ ಮತ್ತು ಸಮಾಜ

ಮನುಷ್ಯನನ್ನು ಮೃಗತ್ವದಿಂದ ಮಾನವತ್ವಕ್ಕೆ ಏರಿಸುವ ಅಂಶವನ್ನೇ 'ಸಂಸ್ಕೃತಿ' ಎಂದು ಸಾಮಾನ್ಯವಾಗಿ ಗುರುತಿಸುತ್ತಾರೆ. ಇದು ಅವನ ಬದುಕಿನ ಪರಿಭ್ರಮಣವನ್ನು ರೂಪಿಸುತ್ತದೆ, ನಿಯಂತ್ರಿಸುತ್ತದೆ ಮಾತ್ರವಲ್ಲ ಅರ್ಥಪೂರ್ಣವನ್ನಾಗಿಸುತ್ತದೆ. 'ಸಂಸ್ಕಾರ' ಎಂಬ ಪದವೇ ಈ ' ಸಂಸ್ಕೃತಿ' ಎಂಬ ಪದಕ್ಕೆ ಮೂಲ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಸಮಾಜದ ಒಳಗೆ ಹಾಗೂ ತನ್ನೊಳಗೆ ಜೀವನದಲ್ಲಿ ಅವನು ಅಳವಡಿಸಿಕೊಳ್ಳುವ ಸಂಸ್ಕಾರಗಳೇ ಮುಖ್ಯವಾದುದರಿಂದ ಈ ಅಭಿಪ್ರಾಯ ಬಂದಿರಬಹುದು. (ಸಮ್ಯಕ್‌ಕರಣ + ಸಮ್ಯಕ್‌ಕೃತಿ = ಸಂಸ್ಕೃತಿ) 'ಸಂಸ್ಕಾರ' ಎಂದರೆ ಒಳ್ಳೆಯದನ್ನು ಮಾಡುವುದು, ಶುದ್ಧಗೊಳಿಸುವುದು ಎಂದರ್ಥವಿದೆ. ಮನುಷ್ಯ ತಾನು ಏಕಾಂಗಿಯಾಗಿ ಬದುಕುವಾಗ ಅವನಿಗೆ ಸಂಸ್ಕೃತಿಯ ಬಗೆಗೆ ಹೆಚ್ಚು ತಲೆ ಕೆಡಿಸಿಕೊಳ್ಳಬೇಕಾದ ಅಗತ್ಯವಿರುವುದಿಲ್ಲ. ಆದರೆ, ಸಮಾಜದ ಅಂಗವಾಗಿ ಆತ ಬದುಕುವಾಗ ಕೆಲವು ರೀತಿ, ನೀತಿ, ನಿಯಮಗಳನ್ನು ಪಾಲಿಸಿಕೊಳ್ಳಬೇಕಾಗುತ್ತದೆ. ಅದುವೇ ಆತನ ವೈಯುಕ್ತಿಕ ಏಕಾಂಗಿ ಬದುಕಿಗೂ ವ್ಯಾಪಿಸಿ ಆತ ಸುಸಂಸ್ಕೃತನಾಗುತ್ತಾನೆ. ಯಾವಾಗ ಸಮಾಜ ರೂಪು ತಾಳಿತೋ ಆಗ ಸಂಸ್ಕೃತಿಯು ಹುಟ್ಟಿಕೊಂಡಿರಬೇಕು. ಆದುದರಿಂದ 'ಸಂಸ್ಕೃತಿಯು ಸಮಾಜದ ಕೂಸು' ಎನ್ನಬಹುದು.

ಲಂಟನ್ ಎಂಬ ಸಮಾಜಶಾಸ್ತ್ರಜ್ಞನ ಪ್ರಕಾರ 'ಜನತೆಯ ಜೀವನ ರೀತಿಯೇ ಸಂಸ್ಕೃತಿ. ಆ ನಿರ್ದಿಷ್ಟವಾದ ಜೀವನ ರೀತಿಯನ್ನು ಅನುಸರಿಸುವ, ವ್ಯವಸ್ಥಿತವೂ ಪರಸ್ಪರ ಕ್ರಿಯಾನ್ವಿತವೂ ಆದ ವ್ಯಕ್ತಿಗಳ ಮೊತ್ತವೇ ಸಮಾಜ.'

ಸಂಸ್ಕೃತಿ ಎನ್ನುವುದಕ್ಕೆ 'culture' ಎಂಬ ಇಂಗ್ಲೀಷ್ ಪದವು ಸಂವಾದಿಯಾಗಿದೆ. ಈ ಪದದ ಮೂಲಾರ್ಥ 'ಗೌರವಿಸು' 'ಸೇವಿಸು' 'ನಿಷ್ಠೆಮಾಡು' ಎಂಬ ರೀತಿಯದಾಗಿತ್ತು. ಕ್ರಮೇಣ ಇದರಿಂದ ಎರಡು ಅರ್ಥಗಳು ಹೊರಟವು.

೧) ದೈವಭಕ್ತಿ, ವ್ರತದೀಕ್ಷೆ, ಮತಸಿದ್ಧಾಂತ ಇತ್ಯಾದಿ. ೨) ಭೂದೇವಿಯ ಆರಾಧನೆ, ಭೂಮ್ಯಾಸಕ್ತಿ, ಕೃಷಿ, ಉಳುಮೆ, ಪೈರು ಬೆಳೆಸುವುದು ಇತ್ಯಾದಿ. ಎರಡನೆಯ ಅರ್ಥದಿಂದ ಅಗ್ರಿಕಲ್ಚರ್ (Agriculture) ಎಂದರೆ 'ಭೂವ್ಯವಸಾಯ' ಎಂಬ ಪದ ಬಂದಿತು. ಈಚೆಗೆ 'ಕಲ್ಚರ್' ಶಬ್ದವು, ನಾನಾ ಜನಾಂಗಗಳ, ಸಮಾಜ ಸಂಸ್ಥೆಗಳ, ವಿವಾಹಾದಿ ಕುಲಪದ್ಧತಿಗಳು, ಸಂಪ್ರದಾಯಗಳು ಮೊದಲಾದ ಜೀವನಕ್ರಮಗಳಿಗೆ ಬಳಸಲ್ಪಡುತ್ತದೆ. ಸುಮಾರು ನೂರು ವರ್ಷಗಳ ಕೆಳಗೆ 'ಕಲ್ಚರ್'ಎಂದರೆ ಮನುಷ್ಯನ ಬುದ್ಧಿಯ ವ್ಯವಸಾಯ, ಮನಸ್ಸಿನ ಮೇಲ್ಮೆ, ಅಂತರಂಗ ಸಂಸ್ಕಾರ ಎಂಬ ಅರ್ಥವು ಪ್ರಚಾರಕ್ಕೆ ಬಂದಿದೆ. (ಡಿ. ವಿ. ಜಿ.–ಸಂಸ್ಕೃತಿ ಪುಟ ೧೨. ಕಾವ್ಯಾಲಯ ಮೈಸೂರು–೧೯೫೩.)

ಫೆಲಿಕ್ಸ್ ಎಂ. ಕಿಸ್ಸಿಂಗ್ ರವರು 'ಸಮಾಜದ ಒಬ್ಬ ಸದಸ್ಯನಾಗಿ, ಮಾನವ ಪರಂಪರಾಗತವಾಗಿ ಕಲಿಯುವ, ಹಂಚಿಕೊಳ್ಳುವ ಹಾಗೂ ಗೌರವಿಸುವ ಕಾರ್ಯಗಳು, ಆಲೋಚನೆಗಳು ಮತ್ತು ಮಾನವ ನಿರ್ಮಿತ

ವಸ್ತುಗಳ ಮೊತ್ತವೇ ಸಂಸ್ಕೃತಿ ಎನ್ನಬಹುದು' ಎಂದಿದ್ದಾರೆ. (Keesing Felix M. - 1962 P-25)

ಮೆಲಿನೋವೆಸ್ಕಿ ಎಂಬ ವಿದ್ವಾಂಸನ ಪ್ರಕಾರ 'ಮಾನವನ ಮನೋಜೈವಿಕ ವ್ಯಕ್ತಿತ್ವವನ್ನು ಸಂರಕ್ಷಿಸುವ ಕೆಲಸವನ್ನು ಆತನ ಸಂಸ್ಕೃತಿಯು ನಿರ್ವಹಿಸುತ್ತದೆ. (B. Melinowski - 188).

ಮೆಲ್ವಿಲ್ಲೆ ಜೆ. ಹರ್‌ಸ್ಕೋವಿಟ್ಸ್ ಎಂಬವನು 'ತನ್ನ ಸುತ್ತಮುತ್ತಲ ಪರಿಸರದಿಂದ ಪ್ರಭಾವಿತನಾದ ಮನುಷ್ಯ ಒಂದು ನಿರ್ದಿಷ್ಟ ಹಾದಿಯನ್ನು ಸ್ವೀಕರಿಸಿ ಪ್ರತಿಕ್ರಿಯೆ ನೀಡುತ್ತಾನೆ ಮತ್ತು ಈ ನಿರ್ದಿಷ್ಟ ಪ್ರತಿಕ್ರಿಯೆಗಳು ಅವನಿಗೊಂದು ವ್ಯಕ್ತಿತ್ವವನ್ನು ನೀಡುತ್ತದೆ' ಎನ್ನುತ್ತಾನೆ. (Melville J. Herskovits. P-25).

ಇದರಿಂದಲಾಗಿ ಮಾನವನ ಮೂಲಭೂತ ಅವಶ್ಯಕತೆಗಳೊಂದಿಗೆ, ಆತನ ವ್ಯಕ್ತಿತ್ವ ನಿರ್ಮಾಣದಲ್ಲಿ ಸಂಸ್ಕೃತಿಯು ಬಹುಮುಖ್ಯ ಪಾತ್ರ ವಹಿಸುತ್ತದೆ ಎನ್ನುವುದರ ಅರಿವಾಗುತ್ತದೆ.

ಸಂಸ್ಕೃತಿಯ ಬಗ್ಗೆ ಹೇಳುವಾಗ ವಿವಿಧ ಅಭಿಪ್ರಾಯಗಳು ವ್ಯಕ್ತವಾಗುತ್ತದೆ. ಯಾರೂ ಕೂಡಾ ಒಮ್ಮತದ ಅಭಿಪ್ರಾಯಕ್ಕೆ ಇನ್ನೂ ಬಂದಿಲ್ಲ. ಹಾಗಾಗಿ, ವಿವರಣೆಗಳಿಂದ ಸಂಗ್ರಹಿಸಿ, ಕ್ರೋಢೀಕರಿಸಲ್ಪಟ್ಟ ಅಭಿಪ್ರಾಯಗಳು ಈ ರೀತಿ ಇವೆ.:-

೧. 'ಸಂಸ್ಕೃತಿ' ಎನ್ನುವುದು ಅತೀ ವಿಶಾಲವಾದ ಸಾರ್ವತ್ರಿಕವಾದ ಅನುಭವಾಗಿದೆ ಮತ್ತು ಪ್ರತಿ ವಿಭಾಗ ಅಥವಾ ಕ್ಷೇತ್ರಕ್ಕೆ ಅದರದ್ದೇ ಆದ ಪ್ರತ್ಯೇಕತೆಯಿದೆ.
೨. ಸಂಸ್ಕೃತಿಯೆನ್ನುವುದು ಅತಿ ಭದ್ರವಾಗಿರುವುದರ ಜತೆಗೆ, ನಿರಂತರವಾದ ಬದಲಾವಣೆಗೆ ಒಳ ಪಡುತ್ತಲೇ ಇರುತ್ತದೆ.
೩. ಸಂಸ್ಕೃತಿಯು ಓರ್ವನ ಜೀವನದ ಹಾದಿಯನ್ನು ತೀರ್ಮಾನಿಸಿ, ಪರಿಪೂರ್ಣಗೊಳಿಸುತ್ತದೆ. (Melville J. Herskovits, Page-306)

'ಸಂಸ್ಕೃತಿಯಲ್ಲಿ ವಿಭಿನ್ನತೆ' ಎನ್ನುವುದು ಒಂದು ಸಾಮಾಜಿಕವಾದ ಸಂಗತಿಯಾಗಿದೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು, ಪ್ರಪಂಚದ ಜನತೆಯ ಬಗೆಗಿನ ವಿಶ್ವಕೋಶದಲ್ಲಿ ಹೀಗೆ ಹೇಳಲಾಗಿದೆ :- 'ಮನುಷ್ಯರು ಪ್ರತ್ಯೇಕ, ಪ್ರತ್ಯೇಕ ರೀತಿಯಲ್ಲಿ ವ್ಯವಹರಿಸುತ್ತಾರೆ. ಯಾಕೆಂದರೆ ಅವರಿಗೆ ತಾವು ಜೀವಿಸುವ ಈ ಪ್ರಪಂಚದ ಬಗ್ಗೆ ಅವರದೇ ಆದ ಕೆಲವು ನಿಲುವುಗಳು ಹಾಗೂ ವಿಶ್ವಾಸಗಳು ಇರುತ್ತವೆ. ಅನುಭವದಿಂದ ಅರ್ಜಿಸಿದ, ತಾಂತ್ರಿಕ ಜ್ಞಾನಗಳ ಬಗ್ಗೆ, ಮಾನವ ಪ್ರಯೋಗಿಸುವ ಸಾಮಾಜಿಕ ಕೌಶಲ್ಯಗಳ ಬಗ್ಗೆ, ತಲೆ ತಲಾಂತರಗಳಿಂದ ಹರಿದು ಬಂದು ಮೈಗೂಡಿಸಿಕೊಂಡಿರುವಂತಹ ಪ್ರಾಯೋಗಿಕ ಜೀವನ ವಿಧಾನಗಳ ಬಗ್ಗೆ ಆತನಿಗೆ ಸಹಮತದ ಅಭಿಪ್ರಾಯವಿರಬಹುದು. ಮನುಷ್ಯನಿಗೆ ಸಂಬಂಧಿಸಿದ ಹಾಗೂ ಸಂಬಂಧಿಸದ ವಿಷಯಗಳೊಂದಿಗಿನ ಅನುಭವಗಳಿಂದ ಮೂಡಿ ಬಂದಿರುವ ಈ ಅಭಿಪ್ರಾಯವು ಸಂಸ್ಕೃತಿಯ ಬಗ್ಗ

ಇರುವ ಒಂದು ದೃಷ್ಟಿಕೋನವಾಗಿದೆ. (Culture Encyclopeadia of World and its people Vol. 6 Page 552.)

ತಾನು ಜೀವಿಸುವ ಪರಿಸರದೊಂದಿಗಿನ ಮಾನವನ ಸಂಬಂಧವು ಅವನ ಸಂಸ್ಕೃತಿಯನ್ನು ರೂಪೀಕರಿಸುತ್ತವೆ ಎನ್ನುವುದು ಸಾಮಾನ್ಯವಾಗಿ ಒಪ್ಪತಕ್ಕ ವಿಚಾರವಾಗಿದೆ. ಕೆಲವೊಮ್ಮೆ ಬದಲಾದ ಪರಿಸರ ಅವನ ಸಂಸ್ಕೃತಿಯ ಮೇಲೆ ಪ್ರಭಾವ ಬೀರದೆ ಅದು ಹಾಗೇ ಉಳಿಯಬಹುದು. ಅಂತಹ ಸಂದರ್ಭದಲ್ಲಿ ಮೇಲೆ ಹೇಳಿದ ಹಾಗೇ 'ಸಹಮತದ ಅಭಿಪ್ರಾಯವಿಲ್ಲದೇ ಹೋಗಬಹುದು.' ಆಗ 'ಸಾಂಸ್ಕೃತಿಕ ಬದಲಾವಣೆ'ಯ ಕಡೆಗೆ ಅವನು ವಾಲುತ್ತಾನೆ. ಇನ್ನೊಂದು ಸಂಸ್ಕೃತಿಯಿಂದ ಕೆಲವನ್ನು ತನ್ನ ಪರಿಸರಕ್ಕೆ ತಕ್ಕ ಹಾಗೇ ಎರವಲು ಪಡೆದುಕೊಳ್ಳುತ್ತಾನೆ. ಈ 'ಎರವಲು ಸಂಸ್ಕೃತಿ'ಯ ಬಗ್ಗೆ ಡಿ.ಆರ್. ವಾತ್ಸಾಯನರು ಹೀಗೆನ್ನುತ್ತಾರೆ 'ಪ್ರತಿಯೊಂದು ಸಂಸ್ಕೃತಿಯೂ ಇನ್ನೊಂದು ಸಂಸ್ಕೃತಿಗೆ ಏನಾದರೂ ಕೊಡುಗೆ ನೀಡುತ್ತಲೇ ಇರುತ್ತದೆ. ಯಾವುದೇ ಸಂಸ್ಕೃತಿಯಲ್ಲೂ ಅತೀ ಅಗತ್ಯವೆನ್ನುವ ಯವುದೂ ಇರುವುದಿಲ್ಲ. ಹಾಗಾಗಿ, ಯಾವುದೋ ಒಂದು ವಿಶಿಷ್ಟ ಕೆಲಸಕ್ಕಾಗಿ ರೂಪುಗೊಂಡ ಒಂದು ಸಂಸ್ಕೃತಿ, ಆ ಕೆಲಸ ಪೂರ್ಣವಾದೊಡನೆ ತಾನೂ ಕೊನೆಗೊಳ್ಳುತ್ತದೆ.' ಪ್ರಪಂಚದಲ್ಲಿ ಈ ಹಿಂದೆ ಆಗಿ ಹೋದ ಹಲವು ಶ್ರೇಷ್ಠ ನಾಗರಿಕತೆಗಳನ್ನು ಪುನರವಲೋಕಿಸಿದಾಗ, ಮೆಲಿನೋಸ್ಕಿಯಿಂದ ಪ್ರಚಾರ ಮಾಡಲ್ಪಟ್ಟ ಹಾಗೂ 'ರೆಡ್‌ಕ್ರಾಫ್ ಬ್ರೌನ್'ನಿಂದ ಅನುಮೋದಿಸಲ್ಪಟ್ಟ ಈ ಸಂಸ್ಕೃತಿಯ 'ಕಾರ್ಯಸಂಬಂಧಿ ಸಿದ್ಧಾಂತ' (Functionalist Theory of Culture) ವು ಬಹು ಅಂಶ ಸತ್ಯವಾಗಿದೆ. ಹಾಗಾಗಿ, ಭವಿಷ್ಯವು ಯಾವಾಗಲೂ ಅಳಿದುಹೋದ ಸಂಸ್ಕೃತಿಗಳ ಅಪೂರ್ವ ಕೊಡುಗೆಗಳ ಮೇಲೆ ಬೆಳೆದು ಬಂದಿರುತ್ತದೆ. ಈ ಕಾರಣಕ್ಕಾಗಿಯೇ 'ಆಲ್ಫ್ರೆಡ್ ನಾರ್ತ್ ವೈಟ್ ಹೆಡ್' ಹೀಗೆ ಹೇಳಿದರು. "ಭೂತವು ನಶಿಸಿದ ದಾರಿಯಲ್ಲಿಯೇ ಭವಿಷ್ಯವು ಬೆಳೆದು ಬಂದಿರುತ್ತದೆ." ವರ್ತಮಾನದ ಯಾವುದೇ ಸಂಸ್ಕೃತಿಯೂ ಸ್ಥಿರವಾಗಿಲ್ಲ. ಅದು ಎಂದಿಗೂ ಚಲನಶೀಲವುಳ್ಳದ್ದಾಗಿದ್ದು, ಭೂತದಿಂದ ಭವಿಷ್ಯದೆಡೆಗೆ ಧಾವಿಸುತ್ತಲೇ ಇರುತ್ತದೆ. ನಿನ್ನೆಯಿಂದ ಇಂದಿಗೆ, ಇಂದಿನಿಂದ ನಾಳೆಗೆ ಸಾಗುತ್ತಿರುವ ಈ ಓಟದಲ್ಲಿ ಪ್ರತಿನಿತ್ಯ ಪ್ರತಿ ಪಂಗಡವೂ ತನ್ನ ನಡವಳಿಕೆಯಲ್ಲಿ ಬದಲಾವಣೆಗೆ ಒಳಗಾಗುತ್ತಲೇ ಇರುತ್ತದೆ." (D.R. Vatsyayan : Page 64-65).

ಭಾರತೀಯ ಸಮಾಜದ ವಿವಿಧ ಅಂಗಗಳಾದ ಸಮುದಾಯಗಳಲ್ಲಿ [illegible] ವರ್ಗ ಭೇದಗಳಿವೆ. ಪ್ರತಿಯೊಂದಕ್ಕೂ ಅವರದೇ ಆದ ಸಂಸ್ಕೃತಿಯಿದೆ. ವೈದಿಕ ಪರಂಪರೆಗೆ ಸೇರಿದ [illegible] ಸಂಸ್ಕೃತಿಯು ಉತ್ತಮವೆಂದೂ, ಕೆಳವರ್ಗದ ಸಂಸ್ಕೃತಿಯು ಅಧಮವೆಂದೂ ಸಾಮಾನ್ಯವಾಗಿ ಪರಿಗಣಿಸಲಾಗುತ್ತದೆ. ಈ ಕಾರಣದಿಂದಾಗಿ, ಸಹಜವಾಗಿಯೇ ತಮ್ಮ [illegible] ಕೆಳವರ್ಗವು ತನ್ನ ಮೂಲ ಸಂಸ್ಕೃತಿಯಲ್ಲಿರುವ ಆಚಾರ-ಸಂಪ್ರದಾಯಗಳನ್ನು ತೊರೆದು, ಬ್ರಾಹ್ಮಣ ಪುರೋಹಿತರನ್ನು ಕರೆದು ವಿವಾಹ, ಜನ್ಮದಿನ, ಶ್ರಾದ್ಧದಂತಹ ಕರ್ಮಗಳನ್ನು ನಡೆಸುವುದನ್ನು ಕಾಣಬಹುದು. ಇದರಿಂದಲಾಗಿ ಅದೆಷ್ಟೋ ಅಮೂಲ್ಯವಾದ ಸಂಸ್ಕೃತಿಯಲ್ಲಿ ಕೆಲವು ನಾಶವಾಗಿದೆ ; ಕೆಲವು ನಾಶದ

ಅಂಚಿನಲ್ಲಿದೆ.

ಭಾರತದಂತಹ ವಿಭಿನ್ನತೆಯೇ ಪ್ರಧಾನವಾದ ದೇಶಗಳಲ್ಲಿ ಭಾಷೆ, ಸಂಪ್ರದಾಯ, ಸಂಸ್ಕೃತಿಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದು ಸಾಮಾನ್ಯವಾದ ವಿಚಾರ. ಇಂತಹ ಸಂದರ್ಭದಲ್ಲಿ ಒಂದು ಪ್ರದೇಶದ ಕೇಂದ್ರ ಸ್ಥಾನದಲ್ಲಿ ಮಾತ್ರ ಆ ಪ್ರದೇಶದ ಮೂಲಸಂಸ್ಕೃತಿಯನ್ನು ಗುರುತಿಸಬಹುದು. ಒಂದು ಪ್ರದೇಶವು ಇನ್ನೊಂದು ಪ್ರದೇಶವನ್ನು ಸಂಧಿಸುವ ಗಡಿಪ್ರದೇಶದಲ್ಲಿ ಸಾಮನ್ಯವಾಗಿ ಎರಡೂ ಪ್ರದೇಶಗಳ ಸಂಸ್ಕೃತಿ ಮಿಶ್ರವಾಗುತ್ತದೆ. ಇದು ಅಲ್ಲಿ ನೆಲೆಸುವ ಜನಾಂಗಗಳ ಆಚಾರ – ವಿಚಾರಗಳಲ್ಲಿ ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಇದರಿಂದ ಜನಾಂಗದ ಮೂಲ ಸಂಸ್ಕೃತಿಯು ವ್ಯತ್ಯಯಗೊಳ್ಳುತ್ತದೆ. ಜನಾಂಗಗಳು ಪರಸ್ಪರ ಬೆರೆಯುವ ಕಡೆಗಳಲ್ಲೆಲ್ಲಾ ಈ 'ಸಾಂಸ್ಕೃತಿಕ ಮಿಶ್ರತೆ' ಕಂಡು ಬರುವುದು ಸಾಮಾನ್ಯ. ಎರಡು ಸಂಸ್ಕೃತಿಗಳು ಪರಸ್ಪರ ಸೇರಿಕೊಳ್ಳುವಾಗ ಕೆಲವೊಮ್ಮೆ ಎರಡೂ ಸಂಸ್ಕೃತಿಗಳ ಮೂಲಾಂಶಗಳು ಪರಸ್ಪರ ಸೇರಿಕೊಂಡು ಬೇರೆಯೇ ಆದ ಇನ್ನೊಂದು ಸಂಸ್ಕೃತಿ ಹುಟ್ಟಿಕೊಳ್ಳುತ್ತದೆ. ಇತ್ತೀಚೆಗಂತೂ ಈ 'ಸಾಂಸ್ಕೃತಿಕ ಮಿಶ್ರಣ' ವು ಅತ್ಯಂತ ತ್ವರಿತಗತಿಯಲ್ಲಿ ನಡೆಯುತ್ತಿರುವುದನ್ನು ಕಾಣಬಹುದು. ಇದು ಕೇವಲ 'ಗಡಿ ಪ್ರದೇಶ' ಗಳಲ್ಲಿ ಮಾತ್ರವಲ್ಲದೆ, ' ಬೇರೆ ಬೇರೆ ಪ್ರದೇಶದ ವಿವಿಧ ಸಂಸ್ಕೃತಿಗಳ ಸಮುದಾಯವು ಸೇರಿಕೊಳ್ಳುವ ಕೇಂದ್ರ ನಗರಗಳಲ್ಲೂ ಇತ್ತೀಚೆಗೆ ಕಂಡುಬರುತ್ತದೆ. ತನ್ನೂರಿನಿಂದ ಮತ್ತು ತನ್ನ ಕುಟುಂಬದಿಂದ ಇನ್ನೊಂದು ಪ್ರದೇಶಕ್ಕೆ ಜೀವನೋಪಾಯಕ್ಕಾಗಿ ಹೋದಂತಹ ಕುಟುಂಬದ ಅಂಗವು ತನ್ನೊಂದಿಗೆ ತನ್ನ ಸಮುದಾಯದ ಸಂಸ್ಕೃತಿಯನ್ನು ಒಯ್ದು ಅಲ್ಲಿರುವವರಿಗೂ ಅಲ್ಲಿರುವ ಇತರ ಪ್ರದೇಶದವರಿಗೂ ಅಲ್ಪ ಸ್ವಲ್ಪ ಅಂಟಿಸುವುದರೊಂದಿಗೆ, ಅಲ್ಲಿಂದ ಮರಳಿ ಬರುವಾಗ ಅವರ ಸಂಸ್ಕೃತಿಯನ್ನು ತಂದು ತನ್ನ ಮನೆಯವರಿಗೆ ಅಂಟಿಸಿಬಿಡುತ್ತದೆ. ಇದು ಒಂದು ರೀತಿಯ 'ಅನುಕರಣ ಸಂಸ್ಕೃತಿ' ಎನ್ನಬಹುದು. ಕ್ರಮೇಣ ಅದನ್ನು 'ಅನುಕರಣೆ'ಯ ಹಿನ್ನೆಲೆಯಿಂದ ಆ ಪ್ರದೇಶದ ಇತರರೂ ಅನುಸರಿಸುವ ಸಾಧ್ಯತೆಗಳಿವೆ. ಇದನ್ನು ಒಂದು ರೀತಿಯ "ಸಂಸ್ಕೃತಿ ಪ್ರಸರಣ ಕಾರ್ಯ" ಎನ್ನಬಹುದು. ಕಾಲದಿಂದ ಕಾಲಕ್ಕೆ ಪ್ರತಿಯೊಂದು ಪ್ರದೇಶದ ಸಮುದಾಯದ ಸಂಸ್ಕೃತಿಯು ವಿಭಿನ್ನವಾಗುವ ಈ "ಸಂಸ್ಕೃತಿ ಪ್ರಸರಣ ಕಾರ್ಯ" ಬಹು ಮುಖ್ಯ ಪಾತ್ರವಹಿಸುತ್ತದೆ. ಶಿಶ್ವಾನುಷ್ಠಾನಗಳಿಂದ ಆರಂಭವಾಗುವ ಈ ಸಂಸ್ಕೃತಿಯು ಮನುಷ್ಯನನ್ನು ಜೀವನ ಪರ್ಯಂತ ರೂಪಿಸುತ್ತಾ ಹಿಂಬಾಲಿಸುತ್ತದೆ. ಮನುಷ್ಯರನ್ನು ಪರಸ್ಪರ ಆಂತರಿಕವಾಗಿ ಬಂಧಿಸುತ್ತದೆ.

ಮೆಲ್ವಿಲ್ಲೆ ಜೆ. ಹರ್ಸ್ಕೋವಿಟ್ಸ್ ಎಂಬ ವಿದ್ವಾಂಸ ಹೀಗೆನ್ನುತ್ತಾರೆ. "ಸಂಸ್ಕೃತಿಯನ್ನು ಬೆಳೆಸಿಕೊಂಡು ಬರುವಲ್ಲಿ ಮಾನವನಿಗೆ ಆತನ ಪರಿಸರಗಳ ಪ್ರಭಾವ ಅತೀ ಮುಖ್ಯವಾದುದು. ತನ್ನ ಸುತ್ತಮುತ್ತಲಿನ ಸವಾಲುಗಳನ್ನು ಎದುರಿಸಿ ಗೆಲ್ಲದ ಹೊರತು ಆತ ಉಳಿಯಲಾರ. ಹಾಗಾಗಿ, ಸಂಸ್ಕೃತಿಯನ್ನು ಅದರ ಪರಿಮಿತ ಸಾಂಪತ್ತಿಕ ಮೂಲ ಮತ್ತು ಸರಳ ತಾಂತ್ರಿಕತೆಗಳೊಂದಿಗೆ ಅದರ ಪರಿಸರದ ಹಿನ್ನೆಲೆಯಲ್ಲಿ ವೀಕ್ಷಿಸಿದಾಗ, ಪರಿಸರದ ಸವಾಲುಗಳು ಹಾಗೂ ಸಾಂಸ್ಕೃತಿಕ ಸನ್ನಿವೇಶಗಳೇ ಪೂರ್ಣ ಮೇಲುಗೈ ಸಾಧಿಸುವುದನ್ನು ಕಾಣಬಹುದು. ಜೀವನ, ವಿಧಾನಗಳನ್ನು ರೂಪಿಸುವಲ್ಲಿ ಜೀವಿಸುವ ಪರಿಸರ,

ನಿರ್ಧಾರಾತ್ಮಕ ಪ್ರಭಾವವನ್ನು ಬೀರುತ್ತದೆ ಎಂಬ ತೀರ್ಮಾನಕ್ಕೆ ನಾವು ಬರಬಹುದು.. " (Melville J.Herskovits, Op.Cit P 95)

ಈ ಮೇಲಿನ ಹೇಳಿಕೆಯ ಪ್ರಕಾರವಾಗಿ ನೋಡಿದರೆ, ಜಾತಿ ಹಾಗೂ ಅದರ ಸಂಸ್ಕೃತಿಯ ಮೇಲೆ ಮಾನವನು ವಾಸಿಸುವ ಪ್ರದೇಶದ ಭೂಗುಣ, ವಾಯುಗುಣಗಳು ಪ್ರಭಾವ ಬೀರುತ್ತವೆ. ಮನುಷ್ಯ ದೇಹ ಹಾಗೂ ಮನಸ್ಸಿನ ಮೇಲೆ ಆತ ಬದುಕುವ ಪರಿಸರವು ಹೇಗೆ ಪ್ರಭಾವ ಬೀರುತ್ತದೋ ಹಾಗೇ ಆಯಾ ಸಮುದಾಯದ ಸಂಸ್ಕೃತಿಯ ಮೇಲೆ ಆಯಾ ಪ್ರದೇಶದ ಪರಿಸರವೂ ಪ್ರಭಾವ ಬೀರುತ್ತದೆ. ಹೀಗೆ ಒಂದು ಜನಾಂಗದ 'ಪ್ರಾದೇಶಿಕ ಸಂಸ್ಕೃತಿ' ರೂಪು ತಾಳುತ್ತದೆ. ಪ್ರದೇಶದಿಂದ ಪ್ರದೇಶಕ್ಕೆ 'ಸಂಸ್ಕೃತಿ' ಭಿನ್ನವಾಗಲು ಇದು ಒಂದು ಮೂಲ ಕಾರಣವೆನ್ನಬಹುದು. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಬರುವ ಕಾಲದಲ್ಲಿ ತನ್ನೊಂದಿಗೆ ಆ ಪ್ರದೇಶದ 'ಸಂಸ್ಕೃತಿ' ಅದರ ಮೇಲೆ 'ಆಧಿಪತ್ಯ' ವನ್ನು ಸ್ಥಾಪಿಸಿ. ಆ ಸಮಾಜದ ಮೂಲ ಸಂಸ್ಕೃತಿ ಕೆಲವೊಮ್ಮೆ ನಾಶವಾಗಬಹುದು. ಕೆಲವೊಮ್ಮೆ ಅಲ್ಪ ಪ್ರಾಣವನ್ನು ಉಳಿಸಿಕೊಳ್ಳಬಹುದು. ಈ 'ಪ್ರಾದೇಶಿಕ ಸಂಸ್ಕೃತಿಯ ಆಧಿಪತ್ಯ' ಹೊರಗಿನಿಂದ ಬಂದ ಸಮುದಾಯವು ತಂದ ಸಂಸ್ಕೃತಿಯ ಮೇಲೆ ಸ್ಥಾಪಿತವಾಗಲು ಈ ಕೆಳಗಿನ ಕಾರಣಗಳಿರುತ್ತವೆ.

೧) ಹೊರಗಿನಿಂದ ಬಂದ ಸಮುದಾಯಕ್ಕೆ ತಮ್ಮ ಸಂಸ್ಕೃತಿಯನ್ನು ಆಚರಿಸಲು ಸರಿಯಾದ ಅಂತಹದೇ ಪ್ರದೇಶ ಹಾಗೂ ಅವಕಾಶವಿಲ್ಲದೇ ಇರುವುದು.

೨) ಹೊರಗಿನಿಂದ ಬಂದ ಕಾರಣ ಭದ್ರವಾದ ನೆಲೆ, ಸಮುದಾಯಕ್ಕೆ ಇಲ್ಲದೇ ಇರುವುದು.

೩) ಪ್ರಾದೇಶಿಕ 'ಯಜಮಾನಿಕೆ'ಯನ್ನು ಅನಿವಾರ್ಯವಾಗಿ ಒಪ್ಪಿಕೊಂಡು, ಅಲ್ಲಿನ ಸಂಸ್ಕೃತಿಯನ್ನು ಅನುಕರಿಸಬೇಕಾದುದು.

೪) ಆ ಪ್ರದೇಶದ ಸಂಸ್ಕೃತಿಗಿಂತ ಭಿನ್ನವಾದ ತನ್ನ ಸಂಸ್ಕೃತಿಯನ್ನು ಆಚರಿಸಿದರೆ ಎಲ್ಲಿ ನಗೆಗೀಡಾಗುತ್ತೇನೋ ಎಂಬ ಹಿಂಜರಿತ.

೫) ಪ್ರತಿಯೊಂದು ಪ್ರದೇಶದ ಜನರಿಗೆ 'ತಮ್ಮ ಸಂಸ್ಕೃತಿಯೇ ಶ್ರೇಷ್ಠ' ಎಂಬ ಪರಿಕಲ್ಪನೆ ಇರುತ್ತದೆ. ಇದರಿಂದ ಹೊರಗಿನಿಂದ ಬಂದ ಸಂಸ್ಕೃತಿಯ ಬಗೆಗೆ ಒಂದು ರೀತಿಯ ತಾತ್ಸಾರ ಭಾವನೆ ಬೆಳೆಯುತ್ತದೆ. ಈ ತಾತ್ಸಾರದ ದೃಷ್ಟಿಯಿಂದ ತಪ್ಪಿಸಿಕೊಳ್ಳಲು, ಹೊರಗಿನಿಂದ ಬಂದ ಸಮುದಾಯ ತಮ್ಮದನ್ನು ಬಿಟ್ಟು ಆ ಪ್ರದೇಶದ ಸಂಸ್ಕೃತಿಯನ್ನು ರೂಢಿಸಿಕೊಳ್ಳುವ ಸಾಧ್ಯತೆಯಿದೆ.

೬) ಒಂದೆಡೆಯ 'ಸಂಸ್ಕೃತಿ' ಇನ್ನೊಂದೆಡೆ 'ವಿಕೃತಿ'ಯಾಗಿ ಕಾಣುವುದು.

ಇದೆಲ್ಲವನ್ನೂ ದೃಷ್ಟಿಯಲ್ಲಿಟ್ಟುಕೊಂಡು, ಕಾಸರಗೋಡು ಹಾಗೂ ದಕ್ಷಿಣ ಕನ್ನಡದ ಶಾಲಿಯಾ ದೇವಾಂಗ ಸಮುದಾಯದ ಸಾಂಸ್ಕೃತಿಕ ಜೀವನವನ್ನು ಅಧ್ಯಯನ ಮಾಡುವ ಪ್ರಯತ್ನ ಇಲ್ಲಿ

"ಮಾನವಶಾಸ್ತ್ರದಲ್ಲಿ 'ಸಂಸ್ಕೃತಿ ಮತ್ತು ನಾಗರೀಕತೆ' ಒಂದೇ ಅರ್ಥದ ಪದಗಳಾಗಿವೆ. ಸಾಮಾನ್ಯವಾಗಿ ಬಳಕೆಯಲ್ಲಿ 'ನಾಗರಿಕತೆ' ಎಂಬ ಪದವು ಒಂದು ವಿಶಿಷ್ಟ ಸಮುದಾಯದ ಸ್ಪಷ್ಟ ಬುದ್ಧಿಮತ್ತೆಯ ಫಲಗಳಾದ, ಉನ್ನತ ವಿಚಾರ, ರಚನಾತ್ಮಕ ಕಲೆ ಮುಂತಾದವುಗಳಾಗಿ ಉಪಯೋಗಿಸಲ್ಪಡುತ್ತವೆ. ಮಾನವಶಾಸ್ತ್ರದ ದೃಷ್ಟಿಯಲ್ಲಿ 'ಸಂಸ್ಕೃತಿ' ಈ ತರಹದ ಸ್ವಯಂ ಅಭಿವ್ಯಕ್ತಿಯನ್ನು ಒಳಗೊಂಡಿರುತ್ತದೆಯಲ್ಲದೇ, ಅದು ಜೀವನಕ್ಕೆ ಬೇಕಾಗುವ ಸಾಮಾನ್ಯ ಅವಶ್ಯಕತೆಗಳನ್ನು ಪೂರೈಸುವ ಸಾಧನಗಳಾದ ಜೀವನದ ಭೌತಿಕ ಕಲೆಗಳು, ಉತ್ಪಾದನೆ ವ್ಯವಸ್ಥೆ ಮತ್ತು ಇದರೊಂದಿಗಿನ ಸಾಮಾಜಿಕ ವ್ಯವಸ್ಥೆಯ ಬಗ್ಗೆಯೂ ಗಹನವಾದ ಸಂಬಂಧವಿದೆ." (ಭಾರತದ ಗಜೆಟಿಯರ್-೧೯೮೬)

ಶಾಲಿಯ ಸಮುದಾಯದಲ್ಲಿ 'ಸಂಸ್ಕೃತಿ ಮತ್ತು ನಾಗರಿಕತೆ' ಹಾಸು ಹೊಕ್ಕಾಗಿರುವುದು ಕಂಡುಬರುತ್ತದೆ. ಸಂಸ್ಕೃತಿಯ ಕೇಂದ್ರಗಳಾದ 'ನಗರಂ'ಗಳು ಇದಕ್ಕೆ ಸಾಕ್ಷಿಯಾಗಿದೆ. ಪ್ರಾದೇಶಿಕ ಸಂಸ್ಕೃತಿಯೊಂದಿಗೆ, ಮೂಲಸಂಸ್ಕೃತಿಯು ಮಿಶ್ರವಾದುದರಿಂದ, ಇವರ 'ಸಾಂಸ್ಕೃತಿಕ ವೈಶಿಷ್ಟ್ಯ'ವನ್ನು ಅಧ್ಯಯನ ಮಾಡಲಾಗಿದೆ.

ಪ್ರತಿಯೊಂದು ಜಾತಿಯೂ ಯಾವುದೋ ಒಂದು ಧರ್ಮದ ಚೌಕಟ್ಟಿನಲ್ಲಿ ಇದ್ದುಕೊಂಡು ಆ ಸಂಸ್ಕೃತಿಯ ಮೌಲ್ಯಗಳನ್ನು ಆಚರಣೆಯಲ್ಲಿ ತನ್ನದೇ ವಿಶಿಷ್ಟತೆಯೊಂದಿಗೆ ತರುವ ಪ್ರಯತ್ನ ಮಾಡುತ್ತದೆ. ಆದುದರಿಂದ ಈ ಮೂಲ ಸಂಸ್ಕೃತಿಯನ್ನು ಆಧಾರವನ್ನಾಗಿಸಿಕೊಂಡು, ನಿರ್ದಿಷ್ಟ ಧರ್ಮಕ್ಕೆ ಈ ಜಾತಿ ಸೇರಿದೆ ಎಂದು ಗುರುತಿಸಲಾಗುತ್ತದೆ. ಆ ಧರ್ಮ ವಿಧಿಸಿದ ಮೂಲದ ಕಟ್ಟುಪಾಡು, ವಿಧಿ-ನಿಷೇಧಗಳು ಸಾಮಾನ್ಯವಾಗಿ ಒಂದೇ ಆಗಿರುತ್ತದೆ. ಅದರೊಂದಿಗೆ ಪರಿಸರಕ್ಕೆ, ಸನ್ನಿವೇಶಕ್ಕೆ, ಪ್ರಯೋಜನಕ್ಕೆ ತಕ್ಕ ಹಾಗೆ ತನ್ನದೇ ಆದ ಕೆಲವನ್ನು ಸೇರಿಸಿದಾಗ ಅದು ಆ ಜಾತಿಯ 'ನಿಯಮ'ವಾಗುತ್ತದೆ. ಅದಕ್ಕೆ ದೈವಿಕ ಒಪ್ಪಿಗೆಯನ್ನು ಕೊಡಲಾಗುತ್ತದೆ. ಆ 'ನಿಯಮ'ಗಳ ಪಾಲನೆ ಕಡ್ಡಾಯವಾಗುತ್ತದೆ. ಅದನ್ನು ಮೀರಿದರೆ 'ಪಾಪ'ಎನ್ನುವ ಭಾವನೆಯನ್ನು ಸಮುದಾಯದಲ್ಲಿ ಬೆಳೆಸಲಾಗುತ್ತದೆ. ಇದರಿಂದ 'ಸಂಸ್ಕೃತಿ'ಯ ಉಳಿವು ಸ್ವಲ್ಪ ಮಟ್ಟಿಗೆ ಉಳಿಯಲು ಸಾಧ್ಯವಾಗುತ್ತದೆ. ಧರ್ಮದ ಸ್ಥಿರತೆಗೂ ಕಾರಣವಾಗುತ್ತದೆ. ಧರ್ಮದ ಒಂದು ಮುಖ ಆಧ್ಯಾತ್ಮವಾದರೆ, ಇನ್ನೊಂದು ಮುಖ ಲೌಕಿಕದಲ್ಲಿ ಮಾನವನನ್ನು ಪ್ರಗತಿಯ ಶಿಖರಕ್ಕೇರಿಸುವುದು. ಆದುದರಿಂದ ಧರ್ಮ ಸಂಸ್ಕೃತಿ ಒಂದೇ ಮುಖದ ಎರಡು ನಾಣ್ಯಗಳು. 'ಎಲ್ಲಾ ಸಂಸ್ಕೃತಿಯ ಮೂಲವೂ ಮಾನವನ ಲೌಕಿಕ ಪ್ರಗತಿಗೆ ಸಾಧಕವಾದ ಧರ್ಮ' ಎಂದು ಹೇಳಬಹುದು. ಆದುದರಿಂದ ಒಂದು ಸಮಾಜದ ಸಂಸ್ಕೃತಿಯ ಅಧ್ಯಯನವೆಂದರೆ, ಒಂದು ಧರ್ಮದ ಅಧ್ಯಯನದ ಬಹು ಕಿರಿಯ ರೂಪ ಎನ್ನಬಹುದು.

## ೪. ದಕ್ಷಿಣ ಕನ್ನಡ ಮತ್ತು ಕಾಸರಗೋಡು ಸಂಕ್ಷಿಪ್ತ ಪರಿಚಯ

ಪೂರ್ವದಲ್ಲಿ ಪಶ್ಚಿಮ ಘಟ್ಟಗಳಿಂದ ಕೂಡಿದ ಮಲೆನಾಡಿನ ಸಂಸ್ಕೃತಿ; ಪಶ್ಚಿಮದಲ್ಲಿ ಅರಬ್ಬೀ ಸಮುದ್ರ ರೂಪಿಸಿದ ಕರಾವಳೀ ಸಂಸ್ಕೃತಿ; ದಕ್ಷಿಣಕ್ಕೆ ಕೇರಳದ ಮಲಯಾಳೀ ಸಂಸ್ಕೃತಿ; ಉತ್ತರಕ್ಕೆ ಕರ್ನಾಟಕದ ಸಂಸ್ಕೃತಿ ಸೇರಿಕೊಂಡು 'ತುಳುನಾಡ ಸಂಸ್ಕೃತಿ' ಎನ್ನುವ ವಿಶಿಷ್ಟ ಸಂಸ್ಕೃತಿಯ ಜನ್ಮಭೂಮಿ ಈ ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಪ್ರದೇಶ. ತನ್ನದೇ ಆದ ವಿಶಿಷ್ಟ ಆಚಾರ, ವಿಚಾರ, ಆರಾಧನೆ ಇಲ್ಲಿದೆ. ಉತ್ತರ ಕೇರಳ ಹಾಗೂ ದಕ್ಷಿಣ ಕರ್ನಾಟಕ ಸೇರಿದ ಈ ಪ್ರದೇಶ ಪ್ರಾಚೀನ ಕಾಲದಿಂದಲೇ 'ತುಳುನಾಡು' ಎಂದು ಗುರುತಿಸಲ್ಪಟ್ಟಿದೆ. ಭಾಷಾವಾರು ಪ್ರಾಂತ್ಯ ವಿಂಗಡಣೆಯಾಗುವುದಕ್ಕಿಂತ ಮುನ್ನ ಪರಸ್ಪರ 'ಎರವಲು ಸಂಸ್ಕೃತಿ'ಯನ್ನು ಈ ಪ್ರದೇಶ ಪ್ರಾಚೀನ ಕಾಲದಿಂದಲೇ ರೂಪಿಸಿಕೊಂಡಿತ್ತು. ಉದಾ:- ಉತ್ತರ ಕೇರಳದ ಕಳರಿ- ದ.ಕ.ದ ಗರೊಡಿ; ಉತ್ತರ ಕೇರಳದ ತೆಯ್ಯಂ- ದ.ಕ.ದ ಭೂತ; ಉತ್ತರ ಕೇರಳದ ಕಥಕ್ಕಳಿ- ದ.ಕ.ದ ಯಕ್ಷಗಾನ; ಉತ್ತರ ಕೇರಳದ ತೋಜ್ಜಂ- ದ.ಕ.ದ ಪಾಡ್ದನ.

ಪೂರ್ವದ ಘಟ್ಟದಿಂದ ಬೀಸಿ ಬರುವ ತಂಗಾಳಿಯನ್ನು ಪಶ್ಚಿಮದ ಸಮುದ್ರದ ಅಲೆಗಳ ಮೇಲೇರಿ ಬರುವ ಕುಳಿರ್ಗಾಳಿ ಇಲ್ಲಿ ಸಂಧಿಸುತ್ತದೆ. ಭತ್ತದ ಗದ್ದೆಗಳು, ತೆಂಗು-ಕಂಗಿನ ತೋಟಗಳು, ಹೆಸರು, ಹುರುಳಿ, ಉದ್ದು, ಅಲಸಂಡೆಯಂತಹ ಧಾನ್ಯಗಳು, ಗೆಡ್ಡೆ-ಗೆಣಸುಗಳು ಧಾರಾಳವಾಗಿ ಬೆಳೆದು ಸಂಪದ್ಭರಿತವಾಗಿ, ಸರ್ವಾಲಂಕಾರ ಭೂಷಿತೆಯಾಗಿರುವವಳು 'ತುಳುನಾಡಿ'ನ ಪ್ರಕೃತಿದೇವಿ. ಇಲ್ಲಿ ಎಲ್ಲಿ ನೋಡಿದರೂ ಗುಡಿ-ಗೋಪುರ, ದೇವಸ್ಥಾನಗಳು ಕಂಗೊಳಿಸುತ್ತವೆ. 'ಪರಶುರಾಮ ಸೃಷ್ಟಿ'ಎಂದು ಕರೆಯಲ್ಪಡುವ ಈ ನೆಲ ಧರ್ಮ-ನೀತಿ, ಭಕ್ತಿಗಳಿಗೆ ಶ್ರೇಷ್ಠ ಸ್ಥಾನವನ್ನು ಪಡೆದಿದೆ. ಬ್ರಾಹ್ಮಣರಿಂದ ಸಾತ್ತ್ವಿಕ ರೂಪದಲ್ಲಿ ಆರಾಧನೆಯನ್ನು ಪಡೆದುಕೊಳ್ಳುವ ಪ್ರಸಿದ್ಧ ದೇವಾಲಯಗಳ ಜತೆಯಲ್ಲೇ 'ಅಸುರ ಕ್ರಿಯೆ'ಗಳಿಂದ ಆರಾಧನೆ ಕೈಗೊಳ್ಳುವ ವಿವಿಧ ಜನಾಂಗಗಳಿಗೆ ಸಂಬಂಧಪಟ್ಟ ದೈವಸ್ಥಾನಗಳು ಇಲ್ಲಿನ ಸಂಸ್ಕೃತಿಗೆ ಕನ್ನಡಿ ಹಿಡಿಯುತ್ತದೆ.

ದಕ್ಷಿಣ ಕನ್ನಡ ಮತ್ತು ಕಾಸರಗೋಡನ್ನು ಒಳಗೊಂಡ ಪ್ರದೇಶವು 'ತುಳುನಾಡು' ಎಂದು ಕರೆಯಲ್ಪಡುತ್ತಿತ್ತು ಎನ್ನುವುದಕ್ಕೆ ಹಲವು ಬರಹಗಳು ಮೂಲವಾಗಿವೆ. "ಮಲಬಾರಿನ ತುದಿಯ ಚಂದ್ರಗಿರಿ ನದಿಯ ಉತ್ತರ ಭಾಗದಿಂದ 'ತುಳುವರಾಜ್ಯ' ಎಂದು ಕರೆಯಲ್ಪಡುತ್ತದೆ. 'ಚಂದ್ರಗಿರಿ'ಯು ಅದೇ ಹೆಸರಿನ ನದಿಯ ದಕ್ಷಿಣ ಭಾಗದಲ್ಲಿದ್ದು ಇದು ಮಲಯಾಳ ಅಥವ ಮಲಬಾರಿನ ಉತ್ತರದ ಗಡಿಯಾಗಿದೆ" ಎಂದು 'ವಾಲ್ಟರ್ ಹೆಮಿಲ್ಟನ್' 'ಈಸ್ಟ್ ಇಂಡಿಯಾ ಗಜೆಟಿಯರ್'ನಲ್ಲಿ ಹೇಳಿದ್ದಾನೆ. ಕ್ರಿ.ಶ. ೧೫೦೦-೧೫೧೫ ರ ನಡುವೆ ಈ ಪ್ರದೇಶವನ್ನು ಸಂದರ್ಶಿಸಿದ ಪೋರ್ಚುಗೀಸ್ ಪ್ರವಾಸಿ ಬಾರ್ಬೊಸಾ ಈ ಪ್ರದೇಶವನ್ನು 'Tolinate' (ತೊಳಿನಾಟೆ = ತುಳುನಾಡು)" ಎಂದು ತನ್ನ ಪ್ರವಾಸೀ ಗ್ರಂಥದಲ್ಲಿ

ಉಲ್ಲೇಖಿಸಿ, 'ಭಾರತದ ಮುಂದುವರಿದ ಹಲವು ಪ್ರದೇಶಗಳಲ್ಲಿ ಇದೂ ಒಂದು' ಎಂದಿದ್ದಾನೆ. (Mansel Longworth Dams : The þook of Duarte Barbusa P.182-183)

"ತುಳುವ ರಾಜ್ಯ ಉತ್ತರದಲ್ಲಿ ಗೋಕರ್ಣದಿಂದ ಆರಂಭವಾಗಿ ದಕ್ಷಿಣದಲ್ಲಿ ಪೆರುಂಪುಳ (ಈಗಿನ ಚಂದ್ರಗಿರಿ ಅಥವಾ ಪಯಸ್ವಿನೀ ನದಿ) ಯ ತನಕ ವಿಸ್ತರಿಸಿದೆ" ಎಂದು 'ಕೇರಳೋತ್ಪತ್ತಿ'ಯಲ್ಲಿ ಉಲ್ಲೇಖಿಸಲಾಗಿದೆ. (ಡಾ. ಎ.ಬಿ. ಸಾಲೆತ್ತೂರ್-ಪ್ರಾಚೀನ ಕರ್ನಾಟಕ - ತುಳುವ ಚರಿತ್ರೆ ಪುಟ ೨.). "ಪಯಸ್ವಿನೀ ನದಿಯ ಉತ್ತರಕ್ಕೆ ತುಳು ಮೂವತ್ತೆರಡು ಗ್ರಾಮಗಳು, ದಕ್ಷಿಣಕ್ಕೆ ಮೂವತ್ತೆರಡು ಗ್ರಾಮಗಳೆಂದು" ಭೂತಗಳ ನುಡಿಗಟ್ಟುಗಳು ಹೇಳುತ್ತವೆ. ಪ್ರಾಚೀನ ಕಾಲದಲ್ಲಿ ಈ ಪ್ರದೇಶದಲ್ಲಿ ಹರಿಜನ - ಗಿರಿಜನ ವರ್ಗದ ಮೂಲನಿವಾಸಿಗಳೇ ವಾಸಿಸುತ್ತಿದ್ದರು. ಅವರು 'ದುಡಿ' (ಮೃದಂಗದ ಒಂದು ಪ್ರಭೇದ) ಬಾರಿಸಿ 'ತುಳ್ಳು' ವವರು ಎಂದರೆ ಕುಣಿಯುವವರು. ಅವರು ತಮ್ಮ ಮದುವೆಗೆ 'ತುಳ್ಳೆಲ್' ಅಥವ 'ಚುಳ್ಳೆಲ್' ಎಂದು ಹೇಳುತ್ತಾರೆ. ಇದರಿಂದಲೇ 'ತುಳು' ಎಂಬ ಪದವು ಹುಟ್ಟಿ ಕೊಂಡಿರುವ ಸಧ್ಯತೆಯಿದೆ. ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶವು 'ತುಳುನಾಡು' ಎಂದು ಗುರುತಿಸಲ್ಪಟ್ಟರೂ, ವಾಸ್ತವದಲ್ಲಿ ಇದು ಕಿನಾರೆ > ಕಿನಾರ > ಕೆನರಾ ಆಗಿರುವ ಸಾಧ್ಯತೆಗಳೇ ಹೆಚ್ಚು. 'ಕಿನಾರಾ' ಎಂದರೆ ಹಿಂದಿಯಲ್ಲಿ 'ಕಡಲತಡಿ' ಎಂದರ್ಥ. ಭಾರತಕ್ಕೆ ಬಂದ ಆಂಗ್ಲರು, ಇಲ್ಲಿನ ಬಹುತೇಕ ಜನರ ಭಾಷೆಯಿಂದಲೇ ಪ್ರಭಾವಿತರಾಗಿ, ದಕ್ಷಿಣದ ಕಡಲ ತೀರದ ಈ ಪ್ರದೇಶವನ್ನು 'ಸೌತ್ ಕೆನರಾ' ಎಂದು ಕರೆದಿರಬಹುದು. ಹಾಗೇ ಇದೆ ತೀರದ ಉತ್ತರ ಭಾಗಗಳನ್ನು 'ನಾರ್ತ್ ಕೆನರಾ' ಎಂದು ಗುರುತಿಸಿರಬಹುದು. (ಉಪ್ಪಂಗಳ ರಾಮಭಟ್ಟ, ಗಡಿನಾಡಿನಕಿಡಿ, ಪುಟ ೨೯)

ಪಶ್ಚಿಮ ಘಟ್ಟದ ಕೆಳಗಿನ ಈ ಕರಾವಳಿ ಪ್ರದೇಶವನ್ನು 'ಪರಶುರಾಮ ಸೃಷ್ಟಿ' ಎಂದು ಕರೆಯುತ್ತಾರೆ. ಘಟ್ಟದ ಮೇಲಿಂದ ಇಳಿದು ಬಂದ ಮೂಲ ಪುರುಷನೊಬ್ಬನು ಕೊಡಲಿಯಿಂದ ಇಲ್ಲಿನ ದುರ್ಗಮ ಅರಣ್ಯವನ್ನು ಕಡಿದು ವಾಸಯೋಗ್ಯವಾಗುವಂತೆ ಮಾಡಿರುವುದರಿಂದ ಈ ಹೆಸರು ಬಂದಿರಬಹುದು ಎಂದು ಊಹಿಸಲಾಗುತ್ತದೆ.

ಇನ್ನು 'ಕಾಸರಗೋಡು' ಎಂಬ ಪದದ ಉತ್ಪತ್ತಿಯ ಬಗ್ಗೆ ಹಲವು ವಿದ್ವಾಂಸರು ಹಲವು ಅಭಿಪ್ರಾಯಗಳನ್ನು ನೀಡಿರುವುದನ್ನು ಕಾಣಬಹುದು.

೧) ಕ್ರಿ.ಶ. ೧೫೫೫-೧೬೦೦ ರಲ್ಲಿ ಇಲ್ಲಿಗೆ ಬಂದ 'ಸೈನುದ್ದೀನ್' ಎಂಬ ಅರಬಿ ಸಂಚಾರಿಯು ಅರಬಿ ಭಾಷೆಯಲ್ಲಿ ರಚಿಸಿದ 'ತುಹಬತ್ತುಲ್ ಮುಜಾಹಿದ್ದೀನ್' ಎಂಬ ಗ್ರಂತದಲ್ಲಿ ಕಾಸರಗೋಡನ್ನು 'ಕಾಞಿರಕೂತ್ತು' ಎಂದು ಕರೆದಿದ್ದಾನೆ. ಈಗಲೂ ಇಲ್ಲಿನ ಮಲಯಾಳಿಗಳು ಕಾಸರಗೋಡನ್ನು 'ಕಾಞಿಕೋಡು' ಅಥವಾ 'ಕಾಞಿರೋಡು' ಎಂದು ಹೇಳುತ್ತಾರೆ. ಇದು 'ಕಾಞಿರಕೂತು' ಎನ್ನುವ ಪದದಿಂದಲೇ ಹುಟ್ಟಿರಬಹುದು. 'ಕಾಞಿರ ಎಂದರೆ ಕಾಸರಕನ ಮರವೆಂದೂ 'ಕೂತ್' ಎಂದರೆ

ಣ್ಣಾ ಬನ' ಅಥವ ಆರಾಧನೆಯ ಸ್ಥಳವೆಂದೂ ಅರ್ಥವಿದೆ. ವೃಕ್ಷಾರಾಧನೆಯು ಇಲ್ಲಿನ ಮೂಲನಿವಾಸಿಗಳ ಜೀವನದ ಒಂದು ಅಂಗವಾಗಿತ್ತು. ಪಾಲೆಮರ, ಗೋಳಿಮರ, ಅತ್ತಿಮರ, ಇತ್ತಿಮರ, ನೆಲ್ಲಿಮರ, ಕಾಸರಕನ ಮರಗಳನ್ನು ಇಂದೂ ದೈವೀಕ ದೃಷ್ಟಿಯಿಂದಲೇ ಇಲ್ಲಿ ನೋಡಲಾಗುತ್ತದೆ. ಆದುದರಿಂದ 'ಕಾಸರಕನ ಮರಗಳಿರುವ ಬನ' ಅಥವ 'ಆರಾಧನೆಯ ಸ್ಥಳ' ಎಂಬ ಅರ್ಥದಲ್ಲಿ ಈ ಪದವು ಬಂದಿರುವ ಸಾಧ್ಯತೆ ಇದೆ.

೨) ಕ್ರಿ.ಶ. ೧೬೨೩ ರಲ್ಲಿ ಇಕ್ಕೇರಿಯ ಮಾರ್ಗವಾಗಿ ಮಂಗಳೂರಿಗೆ ಬಂದ ರೋಂ ಪ್ರವಾಸಿ 'ಪಿಯೆತ್ರೊ ದೆಲ್ಲಾವೆಲ್ಲೆ' ಕಾಸರಗೋಡನ್ನು 'ಕಾಗ್ನರೋತೋ' ಎಂದು ಉಲ್ಲೇಖಿಸಿದ್ದಾನೆ.

೩) ಖ್ಯಾತ ಲೇಖಕ ಬೇಕಲ ರಾಮನಾಯಕರು, '' 'ಕಾಸರ' ಎಂದರೆ ಕಾಡುಕೋಣ ಎಂದರ್ಥ 'ಕಾಡುಕೋಣಗಳು ಹೆಚ್ಚಾಗಿರುವ ಪ್ರದೇಶ' ಎನ್ನುವ ಅರ್ಥದಲ್ಲಿ ಕಾಸರಕೋಡು'' ಎಂಬ ಹೆಸರು ಬಂದಿರಬಹುದು ಎನ್ನುತ್ತಾರೆ.

೪) ಸಂಶೋಧಕರಾದ ಎಸ್. ಎ. ಶೀನಪ್ಪ ಹೆಗ್ಡೆಯವರು 'ಕಾಸರಗೋಡು' ಅಥವಾ 'ಕಾಂಗೋಡು' ಎಂದರೆ 'ಎರಡು ಕೋಡಿರುವ ಪ್ರದೇಶ' ಎಂದಿದ್ದಾರೆ.

೫) ಖ್ಯಾತ ನ್ಯಾಯವಾದಿ ಶ್ರೀಧರ ಕಕ್ಕಿಲ್ಲಾಯರು ''ಕಾಸರಗೋಡು 'ಕಾಞ್ಞಲೋಟು' ಎಂಬ ಮಲಯಾಳಂ ಪದದ ಕನ್ನಡ ರೂಪ' ಎಂದಿದ್ದಾರೆ.

೬) ಸಂಶೋಧಕರಾದ ಡಾ. ಕೆ. ಸುಬ್ರಹ್ಮಣ್ಯ ಭಟ್‌ರವರು 'ಕಾಸರ' ಎಂದರೆ 'ಕಾಸರಕನ ಮರ', 'ಕೋಡು' ಎಂದರೆ 'ಎತ್ತರವಾದ ಪ್ರದೇಶ' ಆದುದರಿಂದ ಕಾಸರಕನ ಮರಗಳು ಬೆಳೆಯುವ ಗುಡ್ಡ ಪ್ರದೇಶ ಎಂಬ ಅರ್ಥದಲ್ಲಿ ಈ ಪದ ಬಂದಿರಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ. (ಗಡಿನಾಡಿನ ಕಿಡಿ, ಪುಟ ೨೬)

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶಗಳಲ್ಲಿ ಸಮಾನ ಸಂಸ್ಕೃತಿಯು ಕಂಡುಬರುವುದರಿಂದ, ಬಹಳ ಪ್ರಾಚೀನ ಕಾಲದಿಂದಲೇ ಈ ಪ್ರದೇಶಗಳು ಒಂದಾಗಿತ್ತು ಎಂದು ತಿಳಿದುಬರುತ್ತದೆ. ಕೇರಳ ಹಾಗೂ ಕರ್ನಾಟಕದ ಇತರ ಭಾಗಗಳಿಗಿಂತ ವ್ಯತ್ಯಾಸವಾದ ಈ ಭಾಗವನ್ನು 'ತುಳುನಾಡು' ಎನ್ನುವ 'ಏಕನಾಮ'ದಿಂದ ಗುರುತಿಸಲಾಗುತ್ತಿತ್ತು. ಆಫ್ರಿಕನ್ ನೀಗ್ರೋಯಿಡ್ ಭೇದದ ದೇಹದ ರಚನೆಯುಳ್ಳ ಇಲ್ಲಿನ ಮೂಲ ಜನರು (ಅಗಲ ಮೂಗು, ಗುಂಗುರು ಕೂದಲು, ದಪ್ಪತುಟಿ ನೀಗ್ರೋಯಿಡ್ ಭೇದದ ಲಕ್ಷಣ). ಯಾವಾಗ ಎಲ್ಲಿಂದ ಈಕಡೆ ವಲಸೆ ಬಂದರು ಎನ್ನುವುದನ್ನು ಸ್ಪಷ್ಟವಾಗಿ ಊಹಿಸಲು ಸಾಧ್ಯವಿಲ್ಲವಾದರೂ, ಇವರನ್ನು 'ಪಶ್ಚಿಮ ಘಟ್ಟವನ್ನಿಳಿದು ಬಂದವರು' ಎನ್ನುವುದಕ್ಕಿಂತಲೂ, ಪಶ್ಚಿಮದ ಸಮುದ್ರಮಾರ್ಗವಾಗಿ ಪ್ರಾಚೀನ ಕಾಲದಲ್ಲಿ ಆಫ್ರಿಕಾ ಖಂಡದಿಂದ ಬಂದಿರುವ ಸಾಧ್ಯತೆಗಳೇ ಹೆಚ್ಚು ಎನ್ನಬಹುದು.

ಈ ಮೂಲನಿವಾಸಿಗಳು ಅಲ್ಲಲ್ಲಿ ಕೋಟೆಯನ್ನು ಕಟ್ಟಿ ಇದನ್ನು ಆಳುತ್ತಿದ್ದಿರಬೇಕು. ಈಗ ನಾಳುಬಿದ್ದಿರುವ ಕಾಸರಗೋಡಿನ ಮಧೂರು, ಕುಂಬಾರು, ಕಾಟುಕುಕ್ಕೆ, ಕಾವು ಎಂಬಲ್ಲಿರುವ 'ಮಣ್ಣಿನ

ಕೋಟೆ'ಗಳು ಇದಕ್ಕೆ ಸಾಕ್ಷಿಯಾಗಿವೆ. (ಡಾ. ಸಾಲೆತ್ತೂರು, ಪ್ರಾಚೀನ ಕರ್ನಾಟಕ – ತುಳುವ ಚರಿತ್ರೆ ಪುಟ ೫) ಈಗಲೂ ಇಲ್ಲಿನ ಒಳ ಪ್ರದೇಶಗಳಲ್ಲಿ ತಮ್ಮ ಆಧಿಪತ್ಯವಿರುವ ಪ್ರದೇಶಕ್ಕೆ ಮಣ್ಣಿನ ಗೋಡೆಯನ್ನು ನಿರ್ಮಿಸುವ ಪರಂಪರೆಯಿದೆ. ಇದನ್ನು 'ಬರೆ ಗೋರುವುದು'ಎನ್ನುತ್ತಾರೆ. ಕಲ್ಲುಗಳನ್ನೊಡೆದು ತುಂಡರಿಸಿ, ಒಂದರ ಮೇಲೊಂದು ಹೇರಿ ಗೋಡೆಯನ್ನು ನಿರ್ಮಿಸುವುದು ಅಥವಾ ಮಣ್ಣು ಅಗೆದು ಗೋಡೆಯನ್ನು ಕಟ್ಟಿ ಸೀಮೆಯನ್ನು ಗುರುತಿಸುವುದು ಈ ಮೊದಲಾದವು ಇಲ್ಲಿನವರಿಗೆ ಮೂಲ ಜನಾಂಗದಿಂದಲೇ ಬಂದಿರುವ ಸಾಧ್ಯತೆಯಿದೆ. ಇದು ತುಳುನಾಡಿನ ಒಳ ಪ್ರದೇಶಗಳಲ್ಲಿ ಕಂಡುಬರುವ ಪ್ರಾದೇಶಿಕ ವೈಶಿಷ್ಟ್ಯವಾಗಿದೆ.

ಕ್ರಮೇಣ ಘಟ್ಟದಿಂದ ಇಳಿದು ಬಂದ ನಾಗರಿಕ ಜನಾಂಗವು ಇವರನ್ನು ತಮ್ಮ ಅಧೀನಕ್ಕೊಳಪಡಿಸಿ, ಬಹುಪಾಲು ಪ್ರದೇಶವನ್ನು ಕೃಷಿಯೋಗ್ಯವನ್ನಾಗಿ ಮಾಡಿದರು. ಕ್ರಿ.ಶ. ನಾಲ್ಕು-ಐದನೆಯ ಶತಮಾನದಲ್ಲಿ ಬನವಾಸಿಯ ಕದಂಬ ವಂಶದ ಮಯೂರ ಶರ್ಮನು ಕೆಲವು ಬ್ರಾಹ್ಮಣ ಕುಟುಂಬಗಳನ್ನು ತಂದು ಇಲ್ಲಿ ನೆಲೆಗೊಂಡನೆಂದೂ, ಕುಂಬಳೆಯ ಅರಸರು ಆತನ ವಂಶದವರೆಂದೂ ಅಭಿಪ್ರಾಯವಿದೆ. ಕ್ರಮೇಣ ದ್ವಾರಸಮುದ್ರದ ಹೊಯ್ಸಳ ಬಲ್ಲಾಳರೂ ತುಳುನಾಡನ್ನು ವಶಪಡಿಸಿ, ತಮ್ಮ ಕುಟುಂಬದವರನ್ನು ಅಲ್ಲಲ್ಲಿ ನೆಲೆಗೊಳಿಸಿದರು. ಹೊಯ್ಸಳರು ಜೈನಮತಾವಲಂಬಿಗಳಾಗಿರುವ ಕಾಲದಲ್ಲಿ ತುಳುನಾಡು ಅವರ ವಶವಾಗಿರಬೇಕು. ಇಲ್ಲಿ ಕಂಡುಬರುವ ಹೆಚ್ಚಿನ ಬಲ್ಲಾಳ ಮನೆತನದವರು ಜೈನಮತಾವಲಂಬಿಗಳಾಗಿದ್ದಾರೆ. ಜೈನಮತ ಪ್ರಾಬಲ್ಯತೆಯನ್ನು ಕಳೆದುಕೊಂಡಾಗ, ಬಿಟ್ಟಿದೇವನು ವಿಷ್ಣುವರ್ಧನನಾಗಿ ಮಾರ್ಪಟ್ಟಾಗ, ಇವರಲ್ಲಿ ಕೆಲವರು ಜೈನಮತವನ್ನು ಬಿಟ್ಟು ವೈದಿಕಮತಕ್ಕೆ ಹಿಂತಿರುಗಿರುವ ಸಾಧ್ಯತೆಯಿದೆ. ಕುಂಬಳೆಯ ಅರಸರು ಇವರೊಂದಿಗೆ ಸೌಹಾರ್ದಯುತ ಸಂಬಂಧವನ್ನು ಬೆಳೆಸಿಕೊಂಡದ್ದಾಗಿ ತಿಳಿದುಬರುತ್ತದೆ.

ಮುಂದೆ ಕ್ರಿ.ಶ. ೭ನೇ ಶತಮಾನದಲ್ಲಿ ಈ ಪ್ರದೇಶವು ಆಲೂಪರ ಕೈಕೆಳಗೆ ಬಂತು. ಕ್ರಿ.ಶ. ೧೨ನೇ ಶತಮಾನದಲ್ಲಿ ಕುಂಬಳೆ ಅರಸರ ಆಳ್ವಿಕೆಯು ಪ್ರಗತಿಗೆ ಬಂತು. ಮಂಜೇಶ್ವರ, ಪೆರಡಾಲ, ಅಂಗಡಿಮೊಗರು, ಕಾಸರಗೋಡು, ಮೊಗ್ರಾಲ್ ಮತ್ತು ದಕ್ಷಿಣ ಕನ್ನಡದ ವಾಮಂಜೂರುವರೆಗೆ ಕುಂಬಳೆ ಅರಸರ ವ್ಯಾಪ್ತಿಯಲ್ಲಿತ್ತು. ವಿಜಯನಗರದ ಉಚ್ಛ್ರಾಯ ಕಾಲದಲ್ಲಿ ಕಾಸರಗೋಡು ಕೂಡಾ ಅದರ ಒಂದು ಭಾಗವಾಗಿತ್ತು. ಪ್ರಸಿದ್ಧ ಇತಿಹಾಸತಜ್ಞ ಕೆ. ಎಂ. ಪಣಿಕ್ಕರ್‌ರವರು 'ಕಣ್ಣಾನೂರಿನವರೆಗೂ ವಿಜಯನಗರ ಸಾಮ್ರಾಜ್ಯವು ವ್ಯಾಪಿಸಿತ್ತು' ಎಂದು ಹೇಳುತ್ತಾರೆ. ನೀಲೇಶ್ವರದ ರಾಜರೂ, ಕುಂಬಳೆಯ ಅರಸರೂ ಅವರನ್ನು ಹಲವು ಬಾರಿ ಎದುರಿಸಿದರು. ಅನಂತರ ಕೆಳದಿಯ ನಾಯಕರು ಪ್ರಾಬಲ್ಯಕ್ಕೆ ಬಂದಾಗ ಕುಂಬಳೆಯ ಅರಸರನ್ನು ಸೋಲಿಸಿದ್ದಲ್ಲದೆ, ಅವರಿಗೆ ಸಹಾಯವನ್ನು ಮಾಡಿದ ಚಿರಕ್ಕಲ್ ರಾಜ ಕೋಲತ್ತಿರಿಯನ್ನು ಸೋಲಿಸಿ, ಪಯಸ್ವಿನಿ ಹೊಳೆಯ ಉತ್ತರ ಭಾಗವಾದ 'ಬೇಕಲ'ದಲ್ಲಿ ಬಹುದೊಡ್ಡ ಕೋಟೆಯನ್ನು ಕಟ್ಟಿಸಿದರು. ಅವರೊಂದಿಗೆ ಸೈನ್ಯದಲ್ಲಿ ಸೈನಿಕರಾಗಿ ಬಂದವರು ಇಲ್ಲಿನ ಕೋಟೆಯವರು ಅಥವ ರಾಮರಾಜಕ್ಷತ್ರಿಯರು. ಹಾಗೇ ಕುಂಬಳೆ, ಬಂದಡ್ಕ, ಕಾಸರಗೋಡು, ಕುಂಡಂಕುಳಿಗಳಲ್ಲಿ

ಕೋಟೆಗಳನ್ನು ಕಟ್ಟಿದರು. ನೀಲೇಶ್ವರದ ರಾಜರು ಕೆಳದಿಯ ನಾಯಕರ ಅಧೀನರಾಗಿ ಕಪ್ಪವನ್ನು ಕೊಡಬೇಕಾಯಿತು.

ವಿಜಯನಗರ ಹಾಗೂ ಇಕ್ಕೇರಿಯ ರಾಜರ ಜತೆಗೆ ಮಾತ್ರವಲ್ಲದೆ ಕೆಲವೊಮ್ಮೆ ಕುಂಬಳೆಯ ಅರಸರೊಂದಿಗೂ ನೀಲೇಶ್ವರದ ರಾಜರಿಗೆ ಯುದ್ಧ ಮಾಡುವ ಸಂದರ್ಭಗಳು ಒದಗಿಬರುತ್ತಿತ್ತು. ಚಂದ್ರಗಿರಿ ಅಥವಾ ಪಯಸ್ವಿನೀ ನದಿಯ ಉತ್ತರ ತೀರವು ನೀಲೇಶ್ವರ ಅರಸರ ಗಡಿಯಾಗಿತ್ತು. ನದಿ ದಾಟಿ ಬರುವ ಉತ್ತರದ ವೈರಿಗಳನ್ನು ನಿಗ್ರಹಿಸಲೋಸುಗ ನೀಲೇಶ್ವರದ ಕೋಲತ್ತಿರಿ ರಾಜನು ಕಲ್ಲಿಕೋಟೆಯ ಸಾಮೂದಿರಿ ಅರಸರ ಸಹಾಯದಿಂದ ಸೈನ್ಯವೊಂದನ್ನು ಚಂದ್ರಗಿರಿಯ ತೀರದಲ್ಲಿ ನೆಲೆಗೊಳಿಸಿದನು. ಐನೂರು ಮಂದಿ ನಾಯಸ್ಮಾರರ ಈ ಸೈನ್ಯದಲ್ಲಿ ಇತರ ಸಮುದಾಯದವರೂ ಸೈನಿಕರಾಗಿ ಸೇರಿಕೊಂಡಿದ್ದರು. ಅವರಲ್ಲಿ ತೀಯಾ, ಮೋಯಾ ಮತ್ತು ಶಾಲಿಯಾ ಸಮುದಾಯದವರು ಪ್ರಮುಖರಾಗಿದ್ದರು. 'ಶಾಸ್ತಾವು' ಇವರ ಯುದ್ಧಾಧಿ ದೇವತೆಯಾಗಿದ್ದ. ಆದುದರಿಂದಲೇ ಶಾಸ್ತಾವಿಗೆ ಇಲ್ಲಿ ಆಯುಧಗಳನ್ನು ಹರಕೆಯಾಗಿ ಒಪ್ಪಿಸುವ ಸಂಪ್ರದಾಯವು ಆಚರಣೆಗೆ ಬಂದಿರಬೇಕು. ಅರಸರ ಆಳ್ವಿಕೆಯು ಕೊನೆಗೊಂಡು, ಆಂಗ್ಲರ ಆಳ್ವಿಕೆಯು ನೆಲೆಗೊಂಡಾಗ, ಇಲ್ಲಿಂದ ಬೇರೆ ಬೇರೆಡೆ ಹರಿಹಂಚಾಗಿ ಹೋದ ಈ ನಾಲ್ಕು ಸಮುದಾಯದವರೂ (ನಾಯರ್, ತೀಯ, ಶಾಲಿಯಾ, ಮೊಯ) ಇಲ್ಲಿನ ಶಾಸ್ತಾವಿನ ದೇವಾಲಯವನ್ನೇ ಕೇಂದ್ರವಾಗಿಟ್ಟುಕೊಂಡು ವರ್ಷಕ್ಕೊಮ್ಮೆ ಇಲ್ಲಿ ಸೇರುವ ಪರಿಪಾಠವನ್ನು ಇಟ್ಟುಕೊಂಡಿರಬೇಕು. ಆದುದರಿಂದಲೇ ವೃಶ್ಚಿಕ ಮಾಸದ ಮೊದಲನೆಯ ಶನಿವಾರ 'ನಾಯರ್' ಸಮುದಾಯವೂ, ಎರಡನೆಯ ಶನಿವಾರ 'ಶಾಲಿಯಾ' ಸಮುದಾಯವೂ, ಮೂರನೆಯ ಶನಿವಾರ ಮೋಯಾ ಸಮುದಾಯವೂ, ನಾಲ್ಕನೆಯ ಶನಿವಾರ ತೀಯಾ ಸಮುದಾಯವೂ ಇಲ್ಲಿ ಸೇರುವ ಸಂಪ್ರದಾಯವಿದೆ.

ಹೈದರಾಲಿಯು ಬಿದನೂರನ್ನು ಆಕ್ರಮಿಸಿ ವಶಪಡಿಸುವುದರೊಂದಿಗೆ ಕೆಳದಿಯ ನಾಯಕರ ಪ್ರಾಬಲ್ಯತೆಯು ಈ ಪ್ರದೇಶದಲ್ಲಿ ಕ್ಷೀಣಗೊಂಡು, ಸುಲ್ತಾನರ ಆಳ್ವಿಕೆಯು ಪ್ರಾಬಲ್ಯಕ್ಕೆ ಬಂತು. ಹೈದರಾಲಿ ಹಾಗೂ ಟಿಪ್ಪುವನ್ನೆದುರಿಸುವ ನೀಲೇಶ್ವರ ಹಾಗೂ ಕುಂಬಳೆಯ ಅರಸರ ಪ್ರಯತ್ನವು ವಿಫಲವಾಗಿ, ಟಿಪ್ಪು ಇಂಗ್ಲೀಷರೊಂದಿಗೆ ಹೋರಾಡುವ ಕಾಲದಲ್ಲಿ ಇಲ್ಲಿನ ಅರಸರು ಇಂಗ್ಲೀಷರೊಂದಿಗೆ ಸೇರಿಕೊಂಡರು. ಅದನ್ನು ಇಷ್ಟಪಡದ ಟಿಪ್ಪು ಹಲವರನ್ನು ಗಲ್ಲಿಗೇರಿಸಿದನೆಂದು ತಿಳಿದುಬರುತ್ತದೆ. ಟಿಪ್ಪುವಿನ ಮರಣಾನಂತರ ಈ ಪ್ರದೇಶವು ಸಂಪೂರ್ಣವಾಗಿ ಇಂಗ್ಲೀಷರ ವಶವಾಯಿತು.

ಕಾಸರಗೋಡು ಹಾಗು ದಕ್ಷಿಣ ಕನ್ನಡದ ಇತಿಹಾಸವನ್ನು ಅವಲೋಕಿಸಿದಾಗ ಇಲ್ಲಿ ಕಂಡುಬರುವ ವಿವಿಧ ಸಮುದಾಯದವರು ಬೇರೆ ಬೇರೆ ಕಡೆಗಳಿಂದ ಬಂದಿರುವ ಬಗ್ಗೆ ತಿಳಿದು ಬರುತ್ತದೆ. ಕಾಲಾನುಕಾಲಕ್ಕೆ ಈ ಪ್ರದೇಶಕ್ಕೆ ಬೇರೆ ಪ್ರದೇಶಗಳಿಂದ ವಲಸೆ ಬಂದವರ ವಿವರಗಳನ್ನು ಈ ರೀತಿ ಸಂಗ್ರಹಿಸಬಹುದು.

೧) ಬಂಟ ಜನಾಂಗ :- ಪರಶುರಾಮನ ಕಾಲದಲ್ಲಿ ಬಂದವರು. (ಪರಶುರಾಮನು ಪಶ್ಚಿಮ ಕರಾವಳಿಯ ಕಾಡು ಪ್ರಾಂತ್ಯವನ್ನು ಜನವಸತಿಗೆ ತಕ್ಕುದಾದ ನಾಡನ್ನು ಮಾಡುವ ಬಗ್ಗೆ ಬಂಟರ ಮೂಲಪುರುಷನಾದ 'ಕೋಟಿ' ಹಾಗೂ ಅವನ ಸೋದರ ಮಾವ 'ದುಗನ'ನಿಗೂ ಕೊಡುತ್ತಾನೆ.

ಮೂಲ ದಲಿತ ಜನಾಂಗವನ್ನು ಬಿಟ್ಟರೆ ಎಲ್ಲಾ ಸಮುದಾಯಗಳಿಗಿಂತ ಮೊದಲು ಬಂದ ಸಮುದಾಯ ಬಂಟ ಸಮುದಾಯ. (ಡಾ. ಪಿ. ಎಸ್. ಈಶ್ವರ ಭಟ್ಟ– ಗಡಿನಾಡ ಕಿಡಿ. ಪುಟ. ೪೧೧)

೨) ಹವ್ಯಕ ಬ್ರಾಹ್ಮಣ :– ಉತ್ತರ ಪ್ರದೇಶದ ಅಹಿಚ್ಛತ್ರದಿಂದ ಮಯೂರವರ್ಮ ಎನ್ನುವ ಕದಂಬ ವಂಶದ ರಾಜನು ತಾನು ವಶಪಡಿಸಿದ ಈ ಪ್ರದೇಶಕ್ಕೆ ದೇವಯಜ್ಞ ಮತ್ತು ಪಿತೃಯಜ್ಞವನ್ನು ನಡೆಸಲು ಇವರನ್ನು ಕರೆತಂದನು.

೩) ಪರಿವಾರ ಬಂಟರು :– ಕದಂಬರಾಜರ ಪರಿವಾರದವರಾಗಿ, ಅವರ ಬಂಟರಾಗಿ ಬನವಾಸಿಯಿಂದ ತುಳುನಾಡಿಗೆ ಬಂದವರು.

೪) ಬಲ್ಲಾಳರು :– ಹೊಯ್ಸಳ ಬಲ್ಲಾಳರೊಂದಿಗೆ ಸಾಮ್ರಾಜ್ಯ ವಿಸ್ತಾರದ ಸಮಯದಲ್ಲಿ ದ್ವಾರಸಮುದ್ರದಿಂದ ಬಂದು ನೆಲೆಸಿದರು.

೫) ಕೋಟ ಬ್ರಾಹ್ಮಣರು :– ಕುಂದಾಪುರದ 'ಕೋಟ' ಗ್ರಾಮದಿಂದ ಬಂದು ಪೌರೋಹಿತ್ಯಕ್ಕಾಗಿ ಈ ಪ್ರದೇಶದಲ್ಲಿ ನೆಲೆಸಿದರು.

೬) ಆರ್ಯ ಮಹಾರಾಷ್ಟ್ರ ಕ್ಷತ್ರಿಯರು :– ಸುಮಾರು ೧೬–೧೭ನೇ ಶತಮಾನದಲ್ಲಿ ಇಕ್ಕೇರಿ ಅರಸನಾದ ಶಿವಪ್ಪನಾಯಕನ ಸೇನೆಯೊಂದಿಗೆ ಮಹಾರಾಷ್ಟ್ರದಿಂದ ಸೈನಿಕರಾಗಿ ಬಂದವರು.

೭) ಕರಾಡ ಬ್ರಾಹ್ಮಣರು :– ಸುಮಾರು ಅದೇ ಕಾಲದಲ್ಲಿ ಮಹಾರಾಷ್ಟ್ರದಿಂದ ಕೆಳದಿಯ ನಾಯಕರೊಂದಿಗೆ ಪೌರೋಹಿತ್ಯಕ್ಕಾಗಿ ಬಂದವರು.

೮) ಕೋಟೆಯವರು :– ಕೆಳದಿಯ ನಾಯಕರೊಂದಿಗೆ ಕೋಟೆ ರಕ್ಷಣೆಗಾಗಿ ಬಂದವರು.

೯) ಮರಾಠೀ ನಾಯಕರು:– ಕೆಳದಿಯ ನಾಯಕರೊಂದಿಗೆ ಸಾಮ್ರಾಜ್ಯ ವಿಸ್ತರಣೆಯ ಸಂದರ್ಭದಲ್ಲಿ ಅವರ ಪರಿಚಾರಕರಾಗಿ.

೧೦) ಮಾದಿಗರು ಮತ್ತು ಭೈರರು:– ಕೆಳದಿಯ ನಾಯಕರೊಂದಿಗೆ ಪಂಚಮರಾಗಿ ಅವರ ಸೇವೆಗಾಗಿ.

೧೧) ಕೊಂಕಣಿಗಳು:– ಮಹಾರಾಷ್ಟ್ರ ಮತ್ತು ಗೋವೆಯಿಂದ ವ್ಯಾಪಾರ ನಿಮಿತ್ತವಾಗಿ.

೧೨) ತೀಯಾ, ಶಾಲಿಯಾ, ವಾಣಿಯಾ, ಮೋಯಾ (ಮೊಗವೀರ), ಮಣಿಯಾಣಿ ಸಮುದಾಯಗಳು ಕೇರಳದ ಕಡೆಯಿಂದ ಬೇರೆ ಬೇರೆ ಕಾಲಗಳಲ್ಲಿ ವೃತ್ತಿ ಹಾಗೂ ವ್ಯಾಪಾರಕ್ಕಾಗಿ ಬಂದವರು.

ಹೀಗೆ ಹಲವೆಡೆಗಳಿಂದ ಬಂದ ಸಮುದಾಯಗಳು ಮಿಶ್ರಿತವಾಗಿರುವ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶವು 'ಮಿಶ್ರಸಮುದಾಯ ಸಂಸ್ಕೃತಿ' ಯನ್ನು ರೂಢಿಸಿಕೊಂಡಿದೆ. 'ಗಡಿ ಸಂಸ್ಕೃತಿ'ಗೆ ಇದೊಂದು ಉತ್ತಮ ನಿದರ್ಶನವಾಗಿದೆ. ಇಲ್ಲಿ ಹೆಚ್ಚಿನ ಸಮುದಾಯದಲ್ಲೂ 'ತುಳು–ಮಲಯಾಳ' ಎಂದು ಪ್ರಭೇದವಿದೆ. ತುಳು ಬಿಲ್ಲವ–ಮಲಯಾಳಿ ಬಿಲ್ಲವ ; ತುಳು ಶಾಲಿಯಾ–ಮಲಯಾಳೀ ಶಾಲಿಯಾ; ತುಳು ಮೊಗವೀರ–ಮಲಯಾಳೀ ಮೊಗವೀರ ; ತುಳು ಗಾಣಿಗ–ಮಲಯಾಳೀ ಗಾಣಿಗ; ತುಳು ವಿಶ್ವಕರ್ಮ–

ಮಲಯಾಳೀ ವಿಶ್ವಕರ್ಮ; ತುಳು ಭಂಡಾರಿ–ಮಲಯಾಳೀ ಭಂಡಾರಿ.

ಈ ನಿಟ್ಟಿನಲ್ಲಿ 'ತುಳು–ಮಲಯಾಳ ಮಿಶ್ರಿತ ಸಂಸ್ಕೃತಿ' ಯಾಗಿ 'ಶಾಲಿಯಾ ಸಂಸ್ಕೃತಿ'ಯನ್ನು ಇಲ್ಲಿ ಅಧ್ಯಯನಕ್ಕೆ ಎತ್ತಿಕೊಳ್ಳಲಾಗಿದೆ.

## ೫. ಶಾಲಿಯಾ ಮತ್ತು ದೇವಾಂಗ ಪದದ ನಿಷ್ಪತ್ತಿ

ತಮಿಳುನಾಡು, ಆಂಧ್ರ ಪ್ರದೇಶ, ಕರ್ನಾಟಕ ಮತ್ತು ಕೇರಳಗಳಲ್ಲಿ ನೇಕಾರ ವರ್ಗದವರು "ಶಾಲಿ", "ಶಾಲಿಯಾ", "ಶಾಲೆ" ಎಂದೆಲ್ಲಾ ಕರೆಯಲ್ಪಡುತ್ತಾರೆ. ಪ್ರತಿಯೊಂದು ಸಮುದಾಯಕ್ಕೂ ವೃತ್ತಿಯಾಧಾರಿತವಾದ ಒಂದು ಹೆಸರಿನೊಂದಿಗೆ ವಿಭಿನ್ನ ಪ್ರದೇಶಗಳಲ್ಲಿ ಆಯಾ ಭಾಷೆಗನುಗುಣವಾಗಿಯೋ, ಪ್ರಾದೇಶಿಕವಾಗಿಯೋ ಅಥವಾ ಕೆಲವು ಆಂತರಿಕ ಕಾರಣಗಳಿಂದಲಾಗಿಯೋ ಹೊಸ ಹೆಸರುಗಳು ಹುಟ್ಟಿಕೊಳ್ಳುವ ಸಾಧ್ಯತೆಗಳಿವೆ. ಜಾತಿಯ ಹಿನ್ನೆಲೆಯಿಂದ ಸಮಾಜದ ಶ್ರೇಣೀಕರಣ ನಡೆಯುವುದು ನೂತನವಾದ ಜಾತಿ ಹೆಸರುಗಳು ಹುಟ್ಟಲು ಪರೋಕ್ಷವಾಗಿ ಕಾರಣವಾಗುತ್ತದೆ. ಸಮಾಜದಲ್ಲಿ ಜಾತಿಯ ಹೆಸರೂ ಉತ್ತಮ ಸ್ಥಾನ ಮಾನವನ್ನು ಕಲ್ಪಿಸುವುದರಿಂದ ಜಾತಿಗೆ ಉತ್ತಮವೆನ್ನಿಸಿದ ಹೆಸರುಗಳನ್ನು ಇಟ್ಟುಕೊಳ್ಳುವುದೂ ಇದೆ. "ಹೆಸರಿನಲ್ಲೇನಿದೆ?" ಎಂದು ಕೆಲವರು ಕೇಳಿದರೂ, ಹೆಸರಿನಿಂದ ವ್ಯಕ್ತಿ ಮಾತ್ರವಲ್ಲ, ಸಮುದಾಯವೂ ಅಡಿಗಡಿಗೆ ಭಂಗಪಟ್ಟುಕೊಳ್ಳುತ್ತದೆ. ಇದಕ್ಕೆ ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಶಾಲಿಯಾ ಸಮುದಾಯವೇ ಒಂದು ಉದಾಹರಣೆ.

ಈ ಪ್ರದೇಶದಲ್ಲಿ ಶಾಲಿಯಾರನ್ನು ಚಾಲಿಯಾ, ತಾಲಿಯಾ ಅಥವಾ ತಾಲ್ಯ ಎಂದು ಕರೆಯುತ್ತಾರೆ. ದಕ್ಷಿಣದಲ್ಲಿ 'ಚಾಲಿಯನ್' ಎಂದು ಕರೆಯುತ್ತಾರೆ. ಆದರೆ ಈ ಕಡೆಯ ಶಾಲಿಯರಿಗೆ ತಾವು ಆ ಹೆಸರಿನಿಂದ ಗುರುತಿಸಲ್ಪಡುವುದು ಇಷ್ಟವಿಲ್ಲ. ಅದನ್ನು ಒಂದು ರೀತಿಯ ಸಾಮಾಜಿಕ ಅವಹೇಳನ ಎಂದವರು ಭಾವಿಸುತ್ತಾರೆ. ಇದಕ್ಕೆ ಕಾರಣವೂ ಇದೆ. ತುಳುವಿನಲ್ಲಿ ಚಾಲಿಯಾ ಅಥವಾ ತಾಲಿಯೆ ಎಂದರೆ 'ಜೇಡ' ಎಂದರ್ಥ.

ಜೇಡನಿಗೆ ಚಾಲಿಯಾ ಅಥವಾ ತಾಲಿಯಾ ಎಂಬ ಹೆಸರು ಬರಲು ಮೂಲ ಸಂಸ್ಕೃತದ 'ಶಲಕ' ಎಂಬ ಪದ. ಶಲಕ ಎಂದರೆ ಸಂಸ್ಕೃತದಲ್ಲಿ 'ಜೇಡ' ಎಂದರ್ಥ. ಶಲಕವು ಬಲೆಯನ್ನು ನೇಯುವುದನ್ನು ನೋಡಿ ಬಟ್ಟೆಯನ್ನು ನೇಯುವ ಕಾಯಕ ಮಾಡುವವನನ್ನು 'ಶಾಲಿಕಾ' (ನೇಯುವವ) ಎಂದು ಗುರುತಿಸತೊಡಗಿದರು. ಕ್ರಮೇಣ 'ಶಾಲಿಕಾ'ದ ಕೊನೆಯ ಅಕ್ಷರವು ಲೋಪವಾಗಿ 'ಶಾಲಿ' ಮಾತ್ರ ಉಳಿಯಿತು. ಪರುಷಾಕ್ಷರಗಳನ್ನು ಉಚ್ಚರಿಸುವಾಗ ಸುಲಭಾಕಾಂಕ್ಷೆಗಾಗಿ ಸರಳಾಕ್ಷರಗಳನ್ನು ಪರ್ಯಾಯವಾಗಿ ಬಳಸುವುದು ಭಾಷಾವಿಜ್ಞಾನದಲ್ಲಿ ಸಾಮಾನ್ಯ. ಆದುದರಿಂದ 'ಶಲಕ'ದ 'ಶ' ಕಾರವು 'ಚ' ಕಾರವಾಗಿ ಚಲಕ > ಚಾಲಿಕಾ > ಚಾಲಿ ಎಂದಾಗಿರುವ ಸಾಧ್ಯತೆಯಿದೆ. ಸ, ಶ, ಷ ಕಾರಗಳಿಗೆ ಆದೇಶವಾಗಿ 'ಚ' ಕಾರವು ಬರುತ್ತದೆ. ಆದುದರಿಂದಲೇ ಇವರು ಇಲ್ಲಿ ಚಾಲಿಯಾ ಆಗಿದ್ದಾರೆ. ಇವರು

ಕೇರಳಕ್ಕೆ ಬರುವಾಗ 'ಶಾಲಿ' ಗಳೇ ಆಗಿದ್ದರು. ಆದರೆ ಮಲಯಾಳಂನಲ್ಲಿ ಜಾತಿ ಸೂಚಕ ಪದಗಳಿಗೂ ಅಂಕಿತ ನಾಮಗಳಿಗೂ ಏಕವಚನದಲ್ಲಿ 'ಅನ್' ಪ್ರತ್ಯಯವು ಸೇರುತ್ತದೆ. 'ಅ'ಕಾರಾಂತವಾದ ಪದಗಳಿಗೆ 'ಅನ್' ನೇರವಾಗಿ ಪ್ರಕೃತಿಗೇ ಸೇರಿಕೊಂಡರೆ 'ಇ' ಕಾರಾಂತವಾದ ಪ್ರಕೃತಿಗಳಿಗೆ 'ಅನ್' ಸೇರುವಾಗ 'ಯ್' ಕಾರವು ಆಗಮವಾಗುತ್ತದೆ. ಆದುದರಿಂದಲೇ ಶಾಲಿ + ಅನ್ = ಶಾಲಿಯನ್ ಎಂದಾಗಿದೆ. (ಕುರುಕ್ಕ+ಅನ್ = ಕುರುಕ್ಕಯನ್ ಆಗುವುದಿಲ್ಲ. ಅದು ಕುರುಕ್ಕನ್ ಎಂದೇ ಆಗುತ್ತದೆ). ಹೀಗೆ ಶಾಲಿ > ಶಾಲಿಯಾನ್ > ಚಾಲಿಯನ್ ಆಗಿದೆ. ಆದರೆ ಕಾಸರಗೋಡು ಮತ್ತು ದಕ್ಷಿಣ ಕನ್ನಡ ಭಾಗದಲ್ಲಿ ಕನ್ನಡ ಮತ್ತು ತುಳು ಪ್ರಾಬಲ್ಯತೆಯನ್ನು ಪಡೆದುಕೊಂಡಿದ್ದ ಕಾರಣ ಇಲ್ಲಿ ಕನ್ನಡ ಹಾಗೂ ತುಳು ಭಾಷೆಯ ಪ್ರಭಾವದಿಂದ 'ನ್' ಲೋಪವಾಗಿ ಕೇವಲ 'ಶಾಲಿಯ' ಮಾತ್ರ ಉಳಿಯಿತು. ಅದುವೇ 'ಚಾಲಿಯಾ' ಆಗಿ ಬಳಕೆಯಲ್ಲಿ ಬಂತು.

ಒಂದು ನಿರ್ದಿಷ್ಟ ಪ್ರದೇಶದಲ್ಲಿ ಬಹಳ ಕಾಲಗಳಿಂದ ಇರುವ ಸಮುದಾಯಕ್ಕೆ ಆ ಪರಿಸರದಲ್ಲಿ ಓರಿತನ ಮತ್ತು ಸ್ವಾಮ್ಯತೆ ಇರುತ್ತದೆ. ಇಂತಹ ಪ್ರದೇಶಗಳಿಗ ಅನ್ಯ ಪ್ರದೇಶದಿಂದ ಬಂದ ಸಮುದಾಯಕ್ಕೆ ಅಷ್ಟು ಸುಲಭವಾಗಿ ಸ್ಥಾನ ಮಾನ ದೊರೆಯುವುದಿಲ್ಲ. (ತಮ್ಮ ಮೂಲ ಪ್ರದೇಶದಲ್ಲಿ ಅವರೆಷ್ಟೇ ಉನ್ನತ ಸ್ಥಾನದಲ್ಲಿದ್ದರೂ ಇಲ್ಲಿ ಅವರು ಕೀಳೇ! ಈ ವಿಷಯ ಸಮಾಜದ ಅತ್ಯುನ್ನತ ಸ್ತರದಲ್ಲಿರುವ ಬ್ರಾಹ್ಮಣರಿಗೆ ಅನ್ವಯಿಸುವುದಿಲ್ಲ) ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಅವರು ಪ್ರಯತ್ನಿಸುತ್ತಿರುವಂತೆಯೇ ಆ ಪ್ರದೇಶದ ಉನ್ನತ ಸ್ತರದವರು ಎಂದನ್ನಿಸಿಕೊಂಡ ಮೂಲ ನಿವಾಸಿಗಳಿಂದ ತುಚ್ಛೀಕರಣದ ಕೀಳು ದೃಷ್ಟಿಗೆ ಬಲಿಯಾಗಬೇಕಾಗುತ್ತದೆ. ತುಳುನಾಡಿಗೆ ವಲಸೆ ಬಂದ ಶಾಲಿಯಾ ಸಮುದಾಯದವರೂ ಇಂತಹ ಒಂದು ಪರಿಸ್ಥಿತಿಯನ್ನು ಎದುರಿಸಿರಬೇಕು. ಇದು ಶಾಲಿಯಾ > ಚಾಲಿಯಾ > ತಾಲಿಯಾ > ತಾಲ್ಯ ಎಂದು ಇವರ ಜಾತಿಯ ಹೆಸರು ಅಪಭ್ರಂಶಗೊಳ್ಳಲು ಕಾರಣ. ಜಾತ್ಯಾಧಾರಿತ ಸಮಾಜದಲ್ಲಿ ಉನ್ನತ ಸ್ತರದವರು ಕೆಳವರ್ಗವನ್ನು ಹೇಳುವಾಗ ಅದಷ್ಟೂ ಅಪಭ್ರಂಶಗೊಳಿಸಿಯೇ ಹೇಳುತ್ತಾರೆ. ಇದು ಸುಲಭಾಕಾಂಕ್ಷೆಯಿಂದ ಅಲ್ಲ ಎಂಬುದನ್ನು ಗಮನದಲ್ಲಿರಿಸಬೇಕು. ಏಕೆಂದರೆ ಮೇಲುವರ್ಗದವರು ಇದನ್ನು ತಮಗೆ ಅನ್ವಯಿಸಿಕೊಳ್ಳುವಾಗ ಸರಿಯಾಗಿಯೇ ಬಳಸುತ್ತಾರೆ. ಉದಾ : ಲಕ್ಷ್ಮೀ = ಲಚ್ಚಿಮಿ, ದೇವಿ = ತೇಯಿ, ದೇಯಿ, ಸೀತಾ = ಚೀತೂ, ಸುಶೀಲ = ಚೀಲ.

ಹಾಗೆಯೇ ಜಾತಿ ಹೆಸರುಗಳು :-

ಮಡಿವಾಳ > ಮಡ್ಡೆಲ > ಮಡ್ಯೆಲೆ > ಮಡ್ಡೆಲೆ

ತೀವರ > ದೀವರ > ತೀಯಾ > ತೀಯ > ತೀಯೆ

ಶಾಲಿಯಾ > ಚಾಲಿಯಾ > ತಾಲಿಯಾ > ತಾಲ್ಯೆ

ಆಚಾರ್ಯ > ಆಶಾರಿ > ಆಸಾರಿ > ಆಚಾರಿ

ಈ ರೀತಿಯ ಅಪಭ್ರಂಶೀಕರಣವೇ ಕ್ರಮೇಣ ರೂಢಿಯಲ್ಲಿ ಬಂದು ಬಿಡುತ್ತದೆ. ಆದುದರಿಂದ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶದ ಸಾಲಿಯರು ಚಾಲಿಯೆ, ತಾಲಿಯೆ ಎಂದಾಗಿದ್ದಾರೆ. ಪದ್ಮಶಾಲಿಯರನ್ನು ಇಲ್ಲಿ ಹೀಗೆಯೇ ಕರೆಯುತ್ತಾರೆ. ಇಲ್ಲಿನ ಪಾಡ್ದನಗಳಲ್ಲೂ ನೇಕಾರರು ಚಾಲ್ಯೆ ಎಂದೇ ಉಲ್ಲೇಖಿತಗೊಂಡಿದ್ದಾರೆ. ಉದಾಹರಣೆಗೆ ಕಲ್ಲುರ್ಟಿ ಕಲ್ಕುಡ ಪಾಡ್ದನದಲ್ಲಿ ಬೇರೆ ಬೇರೆ ವೃತ್ತಿ ಮಾಡುವವರಿಗೆ ಹೆಸರು ಹೇಗೆ ಬಂತು ಎಂಬುದನ್ನು ಹೀಗೆ ಹೇಳಿದೆ:-

ಎನ್ನ ಜೋಕ್ಲೆಗ್ ಪುದರ್ ಲೆಪ್ಪೋಡೇ

ಬೇಲೆ ನನಲ ಕಲ್ಪಾವೊಡೇ

ಮಣ್ಣ್‌ದ ಬೇಲೆ ಬೆಂದಿನಾಯೆಲ ಮಣ್ಣಮುಖಾರಿ

ಮರತ ಬೇಲೆನೇ ಬೆಂದಿನಾಯೆಲ ಮಲ್ಯಲಾಚಾರಿ

ಕರ್ಬದ ಬೇಲೆ ಬೆಂದಿನಾಯೆಲ ಏರಾಣಿ ಮಗೆ

ಕಲ್ಲ ಕಡ್ತ್‌ದ್ ಕಲ್ಲ ಪಂಚಂಗದ

ಬೇಲೆ ಬೆಂದಿನಾಯೆಲ ಕಲ್ಕುಡೆ

ನೂಲು ಪತ್ತಿ ನೂತನದ ಬೇಲೆ ಬೆಂದಿನಾಯೆ

**ಚಾಲ್ಯ ಮಗೇಂಡ್** ಪುದರ್ ಆನಿಲಾ ಲೆತ್ತೆನೇ

(ನನ್ನ ಮಕ್ಕಳಿಗೆ ಹೆಸರು ಹಾಕಬೇಕು

ಕೆಲಸವನ್ನು ಇನ್ನು ಕಲಿಸಬೇಕು

ಮಣ್ಣಿನ ಕೆಲಸ ಮಾಡಿದವನು ಮಣ್ಣ ಮುಖಾರಿ

ಮರದ ಕೆಲಸ ಮಾಡಿದವನು ದೊಡ್ಡ ಆಚಾರಿ

ಕಬ್ಬಿಣದ ಕೆಲಸ ಮಾಡಿದವನು ಏರಾಣಿ

ಕಲ್ಲು ಕಡಿದು ಕಲ್ಲ ಪಂಚಾಂಗದ

ಕೆಲಸ ಮಾಡಿದವ ಕಲ್ಕುಡೆ

ನೂಲು ಹಿಡಿದು ನೂಲ ಕೆಲಸ ಮಾಡಿದವನು

ಚಾಲ್ಯನ ಮಗ ಎಂದು ಹೆಸರು ಕರೆದರು)

ಹೀಗೆ ಹೊರಗಿನಿಂದ ಬಂದು ನೆಲೆ ನಿಂತ ಪ್ರದೇಶದಲ್ಲಿ ಕೆಳಸ್ತರಕ್ಕೆ ತಳ್ಳಲ್ಪಟ್ಟ ಸಮಾಜವು ಕಾಲಾಂತರದಲ್ಲಿ ತನ್ನ ಸ್ಥಾನವನ್ನು ಅಲ್ಲಿ ಭದ್ರ ಪಡಿಸಿಕೊಂಡಾಗ ಇಂತಹ ಅಪಭ್ರಂಶರೂಪದ ಹೆಸರಿನಿಂದ ತನ್ನ ಘನತೆಗೆ ಕುಂದು ಎಂದು ಭಾವಿಸಿಕೊಳ್ಳುತ್ತದೆ. ಆಗ ತನ್ನ ಮೂಲದ ಹುಡುಕಾಟಕ್ಕೆ ಅದು ಪ್ರಾರಂಭಿಸುತ್ತದೆ. ಇಂತಹ ಹುಡುಕಾಟದ ಸಂದರ್ಭದಲ್ಲಿ ಯಾವ ಪ್ರದೇಶದಲ್ಲಿ ತನ್ನದೇ ವೃತ್ತಿಯನ್ನು ಅವಲಂಬಿಸಿದ ವರ್ಗವು ಬೇರೊಂದು ಹೆಸರಿನಿಂದ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನವನ್ನು ಪಡೆದುಕೊಂಡಿದೆಯೋ ಅಲ್ಲಿ ತನ್ನ ಮೂಲವನ್ನು ಕಂಡುಕೊಂಡು ಆ ಹೆಸರನ್ನು ತಾನು ದತ್ತು ತೆಗೆದುಕೊಳ್ಳುತ್ತದೆ. ಇದುವೇ ತುಳುನಾಡಿನ ಶಾಲಿಯರು ತಮ್ಮನ್ನು ತಾವೇ 'ದೇವಾಂಗ'ರು ಎಂದು ಗುರುತಿಸಲು ಮೂಲ ಕಾರಣವಾಯಿತು. ೧೯೪೪ಕ್ಕಿಂತ ಮೊದಲು ಈ ಸಮುದಾಯವು ತನ್ನನ್ನು 'ಚಾಲಿಯನ್' ಎಂದೇ ಗುರುತಿಸಿಕೊಳ್ಳುತ್ತಿತ್ತು. ಅನಂತರ ಸಮುದಾಯದ ಹಲವು ಹಿರಿಯರ ಒಮ್ಮತದ ಅಭಿಪ್ರಾಯದಂತೆ ಇವರು ತಮ್ಮನ್ನು 'ದೇವಾಂಗರು' ಎಂದು ಕರೆದುಕೊಳ್ಳಲು ತೀರ್ಮಾನಿಸಿದರು. (ಈ ಬಗ್ಗೆ ದಿ|ದೇವದಾಸ ಶಿರೋಮಣಿಯವರು ೧೯೪೪ರಲ್ಲಿ ಬರೆದ ಪತ್ರವನ್ನು ಅನುಬಂಧದಲ್ಲಿ ಕೊಡಲಾಗಿದೆ). ಕೇರಳದ ಮುಖಾಂತರವಾಗಿ ತುಳುನಾಡಿಗೆ ಬಂದು ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳಲು ಇವರಿಗೆ ನೂರಾರು ವರ್ಷಗಳು ಬೇಕಾದುವು. ಕಳೆದ ಶತಮಾನದ ಉತ್ತರಾರ್ಧಕ್ಕಾಗುವಾಗ ಇವರು ಸಮಾಜದಲ್ಲಿ ಸ್ವಲ್ಪ ಗುರುತಿಸಿಕೊಳ್ಳುವಂತಾದರು. ಆಗ ಕರ್ನಾಟಕ, ತಮಿಳುನಾಡು ಪ್ರದೇಶಗಳಲ್ಲಿ ನೇಕಾರ ವೃತ್ತಿಯಲ್ಲಿ ಪರಿಣತರಾಗಿ ಪ್ರತಿಷ್ಠಿತರೆನಿಸಿಕೊಂಡ 'ದೇವಾಂಗ'ದವರೇ ತಮ್ಮ ಮೂಲ ಎಂದು ಕೆಲವು ಆಧಾರಗಳಿಂದ ಹೇಳಿಕೊಂಡಿರುವುದನ್ನು ಕಾಣಬಹುದು.

ದೇವಾಂಗರನ್ನು ಜೇಡರ, ದೇವರ, ದೇವಾಂಗ ಎಂದು ಕರೆಯುವುದೂ ಇದೆ. 'ಶಲಕ' ಪದದ ಕನ್ನಡ ಅರ್ಥವೇ ಜೇಡ. ಆದುದರಿಂದ ನೇಕಾರರೆಲ್ಲರಿಗೂ ಅನ್ವಯಿಸುವ ಹೆಸರು ಇದು. ಆದರೆ ಆಯಾ ಪ್ರದೇಶದ ಭಾಷೆಯಲ್ಲಿ ವ್ಯತ್ಯಾಸವಿರುವುದರಿಂದ ಅದು ಭಿನ್ನವಾಗಿ ಕಾಣುವುದಷ್ಟೇ. ಮಲಯಾಳದಲ್ಲಿ ಜೇಡಕ್ಕೆ 'ಚೆಲಂದಿ' ಅಥವಾ 'ಚಿಲಂದಿ' ಎಂದು ಹೇಳುತ್ತಾರೆ. ಇಲ್ಲಿಯೂ 'ಶ'ಕಾರಕ್ಕೆ 'ಚ' ಕಾರ ಆದೇಶವಾಗಿದೆ. ಇಲ್ಲಿಯೂ ಪದಕ್ಕೆ ಮೂಲ 'ಶಲಕ'ವೇ ಆಗಿದೆ. ಶಲಂದಿ > ಚೆಲಂದಿ > ಚಿಲಂದಿ ಆಗಿರುವ ಸಾಧ್ಯತೆಯಿದೆ.

ಈ ಹೆಸರು ಬರಲು ಇನ್ನು ಕೆಲವು ಕಾರಣಗಳನ್ನು ಹೀಗೆ ಕೊಡಬಹುದು.

೧. ನೇಯ್ಗೆ ಕಾಯಕವನ್ನು ಮಾಡಲು ವಿಶಾಲವಾದ ಹಜಾರದ ಅಗತ್ಯವಿದೆ. ಅದನ್ನು 'ಶಾಲೆ' ಎನ್ನುತ್ತಾರೆ. ಶಾಲೆಯಲ್ಲಿ ನೇಯುವವರು ಶಾಲಿ ಆಗಿರಬಹುದು.

೨. ಶಲ್ಯ ಎಂದರೆ 'ಶಾಲು' ಎಂಬ ಅರ್ಥವಿದೆ. 'ಶಾಲು' ಎಂದರೆ ವ್ಯಾಪಕವಾದ ಅರ್ಥದಲ್ಲಿ 'ಬಟ್ಟೆ' ಎನ್ನಬಹುದು. ಆದರೆ ಈಗ ಈ ಪದವು ೫ರಿಂದ ೧೦ ಅಡಿ ಉದ್ದದ ಬಟ್ಟೆಗೆ ಮಾತ್ರ ಸೀಮಿತವಾಗಿದೆ. ಆದುದರಿಂದ 'ಶಲ್ಯ' ಅಥವಾ ಶಾಲನ್ನು ತಯಾರಿಸುವವರು 'ಶಾಲಿ' ಆಗಿರಬಹುದು.

೩. 'ಶಬ್ದ ತಾರಾವಲಿ' ಎಂಬ ಮಲಯಾಳ ನಿಘಂಟಿನಲ್ಲಿ 'ಶಾಲಿಯನ್' ಎಂಬ ಪದಕ್ಕೆ ನೂಲ್‌ಚೆಟ್ಟಿ ಎಂಬ ಅರ್ಥವಿದೆ.

೪. ಶಲ್ಯ ಪುರಾಣದಲ್ಲಿ ಶಲ್ಯ ಮಹರ್ಷಿಯ ಸಂತತಿಯವರು ಎಂದು ಉಲ್ಲೇಖಿಸಲ್ಪಟ್ಟಿರುವುದರಿಂದ ಇವರು 'ಶಾಲಿಯ'ರೆಂದು ಕರೆಯಲ್ಪಟ್ಟಿರುವ ಸಾಧ್ಯತೆಯಿದೆ.

೫. 'ಶಲ್ಯ' ಎನ್ನುವ ಪದವೇ 'ಶಾಲಿ' ಅಥವಾ ಶಾಲಿಯಾ ಪದಕ್ಕೆ ಮೂಲವಾಗಿದೆ ಎಂದು ಹೇಳುತ್ತಾರೆ. 'ಶಲ್ಯ' ಎನ್ನುವ ಸಂಸ್ಕೃತ ಪದಕ್ಕೆ ಭರ್ಚಿ, ಈಟಿ, ಶಲ್ಯ ಎಂದೆಲ್ಲಾ ಅರ್ಥವಿದೆ. ಹಾಗೇ ಬಿದಿರಿನ ಮೊಳಕೆ, ಶರ, ಬಾಣ, ತೋಮರವೆಂಬ ಆಯುಧ, ಪಾಪ, ಮುಳ್ಳುಹಂದಿ, ಮುಳ್ಳು ಮುಂತಾದ ಅರ್ಥಗಳೂ ಇವೆ. ಈ ಎಲ್ಲ ಅರ್ಥಗಳೂ ಹರಿತವಾದ ವಸ್ತುಗಳನ್ನು ಸೂಚಿಸುವಂತಹವೇ ಆಗಿವೆ.

**ದೇವಾಂಗ ಪದದ ನಿಷ್ಪತ್ತಿ :**

೧. ದೇವಾಂಗ ಪದಕ್ಕೆ ರೇಶ್ಮೆ ವಸ್ತ್ರ ಎನ್ನುವ ಅರ್ಥವಿದೆ. ಹಾಗೇ ದೇವತೆಗಳು ಉಡುವ ವಸ್ತ್ರ ಎಂಬ ಅರ್ಥವೂ ಇದೆ. 'ದೇವತೆಗಳ ಅಂಗವನ್ನು ಮುಚ್ಚುವ ವಸ್ತ್ರವನ್ನು ತಯಾರಿಸಿದವನು' ಎನ್ನುವ ಅರ್ಥದಲ್ಲಿ 'ದೇವಾಂಗ' ಎಂಬ ಪದ ಬಳಕೆಯಲ್ಲಿ ಬಂದಿರಬೇಕು.

೨. ದೇವಾಂಗನೆಂದರೆ ದೇವರ ಅಂಗದಿಂದ ಹುಟ್ಟಿದವನು ಎಂಬ ಅರ್ಥವೂ ಇದೆ. ಈಶ್ವರನ ಹಣೆಯಿಂದ ದೇವಲನ (ದೇವಾಂಗ) ಉದ್ಭವವಾಯಿತು ಎಂದು ದೇವಾಂಗರು ಹೇಳುತ್ತಾರೆ.

೩. 'ದೇವ ವೆಂದರೆ ಸ್ವಯಂ ಪ್ರಕಾಶಿತ ಪರಬ್ರಹ್ಮ' ಎಂಬ ಅರ್ಥವಿದೆ. ಅದರ 'ಅಂಗ'ವಾದುದರಿಂದ ಆತ ದೇವಾಂಗ.

೪. ದೇವ ಎಂದರೆ ಪುರುಷ. 'ಅಂಗ' ಎಂದರೆ ಪ್ರಕೃತಿ. ಪ್ರಕೃತಿ ಪುರುಷ ಸ್ವರೂಪವಾದುದರಿಂದ ದೇವಾಂಗ ಎಂದನ್ನಿಸಿದನು.

೫. ದೇವ ಎಂದರೆ ಬ್ರಹ್ಮನ ಅಂಶವಾದ ಜೀವದ ಸ್ವರೂಪ. ಜೀವ ಮತ್ತು ಬ್ರಹ್ಮದ ಐಕ್ಯ ಸೂಚಕವಾದುದರಿಂದ ದೇವಾಂಗ.

ಈ ಎಲ್ಲಾ ಅರ್ಥಗಳೂ 'ದೇವಾಂಗ' ಪದಕ್ಕೆ ದೇವತೆಗಳ ಹಾಗೂ ಮನುಷ್ಯರ ಅಂಗದ ಜೊತೆ ಇರುವ ಸಂಬಂಧವನ್ನು ಸೂಚಿಸುತ್ತದೆ.

ವೃತ್ತಿಯಾಧಾರಿತವಾಗಿ ಸಮಾಜವು ವಿಂಗಡಣೆಯಾಗುವುದಕ್ಕಿಂತ ಮುನ್ನ ಪಟ್ಟೆ ಅಥವಾ ರೇಶ್ಮೆ ವಸ್ತ್ರವನ್ನು ನೇಯುವವರನ್ನು ದೇವಾಂಗರು ಎಂದು ಕರೆದಿರಬಹುದು. ಕ್ರಮೇಣ ಈ ವೃತ್ತಿಯನ್ನು ಸಮಾಜದ ಇತರರೂ ಸ್ವೀಕರಿಸಿರಬೇಕು. ಅದರಲ್ಲಿ ವಿಭಿನ್ನ ಹೆಸರುಗಳ ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಇದ್ದರು. ಕಾಲಾಂತರದಲ್ಲಿ ನೇಕಾರ ವೃತ್ತಿಯನ್ನವಲಂಬಿಸಿದವರೆಲ್ಲರೂ ನೇಕಾರರೆಂದೇ ಗುರುತಿಸಲ್ಪಟ್ಟರು. ಅವರ ಮೂಲದ ಹೆಸರುಗಳು ಅಲ್ಪ ಪ್ರಮಾಣದಲ್ಲಿ ಉಳಿದುಕೊಂಡಿರುವ ಸಾಧ್ಯತೆಯಿದೆ. ಉದಾ : ಸಮಯ ಶಾಲೆ, ಸಕುಳ ಶಾಲೆ, ಕುರುವಿನ ಶೆಟ್ಟಿ, ಕ್ಷತ್ರಿಯ ಮೂಲದ ಶಲ್ಯ ಅಥವಾ ಶಾಲಿಯರೇ ಹೆಚ್ಚಾಗಿ ಈ ವೃತ್ತಿಯ ಕಡೆಗೆ ಒಲಿದಿರುವ ಸಾಧ್ಯತೆಯಿದೆ.

ವಿಶ್ವದ ಯಾವುದೇ ಜನಾಂಗದ ಮೂಲ ಸಂಸ್ಕೃತಿಯು ನದೀ ತೀರದಲ್ಲೇ ಹುಟ್ಟಿಕೊಂಡಿದೆ. ನೇಕಾರರ ಮೂಲವನ್ನು ಹೇಳುವಾಗಲೂ ಗೋದಾವರೀ ತೀರದಿಂದ ಅದು ಪ್ರಾರಂಭವಾಗುತ್ತದೆ. ನೇಕಾರ ವೃತ್ತಿಗೂ, ನೀರಿಗೂ ಅಲ್ಪ ಮಟ್ಟಿನ ಸಂಬಂಧವೂ ಇದೆ. ನೂಲಿಗೆ ಬಣ್ಣವನ್ನು ಹಾಕಿದ ಮೇಲೆ ಅದನ್ನು ನೀರಿನಲ್ಲಿ ಚೆನ್ನಾಗಿ ತೊಳೆಯಬೇಕು. ಅದಕ್ಕೆ ಬಹಳಷ್ಟು ನೀರಿನ ಅಗತ್ಯವೂ ಇದೆ. ಆದುದರಿಂದಲೇ ಹಿಂದಿನ ಕಾಲದಲ್ಲಿ ನೇಕಾರರು ಹೆಚ್ಚಾಗಿ ನದೀ ತೀರಗಳಲ್ಲೇ ವಾಸಿಸುತ್ತಿದ್ದರು. ಕೇರಳದ ಶಾಲಿಯಾರ್ ಹೊಳೆಯ ದಡದಲ್ಲಿ ನೇಕಾರರ ಒಂದು ಕೇರಿಯೇ ಇತ್ತು ಎಂದು ಇಬನ್ ಬತ್ತೂತನೆನ್ನುವ ಪಾಶ್ಚಾತ್ಯ ಪ್ರವಾಸಿಯ ಬರಹದಲ್ಲಿ ಉಲ್ಲೇಖವಾಗಿದೆ. ನೀಲೇಶ್ವರದ ಚಿರಕ್ಕಲ್ ಕೆರೆದಂಡೆಯಲ್ಲಿದ್ದ ಶಾಲಿಯಾ ತೆರುವಿನಿಂದಲೇ ಉತ್ತರಕ್ಕೆ ಶಾಲಿಯರು ಬಂದಿದ್ದಾರೆ ಎಂದು ಹೇಳಲಾಗುತ್ತದೆ. ಕರ್ನಾಟಕದ ಕಾವೇರಿ, ತುಂಗಭದ್ರಾ, ಕೃಷ್ಣಾ ನದಿಗಳು ಹಾದು ಬರುವ ಪ್ರದೇಶಗಳ ತೀರದಲ್ಲಿ ಅಲ್ಲಲ್ಲಿ ನೇಕಾರರು ಸಾಮೂಹಿಕವಾಗಿ ಜೀವಿಸುತ್ತಿದ್ದರು ಎಂದು ಹೇಳಲಾಗುತ್ತದೆ. ಆದುದರಿಂದ ಗೋದಾವರೀ ತೀರದಲ್ಲಿ ಯಾವನೋ ಒಬ್ಬ ಹತ್ತಿಯಿಂದ ನೂಲು ತಯಾರಿಸಿ ನೇಯುವ ಕಲೆಯನ್ನು ಆರಂಭದಲ್ಲಿ ರೂಢಿಸಿಕೊಂಡಿರಬಹುದು. ಕ್ರಮೇಣ ಅದು ಇತರ ಕಡೆಗೆ ವ್ಯಾಪಿಸಿ ಹತ್ತಿ ಬೆಳೆಯಲು ಯೋಗ್ಯವಾದ ಕಪ್ಪು ಮಣ್ಣಿನ ಪ್ರದೇಶದಲ್ಲಿ ಧಾರಾಳವಾಗಿ ಹತ್ತಿಯನ್ನು ಬೆಳೆದು ನೂಲು ತಯಾರಿಸಿ ವಸ್ತ್ರೋತ್ಪಾದನೆಯು ನಡೆಯಿತು. ಕ್ರಮೇಣ ರೇಶ್ಮೆ ಗೂಡಿನಿಂದ ರೇಶ್ಮೆಯ ವಸ್ತ್ರಗಳನ್ನು ನಿರ್ಮಾಣ ಮಾಡತೊಡಗಿದರು. ಹಾಗೇ ಪಟ್ಟುನೂಲ್‌ಕಾರನ್, ಪಟ್ಟಾರ್ಯ ಮೊದಲಾದ ವರ್ಗ ಹುಟ್ಟಿಕೊಂಡಿತು. ಹೀಗೆ ವಸ್ತ್ರ ನಿರ್ಮಾಣದ ಇತಿಹಾಸದೊಂದಿಗೆ ವಸ್ತ್ರೋತ್ಪಾದಕರ ಉತ್ಪತ್ತಿಯ ಇತಿಹಾಸವೂ ಹಾಸು ಹೊಕ್ಕಾಗಿ ಬೆರೆತುಕೊಂಡಿರುವುದನ್ನು ಕಾಣಬಹುದು. ಇವರ ಉಪನಾಮವಾದ ಚೆಟ್ಟಿಯಾರ್ ಪದಕ್ಕೆ 'ಶ್ರೇಷ್ಠಿ' ಎಂಬ ಸಂಸ್ಕೃತದ ಪದವೇ

ಮೂಲವಾಗಿರಬಹುದು. ಶ್ರೇಷ್ಠಿ > ಶೆಟ್ಟಿ > ಸೆಟ್ಟಿ > ಚೆಟ್ಟಿಯಾಗಿರಬೇಕು. ತಮಿಳುನಾಡಿನಲ್ಲಿ ನೇಕಾರರೆಲ್ಲರೂ 'ಚೆಟ್ಟಿಯಾರ್' ಎಂಬ ಉಪನಾಮವನ್ನೇ ಬಳಸುತ್ತಾರೆ. 'ಶ' ಕಾರಕ್ಕೆ 'ಚ' ಕಾರವು ಆದೇಶವಾಗಿರುವುದು ಕಂಡುಬರುತ್ತದೆ.

ದೇವತೆಗಳಿಗೆ ವಸ್ತ್ರ ನೇಯ್ದು ಕೊಟ್ಟು ದೇವಾಂಗರೆನಿಸಿದ್ದು ಪುರಾಣ ಕತೆ. ಹಾಗೇ ಪದ್ಮನಾಭನ ನಾಭಿಯಿಂದ ತಂತು ಪಡೆದು ವಸ್ತ್ರ ನೇಯ್ದುದ್ದು ಪುರಾಣ ಕತೆ. ಆದರೆ ಶಲಕ (ಜೇಡ) ದಂತೆ ನೇಯತೊಡಗಿದ್ದು ಕಣ್ಣಿಗೆ ಕಾಣುವ ವಾಸ್ತವ ಸತ್ಯ. ಆದುದರಿಂದ ಶಲಕದಿಂದಲೇ 'ಶಾಲಿ' ಹುಟ್ಟಿಕೊಂಡಿದೆ. 'ಶಾಲಿ' ಪಟ್ಟೆ ನೇಯ್ದರೆ 'ಪಟ್ಟುಶಾಲಿ', ಅವನು ಕಂಬಳಿ ನೇಯ್ದರೆ 'ಕುರ್ಣಿಶಾಲಿ' ಬಹುಶಃ ಹಿಂದಿನ ಕಾಲದಲ್ಲಿ ತಾವರೆಯ ದಂಟಿನ ನಾರಿನಿಂದಲೂ ನೂಲು ತಯಾರಿಸಿ ನೇಯುತ್ತಿದ್ದಿರಬೇಕು. ಆದುದರಿಂದಲೇ 'ಪದ್ಮಶಾಲಿ' ಎನ್ನುವ ಹೆಸರು ಬಂದಿರಬಹುದು.

ಒಟ್ಟಿನಲ್ಲಿ 'ಶಾಲಿ' ಎಂಬ ಹೆಸರೇ ನೇಕಾರರಿಗೆ ಸಮರ್ಪಕವಾಗಿ ಅನ್ವಯಿಸುವ ಹೆಸರು ಎನ್ನಬಹುದು. ಇವರು ಶಲ್ಯದಿಂದ ಯುದ್ಧ ಮಾಡಿದರೆ ಶಲ್ಯರಾಗುತ್ತಾರೆ. 'ಶಲಕ'ದಂತೆ ನೇಯ್ದರೆ 'ಶಾಲಿ'ಗಳಾಗುತ್ತಾರೆ ಅಷ್ಟೇ. ಜೇಡಕ್ಕೆ ಅಥವಾ ಶಲಿಕಕ್ಕೆ ಇವರ ಕಾರಣದಿಂದ ಆ ಹೆಸರು ಬಂದಿದೆಯೋ ಅಥವಾ ಶಲಕ ಅಥವಾ ಜೇಡದಿಂದ ಇವರಿಗೆ ಆ ಹೆಸರು ಬಂದಿದೆಯೋ ಎಂಬುದು 'ಬೀಜ ವೃಕ್ಷ ನ್ಯಾಯ'ದಂತೆ ಬಗೆಹರಿಸಲಾರದ ಸಮಸ್ಯೆ. ಏಕೆಂದರೆ ಭಾರತದಲ್ಲಿ ಬಟ್ಟೆ ನೇಕಾರಿಕೆಯು ಜೇಡನಷ್ಟೇ ಪ್ರಾಚೀನವಾದುದು.

# ಅಧ್ಯಾಯ - ೨

## ಶಾಲಿಯಾ/ದೇವಾಂಗ ಸಮಾಜದ ಚರಿತ್ರೆ

೧) ಪೌರಾಣಿಕ ಹಿನ್ನೆಲೆ

೨) ಐತಿಹಾಸಿಕ ಹಿನ್ನೆಲೆ

೩) ದಕ್ಷಿಣ ಭಾರತದ ವಿವಿಧ ನೇಕಾರರು

೪) ಪದ್ಮಶಾಲಿ ಅಥವಾ ಶೆಟ್ಟಿಗಾರ ಸಮಾಜ

೫) ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ/ದೇವಾಂಗ ಸಮಾಜ

೬) ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯರು ಯಾರು?

# ಅಧ್ಯಾಯ –೨

## ೧. ಪೌರಾಣಿಕ ಹಿನ್ನೆಲೆ

ಭಾರತದಲ್ಲಿ ಆರ್ಯ–ದ್ರಾವಿಡ ಸಂಸ್ಕೃತಿಗಳು ಸೇರಿಕೊಂಡು ಹಿಂದೂ ಸಂಸ್ಕೃತಿಯ ಉಗಮವಾಯಿತು. ವೇದ ಉಪನಿಷತ್ತು, ಶ್ರುತಿ–ಸ್ಮೃತಿ ಮುಂತಾದ ಧರ್ಮಗ್ರಂಥಗಳು ರಚಿತವಾದವು. ಅವುಗಳಲ್ಲಿ ಹಿಂದೂ ಸಂಸ್ಕೃತಿಯ ಆವರಣದೊಳಗೆ ಬರುವ ಎಲ್ಲ ಜಾತಿ–ಜನಾಂಗಗಳ ಹುಟ್ಟು, ಬೆಳವಣಿಗೆ, ಜೀವನಕ್ರಮ ಹಾಗೂ ವೈಶಿಷ್ಟ್ಯಗಳನ್ನು ವಿಮರ್ಶಿಸಿ ಸೂತ್ರೀಕರಿಸಲಾಯಿತು. ಅವುಗಳ ಪ್ರಕಾರ ನೇಕಾರ ವರ್ಗದ ಕುಲಕ್ಕೂ ಮೂಲ ಪುರುಷರು ಸೃಷ್ಟಿಯಾದರೆಂದು ಹೇಳಬಹುದು. ದೇವಾಂಗ ಪುರಾಣ, ಮಾರ್ಕಂಡೇಯ ಪುರಾಣ, ಶಲ್ಯ ಪುರಾಣಗಳು ನೇಕಾರರ ಮೂಲದ ಕುರಿತು ಪೌರಾಣಿಕ ಕಥೆಗಳನ್ನು ಹೇಳುತ್ತವೆ. ದೇವಲಋಷಿ, ಭಾವನಾ ಋಷಿ ಹಾಗೂ ಶಲ್ಯ ಮಹಾ ಋಷಿಗಳು ನೇಕಾರರ ಒಂದೊಂದು ಪಂಗಡದ ಮೂಲಪುರುಷರಾಗಿದ್ದಾರೆ.

ವಂಶಕ್ಕೆ ದೇವತಾ ಹಿನ್ನೆಲೆಯನ್ನೂ, ಋಷಿ ಮೂಲಗಳನ್ನೂ ಒದಗಿಸಿ ಶ್ರೇಷ್ಠತೆಯನ್ನು ಹೇಳಿಕೊಳ್ಳುವ

'ಹಿಂದೂ ಸಂಸ್ಕೃತಿ'ಯು ಪ್ರತಿಯೊಂದು ಜಾತಿಯಲ್ಲಿಯೂ ಇದೆ. ವೈದಿಕ ಸಂಸ್ಕೃತಿಯ ಪ್ರಭಾವದಿಂದ ಸೃಷ್ಟಿಯಾದ ಭಾರತೀಯ ಜಾತಿ ವ್ಯವಸ್ಥೆಯ ಶ್ರೇಣೀಕರಣವೇ ಇಂತಹ ಕಥೆಗಳ ಹುಟ್ಟಿಗೆ ಕಾರಣವಾಗುತ್ತದೆ. ಆ ಹಿನ್ನೆಲೆಯಿಂದಲೇ ವಂಶ ಪುರಾಣವು ಸೃಷ್ಟಿಯಾಗುತ್ತದೆ. ಜಾತಿ ಮೊದಲು ಹುಟ್ಟುತ್ತದೆ; ಜಾತಿ ವ್ಯವಸ್ಥೆಯ ಅನಂತರ ಜಾತಿಗೆ ಪೌರಾಣಿಕ ಹಿನ್ನೆಲೆಯನ್ನು ಒದಗಿಸಿ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಈ ಕಾರಣದಿಂದಲಾಗಿ ನೇಕಾರ ಸಮುದಾಯದ ಮೂಲದ ಕುರಿತಾದ ಪುರಾಣಗಳು ಸೃಷ್ಟಿಯಾಗಿ ಬಹಳ ಕಾಲವೇನೂ ಆಗಿರಲಾರದು. ಜಾತಿಗಳು ಪಂಗಡಗಳಾಗಿ ವಿಭಜನೆಯಾದಾಗ ಒಂದೊಂದು ಪಂಗಡವೂ ತನ್ನದೇ ಆದ ಪುರಾಣಗಳನ್ನು ಸೃಷ್ಟಿಸುತ್ತದೆ. ಹಲವು ಪಂಗಡಗಳಾಗಿ ಒಡೆದುಹೋದ ನೇಕಾರ ಸಮುದಾಯವೂ ತಮ್ಮ ಉತ್ಪತ್ತಿಯ ಬಗೆಗೆ ಒಂದೊಂದು ಪೌರಾಣಿಕ ಕತೆಯನ್ನು ಹೇಳಿಕೊಳ್ಳುತ್ತವೆ. ಭಾರತದಲ್ಲಿ ಅತೀ ವ್ಯಾಪಕವಾಗಿ ಹರಡಿರುವ ಎರಡು ನೇಕಾರ ವರ್ಗಗಳು ದೇವಾಂಗ ಮತ್ತು ಪದ್ಮಶಾಲಿ (ಉಳಿದವುಗಳು ಅವುಗಳಿಂದಲೇ ಸೃಷ್ಟಿಯಾದ ಪಂಗಡಗಳು) ಈ ಎರಡೂ ವರ್ಗದ ಮೂಲವೂ ಒಂದೇ ಎಂದು ಪುರಾಣಗಳೇ ಹೇಳುತ್ತವೆ. ಆದರೆ ಇವರ ಮೂಲದ ಬಗೆಗಿನ ಪುರಾಣಗಳು ಭಿನ್ನವಾಗಿ ದೊರೆಯುತ್ತವೆ. ದೇವಾಂಗರ ಮೂಲದ

ಕುರಿತಾದ ಪುರಾಣವು ದೇವಾಂಗ ಪುರಾಣವಾದರೆ, ಪದ್ಮಶಾಲಿಯರದು ಮಾರ್ಕಾಂಡೇಯ ಪುರಾಣ. ಎರಡೂ ಭಿನ್ನವಾದರೂ ಕೆಲವು ಸಾಮ್ಯತೆಗಳನ್ನೂ ಇವುಗಳಲ್ಲಿ ಕಾಣಲು ಸಾಧ್ಯವಿದೆ.

ದೇವಾಂಗ ಪುರಾಣ: ವಸ್ತ್ರ ಸೃಷ್ಟಿಗೆ ಮೊದಲು ಮಾನವರು ಮಾನ ರಕ್ಷಣೆ ಮಾಡಿಕೊಳ್ಳಲು ಎಲೆ, ತೊಗಟೆಗಳಂತಹ ಸಾಧನಗಳನ್ನು ಬಳಸುತ್ತಿದ್ದರು. ಆದರೆ, ಇವುಗಳು ಶರೀರ ರಕ್ಷಣೆಯನ್ನು ಮಾಡಲು ಅಸಮರ್ಥವೆಂದು ಕಂಡುಕೊಂಡಾಗ ಬೇಸತ್ತ ಜನರು ಇನ್ನೂ ಸುಧಾರಿಸಿದ ಮಾರ್ಗಗಳಿಂದ ದೇಹ ಸಂರಕ್ಷಣಾ ಸಾಧನವನ್ನು ಪಡೆದುಕೊಳ್ಳಲು ಮಾಡಿದ ಪ್ರಯತ್ನದ ಫಲವೇ ದೇವಾಂಗನ ಅವತಾರ.

ಬ್ರಹ್ಮಾದಿ ದೇವತೆಗಳು ಮಾನ ಸಂರಕ್ಷಣ ಸಾಧನವಿಲ್ಲದೆ ನಾಚಿಕೆಯಿಂದ ಕೈಲಾಸಪತಿಯಾದ ಈಶ್ವರನಲ್ಲಿ ಮೊರೆಯಿಟ್ಟರು. ಆಗ ಈಶ್ವರನು ಧ್ಯಾನಸ್ಥನಾಗಿ ತನ್ನ ಸಹಸ್ರಾರ ಕಮಲದಲ್ಲಿ ಪ್ರತಿಷ್ಠಿತನಾದ ದೇವಲ ಪರಬ್ರಹ್ಮನನ್ನು ಸೃಷ್ಟಿಸಲು ದೇವಲ ಪರಬ್ರಹ್ಮನು ತನ್ನನ್ನು ಸೃಷ್ಟಿಸಿದ ಕಾರಣವೇನೆಂದು ಕೇಳಲು, ಈಶ್ವರನು ದೇವತೆಗಳ ಸಂಕಷ್ಟಗಳನ್ನು ಆತನಿಗರುಹಲು, ದೇವಲನು ಯಜ್ಞಸೂತ್ರ, ಯೋಗದಂಡ ಕಮಂಡಲ, ಗಂಧ, ರುದ್ರಾಕ್ಷಿಮಾಲೆಗಳನ್ನು ಧರಿಸಿ ಪರಮೇಶ್ವರನ ಫಾಲನೇತ್ರದಿಂದ ಹೊರಬಂದನು.

ಈಶ್ವರನು ಆತನಲ್ಲಿ 'ಲೋಕೋಪಯೋಗಕ್ಕಾಗಿ ನಿನ್ನನ್ನು ನಿರ್ಮಿಸಿರುವೆ. ಆರು ಜನ್ಮ ತಾಳಿ ಕೀರ್ತಿ ಗಳಿಸಿ ಏಳನೆಯ ಜನ್ಮದಲ್ಲಿ ನನ್ನಲ್ಲಿ ಮೋಕ್ಷ ಹೊಂದುವೆ. ನನ್ನಿಂದ ವೇದಗಳು ಹುಟ್ಟಿದಾಗಲೇ ಒಡಹುಟ್ಟಿದ ತಂತುಗಳು ವಿಷ್ಣುವಿನ ಹೊಕ್ಕುಳಲ್ಲಿವೆ. ನೀನು ವಿಷ್ಣುವಿನಿಂದ ಅವನ್ನು ಪಡೆದು ಕುಶಲತೆಯಿಂದ ನೇಯ್ದು ಸಕಲರಿಗೂ ನೀಡಿ ಕಾಪಾಡು. ವಸ್ತ್ರಗಳನ್ನು ದೇವತೆಗಳಿಗೆ ಕೊಟ್ಟು ಅವರ ಅಂಗಗಳನ್ನು ಅಲಂಕರಿಸಿ ದೇವಾಂಗನೆಂದು ಹೆಸರು ಪಡೆ. ಭರತ ಖಂಡದ ಸಗರ ದೇಶದ ರಾಜಧಾನಿಯಾದ ಆಮೋದ ಪಟ್ಟಣದಲ್ಲಿ ರಾಜನಾಗಿ ಯಶಸ್ವಿಯಾಗು. ನಿನ್ನ ವಂಶಜರು ದಾನಿಗಳು, ಸತ್ಯಸಂಪನ್ನರು, ಪರೋಪಕಾರಿಗಳು, ಸದಾಚಾರಿ ದೇವ ಬ್ರಾಹ್ಮಣ ವಿಶ್ವಾಸಿಗಳಾಗುವರು' ಎಂದನು. ಆನಂತರ ದೇವಲನು ಪಾರ್ವತಿಯನ್ನು ಪ್ರಾರ್ಥಿಸಿದಾಗ, ಸಮಯ ಬಿದ್ದಾಗ ಸ್ಮರಿಸಿದ ಕೂಡಲೇ ಸಹಾಯವನ್ನು ಮಾಡುವೆನೆಂದು ಆಕೆ ವಚನವಿತ್ತಳು.

ದೇವಲನು ನೇರವಾಗಿ ಕ್ಷೀರಸಾಗರಕ್ಕೆ ಬಂದು ವಿಷ್ಣುವನ್ನು ಸ್ತುತಿಸಿ ಮಾಡಿದ ತಪಸ್ಸಿಗೆ ಮೆಚ್ಚಿ ನಾರಾಯಣನು ಪ್ರತ್ಯಕ್ಷನಾಗಲು, ವಸ್ತ್ರಗಳನ್ನು ನಿರ್ಮಿಸಲು ವಿಷ್ಣುವಿನ ನಾಭಿ ಕಮಲದ ತಂತುಗಳು

ಬೇಕೆಂದನು. ವಿಷ್ಣುವು ಅದನ್ನು ಕೊಟ್ಟು ' ನಿನ್ನ ಕೆಲಸದಲ್ಲಿ ಮಾಯಾವಿ ರಾಕ್ಷಸರು ವಂಚಿಸುವರು. ಜಾಗರೂಕನಾಗಿದ್ದು ಅವರನ್ನು ಜಯಿಸು' ಎಂದು ತನ್ನಲ್ಲಿದ್ದ ಒಂದು ಚಕ್ರವನ್ನು ಕೊಟ್ಟನು.

ದೇವಲನು ಜಂಬೂ ದ್ವೀಪಕ್ಕೆ ಬಂದು ಆಶ್ರಮವೊಂದನ್ನು ಹೊಕ್ಕನು. ಅಲ್ಲಿ ದೈತ್ಯನೊಬ್ಬನು ಕಪಟ ಋಷಿಯ ವೇಷದಿಂದ ದೇವಲನು ತಂದ ವಿಷ್ಣುವಿನ ನಾಭಿ ಕಮಲದ ತಂತುಗಳನ್ನು ಅಪಹರಿಸಲು ಕಾದಿದ್ದನು. ನಡು ರಾತ್ರಿಯಲ್ಲಿ ಕಪಟ ಮುನಿ ಹಾಗೂ ಶಿಷ್ಯರು ದೇವಲನನ್ನು ಕೊಲ್ಲಲು ಪ್ರಯತ್ನಿಸಿದಾಗ ದೇವಲನು ವಿಷ್ಣು ಕೊಟ್ಟ ಚಕ್ರದಿಂದ ಅವರನ್ನು ಸದೆ ಬಡಿದನು. ಆದರೆ ಆ ದೈತ್ಯರಲ್ಲಿ ಐದು ಮಂದಿ ವಿಷ್ಣುವಿನಿಂದ ಪಡೆದ ವರದ ಕಾರಣದಿಂದ ಅಜೇಯರಾದವರು. ಆಗ ದೇವಲನು ಪಾರ್ವತಿಯನ್ನು ಸ್ತುತಿಸಲು ಆಕೆ ಚೌಡೇಶ್ವರಿಯ ರೂಪವನ್ನು ಧರಿಸಿ ರಾಕ್ಷಸರನ್ನು ಕೊಂದಳು. ದೇವಿಯು ತನ್ನ ಕೇಶರಾಶಿಯಿಂದ ದೈತ್ಯರನ್ನು ಅಪ್ಪಳಿಸಿದುದರಿಂದ ಆಕೆಗೆ 'ಚೌಡೇಶ್ವರಿ' ಎಂದು ಕರೆಯಲ್ಪಟ್ಟಳು.

ಆಮೋದ ಪುರ ಪಟ್ಟಣದ ಅರಸನಾದ ದೇವಲನು ಬಟ್ಟೆಗಳನ್ನು ನೇಯಲು ಸಂಕಲ್ಪಿಸಿ ಮಯನಿಂದ ಅದಕ್ಕೆ ಬೇಕಾದ ಸಾಮಾಗ್ರಿಗಳನ್ನು ಪಡೆದುಕೊಂಡನು. ಶುಭ ಮುಹೂರ್ತದಲ್ಲಿ ವಸ್ತ್ರಗಳನ್ನು ನೇಯಲಾರಂಭಿಸಿದನು. ಚಿತ್ರವಿಚಿತ್ರವಾದ, ಬಣ್ಣ ಬಣ್ಣದ ವಸ್ತ್ರಗಳನ್ನು ದೇವಾಂಗನು ನೇಯ್ದು ಭೂದೇವಿಗೆ ರಕ್ತಾಂಬರ, ಬ್ರಹ್ಮನಿಗೆ ಕೆಂಪು ದುಕೂಲ, ಸರಸ್ವತಿಗೆ ಧವಳಾಂಬರ, ಸಾವಿತ್ರಿಗೆ ಹಳದಿ ವಸ್ತ್ರ, ಗಾಯತ್ರಿಗೆ ಕೆಂಪು ವಸ್ತ್ರಗಳನ್ನು ನೀಡಿದನು. ವಿಷ್ಣುವಿನ ಹೊಕ್ಕುಳಿನಿಂದ ಹುಟ್ಟಿದ ಮಾನಿ, ಅಭಿಮಾನಿ ಎಂಬ ಸ್ತ್ರೀಯರು ಭೂಲೋಕದಲ್ಲಿ ಹತ್ತಿಯ ಗಿಡಗಳಾಗಿ ಹುಟ್ಟಿ ಆತನಿಗೆ ಹತ್ತಿಯನ್ನೊದಗಿಸಿದರು. ಅನಂತರ ದೇವಲ ಸಕಲರಿಗೂ ವಸ್ತ್ರಗಳನ್ನು ನೀಡಿದನು. ಪಾತಾಳಕ್ಕೂ ಹೋಗಿ ಆದಿಶೇಷನಿಗೂ ವಸ್ತ್ರಗಳನ್ನಿತ್ತು ಆತನ ಮಗಳು ಚಂದ್ರರೇಖೆಯನ್ನು ಸ್ವೀಕರಿಸಿದನು. ಭೈರವನಿಗೆ ವಸ್ತ್ರವನ್ನಿತ್ತಾಗ ಆತನು ದೇವಾಂಗನು ತನಗೆ ಕೊನೆಯ ವಸ್ತ್ರವನ್ನು ನೀಡಿದ ಎಂದು ಕೋಪದಿಂದ ಅದನ್ನು ಚೂರು ಚೂರಾಗಿ ಹರಿದು ಹಾಕಿದನು.

ಶಿವನನ್ನು ಕಾಣಲು ಕೈಲಾಸಕ್ಕೆ ಹೊಕ್ಕು ಮಹಾದೇವನನ್ನು ಸ್ತುತಿಸಿ, ಆತನಿಗೆ ವಸ್ತ್ರವನ್ನು ನೀಡಿ ಬಟ್ಟೆನೇಯ್ದು ಉಳಿದ ದಾರಗಳನ್ನು ಏನುಮಾಡಬೇಕೆಂದು ಕೇಳಲು ವೇದಮಾತೆಯಾದ ಗಾಯತ್ರಿಯನ್ನು ಧ್ಯಾನಿಸಿ ಉಪವೀತವನ್ನೂ ಮಂಗಳಸೂತ್ರವನ್ನೂ ತಯಾರಿಸಲು ಹೇಳಿದನು. ಹಾಗೇ ಅವರಿಂದ ಯಜ್ಞೋಪವೀತವನ್ನೂ ಮಂಗಳಸೂತ್ರವನ್ನೂ ತಯಾರಿಸಿದನು. ಸಂತುಷ್ಟನಾದ

ಮಹಾದೇವನು ದೇವಾಂಗನಿಗೆ ಪರಶು ಆಯುಧವನ್ನೂ, ಶತ್ರುನಾಶಕ್ಕಾಗಿ ನಂದಿಧ್ವಜವನ್ನೂ ದಯಪಾಲಿಸಿದನು. ಶಿವನ ಅಪ್ಪಣೆಯಂತೆ ಸೂರ್ಯ ತನ್ನ ತಂಗಿ ದೇವದತ್ತೆಯನ್ನು ಆತನಿಗೆ ಕೊಟ್ಟು ವಿವಾಹವನ್ನು ನಡೆಸಿದನು.

ದೇವದತ್ತೆ ಮತ್ತು ಚಂದ್ರರೇಖೆಯೊಡನೆ ದೇವಾಂಗ ರಾಜರ್ಷಿಯಂತೆ ಬಾಳಿದನು. ದೇವದತ್ತೆಯಲ್ಲಿ ಮೂರು ಮಕ್ಕಳೂ, ಚಂದ್ರರೇಖೆಯಲ್ಲಿ ಓರ್ವ ಮಗನೂ ಆತನಿಗೆ ಹುಟ್ಟಿದರು. ದೇವತೆಗಳಿಗೆ ವಸ್ತ್ರವಿತ್ತು ತಮಗೆ ಮಾತ್ರ ದೇವಾಂಗ ವಸ್ತ್ರವನ್ನು ನೀಡಿಲ್ಲವೆಂದು ಕುಪಿತರಾದ ರಾಕ್ಷಸರು ಆತನಿಗೆದುರಾಗಿ ಹೋರಾಡಿದರು. ಅವರನ್ನೆಲ್ಲಾ ಆತ ಸದೆಬಡಿಯಲು ಆತನ ನಂದಿಧ್ವಜವನ್ನು ವಿದ್ಯುತ್ಕೇಶ ಎಂಬ ದೈತ್ಯನು ಅಪಹರಿಸಿ, ತನ್ನ ಪಟ್ಟಣಕ್ಕೆ ದೇವಾಂಗನು ಬರುವಂತೆ ಮಾಡಿ, ತನ್ನ ಮಗಳು ಪದ್ಮಿನಿಯನ್ನು ವಿವಾಹಮಾಡಿಕೊಟ್ಟನು. ರಾಕ್ಷಸರಿಗೆ ನೇಯ್ಗೆ ಕಲಿಸಿ ದೇವಾಂಗನು ನಂದಿಧ್ವಜದೊಂದಿಗೆ ಹಿಂತಿರುಗಿದನು. ಮುಂದೆ ಅವನು ಶಿವನ ದರ್ಶನ ಪಡೆದಾಗ ಶಿವನು ನಂದಿಧ್ವಜವನ್ನು ಅಸುರರ ಪಾಲುಮಾಡಿ ದೇವತೆಗಳನ್ನು ಬಾಧೆ ಪಡಿಸಿದುದರಿಂದ ಏಳು ಅವತಾರಗಳನ್ನು ಭೂಮಿಯಲ್ಲಿ ಪಡೆದುಕೊಳ್ಳಬೇಕಾಗುವುದೆಂದು ಶಾಪವಿತ್ತನು. ದೇವಾಂಗನ ದೇಹವು ಲಿಂಗವಾಗಿ 'ರಾಮಲಿಂಗೇಶ್ವರ'ವೆಂದು ಹೆಸರಾಯಿತು. ಅಂದಿನಿಂದ ದೇವಾಂಗರು ರಾಮಲಿಂಗೇಶ್ವರನನ್ನು ಆರಾಧಿಸತೊಡಗಿದರು. ಮುಂದೆ ದೇವಾಂಗನು ವಿದ್ಯಾಧರ, ಪುಷ್ಪದಂತ, ಬೇತಾಳ, ವರರುಚಿ, ಚಿತ್ರಯೋಗಿ, ದೇವಶಾಲಿ, ದೇವದಾಸ ಎಂಬ ಏಳು ಅವತಾರಗಳನ್ನು ತಾಳಿದನು.

ಆತನ ಕೊನೆಯ ಅವತಾರವಾದ ದೇವದಾಸಾವತಾರವೇ ದೇವಾಂಗ ದಾಸಿಮಯ್ಯ ಎಂದು ದೇವಾಂಗರು ಹೇಳಿಕೊಳ್ಳುತ್ತಾರೆ. ಆದ್ಯವಚನಕಾರನಾದ ದೇವರ ದಾಸಿಮಯ್ಯ ನೇಕಾರ ಎನ್ನುವುದಕ್ಕೆ ಅವನ ವಚನಗಳೇ ಸಾಕ್ಷಿಯಾಗಿವೆ.

ದೇವಾಂಗ ಪುರಾಣಕ್ಕಿಂತ ಸ್ವಲ್ಪ ಭಿನ್ನವಾಗಿ ಪದ್ಮಶಾಲಿಯರ ಮಾರ್ಕಾಂಡೇಯ ಪುರಾಣವಿದೆ. ಅದರಲ್ಲಿ ಪದ್ಮಶಾಲಿಯರ ವಂಶಚರಿತ್ರೆಯು ಹೀಗಿದೆ:-

<u>ಮಾರ್ಕಾಂಡೇಯ ಪುರಾಣ:</u> ಬ್ರಹ್ಮ ಮಾನಸ ಪುತ್ರ ಭೃಗು ಆತನ ಪತ್ನಿ ಖ್ಯಾತಿ. ಅವರ ಮಕ್ಕಳು ಧಾತ-ವಿಧಾತ ಮತ್ತು ಶ್ರೀದೇವಿ. ಶ್ರೀದೇವಿಯನ್ನು ಶ್ರೀಮನ್ನಾರಾಯಣನು ವರಿಸಿದನು. (ಆದುದರಿಂದ ತಿರುಪತಿಯ ವೆಂಕಟರಮಣನ ಪತ್ನಿ ಲಕ್ಷ್ಮಿಯು ತವರುಮನೆಯವರು ನಾವು ಎಂದು

ಪದ್ಮಶಾಲಿಯರು ಹೇಳಿಕೊಳ್ಳುತ್ತಾರೆ). ವಿಧಾತನ ಮಡದಿ ನಿಯತಿ. ಅವರ ಮಗ ಮೃಕಂಡು. ಮೃಕಂಡುವಿನ ಪತ್ನಿ ಮರುದ್ವತಿ. ಮೃಕಂಡುವಿಗೂ ಮರುದ್ವತಿಗೂ ಮಕ್ಕಳಿಲ್ಲದ ಕಾರಣ ಪರಮೇಶ್ವರನನ್ನು ಕುರಿತು ತಪಸ್ಸುಮಾಡಿ ಅಲ್ಪಾಯುಷಿಯಾದ ಮಾರ್ಕಂಡೇಯನನ್ನು ಮಗುವಾಗಿ ಪಡೆಯುತ್ತಾರೆ. ಆದರೆ ತನ್ನ ಭಕ್ತಿಯಿಂದ ಯಮನನ್ನೇ ಗೆದ್ದು ಪೂರ್ಣಾಯುಷ್ಯವನ್ನು ಪಡೆದ ಮಾರ್ಕಂಡೇಯನು ನಡೆಸಿದ ಯಜ್ಞ (ಪುತ್ರಕಾಮೇಷ್ಠಿ) ದ ಯಜ್ಞಕುಂಡದಿಂದ ಭಾವನಾಋಷಿ ಹುಟ್ಟಿದನು. (ಇವನೊಂದಿಗೆ ಪಂಚಪುಟಿ ಎಂಬವನೂ ಹುಟ್ಟಿದನು) ದೇವತೆಗಳ ಕೋರಿಕೆಯಂತೆ ಭಾವನಾಋಷಿ ವಸ್ತ್ರನಿರ್ಮಾಣಕ್ಕೆ ಬೇಕಾದ ತಂತುಗಳನ್ನು ಅವನಿಗೆ ನೀಡಿದನು. ಆದುದರಿಂದ ಆರಂಭದಲ್ಲಿ ಪದ್ಮನಾಭನ ಪದ್ಮದ ತಂತುಗಳಿಂದ ವಸ್ತ್ರನಿರ್ಮಾಣವನ್ನು ಭಾವನಾ ಋಷಿ ಮಾಡಿದ ಕಾರಣದಿಂದ ಆತನ ವಂಶಜರು ಪದ್ಮಶಾಲಿಗಳು ಎಂದು ಕರೆಯಲ್ಪಟ್ಟರು. ಭಾವನಾ ಋಷಿ ತಾನು ನೇಯ್ದ ಬಟ್ಟೆಯನ್ನು ಭೈರವ (ಶಿವ)ನಿಗೂ ಸಮರ್ಪಿಸಿದ. ಅದು ಕೊನೆಯದೆಂದು ಕೋಪಗೊಂಡ ಶಿವನು, ಅದನ್ನು ತಿರಸ್ಕರಿಸಿ ನೇಯ್ದ ವಸ್ತ್ರಗಳು 'ಆರೇ ತಿಂಗಳಲ್ಲಿ ಸವೆದುಹೋಗಲಿ' ಎಂದು ಶಾಪವಿತ್ತನು. ತನಗೆ ಅದು ಬೇಡವೆಂದೂ ಧರಿಸಲು ವ್ಯಾಘ್ರ ಚರ್ಮವೇ ಬೇಕೆಂದು ಕೇಳಲು, ನಾರದನ ಸಲಹೆಯಂತೆ ಭಾವನಾಋಷಿಯು ಸೂರ್ಯ ಕುಮಾರಿ ಭದ್ರಾವತಿಯನ್ನೂ ಆಕೆಯ ಸೋದರಿಯನ್ನೂ ವರಿಸಿ ವ್ಯಾಘ್ರಗಳನ್ನು ಪಡೆದು ವ್ಯಾಘ್ರಾರೂಢನಾಗಿ ಶಿವನ ಬಳಿಗೆ ಬಂದನು. ಶಿವನೆಡೆಗೆ ಬಂದಾಗ ವ್ಯಾಘ್ರನು ತನ್ನ ಚರ್ಮವನ್ನು ತಾನೇ ಸುಲಿದು ಶಿವನಿಗರ್ಪಿಸಿತು. ಮುಂದೆ ಭಾವನಋಷಿಗೆ ಸೂರ್ಯಪುತ್ರಿಯಾದ ಭದ್ರಾವತಿಯಲ್ಲಿ ೧೦೧ ಮಕ್ಕಳಾದರು. ವಿಷ್ಣುವು ತನ್ನ ನಾಭಿಕೋಶದಿಂದ ನೀಡಿದ ಹತ್ತಿಬೀಜಗಳಿಂದ ಉಂಟಾದ ಹತ್ತಿಯಿಂದ ಆತನ ವಂಶಜರು ವಸ್ತ್ರನಿರ್ಮಾಣವನ್ನು ಕೈಗೊಂಡರು. ಭಾವನಾಋಷಿಯು ಸೂರ್ಯಪುತ್ರಿಯಾದ ಭದ್ರಾವತಿಯನ್ನು ವಿವಾಹವಾಗಿ ಹುಟ್ಟಿದ ೧೦೧ಮಕ್ಕಳ ವಂಶಜರೇ ಪದ್ಮಶಾಲಿಯರು. ಪದ್ಮಶಾಲಿಯರ ೧೦೧ ಗೋತ್ರಗಳಿಗೆ ಅವರದೇ ಹೆಸರುಗಳಿವೆ. ಭಾವನಾಋಷಿಯು ಮಾನರಕ್ಷಕ, ವಸ್ತ್ರಬ್ರಹ್ಮ, ಬಹೂತ್ತಮ ಮುಂತಾದ ಬಿರುದುಗಳನ್ನು ಪಡೆದುಕೊಂಡಿದ್ದನು. ಈ ಸಮುದಾಯದ ಪದ್ಮಾಕ್ಷ ಎಂಬವನು ಈ ಜನಾಂಗಕ್ಕೆ ಬ್ರಹ್ಮನಿಂದ ದೊರೆತ ಅಮೂಲ್ಯವಾದ ರತ್ನದ ಗುಟ್ಟನ್ನು ಗಣಪತಿಗೆ ತಿಳಿಸಲು ನಿರಾಕರಿಸಿದ ಕಾರಣದಿಂದ ಗಣಪತಿಯು 'ನಿನ್ನ ಸಮಾಜವು ಅಧಃಪತನವನ್ನು ಹೊಂದಲಿ' ಎಂದು ಶಾಪವಿತ್ತನು. ಮುಂದೆ ಇವರಲ್ಲಿ ಜನಿಸಿದ ಪರಬ್ರಹ್ಮ ಮೂರ್ತಿ ಅಥವಾ ಪದ್ಮಭವಾಚಾರ್ಯನೆಂಬವನು ಗಣಪತಿಯಿಂದ ಈ ಜನಾಂಗಕ್ಕೆ ಬಂದಿದ್ದ ಶಾಪವನ್ನು ಪರಿಹರಿಸಿ

ಜನತೆಯನ್ನು ಎಂಟು ಪಂಗಡಗಳನ್ನಾಗಿಯೂ, ತೊಂಬತ್ತಾರು ಗೋತ್ರಗಳನ್ನಾಗಿಯೂ ಪುನರ್ವಿಂಗಡಿಸಿ ಚತುರ್ಗುರುಗಳ ಕೈ ಕೆಳಗೆ ಚತುರ್ಮಠಗಳನ್ನು ಸ್ಥಾಪಿಸಿದನು.

ಇವೆರಡೂ ಪುರಾಣಗಳಲ್ಲಿ ಕಂಡುಬರುವ ಸಾಮ್ಯತೆಗಳು ಹಾಗೂ ವೈದೃಶ್ಯಗಳು.

೧. ದೇವಾಂಗ ಪುರಾಣದಲ್ಲಿ ಹಾಗೂ ಮಾರ್ಕಂಡೇಯ ಪುರಾಣದಲ್ಲಿ ದೇವಲನಿಗೆ ವಿಷ್ಣು ತನ್ನ ನಾಭಿಕಮಲದ ತಂತು ನೀಡಿದ ನಂತರ ವಸ್ತ್ರನಿರ್ಮಾಣವಾಯಿತು ಎಂದ ಹೇಳಲಾಗಿದೆ.

೨. ದೇವಾಂಗ ಹಾಗೂ ಭಾವನರು ಋಷಿಗಳೆಂದೇ ಎರಡೂ ಪುರಾಣಗಳಲ್ಲಿ ಉಕ್ತವಾಗಿದೆ.

೩. ದೇವಾಂಗ ಪುರಾಣದಲ್ಲಿ ದೇವಾಂಗನು ಸೂರ್ಯನ ತಂಗಿಯಾದ ದೇವದತ್ತೆಯನ್ನು ವಿವಾಹವಾದರೆ ಮಾರ್ಕಾಂಡೇಯ ಪುರಾಣದಲ್ಲಿ ಭಾವನಾಋಷಿ ಸೂರ್ಯಪುತ್ರಿಯನ್ನು ವಿವಾಹವಾದನು.

೪. ದೇವಲ ತಯಾರಿಸಿದ ಬಟ್ಟೆಯನ್ನು ಶಿವನು ಸ್ವೀಕರಿಸಿದ ಎಂದು ದೇವಾಂಗ ಪುರಾಣ ಹೇಳುತ್ತದೆ. ಹಾಗೇ ಭೈರವನಿಗೆ ದೇವಾಂಗನು ವಸ್ತ್ರವನ್ನು ನೀಡುವಾಗ ಕೊನೆಯಲ್ಲಿ ನೀಡಿದ ಎನ್ನುವ ಕಾರಣದಿಂದ ಆತ ಅದನ್ನು ಹರಿದುಹಾಕಿದ ಎಂದಿದೆ. (ದೇವಾಂಗ ಪುರಾಣದಲ್ಲಿ ಭೈರವನು ಈಶ್ವರನಲ್ಲ ಎಂದಿದೆ).

ಮಾರ್ಕಾಂಡೇಯ ಪುರಾಣದಲ್ಲಿ ಭಾವನಾ ಋಷಿ ತಯಾರಿಸಿದ ವಸ್ತ್ರವನ್ನು ಈಶ್ವರನಿಗೆ ಕೊಡಲು

ಈಶ್ವರನು ಸ್ವೀಕರಿಸದೇ ತನಗೆ ಹುಲಿಚರ್ಮ ಬೇಕೆಂದು ಕೇಳಿದ ಎಂದಿದೆ.

ಈ ಎರಡು ಭಿನ್ನ ಕಥನಗಳಿಂದ ತಿಳಿದುಬರುವುದೇನೆಂದರೆ ದೇವಾಂಗ ಪುರಾಣದ ಅನಂತರವೇ ಮಾರ್ಕಂಡೇಯ ಪುರಾಣ ನಿರ್ಮಾಣವಾಗಿರಬೇಕು. ಈಶ್ವರನಿಗೆ ಚರ್ಮಾಂಬರಧಾರಿ ಎಂದು ಹೆಸರಿರುವ ಕಾರಣ ಆತ ವಸ್ತ್ರವನ್ನು ಉಟ್ಟ ಎನ್ನುವ ದೇವಾಂಗ ಪುರಾಣದ ಅವಾಸ್ತವಿಕತೆಯನ್ನು ಹೋಗಲಾಡಿಸಲು ಈ ವ್ಯತ್ಯಾಸವನ್ನು ಪದ್ಮಶಾಲಿಯರು ಮಾಡಿಕೊಂಡಿರಬಹುದು.

ಜನತೆಯನ್ನು ಎಂಟು ಪಂಗಡಗಳನ್ನಾಗಿಯೂ, ತೊಂಬತ್ತಾರು ಗೋತ್ರಗಳನ್ನಾಗಿಯೂ ಪುನರ್ವಿಂಗಡಿಸಿ ಚತುರ್ಗುರುಗಳ ಕೈ ಕೆಳಗೆ ಚತುರ್ಮಠಗಳನ್ನು ಸ್ಥಾಪಿಸಿದನು.

ಇವೆರಡೂ ಪುರಾಣಗಳಲ್ಲಿ ಕಂಡುಬರುವ ಸಾಮ್ಯತೆಗಳು ಹಾಗೂ ವೈದೃಶ್ಯಗಳು.

೧. ದೇವಾಂಗ ಪುರಾಣದಲ್ಲಿ ಹಾಗೂ ಮಾರ್ಕಂಡೇಯ ಪುರಾಣದಲ್ಲಿ ದೇವಲನಿಗೆ ವಿಷ್ಣು ತನ್ನ ನಾಭಿಕಮಲದ ತಂತು ನೀಡಿದ ನಂತರ ವಸ್ತ್ರನಿರ್ಮಾಣವಾಯಿತು ಎಂದ ಹೇಳಲಾಗಿದೆ.

೨. ದೇವಾಂಗ ಹಾಗೂ ಭಾವನರು ಋಷಿಗಳೆಂದೇ ಎರಡೂ ಪುರಾಣಗಳಲ್ಲಿ ಉಕ್ತವಾಗಿದೆ.

೩. ದೇವಾಂಗ ಪುರಾಣದಲ್ಲಿ ದೇವಾಂಗನು ಸೂರ್ಯನ ತಂಗಿಯಾದ ದೇವದತ್ತೆಯನ್ನು ವಿವಾಹವಾದರೆ ಮಾರ್ಕಾಂಡೇಯ ಪುರಾಣದಲ್ಲಿ ಭಾವನಾಋಷಿ ಸೂರ್ಯಪುತ್ರಿಯನ್ನು ವಿವಾಹವಾದನು.

೪. ದೇವಲ ತಯಾರಿಸಿದ ಬಟ್ಟೆಯನ್ನು ಶಿವನು ಸ್ವೀಕರಿಸಿದ ಎಂದು ದೇವಾಂಗ ಪುರಾಣ ಹೇಳುತ್ತದೆ. ಹಾಗೇ ಭೈರವನಿಗೆ ದೇವಾಂಗನು ವಸ್ತ್ರವನ್ನು ನೀಡುವಾಗ ಕೊನೆಯಲ್ಲಿ ನೀಡಿದ ಎನ್ನುವ ಕಾರಣದಿಂದ ಆತ ಅದನ್ನು ಹರಿದುಹಾಕಿದ ಎಂದಿದೆ. (ದೇವಾಂಗ ಪುರಾಣದಲ್ಲಿ ಭೈರವನು ಈಶ್ವರನಲ್ಲ ಎಂದಿದೆ).

ಮಾರ್ಕಾಂಡೇಯ ಪುರಾಣದಲ್ಲಿ ಭಾವನಾ ಋಷಿ ತಯಾರಿಸಿದ ವಸ್ತ್ರವನ್ನು ಈಶ್ವರನಿಗೆ ಕೊಡಲು

ಈಶ್ವರನು ಸ್ವೀಕರಿಸದೇ ತನಗೆ ಹುಲಿಚರ್ಮ ಬೇಕೆಂದು ಕೇಳಿದ ಎಂದಿದೆ.

ಈ ಎರಡು ಭಿನ್ನ ಕಥನಗಳಿಂದ ತಿಳಿದುಬರುವುದೇನೆಂದರೆ ದೇವಾಂಗ ಪುರಾಣದ ಅನಂತರವೇ ಮಾರ್ಕಂಡೇಯ ಪುರಾಣ ನಿರ್ಮಾಣವಾಗಿರಬೇಕು. ಈಶ್ವರನಿಗೆ ಚರ್ಮಾಂಬರಧಾರಿ ಎಂದು ಹೆಸರಿರುವ ಕಾರಣ ಆತ ವಸ್ತ್ರವನ್ನು ಉಟ್ಟ ಎನ್ನುವ ದೇವಾಂಗ ಪುರಾಣದ ಅವಾಸ್ತವಿಕತೆಯನ್ನು ಹೋಗಲಾಡಿಸಲು ಈ ವ್ಯತ್ಯಾಸವನ್ನು ಪದ್ಮಶಾಲಿಯರು ಮಾಡಿಕೊಂಡಿರಬಹುದು.

ಹೀಗೆ ಮೂಲದಲ್ಲಿ ಒಂದೇ ಆಗಿದ್ದ ಈ ಜನಾಂಗ ತಮ್ಮ ನಡುವೆ ಉಂಟಾದ ವಿವಾದದಿಂದ ಪ್ರತ್ಯೇಕಗೊಂಡ ಮೇಲೆ ಪದ್ಮಶಾಲಿಯರು ತಮಗೊಂದು ಪ್ರತ್ಯೇಕ ಉದ್ಭವದ ಕಥೆಯನ್ನು ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಈ ರೀತಿ ಹೆಣೆದಿರುವ ಸಾಧ್ಯತೆಯಿದೆ.

ಕೇರಳದಲ್ಲಿರುವ ಶಾಲಿಯರು ತಮ್ಮ ಉತ್ಪತ್ತಿಯ ಬಗ್ಗೆ ಹೇಳುವಾಗ ಶಲ್ಯಪುರಾಣವನ್ನು ಹೇಳುತ್ತಾರೆ.

<u>ಶಲ್ಯಪುರಾಣ</u>: ಶಲ್ಯಮಹರ್ಷಿಯು ಶಿವನ ಭಕ್ತನಾಗಿದ್ದ. ಯಾವ ಸಮಯದಲ್ಲೂ ಶಿವನನ್ನು ಕಾಣುವ ಸಾಮರ್ಥ್ಯ ಅವನಿಗಿತ್ತು. ಸಂತತಿಯಿಲ್ಲದ ಆತನಿಗೆ ಮುಪ್ಪು ಅವರಿಸಿತು. 'ಅಪುತ್ರಸ್ಯ ಗತಿರ್ನಾಸ್ತಿ' ಎನ್ನುವ ಕಾರಣದಿಂದ ತನಗೆ ಮೋಕ್ಷ ದೊರಕಿಸಿಕೊಡುವ ಮಗನಿಗಾಗಿ ಅವನು ಈಶ್ವರನನ್ನು ಕುರಿತು ಧ್ಯಾನಿಸಿದ . ಆಗ ಅವನ ಮುಂದೆ ಪ್ರತ್ಯಕ್ಷನಾದ ಶಿವನ ಬಲದ ಕೈಯಲ್ಲಿ ಪುರುಷನೂ, ಎಡದ ಕೈಯಲ್ಲಿ ಸ್ತ್ರೀ ಇದ್ದರು. ಅವರನ್ನಿಬ್ಬರನ್ನೂ ಈಶ್ವರನು ಶಲ್ಯಮಹರ್ಷಿಗೆ ನೀಡಿದನು. ಈಶ್ವರನ ಬಲಭಾಗದ ಪುರುಷನ ವಂಶದವರು ಬಲಂಗರಾದರು. ಎಡಭಾಗದ ಸ್ತ್ರೀಯ ವಂಶಜರು ಎಡಂಗರಾದರು. ಬಲಂಗರ ಆರಾಧ್ಯದೈವ ಈಶ್ವರನ ಬಲಭಾಗದಲ್ಲಿ ತೊಡೆಯ ಮೇಲಿರುವ ಗಣಪತಿಯಾದರೆ, ಈಶ್ವರನ ಎಡಭಾಗದ ದೇವಿಯು ಎಡಗಂರ ಆರಾಧ್ಯದೈವವಾದಳು. ಬಲಂಗರಿಗೆ ಗುರುವಾದ ಈಶ್ವರನು ಮಾರ್ಕಂಡೇಯನನ್ನು ನಿಯಮಿಸಿದರು. ಹಾಗೆ ಅವರು ಮಾರ್ಕಂಡೇಯನ ಶಿಷ್ಯರೆನಿಸಿಕೊಂಡರು. ಎಡಂಗರು ಶಕ್ತಿ ಆರಾಧಕರಾದರು. ಆದಕಾರಣ ದೈವಗಳೂ ಪೂರಕ್ಕಳಿಯೂ ಇವರಿಗೆ ಸಾಮಾನ್ಯ. ಈ ಎರಡು ವಿಭಾಗಗಳಿಗೂ ಕ್ಷೇತ್ರಕರ್ಮಗಳನ್ನು ಮಾಡಲಿರುವ ಅಧಿಕಾರವನ್ನು ಮಾರ್ಕಾಂಡೇಯ ಮುನಿ ನೀಡಿದನು ಎಂದು ಹೇಳುತ್ತಾರೆ.

ತಮಿಳುನಾಡಿನ ನಲ್ಲಾಡೈ ಎನ್ನುವ ಪ್ರದೇಶದ ದೇವಾಲಯದ ಸ್ಥಳಪುರಾಣದಲ್ಲೂ ಶಾಲಿಯರು ಶಲ್ಯಮಹರ್ಷಿಯ ಸಂತತಿಯವರು ಎಂದು ಹೇಳುತ್ತಾರೆ. ಅದರ ಪ್ರಕಾರ ವಿಶಾಖಿ ಮಹರ್ಷಿಯ ಶಿಷ್ಯನಾದ ಶಲ್ಯನು ಓರ್ವ ಕೀಳುಜಾತಿಯವನು. ನಲ್ಲಾಡೈಯಲ್ಲಿ ವಿಶಾಖಿಮಹರ್ಷಿಯು ತಪವನ್ನಾಚರಿಸುವಂತಹ ಸಂದರ್ಭದಲ್ಲಿ ಶಲ್ಯನು ಅವನ ಸೇವಕನಾಗಿದ್ದನು. ವಿಶಾಖಿನ ಅನುಗ್ರಹದಿಂದ ಶಲ್ಯ ಓರ್ವ ಋಷಿಯಾದ. ಶಲ್ಯನಿಗೆ ಇಬ್ಬರು ಪತ್ನಿಯರು.

ಶಾಲಿಯರು ಮೊದಲ ಪತ್ನಿಯ ಮಕ್ಕಳು. ಎರಡನೆಯ ಪತ್ನಿಯ ಮಕ್ಕಳು ಮೊಟ್ಟೈಸಾಲಿಗಳು (ಪದ್ಮಶಾಲಿಯ ( ೧೯೯೨))

ಶಲ್ಯಪುರಾಣದ ಕತೆಯನ್ನು ಅವಲೋಕಿಸಿದಾಗ ಅದರಲ್ಲಿ ಉಕ್ತವಾಗುವ ಮಾರ್ಕಾಂಡೇಯ ಹಾಗೂ ಗಣಪತಿ ಆರಾಧಕರಾದ ಬಲಂಗ ಶಾಲಿಯರು ಪದ್ಮಶಾಲಿಯರೇ ಆಗಿರಬೇಕು ಅನ್ನಿಸುತ್ತದೆ. ಹಾಗೇ ದೇವೀ ಆರಾಧಕರು ಎಂದು ಹೇಳಲಾದ ಎಡಂಗರು ದೇವಾಂಗರೇ ಆಗಿರಬೇಕು ಎಂದನ್ನಿಸುತ್ತದೆ.

ಶಲ್ಯಪುರಾಣದ ಇನ್ನೊಂದು ಕತೆಯು ವಿಲ್ಲಿಭಾಕ್ತಂ ಗದ್ಯದಲ್ಲಿ ಹೀಗೆ ದೊರೆಯುತ್ತದೆ. ಪುರುಮಹರ್ಷಿಗೆ ಮಕ್ಕಳಿಲ್ಲದ ಕಾರಣ ಶಾಲಿಯಾಗ ನಡೆಸಿ ಹುಟ್ಟಿದವನು ಶಲ್ಯಮಹರ್ಷಿ. ಅವನ ವಂಶದವರು ಶಾಲಿಯರು ಎಂದೆನ್ನಿಸಿದರು. ಅವನು ಬರೆದ ಗ್ರಂಥ ಅಶ್ವಶಾಸ್ತ್ರ. ಪಂಚಪಾಂಡವರು ವನವಾಸ ಕಾಲದಲ್ಲಿ ಶಲ್ಯನ ಆಶ್ರಮದಲ್ಲಿ ಇದ್ದರು. ಈ ವಿಚಾರವು ಕುಮಾರ ವ್ಯಾಸನ ಭಾರತದಲ್ಲಿ ಹೀಗಿದೆ.

ಕೇಳು ಜನಮೇಜಯ ಮಹೀಪತಿ

ಶಾಲಿಹೋತ್ರಾಶ್ರಮನವನಿಬರು

ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ

ನುಡಿದ ಸಮಯಕೆ ತನ್ನ ರಮಣಿಯ

ನೊಡಬಡಿಸಿ ಹೈಡಿಂಬ ರಾಜ್ಯದ

ವೊಡೆತನವ ನೆರೆಮಾಡಿ ನಿಲಿಸಿದನಾ ಘಟೋತ್ಕಚನ

ನಡೆದು ಬಂದರು 'ಶಾಲಿಹೋತ್ರ' ನ

ನಡುವೆ ಕಂಡುಪಚರಿಸಿ ಕೊಂಡರು

ಪಡುವಲಭಿಮುಖರಾದರನಿಬರು ವಿಪ್ರವೇಷದಲಿ.

(ಕರ್ನಾಟ ಭಾರತ ಕಥಾಮಂಜರಿ: ಆದಿಪರ್ವ: ೧೧ನೆಯ ಸಂಧಿ ಪುಟ.೩೩)

ಶಲ್ಯ ಎಂದರೆ ಭರ್ಚಿ ಎಂದರ್ಥವಿದೆ. ಶಲ್ಯವನ್ನು ಧರಿಸಿದವನು ಶಲ್ಯ. ಆತನ ಗ್ರಂಥ ಅಶ್ವಶಾಸ್ತ್ರ; ಅವನ ಸಂತತಿ ಶಾಲಿಯರು ಎಂಬ ವಿವರಣೆಗಳು ಕೇರಳದ ಶಾಲಿಯರು ಯುದ್ಧ ಸಂದರ್ಭಗಳಲ್ಲಿ ಸೈನಿಕರಾಗಿದ್ದರು ಎಂಬುದನ್ನು ಅವರಿಗೆ ಚತುರಂಗ ದಳಗಳಲ್ಲಿ ಅಶ್ವದಳವು ಪ್ರಿಯವಾಗಿತ್ತೆಂದೂ, ಯುದ್ಧಕಾಲದಲ್ಲಿ ಅವರು ಅದನ್ನೇ ಬಳಸಿಕೊಳ್ಳುತ್ತಿದ್ದ ಕಾರಣ ಅವರಿಗೆ ಶಾಲಿಯಾ ಎಂಬ ಹೆಸರು ಬಂದಿರಬಹುದೆಂದೂ ಊಹಿಸಲು ಸಹಕಾರಿಯಾಗಿದೆ. ಯುದ್ಧದೇವತೆಯಾದ ಕೀಳೂರಿನ ಶಾಸ್ತಾವು ಇವರ ಆರಾಧ್ಯದೈವವಾಗಿರುವುದೂ, ಅಲ್ಲಿ ಆಯುಧಗಳನ್ನು ಅರ್ಪಿಸುವ ಪರಿಪಾಠವಿರುವುದೂ, ನಾಯರ್ ಪಡೆಯಾಳಿಗಳೊಂದಿಗೆ ಇವರು ಉತ್ತರಕ್ಕೆ ಬಂದಿದ್ದಾರೆ ಎನ್ನುವ ಉಲ್ಲೇಖವೂ ಇವರು ನೇಯ್ಗೆವೃತ್ತಿಯನ್ನಲ್ಲದೆ ಸೈನ್ಯದಲ್ಲಿ ಸೈನಿಕರಾಗಿಯೂ ಕೆಲಸಮಾಡುತ್ತಿದ್ದರು ಎನ್ನುವುದನ್ನು ದೃಢಪಡಿಸುತ್ತದೆ.

ತಮಿಳುನಾಡಿನ ನೇಕಾರರ ಇನ್ನೊಂದು ಪಂಗಡವಾದ ಕೈಕೋಳನರು ತಮ್ಮ ಮೂಲದ ಬಗ್ಗೆ ಹೀಗೆನ್ನುತ್ತಾರೆ .

ಒಮ್ಮೆ ಶಿವನು ಭೂಮಿಯನ್ನು ಆಕ್ರಮಿಸುತ್ತಿರುವ ರಾಕ್ಷಸರ ಮೇಲೆ ಕೋಪಗೊಂಡು ತನ್ನ ಕಣ್ಣುಗಳಿಂದ ಐದು ಕೋಪದ ಕಿಡಿಗಳನ್ನು ಸುರಿಸಿದನು. ಭೀತಳಾದ ಪಾರ್ವತಿಯು ತನ್ನ ಕಾಲ್ಗೆಜ್ಜೆಯಿಂದ ಒಂಬತ್ತು ಮಣಿಗಳನ್ನು ಉದುರಿಸಿದಳು. ಶಿವನು ಇವುಗಳನ್ನು ಒಂಭತ್ತು ಹೆಂಗಸರನ್ನಾಗಿ ಬದಲಾಯಿಸಿ ಅವರಿಗೆ ಕೈಯಲ್ಲಿ ಈಟಿ ಹಿಡಿದಿರುವ ಮಕ್ಕಳು ಜನಿಸುವಂತೆ ಮಾಡಿದನು. ಇವರ ನಾಯಕನನ್ನಾಗಿ ಸುಬ್ರಹ್ಮಣ್ಯ ಸ್ವಾಮಿಯನ್ನು ನೇಮಿಸಿ ರಾಕ್ಷಸರ ಸಂಹಾರ ಮಾಡಿಸಿದನು. ಈ ಒಂಬತ್ತು ವೀರರಲ್ಲಿ ಓರ್ವನಾದ ವೀರಬಾಹುವಿನ ವಂಶಸ್ಥರು ಚೆಂಗುಂದವರ್ ಅಥವಾ ಕೈಕೋಳನರು ಎಂದು ಹೇಳಲಾಗುತ್ತದೆ.

ಈ ಬಗ್ಗೆ ಎನ್ನೊಂದು ಐತಿಹ್ಯ ಹೀಗೆನ್ನುತ್ತದೆ:

ಪದ್ಮಾಸುರನನ್ನು ನಾಶಪಡಿಸಲು ಶಿವನು ಸುಬ್ರಹ್ಮಣ್ಯನಿಗೆ ಆಜ್ಞಾಪಿಸಲು ಪಾರ್ವತಿಯು ಅವನನ್ನೋರ್ವನನ್ನೇ ಕಳುಹಿಸಬಾರದೆಂದು ಬೇಡಿಕೊಂಡಳು. ಅದಕಾಗಿ ಶಿವನು ತನ್ನು ಕಣ್ಣುಗಳಿಂದ ಐದು ಕೋಪದ ಕಿಡಿಗಳನ್ನು ಹೊರಸೂಸಿದನು. ಪಾರ್ವತಿಯ ಗೆಜ್ಜೆಗಳಿಂದ ಹುಟ್ಟಿದಂತಹ ಹೆಂಗಸರಿಗೆ ಅವನಿಂದ ಮಕ್ಕಳಾಗಬಾರದು ಎಂಬ ಪಾರ್ವತಿಯ ಶಾಪವನ್ನು ಹಿಂತೆಗೆಯುವಂತೆ ಶಿವನು ಸೂಚಿಸಿದನು. ಅದರಂತೆಯೇ ಈ ಒಂಬತ್ತು ಹೆಂಗಸರು ಏಳು

ವೀರರಿಗೆ ಜನ್ಮವಿತ್ತರು. ಕೈಯಲ್ಲಿ ಕೆಂಪು ಈಟಿಗಳೊಂದಿಗೆ ಅವರು ಹುಟ್ಟಿದರು . ಸುಬ್ರಹ್ಮಣ್ಯನು ತನ್ನ ಕೈಯಲ್ಲಿ ಕೆಂಪು ಈಟಿಯನ್ನು ಹಿಡಿದು ಇವರ ನಾಯಕನಾಗಿ ಮುಂದುವರೆದು ಪದ್ಮಾಸುರನನ್ನು ಸೋಲಿಸಿದನು. ಕೈಯಲ್ಲಿ ಈಟಿ ಹಿಡಿದ ಇವರ ವಂಶಜರನ್ನು 'ಕೈಕೋಳನ್' ರು ಎಂದೇ ಗುರುತಿಸಲಾಯಿತು.

ಥರ್ಸ್ಟನ್ ತನ್ನ ಹೇಳಿಕೆಯಲ್ಲಿ ಕೊಂಚ ವ್ಯತ್ಯಸ್ತವಾಗಿ ಕೈಕೋಳನ್ ಎಂಬ ಪದವು ಸಂಸ್ಕೃತದ ವೀರಬಾಹು ಎಂಬ ಪದಕ್ಕೆ ಸಮಾನವಾದುದು. ಅದರಿಂದಲೇ ಕೈಕೋಳನ್ ಎಂಬ ಪದವು ಹುಟ್ಟಿಕೊಂಡಿತು ಎನ್ನುತ್ತಾರೆ.

<u>ಇತರ ಪೌರಾಣಿಕ ಉಲ್ಲೇಖಗಳು:</u> ೧) ರುದ್ರಭಾರತವೆಂಬ ಬ್ರಹ್ಮಾಂಡ ಪುರಾಣದ ಪುಟ ೪೩ ರಲ್ಲಿ ಆದಿರುದ್ರನ ನಾಭಿಯಲ್ಲಿ ದೇವಾಂಗವೆಂಬ ವಸ್ತ್ರಕಾರ ಹುಟ್ಟಿದನು ಎಂದು ಹೇಳಲಾಗಿದೆ.

೨) ಋಗ್ವೇದದಲ್ಲಿ ವಸ್ತ್ರ, ತಂತು ಎಂಬ ಪದಗಳು ಅಲ್ಲಲ್ಲಿ ಕಂಡುಬರುತ್ತವೆ.

೩) ಋಗ್ವೇದದ ಭಾಗ ೧೭ ಪುಟ ೫೯೩ರಲ್ಲಿ 'ಯಜ್ಞೋವಿಶ್ವತಸ್ತಂತುಭಿಸ್ತತ ಏಕಶತಂ' ಎಂದು ಯಜ್ಞವನ್ನು ತಂತುವಿಗೆ ಹೋಲಿಸಲಾಗಿದೆ

೪) ಋಗ್ವೇದದ ೨೭ನೇ ಭಾಗದ ೨೧೨ನೇ ಪುಟದಲ್ಲಿ ಯಜ್ಞವನ್ನು ವರ್ಣಿಸುವಾಗ 'ಹಾಸುಹೊಕ್ಕು' ರೂಪದಿಂದ ತಂತುವಿನೊಂದಿಗೆ ತಂತುವನ್ನು ಸೇರಿಸಿ ಪಟ (ಬಟ್ಟೆ) ವನ್ನು ನಿರ್ಮಿಸುವಂತೆ, ಯಜ್ಞವು ವಿಶ್ವಕ್ಕೆಲ್ಲಾ ಒಂದೇ ಸಂಬಂಧರೂಪವಾದ ಶಕ್ತಿ ಉತ್ಪಾದನೆ ಮಾಡಿದೆ. ಎಂದು ಯಜ್ಞಕ್ಕೂ ಬಟ್ಟೆಗೂ ಸಂಬಂಧವನ್ನು ಕಲ್ಪಿಸಲಾಗಿದೆ. (ಹೇಮಕೂಟ ೧೯೯೮)

೫) ನೇಯ್ಗೆಯವರ ಮಗ್ಗದಲ್ಲಿ ಲಾಳಿಯು ಅತ್ತಿತ್ತ ಓಡುವುದನ್ನು ರಾತ್ರಿ ಕತ್ತಲೆ ಹರಡುವುದಕ್ಕೂ, ಹಗಲು ಬೆಳಕು ವ್ಯಾಪಿಸುವುದಕ್ಕೂ ವೇದಗಳಲ್ಲಿ ಸಾಂಕೇತಿಸಲಾಗಿದೆ. (ಪದ್ಮಶಾಲಿಯಾ: ೧೯೯೭)

೬) ಶಾಲಿಯಾ ಸಮುದಾಯದ ಉತ್ಪತ್ತಿಯ ಬಗ್ಗೆ ಆಂಧ್ರದಲ್ಲಿ 'ಪಾರಿಜಾತಮು' ಎನ್ನುವ ಗ್ರಂಥದಲ್ಲಿ ಕುಂಬಾರ ತರುಣಿಗೆ ಕಂಸಲ ಪುರುಷನಿಂದ ಹುಟ್ಟಿದವನು ಶಾಲಿಯ ಎಂದೂ ಅವನ ವಂಶಜರು ಶಾಲಿಯರೆಂದು ಕರೆಯಲ್ಪಡುತ್ತಾರೆಂದು ಹೇಳಲಾಗಿದೆ. (ಪದ್ಮಶಾಲಿಯಾ:೧೯೯೭)

## ೨. ಐತಿಹಾಸಿಕ ಹಿನ್ನೆಲೆ

ನೇಕಾರರ ಇತಿಹಾಸವನ್ನು ಪರಿಶೀಲಿಸಿದಾಗ, ಕೆಲವು ಶತಮಾನಗಳ ಉದ್ದಕ್ಕೂ ಈ ಜನಾಂಗ ಹಲವು ಕಾರಣಗಳಿಂದ ಗುಂಪು ಗುಂಪಾಗಿ ಒಂದೆಡೆಯಿಂದ ಇನ್ನೊಂದೆಡೆಗೆ, ರಾಜ್ಯದಿಂದ ರಾಜ್ಯಕ್ಕೆ ಅಲೆಯುತ್ತಿದ್ದರು ಎನ್ನುವುದು ಕಂಡು ಬರುತ್ತದೆ. ರಾಜ್ಯಗಳ ಒಡೆತನಕ್ಕಾಗಿ ಆಗಾಗ ಯುದ್ಧಗಳು ಸಂಭವಿಸುತ್ತಿದ್ದ ಕಾಲಘಟ್ಟದಲ್ಲಿ ವಸ್ತ್ರವನ್ನು ಉತ್ಪಾದಿಸುತ್ತಿದ್ದ ನೇಕಾರರ ಕುಟುಂಬಗಳು ಹಲವು ರಾಜರುಗಳ ಕೈಕೆಳಗೆ ಇರಬೇಕಾಗಿ ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ಒಂದು ರಾಜ್ಯದ ಅರಸು ಮತ್ತೊಂದು ರಾಜ್ಯದ ಅರಸನಿಗೆ ನೇಕಾರರನ್ನು ಕೊಡುಗೆಯಾಗಿ ಕಳುಹಿಸಿದ್ದೂ ಇತ್ತು. ಹಾಗೇ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಅರಸರು ಇವರನ್ನು ಬಲವಂತವಾಗಿ ಒಯ್ದದ್ದೂ ಇದೆ.

ರಾಜಾಶ್ರಯದಲ್ಲೇ ಬದುಕಬೇಕಾದ ಅನಿವಾರ್ಯತೆಯಿಂದಾಗಿ ಎಷ್ಟೋ ಸಂದರ್ಭಗಳಲ್ಲಿ ಯುದ್ಧದಲ್ಲಿ 'ಶಲ್ಯ' ಅಥವಾ 'ಶೂಲ'ವನ್ನು ಹಿಡಿದು ಯುದ್ಧ ಮಾಡುವವರು ಇವರೇ ಆದುದರಿಂದ ಇವರಿಗೆ 'ಶಾಲಿಯಾ' ಎನ್ನುವ ಹೆಸರು ಬಂದಿರುವ ಸಾಧ್ಯತೆ ಇದೆ. (ತಮಿಳುನಾಡಿನ ನೇಕಾರ ಸಮುದಾಯಕ್ಕೆ 'ಕೈಕೋಲರ್' ಎನ್ನುತ್ತಾರೆ. ಅಂದರೆ ಕೈಯಲ್ಲಿ ಕೋಲು ಹಿಡಿದು ಯುದ್ಧಮಾಡಿದವರು ಎಂದರ್ಥ).

ನೇಕಾರ ಜನಾಂಗದ ಇತಿಹಾಸ ಬರೆಯ ಹೊರಟಾಗ ಎದುರಾಗುವ ಬಹುದೊಡ್ಡ ಸಮಸ್ಯೆ ಶಾಸನಗಳ ಹಾಗೂ ಲಿಖಿತ ದಾಖಲೆಗಳ ಕೊರತೆ. ಶಾಸನಗಳು ಹೆಚ್ಚಾಗಿ ರಾಜನ ಆಳ್ವಿಕೆಗೆ, ಭೂಮಿಗೆ ಸಂಬಂಧಪಟ್ಟದ್ದಾಗಿರುತ್ತವೆ. ಆದರೆ, ನೇಕಾರಿಕೆಯಂತಹ ಉದ್ಯಮವು ಹಳ್ಳಿಯೊಂದರ ಮೂಲೆಯಲ್ಲಿ ಬಡ ನೇಕಾರನಿಂದ ಯಾವುದೇ ಅಬ್ಬರವಿಲ್ಲದೇ ನಡೆಯುತ್ತದೆ. ಒಂದು ಹೊತ್ತಿನ ಊಟಕ್ಕೆ ತತ್ವಾರವಿದ್ದ ನೇಕಾರ ಯಾವುದೇ ದಾನವನ್ನೂ ಧರ್ಮವನ್ನೂ ಮಾಡಿದ್ದೇ ಇಲ್ಲ ; ಪಡೆದುಕೊಂಡದ್ದೂ ಇಲ್ಲ. ಕೆಲವೆಡೆ ಕೆಲವು ಶಾಸನಗಳಲ್ಲಿ ಆತನ ಮೇಲೆ ಹೊರಿಸಿದ ತೆರಿಗೆಗಳ ಉಲ್ಲೇಖ ಬರುತ್ತದೆ. ಮಗ್ಗದೆರೆ ; ಮಗ್ಗದ ಸುಂಕ ಇತ್ಯಾದಿ. ದಕ್ಷಿಣ ಕನ್ನಡದ ಮೂಡಬಿದಿರೆಯ ಹೊಸ ಬಸ್ತಿಯ ಶಾಸನವೊಂದು ಇಲ್ಲಿನ ಹಲವು ಜಾತಿಗಳ ಬಗ್ಗೆ ಹೇಳುತ್ತವೆ. ಅದರಲ್ಲಿ 'ತಮ್ಮ ಕೇರಿಗಳಲ್ಲಿ ನೂಲನ್ನು ಸ್ವತಃ ತಯಾರಿಸಿ ಬಟ್ಟೆ ನೇಯ್ದು ಕೊಡುವ ಸಾಲಿಗರು' (ಶೈಲಾ ಟಿ. ವರ್ಮ : ೨೦೦೨ ಪುಟ ೧೯೫) ಎಂಬ ಉಲ್ಲೇಖವಿದ್ದು ಅದು ಶಾಲಿಯಾ ಸಮುದಾಯಕ್ಕೇ ಸಂಬಂಧಿಸಿದುದಾಗಿದೆ. ಇಲ್ಲಿ 'ಕೇರಿ' ಎಂಬುದನ್ನು ಶಾಲಿಯರು ವಾಸಿಸುವ 'ತೆರು'ವನ್ನು ದೃಷ್ಟಿಯಲ್ಲಿಟ್ಟು ಕೊಂಡು ಉಲ್ಲೇಖಿಸಲಾಗಿದೆ.

ಪ್ರಾಚೀನ ನಾಗರಿಕತೆಯೊಂದಿಗೆ ವಸ್ತ್ರೋದ್ಯಮಕ್ಕೆ ಬಹಳಷ್ಟು ಸಂಬಂಧವಿದೆ ಎಂಬುದನ್ನು ನೆನಪಿಸಿಕೊಳ್ಳಬೇಕು. ಕ್ರಿಸ್ತಪೂರ್ವ ಸುಮಾರು ಐದು ಸಾವಿರ ವರ್ಷಗಳ ಹಿಂದೆ ವೇದ ಪೂರ್ವ ಕಾಲದಿಂದಲೂ "ಸಂದಿಧ್ವಜರು" "ನೇಯ್‌ಕಾರರು" "ಪಟ್ಟಿಕಾರರು" ಎಂಬ ಹೆಸರಿನಿಂದ ಗುರುತಿಸಲ್ಪಡುತ್ತಿದ್ದುದನ್ನು ಪಾಶ್ಚಾತ್ಯ

ಸಂಶೋಧಕರು ತಾವು ಸಂಶೋಧಿಸಿದ ವಂಶವೃಕ್ಷದಲ್ಲಿ ಉಲ್ಲೇಖಿಸಿದ್ದಾರೆ. ದೇವಾಂಗರನ್ನು ಕನ್ನಡದಲ್ಲಿ ಜಾಡರು ಅಥವಾ ಜೇಡರು, ತಮಿಳಿನಲ್ಲಿ ಮರವರು, ಮಹಾರಾಷ್ಟ್ರದಲ್ಲಿ ದೇವಾಂಗ ಕೋಷ್ಟಿ, ಮಧ್ಯ ಪ್ರದೇಶದಲ್ಲಿ ದೇವಾಂಗ ಕೋಷ್ಟಾ, ವಿದರ್ಭದೇಶದಲ್ಲಿ ಹಲಭಾಕೋಷ್ಟಿ ಮುಂತಾದ ಪರ್ಯಾಯ ಶಬ್ದಗಳಿಂದ ಕರೆಯುತ್ತಿದ್ದರೂ, ಪ್ರತಿಯೊಂದು ಪರ್ಯಾಯ ಶಬ್ದಕ್ಕೆ ತನ್ನದೇ ಆದ ಹಿನ್ನೆಲೆ ಇದೆ. ಅನೇಕ ಪರ್ಯಾಯ ನಾಮಗಳಿದ್ದರೂ "ನೇಕಾರ" ಎನ್ನುವ ಸಾಮಾನ್ಯ ನಾಮವು ಇತಿಹಾಸದಲ್ಲಿ ಗುರುತಿಸಲ್ಪಟ್ಟಿದೆ. 'ಸಾಲೆ', 'ಸಾಲಿಗ', 'ಶಾಲಿಯ' ಪದಗಳನ್ನೂ ನೇಕಾರರನ್ನು ಕುರಿತು ಇತಿಹಾಸವು ದಾಖಲಿಸಿಕೊಳ್ಳಲು ಬಳಸಿದೆ.

"ನೇಪಾಳದ ಅರಸರ ಧ್ವಜ ಲಾಂಛನವು ನಂದಿಯಾದುದರಿಂದ ಅವರ ಪೂರ್ವಿಕರು ದೇವಾಂಗದವರಾಗಿರಬೇಕು ಎಂಬ ಊಹೆಯೂ ಇದೆ. ಕಚ್, ಜಸಲ್‌ಮೇರ, ಚೋಟಾ ನಾಗಪುರ, ಕಕಾಲಿ ಮುಂತಾದ ರಾಜ್ಯಗಳ ರಾಜರೂ ದೇವಾಂಗದವರಾಗಿದ್ದರು ಎಂದು ಊಹಿಸುತ್ತಾರೆ. ಒಂದು ಕಾಲದಲ್ಲಿ ನಾಸಿಕ ಪ್ರದೇಶದ ಪ್ರಾಂತ್ಯಕ್ಕೆ ದೇವಾಂಗ ರಾಷ್ಟ್ರವೆಂದೂ ಅಲ್ಲಿಯ ತ್ರ್ಯಂಬಕೇಶ್ವರನಿಗೆ 'ಹಾಟಕೇಶವರ' ಎಂದೂ ಸಂಬೋಧಿಸುತ್ತಿದ್ದರು. ತ್ರ್ಯಂಬಕೇಶ್ವರ ದೇವಾಲಯದ ಪಕ್ಕದಲ್ಲಿ ವೇದ ಮಾತೆ ಶ್ರೀ ಗಾಯತ್ರೀ ಮಂದಿರವಿರುವುದು ವಿಶೇಷ. ಹಿಂದಿನ ಕಾಲದಲ್ಲಿ ಈ ಪ್ರಾಂತ್ಯದಲ್ಲಿ ದೇವಾಂಗರು ಅಪಾರ ಸಂಖ್ಯೆಯಲ್ಲಿ ವಾಸಿಸುತ್ತಿದ್ದು, ಈಗಲೂ ಅಲ್ಲಿ ದೇವಾಂಗರು ಇದ್ದಾರೆ. ನಾಸಿಕ್, ಯವಲಾ ಹಾಗೂ ಪೈಟಾನ ನಗರಗಳಲ್ಲಿ ಜಗತ್‌ಪ್ರಸಿದ್ಧಿ ಪಡೆದ ನವಿರಾದ ಕಲಾಕುಸಿರಿನ, ಬೆಲೆಯುಳ್ಳ ರೇಷ್ಮೆ ಸೀರೆಯನ್ನು ತಯಾರಿಸುತ್ತಿದ್ದರು. ಇಂದಿಗೂ ಅದನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ನಾಸಿಕ ಬಾನದೇಶ ಪ್ರದೇಶಗಳಲ್ಲಿ ಈಗಲೂ ಕಾನಡ-ಕನ್ನಡರೆಂದು ಕರೆಸಿಕೊಳ್ಳುವ ಹಟ್ಟಿಕಾರರು, ದೇವಾಂಗರು ಇದ್ದಾರೆಂದು ನಾಸಿಕ ಗಜೆಟ್ ಪುಟ ೨೩೧ರಲ್ಲಿ ನಮೂದಿಸಿದ್ದಾರೆ. ದೇಶದಾದ್ಯಂತ ಪ್ರಬಲರಾಗಿ ಮೆರೆದ ಈ ಜನಾಂಗ ಈಜಿಪ್ಟ್, ಗ್ರೀಕ್ ಮುಂತಾದ ದೇಶಗಳಲ್ಲಿಯೂ ಕಂಡು ಬಂದಿರುತ್ತಾರೆ. ವಿದೇಶ ಸಂಶೋಧಕ ಎಚ್.ಫ್ರಾಂಕ್‌ಪೋರ್ಟ್ ಅವರ ಅಭಿಪ್ರಾಯದಂತೆ ಪ್ರಾಚೀನ ಈಜಿಪ್ಟ್‌ನಲ್ಲಿ ವೃಷಭಧ್ವಜವು ಇದ್ದು ಇದು ಪೂರ್ವದೇಶದಿಂದ ಬಂದಿದ್ದಾಗ ಕರ್ಣ ಇನ್‌ಸ್ಟಿಟ್ಯೂಟ್ ಲೇಡನ್ ಹಾಲಂಡ ಇವರು ೨ನೆಯ ಸಂಪುಟದಲ್ಲಿ ಪುಟ ೧೧ರಲ್ಲಿ ತಿಳಿಸಿದ್ದಾರೆ. ನೇಕಾರರು ಪೂರ್ವಸಮುದ್ರದಿಂದ, ಪಶ್ಚಿಮ ಸಮುದ್ರದವರೆಗೆ ವ್ಯಾಪಿಸಿದ್ದರೆಂದು ಪ್ರಾಚೀನ ತಮಿಳು ಕಾವ್ಯದಲ್ಲಿ ವರ್ಣಿಸಲ್ಪಟ್ಟಿದೆ." (ಶಂಕರ ಎಂ.ಬುಚಡಿ : ಹೇಮಕೂಟ : ೧೯೯೮ - ಪುಟ ೨೭-೨೮)

ಖ್ಯಾತ ಸಂಶೋಧಕ ಶ್ರೀ ಶಂ.ಬಾ. ಜೋಶಿಯವರು ನೇಕಾರರ ಬಗ್ಗೆ ಹೀಗನ್ನುತ್ತಾರೆ. "ಹಟಕಾರರು ಅಂದರೆ ದೇವಾಂಗರು ದ್ರಾವಿಡ ಮೂಲದವರು. ಸಿಂಧೂ ತೀರ ನಿವಾಸಿಗಳು. ಅವರು ಸುಸಂಸ್ಕೃತರೂ, ಧರ್ಮಭೀರುಗಳೂ, ನೇಕಾರಿಕೆಯ ಕುಶಲ ಕರ್ಮಿಗಳೂ, ಪರಿಶ್ರಮಿಗಳೂ, ವ್ಯವಹಾರ ಪರಿಣತರೂ, ವೀರರೂ ಶೂರರೂ ಆಗಿದ್ದರು. ಚಿಕ್ಕ ಚಿಕ್ಕ ರಾಜ್ಯಗಳನ್ನು ಕಟ್ಟಿಕೊಂಡು ಆಳುತ್ತಿದ್ದರು. ವಿದೇಶಿಯರೊಡನೆ ಅವರ ವ್ಯವಹಾರವಿತ್ತು. ಅವರ ಸಾಮಾಜಿಕ ಜೀವನ ಮಟ್ಟ ಉನ್ನತವಾಗಿತ್ತು. ಅವರು ಶೈವ-ಶಾಕ್ತೆಯ

ಸಂಪ್ರದಾಯದವರಾಗಿದ್ದರು. ಆರ್ಯರು ದಾಳಿ ಮಾಡಿದಾಗ ಅವರ ಸ್ವಾಮಿತ್ವವನ್ನು ಸ್ವೀಕರಿಸಲೊಪ್ಪದ ಎಷ್ಟೋ ಮೂಲ ನಿವಾಸಿಗಳು ದಕ್ಷಿಣದ ಕಡೆಗೆ ವಲಸೆ ಹೊರಟರು. ಬರಬರುತ್ತ ತಮಗೆ ಸರಿಕಂಡ ಕಡೆಗಳಲ್ಲಿ ನೆಲೆಯೂರಿದರು. ಹೀಗೆ ನೇಕಾರರು (ಪಟಗಾರರು) ದೇಶದ ತುಂಬ ವ್ಯಾಪಿಸಿದರು. ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶ ಮುಂತಾದ ಕಡೆಗಳಲ್ಲಿ ನೆಲೆಯೂರಿದರು. ಅವರು ಎಲ್ಲೆಲ್ಲಿ ನೆಲೆಸಿರುವರೋ ಅಲ್ಲಲ್ಲಿಯ ಭಾಷೆ, ಜನಾಂಗ, ಸಂಸ್ಕೃತಿಗಳಿಗೆ ಹೊಂದಿಕೊಂಡು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟರು."

"ಕ್ರಿ.ಪೂ. ೬ನೇ ಶತಮಾನದಲ್ಲಿ ದಕ್ಷಿಣಾಪಥವು ಬಹುದೊಡ್ಡ ಮಾರ್ಗವಾಗಿತ್ತು. ಇದು ಪೈಥಾನದಿಂದ ಆರಂಭವಾಗಿ ನರ್ಮದಾ ನದಿಯನ್ನು ಮಹೇಶ್ವರದಲ್ಲಿ ದಾಟಿ, ಉಜ್ಜಯಿನಿ, ಬಿಸ್ಸಾ, ಕೋಸಾಂಬಿ, ಸಾಕೇತರ ಮೂಲಕ ಹಾದು ಶ್ರಾವಸ್ತಿಯನ್ನು ಮುಟ್ಟಿತು. ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು ಉಲ್ಲೇಖಿಸಿದಂತೆ ಈ ದಕ್ಷಿಣಾಪಥ ಹಾದು ಹೋಗುವ ಪ್ರದೇಶಗಳಲ್ಲಿ ಅತ್ಯಮೂಲ್ಯವಾದ ವಜ್ರಗಳು, ಮುತ್ತುಗಳು, ಚಿನ್ನ ಹಾಗೂ ಅಮೂಲ್ಯವಾದ ಕಲ್ಲುಗಳಲ್ಲದೆ ಕಳಿಂಗದಲ್ಲಿ ನಿರ್ಮಾಣವಾಗುತ್ತಿದ್ದ ಅತೀ ನಯವಾದ ವಿಧವಿಧದ ಬಟ್ಟೆಗಳು ಉತ್ತರದಿಂದ ದಕ್ಷಿಣಕ್ಕೂ, ದಕ್ಷಿಣದಿಂದ ಉತ್ತರಕ್ಕೂ ಮಾರಾಟ ಮಾಡಲ್ಪಡುತ್ತಿದ್ದವು." (ದಕ್ಷಿಣ ಭಾರತದ ಇತಿಹಾಸ : ಪುಟ : ೧೭೧)

"ಗ್ರೀಕ್ ಸಂಚಾರಿ ಟಾಲೆಮಿ ತನ್ನ ಗ್ರಂಥದಲ್ಲಿ 'ಲಂಕೆಯಲ್ಲಿ 'ಶಾಲಿಕ' ಎನ್ನುವ ಹೆಸರಿನ ದ್ವೀಪವಿತ್ತು' ಎನ್ನುತ್ತಾನೆ. 'ಶಾಲಿಕ' ಎಂದರೆ ನೇಕಾರ ಎಂದೇ ಅರ್ಥ. ಶಾಲಿಯಾ ಪದದ ಮೂಲವೇ 'ಶಾಲಿಕಾ' ದಲ್ಲಿದೆ. ಆದುದರಿಂದ ಶಾಲಿಯರು ಸಮುದ್ರ ದಾಟಿ ಲಂಕೆಗೂ ಹೋಗಿದ್ದಾರೆ ಎಂದು ಅರಿವಾಗುತ್ತದೆ.

ಮೂವೇಂದರ್ ಎಂದು ಕರೆಯಲ್ಪಡುವ ಚೇರ. ಚೋಳ. ಪಾಂಡ್ಯ ರಾಜರ ಕಾಲದಲ್ಲಿ ತಮಿಳುನಾಡಿನಲ್ಲಿ ಬಟ್ಟೆಗೆ ಬಣ್ಣ ಹಾಕುವ ಶಾಲಿಯರಿಂದ 'ಶಾಲಿಯಕ್ಕಾಣಂ' ಎಂಬ ಹೆಸರಿನಲ್ಲಿ ತೆರಿಗೆ ಎತ್ತಲಾಗುತ್ತಿತ್ತು ಎಂದೂ, ರಾಜ ಕುಟುಂಬಕ್ಕೆ ವಿಶಿಷ್ಟ ಬಟ್ಟೆ ನೇಯುವ ಶಾಲಿಯರು "ತರಿಕ್ಕಡಮ" ಎಂಬ ಹೆಸರಿನ ತೆರಿಗೆಯನ್ನು ಸಂದಾಯ ಮಾಡಬೇಕಿತ್ತು ಎಂದು ತಮಿಳುನಾಡಿನ ಚರಿತ್ರೆಯಲ್ಲಿ ಉಲ್ಲೇಖಿಸಲಾಗಿದೆ.

ಉತ್ತರದ ಅರ್ಕಾಡ್‌ನಿಂದ ದಕ್ಷಿಣದ ತಿರುನೆಲ್ವೇಲಿಯವರೆಗೆ ಶಾಲಿಯಾ ಸಮುದಾಯದವರು ಇದ್ದರೆಂದೂ, ನೇಯ್ಗೆಯವರಾದ ಅವರು ಜೀವಿಸಿದ ಒಂದು ನಗರವು 'ಶಾಲಿಯಾ ನಗರ' ಎಂಬ ಹೆಸರನ್ನು ಪಡೆದುಕೊಂಡಿತ್ತು ಎಂದು ೧೬೯೧ರಲ್ಲಿ ರಚಿತವಾದ ತಮಿಳುನಾಡಿನ ಶಿಲಾಲೇಖವೊಂದು ಉಲ್ಲೇಖಿಸುತ್ತದೆ. ಈ ಶಾಲಿಯಾ ನಗರವು ವೇಲೂರಿನ ಹತ್ತಿರ ಇದ್ದಿರಬಹುದು ಎಂದು ಊಹಿಸಲಾಗುತ್ತದೆ.

ದಕ್ಷಿಣ ಭಾರತದಲ್ಲಿ ಮಧ್ಯಯುಗದಲ್ಲಿ ಹಲವಾರು ವಾಣಿಜ್ಯ ಸಂಘಗಳು ಇದ್ದವು. ನೇಕಾರರು ತಾವು ಉತ್ಪಾದಿಸುತ್ತಿದ್ದ ಬಟ್ಟೆಗಳನ್ನು ಈ ವಾಣಿಜ್ಯ ಸಂಘಗಳ ಮೂಲಕವಾಗಿ ಮಾರಾಟ ಮಾಡಲು ಪ್ರಯತ್ನಿಸುತ್ತಿದ್ದರು.

ಈ ಕಾರಣದಿಂದಲೇ ತೀರ ಪ್ರದೇಶಗಳಲ್ಲಿ ಶಾಲಿಯರು ಹೆಚ್ಚಾಗಿ ವಾಸಿಸುತ್ತಿದ್ದರು. ಕಲ್ಲಿಕೋಟೆಯಲ್ಲಿ ನಿರ್ಮಾಣವಾಗುತ್ತಿದ್ದ ಬಟ್ಟೆಗಳು 'ಕ್ಯಾಲಿರೋ' ಎನ್ನುವ ಹೆಸರಿನಿಂದ ವಿದೇಶಗಳಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದುವು. ಆದುದರಿಂದಲೇ ಕಲ್ಲಿಕೋಟೆಯನ್ನು 'ಕೇಲಿಕಟ್ಟ್' ಎಂದು ವಿದೇಶೀಯರು ಕರೆದರು. (ಡಾ. ಒ.ಕೃಷ್ಣನ್ ಪಾತ್ಯಂ :೧೯೯೭ ).

ತಮಿಳುನಾಡು,ಕರ್ನಾಟಕ, ಆಂಧ್ರ ಪ್ರದೇಶಗಳಲ್ಲಿ ಬಹಳ ಹಿಂದೆಯೇ ಈ ಸಮುದಾಯ ಬಹಳ ಪ್ರಬಲವಾಗಿತ್ತು. ಅನಂತರ ಇವರನ್ನು ಕೇರಳದ ಕಡೆ ಕರೆಸಿರಬೇಕು ಅಥವಾ ವ್ಯಾಪಾರ ನಿಮಿತ್ತವಾಗಿ ಬಂದಿರಬೇಕು. ಕೇರಳದ ಯಾವ ಚರಿತ್ರೆಯಲ್ಲೂ ಇವರ ಕುರಿತಾದ ವಿವರಗಳು ದೊರಕುವುದಿಲ್ಲ. ಪಾಂಡ್ಯ-ಚೇರ-ಚೋಳರ ಬರಹಗಳಲ್ಲಿ ನೇಯ್ಗೆಯವರ ಬಗ್ಗೆ, ಅವರ ಸಂಘಟನೆಗಳ ಬಗ್ಗೆ, ಅವರ ಉಪವಿಭಾಗಗಳ ಬಗ್ಗೆ ವಿವರಗಳು ಲಭಿಸುತ್ತವೆ. ಆದುದರಿಂದ ಶಾಲಿಯರು ಮಧ್ಯಯುಗದಲ್ಲಿ (ಕ್ರಿ.ಶ ೧೦ನೇ ಶತಮಾನದಿಂದೀಚೆ) ಕೇರಳದ ಕಡೆ ವಲಸೆ ಬಂದಿರುವ ಸಾಧ್ಯತೆಯಿದೆ.

ಶ್ರೀಮೂಲಂ 'ತಿರೂಳ್' ನ ಕಾಲದಲ್ಲಿ ಪಾಂಡ್ಯ ರಾಜರ ರಾಜ್ಯದಿಂದ ಒಂಬತ್ತು ನೇಕಾರ ಕುಟುಂಬಗಳನ್ನು ತರಲಾಯಿತೆಂದೂ ಅದರಲ್ಲಿ ಮೂರು ಕುಟುಂಬಗಳನ್ನು ತಿರುವಿದಾಂಕೂರಿನ ರಾಜನಿಗೂ ಮೂರು ಕುಟುಂಬಗಳನ್ನು ಕೊಚ್ಚಿಯ ರಾಜನಿಗೂ ಕೊಡಲಾಯಿತೆಂದೂ ಇರಿಞಾಲಕ್ಕುಡದಲ್ಲಿರುವ ಪಟ್ಯರ್ಯ ಸಮುದಾಯದವರು ಹೇಳುತ್ತಾರೆ. ಬಲರಾಮವರ್ಮ ಕೋಲತ್ತಿರಿ, ಪರಪ್ಪನಾಡಿನ ರಾಜ ಮೊದಲಾದವರು ಅವರ ಕಾಲಗಳಲ್ಲಿ ನೇಕಾರರನ್ನು ತಮಿಳುನಾಡಿನಿಂದ ತಂದು ನೆಲೆ ನಿಲ್ಲಿಸಿದರೆಂದು ಹೇಳಲಾಗುತ್ತದೆ.

ಕಲ್ಲಿಕೋಟೆಯ ಚಾಲಿಯಾರ್ ಅಥವಾ ಶಾಲಿಯಾರ್ ಹೊಳೆಯ ಬದಿಯಲ್ಲಿ ಶಾಲಿಯಾರ್ ಎಂಬ ಪಟ್ಟಣವಿತ್ತೆಂದೂ, ಅಲ್ಲಿನ ಮುಖ್ಯ ಕಸುಬು ನೇಕಾರಿಕೆಯಾಗಿತ್ತೆಂದೂ, ಅದರ ಎರಡೂ ತೀರದಲ್ಲಿ ನೇಕಾರರ ಕೇರಿ ಇತ್ತೆಂದೂ ಇಬನ್ ಬತ್ತೂತ (ಲಳಳ-ಲಳಲ) ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಕಲ್ಲಿಕೋಟೆಯಲ್ಲಿ 'ಚಾಲಿಯಂ ಕಡವ್' ಎನ್ನುವ ತೀರ ಪ್ರದೇಶವು ಸಾಮೂದಿರಿಯ ಸಂಚಾರ ಪ್ರದೇಶವಾಗಿತ್ತು ಎನ್ನಲಾಗಿದೆ. (ವಿಶ್ವನಾಥನ್ ನಾಯರ್ : ೧೯೯೩ : ಪುಟ :೩೧,೩೨) ಈ ವಿವರಣೆಯನ್ನು ಅವಲೋಕಿಸಿದಾಗ ಶಾಲಿಯಾ ಸಮುದಾಯವು ೧೦ನೇ ಶತಮಾನಕ್ಕಿಂತಲೂ ಮುನ್ನವೇ ಕೇರಳಕ್ಕೆ ಬಂದಿತ್ತು ಎಂದು ತಿಳಿಯಬೇಕಾಗುತ್ತದೆ. ಚಾಲಿಯಾರ್ ಹೊಳೆಯ ಮೂಲಕವಾಗಿ ವಿದೇಶೀ ವಾಣಿಜ್ಯ ವ್ಯವಹಾರವು ಬಹಳ ಹಿಂದಿನಿಂದಲೇ ಬಹಳ ತೀವ್ರವಾಗಿ ನಡೆಯುತ್ತಿತ್ತು. ಚೈಕಾದ ಸಮುದ್ರ ವ್ಯಾಪಾರ ಮಾರ್ಗವಾಗಿ ಇದನ್ನು ಪರಿಗಣಿಸಿ 'ಸಿಲ್ಕ್ ರೂಟ್' ಎಂದೇ ಚರಿತ್ರೆಯಲ್ಲಿ ಗುರುತಿಸಲಾಗಿದೆ. ಹಾಗೇ ಇಲ್ಲಿನ ಬಟ್ಟೆಗಳು ಚೈನಾಕ್ಕೂ ಹೋಗುತ್ತಿತ್ತು. ಕಲ್ಲಿಕೋಟೆಯಲ್ಲಿ 'ಪಟ್ಟ್‌ತೆರುವು' ಎನ್ನುವ ಪ್ರದೇಶದ ಹೆಸರು ಲಭ್ಯವಾಗುತ್ತದೆ. "ಇದು ಚೈನಾದವರು ಪಟ್ಟೆ ಮಾರಾಟ ಮಾಡುವ ಕೇಂದ್ರವಾಗಿತ್ತು" ಎಂದು ಕೆಲವು ಚರಿತ್ರೆಕಾರರು ಹೇಳಿದರೂ, ಕಣ್ಣನ್ನೂರಿನ ಬಳಿಯ ಪ್ರದೇಶದಲ್ಲಿ "ಪಟ್ಟುವಂ ತೆರು" ಎನ್ನುವ ಪ್ರದೇಶವಿದ್ದು, ಅಲ್ಲಿ ರೇಶ್ಮೆ ಉತ್ಪಾದನೆಯನ್ನು ಇತ್ತೀಚಿನವರೆಗೂ ಶಾಲಿಯರು ನಡೆಸುತ್ತಿದ್ದರು ಎನ್ನುವುದಕ್ಕೆ ದಾಖಲೆಗಳಿವೆ. ಆದುದರಿಂದ 'ಕಲ್ಲಿಕೋಟೆಯ ಪಟ್ಟ್‌ತೆರುವು ಹಾಗೂ ಕಣ್ಣಾನ್ನೂರಿನ ಪಟ್ಟುವಂ ತೆರುಗಳು ಒಂದು ಕಾಲದಲ್ಲಿ ಶಾಲಿಯರ ರೇಶ್ಮೆ ಉತ್ಪಾದನೆಯ ಕೇಂದ್ರಗಳಾಗಿದ್ದವು.' ಎಂದು ಹೇಳಬಹುದು. ಮುಂದೆ ಪೋರ್ಚುಗೀಸರ ಕಾಲದಲ್ಲಿ ಕಲ್ಲಿಕೋಟೆಯಿಂದ ರಫ್ತಾಗುತ್ತಿದ್ದ 'ಕ್ಯಾಲಿಕೋ' ಎಂಬ ಹೆಸರನ್ನು ಪಡೆದ

ಬಟ್ಟೆಗೆ ವಿಶೇಷ ಬೇಡಿಕೆಯಿತ್ತು ಎಂದು ತಿಳಿದು ಬರುತ್ತದೆ. ಈ ಹಿನ್ನೆಲೆಯಿಂದ ಶಾಲಿಯಾ ಸಮುದಾಯ ಕೇರಳದ ಕಲ್ಲಿಕೋಟೆ ಪ್ರದೇಶದಲ್ಲಿ ೧೦-೧೨ ಶತಮಾನಗಳ ಕೆಳಗೆ ಬಹಳ ಪ್ರಸಿದ್ಧಿಯನ್ನು ಪಡೆದುಕೊಂಡ ಸಮುದಾಯವಾಗಿತ್ತು ಎಂದು ಹೇಳಬಹುದು.

ತಮಿಳುನಾಡಿನ 'ತಮಿಲುಗಂ' ನಲ್ಲಿ 'ವಸ್ತು ವಿನಿಮಯ' (Barter System) ರೂಪದ ವ್ಯಾಪಾರದ ವಿವರಣೆಯಲ್ಲಿ ವಸ್ತ್ರಗಳನ್ನು ಬೇರೆ ವಸ್ತುಗಳೊಂದಿಗೆ ವಿನಿಮಯ ಮಾಡುತ್ತಿದ್ದುದರ ಬಗ್ಗೆ ಉಲ್ಲೇಖವಿದೆ. (ಸಿ.ವಿಶ್ವನಾಥನ್ : ೧೯೯೩)

ಎರಡನೆಯ ಕಲ್ಲೋತ್ತುಂಗ ಚೋಳನ ಕಾಲದಲ್ಲಿ (೧೧೩೩-೧೧೪೫) ಇದ್ದ ಕವಿ ಶೆಕ್ಕಿಳಾರ್. ಈತ ಬರೆದ ಪೆರಿಯ ಪುರಾಣದಲ್ಲಿ ಬರುವ ೬೩ ನಾಯನ್ಮಾರರಲ್ಲಿ ನೇಶನಾಯರ್ ಎನ್ನುವವನು ಶಾಲಿಯನಾಗಿದ್ದ ಎಂದು ತಿಳಿದು ಬರುತ್ತದೆ. ಈ ೬೩ ಪುರಾತನರ ಕಥೆಗಳನ್ನು ಕನ್ನಡದಲ್ಲಿ ರಗಳೆಗಳನ್ನಾಗಿಸಿದ ಹರಿಹರನ ರಗಳೆಯಲ್ಲಿ 'ನೇಶನ್ನೈನಾರರ ರಗಳೆ' ಯೂ ಒಂದು.

"ಘನಚೇಡಕುಲಮೊಗಿ ಚಂದ್ರಮಂ ತಾನಾಗಿ
ವಿನಯದಿಂ ನೇಶಾರೆನಿಪ್ಪಾಖ್ಯಯುತನಾಗಿ"
..........................................
..........................................
ಸೀರೆಗಳನುರೆ ನೆಯ್ದು ಬೇಗದಿದೀವುತಂ
ಚಾರು ವಿಸ್ತ್ರಗಳಂ ಭಕ್ತಿಯಿಂತೀವೃತಂ
ಕೌಪೀನ ಕಂಥೆಗಳನಲ್ಲಿ ಜಂಗಮಕಿತ್ತು
ಪೋಪಾಧಿಗುಣಮಿಲ್ಲದೆಲ್ಲಮಂ ತಾನಿತ್ತು
ಸತಿಯುಟ್ಟುದುಂ ತಾನುಮುಟ್ಟುದಲ್ಲದೆ ಮತ್ತೆ
ಮತಿ ಮಿಗಲ್ಕೇಸುಮಂ ಕೊಡಲಿಲ್ಲದಿರೆ ಮತ್ತೆ
ಸೀರೆಯಂ ನೇಯಲ್ಕೆ ತೊಡಗುತಿರಲೀಶ್ವರಂ

ಎಂದು ಮುಂದುವರಿಯುತ್ತಿರುವ ಈ ರಗಳೆಯಲ್ಲಿ ನೆಶ ನಾಯರನು ತನ್ನನ್ನು ಪರೀಕ್ಷಿಸಲು ಬಂದ ಶಿವನಿಗೆ ತಾನುಟ್ಟುದನ್ನೇ ನೀಡಿ ಕೃತಾರ್ಥನಾದನೆಂದು ಹೇಳಿದ ಹರಿಹರನು ಹೀಗೆನ್ನುತ್ತಾನೆ.

ಸೀರೆಗಳಂ ಭಕ್ತರಿಗಿರ
ದೋರಂತಿರೆ ಕೊಡುವ ತಾರು ನೇಶರ ಭಕ್ತಿಗೆ
ಮಾರಹರನೆಲಿದು ಮೆರೆದು
ತ್ತೋರಂತಿರೆ ಹಂಪೆಯಾಳ್ದನೊಪಿದನಾಗಳ್

(ಎಂ.ಎಂ. ಕಲುಬುರ್ಗಿ : (೧೯೯೯ : ಪುಟ : ೧೮೯).

ಆದರೆ ಇಲ್ಲಿ ಬಂದ ನೇಶ ನಾಯನಾರನ ಕಾಲಯಾವುದೆಂದು ಸ್ಪಷ್ಟವಾಗಿಲ್ಲ. 'ನಮಗೆ ಈಗ ದೊರಕುವ ನೇಕಾರಿಗೆ ಸಂಬಂಧಪಟ್ಟ ಲಿಖಿತ ಮಾಹಿತಿ ದೇವಾಂಗ ದಾಸಿಮಯ್ಯನ ವಚನ'ಗಳೇ ಹೊರತು ಬೇರಾವುದೂ ಅಲ್ಲ ಎನ್ನುವುದೂ ಅಷ್ಟೇ ಸತ್ಯ. ಕ್ರಿಸ್ತ ಶಕ ೯೮೦-೧೦೪೦ ರಲ್ಲಿ ದೇವಾಂಗ ದಾಸಿಮಯ್ಯನ ಕಾಲದಲ್ಲಿ ದೇವಾಂಗ ಸಮಾಜದಲ್ಲಿ ಆಚಾರ ಕ್ರಾಂತಿಯುಂಟಾಯಿತು ಮತ್ತು ವೈಚಾರಿಕ ಭಿನ್ನಾಭಿಪ್ರಾಯಗಳುಂಟಾದವು. ತತ್ಪರಿಣಾಮವಾಗಿ ಜನಾಂಗ ಹರಿದು ಹಂಚಿ ಹೋಯಿತು. ವಿಜಯನಗರ ಪತನವಾದ ಮೇಲೆ ಅವರು ಬೇರೆ ಕಡೆ ವಲಸೆ ಹೋದರು' (ಹೇಮಕೂಟ : ೧೯೯೮ : ಪುಟ : ೫೨) ಎಂದೂ, ವಿಜಯನಗರ ಅರಸರ ಕಾಲದಲ್ಲಿ ವಿಧಿಸುತ್ತಿದ್ದ ಅಧಿಕ ಕರದಿಂದಾಗಿ ದೇವಾಂಗದವರು ಬೇರೆ ಬೇರೆಡೆಗೆ ವಲಸೆ ಹೋಗಿರುವ ಸಾಧ್ಯತೆ ಇದೆ.' ಎಂದೂ ಅಭಿಪ್ರಾಯವಿದೆ. ಬಹುಶಃ ಇದೇ ಕಾಲದಲ್ಲಿ ಅವರು ತಮಿಳುನಾಡು, ಕೇರಳದ ಭಾಗಗಳಿಗೆ ವಲಸೆ ಬಂದಿರಬೇಕು. "ಬೆಂಗಳೂರಿನಲ್ಲಿ ಇರುವ ಬಹಳಷ್ಟು ನೇಕಾರರನ್ನು ತಮಿಳುನಾಡಿನ 'ಬಾರಾಮಹತ'ದಿಂದ ಚಿಕ್ಕದೇವರಾಯ ಕರೆದುತಂದನೆಂದು ತಿಳಿದುಬರುತ್ತದೆ. ಕನ್ನಡ ದೇವಾಂಗರೂ, ಕುರುಹಿನ ಶೆಟ್ಟರೂ, ತೊಗಟವೀರರೂ ಕನ್ನಡಿಗರಿದ್ದು, ಪದ್ಮಶಾಲಿ ಗುಂಪಿನವರೂ ವಲಸೆ ಬಂದು ಕರ್ನಾಟಕದಲ್ಲಿ ನೆಲೆ ನಿಂತಂತೆ ಕಾಣುತ್ತದೆ. ಬೆಂಗಳೂರು ಪರಿಸರದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವರು ಬಹಳ ಹಿಂದೆ ಇದ್ದರು." ಎಂದು ಡಾ.ಸೂರ್ಯನಾಥ ಕಾಮತರು ಪದ್ಮಶಾಲಿಯರ ವಿಚಾರವಾಗಿ ಬರೆಯುವಾಗ ಹೇಳುತ್ತಾರೆ. (ಪದ್ಮಸಂಸ್ಕರಣಿಕಾ : ೨೦೦೦ : ಪುಟ : ೪೩). ಪದ್ಮಶಾಲಿಯರು 'ಶಾಲಿಯರ' ಒಂದು ಗುಂಪಾಗಿರುವ ಸಾಧ್ಯತೆಯಿದೆ. ಆದುದರಿಂದ ಇವರು ವಲಸೆ ಬಂದವರು ಎನ್ನುವುದನ್ನು ಊಹಿಸಬಹುದು.

ಎಸ್.ಜಿ.ರಾಮಚಂದ್ರರವರು ಹೀಗೆನ್ನುತ್ತಾರೆ "ದೇವಾಂಗರ ದೌರ್ಭಾಗ್ಯದ ಇತಿಹಾಸದ ಕಾಲದಲ್ಲಿ, ಕೆಲವು ಶತಮಾನಗಳ ಇತಿಹಾಸದುದ್ದಕ್ಕೂ, ಆಗಾಗ್ಗೆ ಅಲ್ಲಿ ಸಂಭವಿಸಿದ ಪ್ರಕೃತಿಯ ವಿಕೋಪಗಳಿಂದಾಗಿ, ಇಡೀ ರಾಷ್ಟ್ರದ ರಾಜಕೀಯ ಗೊಂದಲಗಳಿಂದಾಗಿ, ಇತರ ಸಮಾಜಗಳ ವಿದ್ರೋಹ ಕೃತ್ಯಗಳಿಂದಾಗಿ, ಸ್ವಯಂಕೃತಾಪರಾಧಗಳಿಂದಾಗಿಯೂ ನಿರಂತರವಾಗಿ ದೇವಾಂಗ ಕುಲ ಅನುಭವಿಸಿದ ಮೂಕ ವೇದನೆಗಳು ವರ್ಣಿಸಲು ಅಸಾಧ್ಯವಾದುದೇ ಸರಿ. ಈ ರೀತಿಯ ಅಪಾಯಕಾರಿ ಸನ್ನಿವೇಶಗಳಲ್ಲಿ ದೇವಾಂಗ ಜನತೆ, ಛಿದ್ರ ಛಿದ್ರವಾಗಿ, ಗುಂಪು ಗುಂಪುಗಳಾಗಿ ತಮ್ಮ ಸಂಸಾರಗಳ ಜತೆಗೆ ತಮ್ಮ ನೇಕಾರಿಕೆಯ ಮಗ್ಗಗಳನ್ನು ಹೆಗಲಮೇಲೆ ಹೊತ್ತು ಆಗಿನ ಕಾಲದಲ್ಲಿ ಊರಿಂದೂರಿಗೆ, ರಾಜ್ಯದಿಂದ ರಾಜ್ಯಕ್ಕೆ ಅಲೆಯುವ ದೌರ್ಭಾಗ್ಯ ಒದಗಿ ಬಂದಿತ್ತು." (ಎಸ್.ಜಿ. ರಾಮಚಂದ್ರ : ೨೦೦೨ : ಪುಟ : ೫೨) ದೇವಾಂಗರ ಉಪ ಪಂಗಡಗಳು ಉಳಿದ ನೇಕಾರರು ಎಂಬುದು ಇದರಿಂದ ತಿಳಿದುಬರುತ್ತದೆ. ಹಾಗೇ ಬಂದವರು ಇಲ್ಲಿನ ಶಾಲಿಯರಾಗಿರಬಹುದು.

ತಮಿಳುನಾಡು, ಕರ್ನಾಟಕ, ಆಂಧ್ರಗಳಲ್ಲಿ ಬಹಳ ಹಿಂದೆಯೇ ಈ ಸಮುದಾಯ ಪ್ರಬಲವಾಗಿತ್ತು. ಅನಂತರ ಇವರನ್ನು ಕೇರಳದ ಕಡೆ ಕರೆಸಿರಬೇಕು. ಊರೂರು ಬಟ್ಟೆ ಹೊತ್ತುಕೊಂಡು ಅಲೆದಾಡುವ ಇವರು ತಮಗೆ ಪ್ರಸಕ್ತವೆನ್ನಿಸಿದ ಸ್ಥಳವನ್ನು ಆರಿಸಿ ಅಲ್ಲಿ ನೆಲೆಯೂರಿರುವ ಸಾಧ್ಯತೆಗಳಿವೆ. ಮೊದಲು ದಕ್ಷಿಣ ಕೇರಳಕ್ಕೆ ಬಂದು ಅಲ್ಲಿಂದ ಉತ್ತರಕ್ಕೆ ಬಂದಿರುವ ಸಾಧ್ಯತೆಯಿದೆ.

'ಸಾಮೂದಿರಿ ರಾಜರ ಆವಶ್ಯಕತೆಗಾಗಿ ತಂಜಾವೂರಿನ ರಾಜನಾದ ಪಾಂಡ್ಯನು ರೇಶ್ಮೆ ವಸ್ತ್ರ ನೇಯಲು ಅಸಾಮಾನ್ಯ ಸಾಮರ್ಥವುಳ್ಳ ನೇಯ್ಗೆಯವರನ್ನು ಕಳುಹಿಸಿದನು ಎಂದು ಹೇಳುತ್ತಾರೆ. ಆದರೆ ಅಲ್ಲಿ ಭೋಜನದ ವಿಷಯದಲ್ಲಿ ಅತೃಪ್ತಿಯನ್ನು ಸೂಚಿಸಿ ರಾಜನ ಅಪ್ರೀತಿಗೆ ಪಾತ್ರರಾದರು. ಜನಿವಾರ ಧರಿಸಿ ಮೀನು ತಿನ್ನುವ ಇವರನ್ನು ರಾಜನು ಜನಿವಾರವನ್ನು ಕಿತ್ತೊಗೆದು ಓಡಿಸಿದನು. ಹಾಗೆ ಓಡಿದ ಇವರಲ್ಲಿ ಕೆಲವರು ದಕ್ಷಿಣಕ್ಕೂ ಕೆಲವರು ಉತ್ತರಕ್ಕೂ ಓಡಿದರು. ಇವರೇ ಮುಂದೆ ಎಡಂಗ ಮತ್ತು ಬಲಂಗ ಎಂಬ ವಿಭಾಗಗಳಾದರು. ಉತ್ತರಕ್ಕೆ ಬಂದವರು ಚಿರಕ್ಕಲ್‌ನ ರಾಜರ ಆಶ್ರಯವನ್ನು ಪಡೆದರು. ಆದರೆ ಅಲ್ಲಿ ಹಾಸನ್ನು ನಯಗೊಳಿಸಲು ತಯಾರಿಸಿದ ಗಂಜಿಯನ್ನು ರಾಜನ ನಾಯಿ ಬಂದು ಕುಡಿದಾಗ, ಕುಪಿತರಾಗಿ ಆ ನಾಯಿಯನ್ನು ಹೊಡೆದು ಕೊಂದರು. ಹಾಗೆ ಚಿರಕ್ಕಲ್ ರಾಜನ ಕೋಪಕ್ಕೆ ತುತ್ತಾಗಿ ಮತ್ತೂ ಉತ್ತರಕ್ಕೆ ಬಂದು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆ ನಿಂತರು.' ಹೀಗೆ ಅವರು 'ಪಟ್ಟುವಂ'ನಿಂದ ಪಣಂಬೂರಿನವರೆಗೆ ವ್ಯಾಪಿಸಿದ್ದಾರೆ. ವೃಶ್ಚಿಕಮಾಸದ ೨ನೇ ಶನಿವಾರ ಅವರು ಕೀಬಿರಲ್ಲಿ ಸೇರುತ್ತಾರೆ. ಇದನ್ನು 'ನಗರಂ ಚೇರಲ್' ಎಂದು ಕರೆಯುತ್ತಾರೆ. ೧೪ ನಗರಗಳ ಸ್ಥಾನಿಕರು ಆ ದಿನ ಅಲ್ಲಿ ಸೇರುತ್ತಾರೆ. ಇದು ಶಾಲಿಯರು ಉತ್ತರದ ತುಳುನಾಡಿಗೆ ಬಂದಿರುವ ಬಗೆಗೆ ಪ್ರಚಲಿತವಾಗಿರುವ ಪ್ರಸಿದ್ಧವಾದ ಹಿನ್ನಲೆ.

ಕೋಲತ್ತನಾಡ್, ಪ್ರಾಟ್ಟರ (ಕೋಟಯಂ) ಇರುವನಾಡ್, ಕಡತ್ತನಾಡ್ ಎನ್ನುವ ಮಧ್ಯಕಾಲೀನ ಕೇರಳ ಸಾಮ್ರಾಜ್ಯಗಳಲ್ಲಿ '೯೬' ಶಾಲಿಯಾ ತೆರುಗಳಿದ್ದವು ಎಂದು ಬಹಳ ಹಿಂದಿನಿಂದಲೇ ತಿಳಿದು ಬರುತ್ತದೆ. 'ಪ್ರಾಟ್ಟರ' ಕೋಟ್ಟಯಂ ರಾಜರ, ಇರುವನಾಡಿನ ರಾಜರ, ಕಡತ್ತನಾಡಿನ ರಾಜರ ಅಧೀನದಲ್ಲಿತ್ತು. ಇಲ್ಲಿ ಜೀವಿಸಿದ ಶಾಲಿಯರು ಸಮೂಹವಾಗಿಯೇ ಜೀವಿಸಿದ್ದರು ಎನ್ನುವುದಕ್ಕೆ ಈ ತೆರುಗಳು ಸಾಕ್ಷಿಯಾಗಿವೆ. ಈ ನಾಲ್ಕು ಸಾಮ್ರಾಜ್ಯಗಳ ರಾಜರ ಕಾಲದಲ್ಲಿ ಶಾಲಿಯರು ಕೇರಳಕ್ಕೆ ಬಂದಿರುವ ಸಾಧ್ಯತೆಯಿದೆ. ತಮಿಳುನಾಡಿನಲ್ಲಿ ಕರ್ನಾಟಕದ ವಿಜಯನಗರದಲ್ಲಿ ಹಾಗೂ ಆಂಧ್ರದಲ್ಲಿ ದೊರಕುವಷ್ಟು ಇವರ ಬಗೆಗಿನ ಉಲ್ಲೇಖಗಳು ಕೇರಳದ ಚರಿತ್ರೆಯಲ್ಲೂ, ಶಾಸನದಲ್ಲೂ ದೊರಕದೇ ಇರಲು ಇದೇ ಕಾರಣವಾಗಿರಬಹುದು. ಪಾಂಡ್ಯ, ಚೋಳ ರಾಜರ ಕಾಲದ ಬರಹಗಳಲ್ಲಿ ನೇಯ್ಗೆಯವರ ಬಗ್ಗೆ, ಅವರ ಸಂಘಟನೆಗಳ ಬಗ್ಗೆ, ಅವರ ಉಪವಿಭಾಗಗಳ ಬಗ್ಗೆ ವಿವರಗಳು ದೊರಕುತ್ತವೆ. ಕರ್ನಾಟಕದ ವಿಜಯನಗರದ ಅರಸರ ಕಾಲದ ಚರಿತ್ರೆಗಳಲ್ಲಿ ನೇಕಾರರಿಗೆ ವಿಧಿಸಿದ ಕರಗಳ ವಿವರಗಳು ದೊರೆಯುತ್ತವೆ.

ಪ್ರಾಚೀನ ಕೇರಳದ ಕೆಲವು ಶಾಸನಗಳಲ್ಲಿ ಅಂಜುವಣ್ಣಂ, ಮಣಿಗ್ರಾಮಂ, ವಳಂಜಿಯರ್, ಪಟ್ಟಣ ಸ್ವಾಮಿಗಳ್, ನಾನಾ ದೇಶಿಗಳ್ ಎನ್ನುವ ವ್ಯಾಪಾರ ಸಂಘಗಳು ಇದ್ದವೆಂದೂ ಉಲ್ಲೇಖಗಳು ಬರುತ್ತವೆ. ಇವುಗಳಲ್ಲಿ ಹಡಗಿನಲ್ಲಿ ವ್ಯಾಪಾರ ನಡೆಸುತ್ತಿದ್ದವರನ್ನು 'ವಳಂಜಿಯರ್' ಎಂದು ಹೇಳಿರಬಹುದು. ಕೇರಳದ ತೀರ ಪ್ರದೇಶದಲ್ಲಿಯೇ ಶಾಲಿಯಾ ಸಮುದಾಯ ಕಂಡು ಬರುವುದು ಇವರು 'ವಂಜಿ' ಎಂದರೆ 'ದೋಣಿ'ಗಳ ಮೂಲಕ ಒಂದೆಡೆಯಿಂದ ಇನ್ನೊಂದೆಡೆಗೆ ವಸ್ತ್ರಗಳನ್ನು ಸಾಗಿಸಿ ಮಾರಾಟ ಮಾಡುತ್ತಿದ್ದ ಕಾರಣದಿಂದಲೇ ಆಗಿರಬಹುದು. 'ವಳಂಜಿಯರ್' ಎನ್ನುವ ಹೆಸರು ಬಹುಶಃ ಶಾಲಿಯರಿಗೇ ಅನ್ವಯಿಸಿದುದಾಗಿರಬಹುದು. 'ವಂಜಿ' (ದೋಣಿ)ಯಿಂದಲೇ 'ವಳಂಜಿ' ಹುಟ್ಟಿರಬಹುದು. ಇದನ್ನು ಪುಷ್ಟೀಕರಿಸುವಂತೆ ಕೆಲವು ಶಾಲಿಯಾ

ಕ್ಷೇತ್ರಗಳಲ್ಲಿ ಜಲದುರ್ಗೆಯನ್ನು ಆರಾಧಿಸುವುದನ್ನು ಹಾಗೂ ಅವಳ ಪ್ರೀತ್ಯರ್ಥವಾಗಿ 'ಮೀನಮೃತೆಲುನ್ನಳ್ಳತ್ತ್' ಎಂಬ ವಿಶೇಷ ಆಚರಣೆಯನ್ನು ರೂಢಿಸಿಕೊಂಡಿರುವುದು ಕಂಡು ಬರುತ್ತದೆ.

ಶಾಲಿಯರನ್ನು ವಸ್ತ್ರ ನಿರ್ಮಾಣಕ್ಕಾಗಿ ತಮಿಳುನಾಡಿನಿಂದ ಬರಮಾಡಿಕೊಂಡಿರಬೇಕೆಂಬ ವಿಷಯವು ಸರ್ವೇ ಸಾಧಾರಣವಾಗಿ ಸ್ವೀಕರಿಸಲ್ಪಟ್ಟ ಅಭಿಪ್ರಾಯವಾಗಿದೆ. ಇವರು ಬಹುಶಃ ತಮಿಳುನಾಡಿನ ಕಾಂಚೀಪುರದಿಂದಲೋ, ತಂಜಾವೂರಿನಿಂದಲೋ ಬಂದಿರಬೇಕು. ಅಲ್ಲಿ 'ಚೆಟ್ಟಿಯಾರ್' ಎಂಬ ಉಪನಾಮವಿರುವ ನೇಕಾರ ವರ್ಗಕ್ಕೆ ಇವರು ಸೇರಿದವರಾಗಿರಬೇಕು. (ವ್ಯಾಪಾರಿಗಳನ್ನು ಚೆಟ್ಟಿಯಾರ್ ಎಂದು ಕರೆಯುವುದು ಅಲ್ಲಿ ಸರ್ವೇ ಸಾಮಾನ್ಯ. ಆದುದರಿಂದ 'ಚೆಟ್ಟಿಯಾರ್' ಪದವು ಜಾತಿ ಸೂಚಕವಲ್ಲ.) 'ಚೆಟ್ಟಿಯಾರ್' ಎಂಬ ಉಪನಾಮವನ್ನು ಇವರು ಇತ್ತೀಚಿನವರೆಗೂ ಬಳಸಿಕೊಳ್ಳುತ್ತಿದ್ದರು. ಅದಲ್ಲದೆ ಇವರ ಆಚಾರವರ್ಗದಲ್ಲಿ ಪ್ರಮುಖನಾದವನಿಗೆ ಇರುವ ಬಿರುದು ಕೂಡಾ 'ಚೆಟ್ಟಿಯಾರ್ಚನ್' ಎಂದೇ ಆಗಿದೆ. (ಚೆಟ್ಟಿಯಾರ್+ಆಶಾನ್=ಚೆಟ್ಟಿಯರ್ಚನ್) ಕಾಸರಗೋಡು ಭಾಗದ ಶಾಲಿಯರು ತಮಿಳುನಾಡಿನಿಂದ ಕೇರಳಕ್ಕೆ ಬಂದವರು ಎಂಬುದನ್ನು ಈ ಪದವು ಪುಷ್ಟೀಕರಿಸುತ್ತದೆ. ಚೆಟ್ಟಿಯಾರ್ ಎನ್ನುವ ಜಾತಿಯ ಉಪನಾಮದೊಂದಿಗೆ ಆಚಾರವರ್ಗದ ಅಧಿಕಾರ ಸೂಚಕವಾಗಿ ಆಶಾನ್ (ಒಡೆಯ) ಪದವು ಸೇರಿಕೊಳ್ಳುತ್ತದೆ. ಆಗ ಚೆಟ್ಟಿಯಾರ್+ಆಶಾನ್=ಚೆಟ್ಟಿಯರ್ಶನ್ > ಚೆಟ್ಟಿಯಾರ್ಶನ್ > ಚೆಚ್ಚಿಯಾರ್ಚನ್ ಎಂದಾಗುತ್ತದೆ.

ಇವರು ಮೂಲತಃ ಆಂಧ್ರದವರೆಂದೂ, ಒಂದನೆಯ ರಾಜರಾಜಚೋಳನ ಕಾಲದಲ್ಲಿ ಇವರನ್ನು ಅಲ್ಲಿಂದ ತಮಿಳುನಾಡಿಗೆ ಕರೆಸಲಾಯಿತೆಂದೂ ಸ್ಟುವರ್ಟ್ ಹೇಳುತ್ತಾನೆ.

ಕೇರಳದ ಪಯ್ಯನ್ನೂರಿನಲ್ಲಿ ಪ್ರಚಲಿತವಿರುವ 'ಪಯ್ಯನ್ನೂರ್‌ಪಾಟ್' ಎನ್ನುವ ಜನಪದ ಲಾವಣಿಯಲ್ಲಿ ಉಲ್ಲೇಖಿಸಲ್ಪಡುವ 'ನಂಬುಚೆಟ್ಟಿ' ಎನ್ನುವವನು ವಸ್ತ್ರ ವ್ಯಾಪಾರಿಯೆಂದು ಊಹಿಸಲಾಗುತ್ತದೆ. ಅವನ ಹೆಸರಿನ ಜತೆಗಿರುವ 'ಚೆಟ್ಟಿ' ಪದವೇ ಅದನ್ನು ಸೂಚಿಸುತ್ತದೆ. ತ್ರಿಶೂರಿನ 'ನೀಲಕೇಶಿ' ಎಂಬ ಸ್ತ್ರೀ ವಟಿಮಲ (ಪಯ್ಯನ್ನೂರ್) ದ ನಂಬುಚೆಟ್ಟಿಯನ್ನು ವಿವಾಹವಾಗುವ ಕತೆ ಇದರಲ್ಲಿ ಬರುತ್ತದೆ. ಎಡಂಗ ಶಾಲಿಯಾ ಸಮುದಾಯದ ಇತಿಹಾಸವನ್ನು ಶೋಧಿಸಲು ಅತ್ಯಂತ ಉಪಯುಕ್ತವಾದುದು ಪಯ್ಯನ್ನೂರ್ ಪಾಟ್. ಇದು ಸುಮಾರು ಕ್ರಿ. ಶ.೧೩-೧೪ನೆಯ ಶತಮಾನದಲ್ಲಿ ವಿರಚಿತವಾಗಿರಬೇಕು. ಈ ಕಥೆಯ ಸಾರ ಹೀಗಿದೆ :-

ಶಿವಪೇರೂರು (ತ್ರಿಶೂರು) ಎನ್ನುವ ಊರಿನಲ್ಲಿ ಅತ್ಯುಚ್ಚ ಕುಲದಲ್ಲಿ ಹುಟ್ಟಿದವಳು 'ನೀಲಕೇಶಿ' ಎಂಬ ಸ್ತ್ರೀ ಮಕ್ಕಳಿಲ್ಲದೆ ದುಃಖಿತಳಾದ ಅವಳು ಭಿಕ್ಷುಕಿಯಂತೆ ತೀರ್ಥಯಾತ್ರೆ ಮಾಡುತ್ತಾ 'ಏಲುಮಲ'ದ ಸಮೀಪದ ಪಟ್ಟಣಕ್ಕೆ ಬರುತ್ತಾಳೆ. ಅಲ್ಲಿ ಪ್ರಧಾನ ವ್ಯಾಪಾರಿ 'ನಂಬುಚೆಟ್ಟಿ ಎಂಬವನು. ಆತ ಹಡಗಿನಲ್ಲಿ ವ್ಯಾಪಾರ ನಡೆಸುವವನಾಗಿದ್ದನು. ಅನಾಥೆಯಂತೆ ತಿರುಗುತ್ತಿದ್ದ ನೀಲಕೇಶಿಯನ್ನು ಕಂಡು ಕನಿಕರಪಟ್ಟು, ನಂಬುಚೆಟ್ಟಿ, ಆಕೆಯನ್ನು ಕರೆತಂದು ಉಪಚರಿಸಿ, ಅವಳನ್ನೇ ವಿವಾಹವಾದನು. ಅವರಿಗೆ ಓರ್ವ ಪುತ್ರನೂ ಜನಿಸಿದನು. ಅವನಿಗೆ 'ನಂಬುರಾಶಿ' ಎಂದು ನಾಮಕರಣವೂ ಆಯಿತು. ಪುತ್ರೋತ್ಸವದ ಸಂತೋಷಾರ್ಥವಾಗಿ ನೀಲಕೇಶಿಯು ವಿಶಾಲವಾದ ಮೈದಾನದಲ್ಲಿ ಊರಿನವರಿಗೆಲ್ಲಾ ಭೋಜನದ ವ್ಯವಸ್ಥೆಯನ್ನು ಮಾಡಿದಳು. ಯಾದೃಚ್ಛಿಕವಾಗಿ

ಧಾನ್ಯ ವ್ಯಾಪಾರಿಗಳಾದ ನೀಲಕೇಶಿಯ ಸಹೋದರರು ಇದೇ ವೇಳೆಗೆ ಪಯ್ಯನ್ನೂರಿಗೆ ಬಂದಿದ್ದರು. ವಿಶೇಷವಾದ ಈ ಭೋಜನಕೂಟವನ್ನೂ ಅದರ ವೈಭವವನ್ನೂ ಅವರು ಒಂದು ದೇವಾಲಯದ ಗೋಡೆಯ ಮೇಲೆ ನಿಂತು ವೀಕ್ಷಿಸಿದರು. ಅದನ್ನು ಕೆಲವರು ವಿರೋಧಿಸಿದರು. ನಡೆದ ಹೋರಾಟದಲ್ಲಿ ನೀಲಕೇಶಿಯ ಸಹೋದರರು ಕೊಲ್ಲಲ್ಪಟ್ಟರು. ವಿಷಯವನ್ನರಿತ ನೀಲಕೇಶಿ ದುಃಖಿತಳಾಗಿ ಪತಿಯನ್ನೂ ಪುತ್ರನನ್ನೂ ತಿರಸ್ಕರಿಸಿ ಪುನಃ ಭಿಕ್ಷುಕಿಯಾಗಿ ಪಯ್ಯನ್ನೂರನ್ನು ಬಿಟ್ಟು ಹೊರಟು ಹೋದಳು. ಆದರೆ ನಂಬುಚೆಟ್ಟಿ, ತನ್ನ ಮಗನಿಗೆ ಹಡಗಿನಲ್ಲಿ ವ್ಯಾಪಾರ ಮಾಡುವುದನ್ನು ಕಲಿಸಿದನು. ಅವನು 'ಕಚ್ಚಿಲ್' ಎಂಬ ಪಟ್ಟಣದಲ್ಲಿ ಹಡಗನ್ನು ಸಮುದ್ರಕ್ಕಿಳಿಸಿ, ಹಲವು ನಾಡುಗಳನ್ನು ಸಂಚರಿಸಿ, ಇನ್ನೊಂದು ಸಮುದ್ರಕ್ಕೆ ಹೋಗಿ ಆ ದಾರಿಯಲ್ಲಿಯೇ ಪೊನ್ಮಲ ಎನ್ನುವಲ್ಲಿಗೆ ಬಂದು ಸಾಮಾಗ್ರಿಗಳನ್ನು ಮಾರಾಟ ಮಾಡಿ ಸ್ವರ್ಣಗಳೊಂದಿಗೆ ಹಿಂತಿರುಗಿದನು. (ಇಲ್ಲಿ ಸಮುದ್ರದಿಂದ ಇನ್ನೊಂದು ಸಮುದ್ರಕ್ಕೆ ಎಂದರೆ, ಬಹುಶಃ ಪಶ್ಚಿಮ ಸಮುದ್ರದಿಂದ ಪೂರ್ವ ಸಮುದ್ರಕ್ಕೆ ಹೋಗಿರುವ ಸಾಧ್ಯತೆ ಇರಬಹುದು.)

ನಂಬುಚೆಟ್ಟಿಯ 'ಚೆಟ್ಟಿ' ಎನ್ನುವ ಪದವು ಶಾಲಿಯಾ ಸಮುದಾಯದ ಉಪನಾಮವಾದುದರಿಂದ ಆತ ಶಾಲಿಯನೇ ಆಗಿರಬೇಕು. ಆ ಕಾಲದಲ್ಲಿ ಒಬ್ಬರ ವೃತ್ತಿಯನ್ನು ಇನ್ನೊಬ್ಬರು ಅನುಕರಿಸುವಂತೆಯೂ ಇರಲಿಲ್ಲ. ಒಂದು ವೇಳೆ ಅನುಸರಿಸಿದರೆ 'ಜಾತಿ ಭ್ರಷ್ಟರು' ಎಂದು ಗುರುತಿಸಲಾಗುತ್ತಿತ್ತು. ಆದುದರಿಂದ 'ಚೆಟ್ಟಿ'ಯಾದ ನಂಬುಚೆಟ್ಟಿ ನಡೆಸುತ್ತಿದ್ದ ವ್ಯಾಪಾರವೂ ಬಟ್ಟೆ ವ್ಯಾಪಾರವೇ ಆಗಿರಬೇಕು. ಹಡಗಿನಲ್ಲಿ ಆತ ಬಟ್ಟೆ ವ್ಯಾಪಾರ ನಡೆಸುತ್ತಿರಬೇಕಾದರೆ, ಆತನ ಆರ್ಥಿಕ ಸ್ಥಿತಿಯೂ ಬಹಳ ಎತ್ತರದ ಮಟ್ಟದಲ್ಲಿರಬೇಕು. ಅಂದಿನ ಶಾಲಿಯರು ಆರ್ಥಿಕವಾಗಿ ಪ್ರಬಲರಾಗಿದ್ದರು ಎಂದು ಇದರಿಂದ ಸ್ಪಷ್ಟವಾಗುತ್ತದೆ.

ಈ ಕತೆಯು ಶಾಲಿಯರು 'ವಳಂಜಿಯರು' ಹಡಗಿನಲ್ಲಿ ವ್ಯಾಪಾರ ನಡೆಸುತ್ತಿದ್ದವರು ಎಂಬುದನ್ನು ಪುಷ್ಟೀಕರಿಸುತ್ತದೆ. ೧೪-೧೫ ನೇ ಶತಮಾನಕ್ಕಿಂತ ಮುನ್ನ ಉತ್ತಮ ವ್ಯಾಪಾರವನ್ನು ನಡೆಸುತ್ತಿದ್ದ ಅವರು ಕ್ರಮೇಣ ಅಧೋಗತಿಗೆ ಇಳಿದಿರಬೇಕು. ಬಟ್ಟೆ ವ್ಯಾಪಾರವನ್ನೇ ಮೂಲವೃತ್ತಿಯನ್ನಾಗಿಸಿಕೊಂಡ ಇವರು ಜಲಮಾರ್ಗವಾಗಿಯೂ, ನೆಲಮಾರ್ಗವಾಗಿಯೂ, ತಾವು ನೇಯ್ದ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದಿರಬೇಕು. ಈ ವೃತ್ತಿಯೇ ಅವರನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಕೊಂಡೊಯ್ದಿರಬೇಕು. ಜಲಮಾರ್ಗವಾಗಿ ಪೂರ್ವ ಕರಾವಳಿಯಿಂದ ಪಶ್ಚಿಮ ಕರಾವಳಿಗೆ ಬಂದು ಕೇರಳದ ತೀರಪ್ರದೇಶದಲ್ಲಿ ನಿಂತು, ನೆಲಮಾರ್ಗವಾಗಿ ಕೇರಳದ ಒಳಪ್ರದೇಶಗಳಿಗೆ ಇವರು ವ್ಯಾಪಿಸಿರಬಹುದು. ತೀರ ಪ್ರದೇಶದಿಂದ ಕಾಲ್ನಡಿಗೆಯ ದೂರದ ಒಳಪ್ರದೇಶದವರೆಗೆ ಮಾತ್ರ ಇವರು ವ್ಯಾಪಿಸಿರುವುದು ಈ ಕಾರಣದಿಂದ ಆಗಿರಬಹುದು. ಕೇರಳದ ತೀರಪ್ರದೇಶದಲ್ಲಿ ತಂಗಿದ ಶಾಲಿಯರು ಈ ರೀತಿ ನೆಲಮಾರ್ಗವಾಗಿ ವ್ಯಾಪಾರ ನಡೆಸುತ್ತಾ ಉತ್ತರಕ್ಕೆ ಎಂದರೆ ಅಂದಿನ ತುಳುನಾಡಿಗೆ ಬಂದಿರಬೇಕು. ಕ್ರಮೇಣ ಒಂದೊಂದೇ ಕುಟುಂಬಗಳು ಬಂದು ಈ ಪ್ರದೇಶದಲ್ಲಿ ವ್ಯಾಪಿಸಿರುವ ಸಾಧ್ಯತೆಗಳೇ ಹೆಚ್ಚಾಗಿವೆ.

ಪಟ್ಟುವಂ ತೆರುವಿಗೆ ಇದ್ದ ಮೂಲ ಹೆಸರಾದ 'ಪಟ್ಟುವಾಣಿಬ' ಎನ್ನುವ ಹೆಸರೂ 'ರೇಶ್ಮೆ ವಾಣಿಜ್ಯ' ಎನ್ನುವ ಅರ್ಥವನ್ನು ಕೊಡುತ್ತದೆ. 'ವಾಣಿಬ' ಎಂಬ ಪದವು ಉನ್ನತ ಮಟ್ಟದ ವ್ಯಾಪಾರವನ್ನು ಸಂಕೇತಿಸುತ್ತದೆ. ಬಟ್ಟೆಯ ನೇಯ್ಗೆ ಮತ್ತು ವ್ಯಾಪಾರ ಎರಡನ್ನೂ ಜತೆಜತೆಯಾಗಿ ಇವರು ನಡೆಸುತ್ತಿದ್ದರು. ಆದುದರಿಂದ ಇವರು

ಉತ್ತಮ ವ್ಯಾಪಾರಿಗಳಾಗಿದ್ದರು ಎನ್ನುವುದಕ್ಕೆ ಇದೂ ಸಾಕ್ಷಿಯಾಗಿದೆ. ಬಹುಶಃ 'ಪಟ್ಟುವ'ವು ಪಟ್ಟೆವಸ್ತ್ರ ನಿರ್ಮಾಣ ಮತ್ತು ಮಾರಾಟದ ಕೇಂದ್ರವಾಗಿರಬೇಕು.

**ವಲಸೆ :-** ಬೇರೆ ಬೇರೆ ಕಾಲಗಳಲ್ಲಿ ಕರ್ನಾಟಕ, ತಮಿಳುನಾಡು, ಆಂಧ್ರ, ಕೇರಳ ಮೊದಲಾದ ಕಡೆಗಳಿಂದ ನೇಕಾರ ವರ್ಗ ತುಳುನಾಡಿನ ಕಡೆಗೆ ವಲಸೆ ಬರುತ್ತಾ ಇತ್ತು. ಪ್ರದೇಶದಿಂದ ಪ್ರದೇಶಕ್ಕೆ ಜನಾಂಗದ ವಲಸೆ ಬಹಳ ಹಿಂದಿನಿಂದಲೇ ನಡೆದು ಬಂದಿದೆ. ಗುಂಪಾಗಿಯೋ, ಕುಟುಂಬ ಸಮೇತವಾಗಿಯೋ, ಏಕಾಂಗಿಯಾಗಿಯೋ ಒಂದೆಡೆಯಿಂದ ಇನ್ನೊಂದೆಡೆಗೆ ಮಾನವನು ವಲಸೆ ಹೋಗುತ್ತಾನೆ. ಹೀಗೆ ವಲಸೆ ಬಂದ ಪ್ರದೇಶದಲ್ಲಿ ತಮಗೆ ಪ್ರಸಕ್ತ ಎಂದು ಅನ್ನಿಸಿದರೆ, ತಮ್ಮ ನಿಕಟ ಬಂಧುಗಳನ್ನು ತಾವಿದ್ದಲ್ಲಿಗೆ ಬರಮಾಡಿಕೊಳ್ಳುತ್ತಾರೆ. ವ್ಯಾಪಾರವೇ ಪ್ರಮುಖವಾದ ಸಮುದಾಯಗಳಂತೂ ಈ ರೀತಿ ವಲಸೆ ಹೋಗಿ ನೆಲೆಸುವುದು ಹೆಚ್ಚು. ತಮ್ಮ ಜೀವನೋಪಾಯದ ಸಂಪಾದನೆ ಎಲ್ಲಿ ಅಧಿಕವಾಗಿರುತ್ತದೋ ಆ ಕಡೆಗೆ ವಲಸೆ ಬರುವವರೇ ಹೆಚ್ಚು. ಮನುಷ್ಯ ಸುಖವನ್ನು ಅರಸುವವನು. ಅದು ಎಲ್ಲಿ ಸಿಗುತ್ತದೋ ಅಲ್ಲಿಗೆ ಹೋಗಲು ಆತ ಬಯಸುತ್ತಾನೆ. ಹೆಚ್ಚು ಕಷ್ಟಪಡದೆ, ಅಧಿಕ ಸಂಪಾದನೆಯಿರುವ ಪ್ರದೇಶದೆಡೆಗೆ ಅವನಿಗೆ ಯಾವತ್ತೂ ಆಕರ್ಷಣೆ ಇದ್ದೇ ಇರುತ್ತದೆ. ಇದು ವಲಸೆ ಬರಲು ಪ್ರಮುಖ ಕಾರಣ. ಇದರೊಂದಿಗೆ 'ಇತಿಹಾಸ'ದಲ್ಲಿ ಇನ್ನೊಂದು ಕಾರಣವೂ ಕಂಡು ಬರುತ್ತದೆ. ಹಿಂದೆ ಯುದ್ಧಾಸಕ್ತ ರಾಜರುಗಳ ಆಡಳಿತದ ಕಾಲದಲ್ಲಿ ಜನ ಸಾಮಾನ್ಯರಿಗೆ 'ಜೀವನ ಸುರಕ್ಷತೆ'ಯೇ ಒಂದು ಸಮಸ್ಯೆಯಾಗಿತ್ತು. ಹೆಚ್ಚು ಹೆಚ್ಚು ಯುದ್ಧ ನಡೆಯುತ್ತಿರುವಂತಹ ಪ್ರದೇಶಗಳಿಂದ ಜನರು ಸಹಜವಾಗಿಯೇ ಸುರಕ್ಷಿತವಾದ ಜಾಗಕ್ಕೆ ವಲಸೆ ಬರುತ್ತಿದ್ದರು. ತುಳುನಾಡಿನ ಇತಿಹಾಸವನ್ನು ನೋಡಿದಾಗ, ಅಂತಹ ಭೀಕರವಾದ ಕದನಗಳು ನಡೆದ ಚರಿತ್ರೆ ದೊರಕುವುದಿಲ್ಲ. ಈ ಅರ್ಥದಲ್ಲಿ ವಲಸೆ ಬರುವವರಿಗೆ ತುಳುನಾಡು ಸುರಕ್ಷತೆಯ ತಾಣವೂ ಆಗಿತ್ತು. ಆದುದರಿಂದಲೇ ಇತ್ತ ಕಡೆ ಈ ಸಮುದಾಯ ವಲಸೆ ಬಂದಿರುವ ಸಾಧ್ಯತೆ ಇದೆ. ತುಳುನಾಡಿನ ಕರಾವಳಿಯ ಹವಾಮಾನ ; ನಿರಪಾಯಕಾರಿಯಾದ ವಾತಾವರಣವನ್ನು ಕಂಡ ಈ ಜನಾಂಗ ಕ್ರಮೇಣ ತಮ್ಮ ಸಮುದಾಯದ ಇತರರನ್ನು ಇಲ್ಲಿಗೆ ಕರೆತಂದಿರಬೇಕು.

# ಅಧ್ಯಾಯ ೨

## ೩. ದಕ್ಷಿಣ ಭಾರತದ ವಿವಿಧ ನೇಕಾರರು

೫೦೦೦ ಕ್ಕಿಂತಲೂ ಹೆಚ್ಚು ಜಾತಿಗಳಿರುವ ದೇಶ ನಮ್ಮದು. ವೃತ್ತಿಯ ಹಿನ್ನೆಲೆಯಲ್ಲಿ ಜಾತಿ ತೀರ್ಮಾನಗೊಳ್ಳುವ ಇಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಒಂದೇ ವೃತ್ತಿಯವರು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಟ್ಟು, ಕ್ರಮೇಣ ಪ್ರತ್ಯೇಕವಾದ ಜಾತಿಗಳೇ ಆಗಿ ಮಾರ್ಪಡುವುದು ಕಂಡುಬರುತ್ತದೆ. ಒಂದೇ ಜಾತಿ ಒಡೆದು ಹಲವು ಜಾತಿಗಳಾಗುವ ಈ ಪ್ರಕ್ರಿಯೆ ಭಾರತದ ಇತಿಹಾಸದುದ್ದಕ್ಕೂ ಪುರಾತನ ಕಾಲದಿಂದಲೇ ನಡೆದು ಬಂದಿದೆ. ಆರಂಭದಲ್ಲಿ ನಾಲ್ಕು ವರ್ಣಗಳು ಹುಟ್ಟಿಕೊಂಡವು. ಅನಂತರ ಆ ವರ್ಣಗಳಲ್ಲೇ ವೃತ್ತಿಗನುಸಾರವಾಗಿ ಹಲವು ಜಾತಿಗಳು ಹುಟ್ಟಿಕೊಂಡವು. ಮುಂದೆ ಒಂದೇ ವೃತ್ತಿಯನ್ನವಲಂಬಿಸಿದವರಲ್ಲೇ ಉಪಜಾತಿಗಳೂ, ಪಂಗಡಗಳೂ ಹುಟ್ಟಿಕೊಂಡದ್ದು ಕಂಡುಬರುತ್ತದೆ. ಹೀಗೆ ವೃತ್ತಿಯಿಂದ ಹಲವು ಜಾತಿಗಳು ಹುಟ್ಟಿಕೊಳ್ಳುತ್ತವೆ ಎನ್ನುವುದಕ್ಕೆ ನೇಕಾರ ಸಮುದಾಯವು ಉತ್ತಮ ಉದಾಹರಣೆಯಾಗಿದೆ. ನೇಕಾರರ ಕುರಿತಾಗಿ ಅಧ್ಯಯನವನ್ನು ಕೈಗೊಳ್ಳುವಾಗ ದೊರೆತಂತಹ ನೇಕಾರರ ಜಾತಿಯ ಹೆಸರುಗಳು ವಿಭಿನ್ನವಾಗಿವೆ. ಕೆಲವೊಮ್ಮೆ ಒಂದೇ ಪಂಗಡಕ್ಕೆ ಹಲವು ಹೆಸರುಗಳಿರುವುದೂ ಕಂಡುಬರುತ್ತದೆ. ತಮ್ಮತಮ್ಮಲ್ಲೇ ತರ-ತಮ ಭಾವನೆಗಳನ್ನಿರಿಸಿ ಪ್ರತ್ಯೇಕ ಪ್ರತ್ಯೇಕಗೊಂಡಿರುವುದೂ ಇದೆ. ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ ಕೆಲವು ನೇಕಾರರ ಹೆಸರುಗಳು ಹಾಗೂ ಸಂಕ್ಷಿಪ್ತ ಪರಿಚಯ ಇಲ್ಲಿದೆ.

ದಕ್ಷಿಣ ಭಾರತದ ನೇಕಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವವರು ದೇವಾಂಗರು ಮತ್ತು ಪದ್ಮಶಾಲಿಯರು.

೧. ದೇವಾಂಗರು:- ದೇವಾಂಗರು ಎಂದು ಕರೆಯಲ್ಪಡುವ ನೇಕಾರ ಸಮುದಾಯವು ಭಾರತದಲ್ಲೇ ಅತೀ ದೊಡ್ಡ ನೇಕಾರ ಸಮುದಾಯ. ಭಾರತದಲ್ಲಿರುವ ೧೨ ಕೋಟಿ ನೇಕಾರರಲ್ಲಿ ಮೂರು-ನಾಲ್ಕು ಕೋಟಿಗಳಷ್ಟು ನೇಕಾರರು ದೇವಾಂಗರು ಎಂದು ಕರೆಯಲ್ಪಡುತ್ತಾರೆ. ಇವರು ದೇವಲ ಮಹರ್ಷಿಯನ್ನು ತಮ್ಮ ಮೂಲ ಪುರುಷ ಎನ್ನುತ್ತಾರೆ. ಇವರೊಳಗೇ ಹಲವು ಉಪಪಂಗಡಗಳಿವೆ. ಚೌಡೇಶ್ವರಿ ಇವರ ಆರಾಧ್ಯದೇವತೆ. ಇವರ ಗೋತ್ರಗಳು ೬೪ ಎಂದು ಹೇಳಲಾಗಿದೆ. ಐತಿಹ್ಯಗಳ ಪ್ರಕಾರ ಗಾಯತ್ರೀ ಪೀಠವನ್ನು ದೇವಾಂಗರು

ಪಡೆದುಕೊಂಡರೆಂದೂ, ಅವುಗಳು ಕಾಶಿ, ಶ್ರೀಶೈಲ, ಹಂಪಿ, ಸೋಣಾಚಲ, ಶಂಭುಶೈಲಗಳೆಂದೂ ತಿಳಿದುಬಂದಿದೆ. ಎಲ್ಲಾ ಪೀಠಗಳೂ ಗೃಹಸ್ಥಾಶ್ರಮದ ಹಿನ್ನೆಲೆಯಿಂದ ಪಾರಂಪರಿಕವಾಗಿ ಬರುತ್ತಿತ್ತು. ಹೀಗಿದ್ದರೂ ಕೆಲವು ಪೀಠಗಳು ಹಲವು ವರ್ಷಗಳಿಂದ ಶೂನ್ಯವೇ ಆಗಿ ಉಳಿದಿವೆ. ಹಂಪಿಯ ಗಾಯತ್ರೀ ಪೀಠವು ವಿಜಯನಗರದ ಅಧ:ಪತನದ ಕಾಲದಿಂದ ಪೀಠಾಧಿಪತಿಗಳಿಲ್ಲದೆ ಶೂನ್ಯವಾಗಿತ್ತೆಂದೂ, ೧೯೯೦ ರಲ್ಲಿ ಶ್ರೀ ದಯಾನಂದಪುರಿ ಸ್ವಾಮೀಜಿಯವರು ಇದರ ಪೀಠವನ್ನು ಆರೋಹಣ ಮಾಡಿದರೆಂದೂ ತಿಳಿದುಬಂದಿದೆ.

೨. ಪದ್ಮಶಾಲಿ: ದೇವಾಂಗರ ಅನಂತರದ ಬಹುದೊಡ್ಡ ನೇಕಾರ ವರ್ಗ ಪದ್ಮಶಾಲಿ. ಆಂಧ್ರ, ತಮಿಳುನಾಡು, ಕರ್ನಾಟಕ, ಕೇರಳಗಳಲ್ಲಿ ಇವರು ಹರಡಿಕೊಂಡಿದ್ದಾರೆ. ಭಾವನಾಋಷಿಯು ಇವರ ಮೂಲಪುರುಷ. ಇವರಲ್ಲಿ ೧೦೧ ಗೋತ್ರಗಳೂ ಹಲವು ಉಪಪಂಗಡಗಳೂ ಇವೆಯೆಂದು ತಿಳಿದುಬಂದಿದೆ. ಇವರು ಗಾಯತ್ರೀ ಮಠವನ್ನೇ ತಮ್ಮ ಮಠವೆಂದು ಸ್ವೀಕರಿಸುವುದನ್ನು ನೋಡಿದರೆ, ಮೂಲತ: ದೇವಾಂಗ ಮತ್ತು ಪದ್ಮಶಾಲಿಯರು ಒಂದೇ ಆಗಿದ್ದರು ಮತ್ತು ಈಗ ಒಂದಾಗಲು ಬಯಸುತ್ತಿದ್ದಾರೆ ಎಂದು ಹೇಳಬಹುದು. ಇವರು ಮಾರ್ಕಾಂಡೇಯ ಋಷಿಯ ಆರಾಧಕರು. ದೇವಾಂಗರನ್ನು ಬಲಂಗೈಯವರೆಂದೂ, ಪದ್ಮಶಾಲಿಯರನ್ನು ಎಡಂಗೈಯವರೆಂದೂ ಹೇಳಲಾಗುತ್ತದೆ.

೩.ಕುರುಹಿನ ಶೆಟ್ಟಿ: ಪದ್ಮಶಾಲಿಗರಿಂದ ಲಿಂಗಾಯತರಾಗಿ ಪ್ರತ್ಯೇಕಗೊಂಡ ವರ್ಗವೇ ಕುರುವಿನ ಶೆಟ್ಟಿ ಎಂದು ಹೇಳಲಾಗುತ್ತದೆ. ಆದರೆ ಇತ್ತೀಚೆಗೆ ಇವರು ಲಿಂಗಾಯತ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ. ಲಿಂಗಾಯತರಲ್ಲದವರೊಡನೆ ಸಂಬಂಧ ಬೆಳೆಸುತ್ತಾರೆ. ನೀಲಕಂಠೇಶ್ವರ ಇವರ ಆರಾಧ್ಯದೈವ. ತೆಲುಗು, ಕನ್ನಡ ಎರಡನ್ನೂ ಮಾತನಾಡುತ್ತಾರೆ. ಇವರಲ್ಲಿ ೬೬ ಗೋತ್ರಗಳಿವೆ. ದಕ್ಷಿಣ ಕನ್ನಡದ ಕಾರ್ಕಳದಲ್ಲಿ ಜಾಡರು ಎಂದು ಗುರುತಿಸಲ್ಪಡುವವರು ಈ ಕುರುಹಿನ ಶೆಟ್ಟಿ ವರ್ಗಕ್ಕೆ ಸೇರಿದವರೇ ಆಗಿರುತ್ತಾರೆ. ಇವರು ಶೈವರಾದುದರಿಂದ 'ರುದ್ರಜಾತಿ' ಎಂದೂ ಕರೆಯಲ್ಪಡುತ್ತಾರೆ. ೧೯ನೇ ಶತಮಾನದಲ್ಲಿ ಇವರು ಮತಪರಿವರ್ತನೆ ಹೊಂದಿದವರು ಎನ್ನಲಾಗಿದೆ. ದಾವಣಗೆರೆ ಚಿತ್ರದುರ್ಗ, ಹರಿಹರ, ಕಂಪ್ಲಿ, ಹೊಸಪೇಟೆ, ಚಿಕ್ಕಮಗಳೂರು ಭಾಗಗಳಲ್ಲಿ ಇವರು ಹೆಚ್ಚಾಗಿ ಕಂಡುಬರುತ್ತಾರೆ.

೪. **ಕೈಕೋಳನ್:** ತಮಿಳುನಾಡಿನಲ್ಲಿ ಬಹಳಷ್ಟು ವ್ಯಾಪಿಸಿರುವ ನೇಕಾರರ ವರ್ಗವಿದು. ಇವರಿಗೆ ಚೆಂಗುಂದರ್ ಅಥವಾ ಶೆಂಗುಂದರ್ ಎಂಬ ಹೆಸರಿದೆ. ಇವರು ಮೂಲತ: ಸೌರಾಷ್ಟ್ರದವರೆಂದೂ, ಮರಾಠರ ಆಡಳಿತದ ಕಾಲದಲ್ಲಿ ತಮಿಳುನಾಡಿಗೆ ಬಂದರೆಂದೂ ಹೇಳಲಾಗುತ್ತದೆ. ತಮಿಳುನಾಡಿನಲ್ಲಿ ಸುಮಾರು ೩,೪೦,೦೦೦ ದಷ್ಟು ಇವರ ಸಂಖ್ಯೆಯಿದೆ. 'ಮೊದಲಿಯಾರ್' ಎಂಬ ಉಪನಾಮವೂ ಇವರಿಗಿದೆ. ಕೊಯಂಬತ್ತೂರು, ಉತ್ತರ ಆರ್ಕಾಡ್, ಮಧುರೈ ಭಾಗಗಳಲ್ಲಿ ಇವರು ಬಹಳ ಹಿಂದಿನಿಂದಲೇ ನೇಯ್ಗೆ ಕಾಯಕ ಮಾಡುತ್ತಿದ್ದರು ಎನ್ನಲಾಗಿದೆ. ಇವರಲ್ಲಿ ೪ ಉಪವಿಭಾಗಗಳಿವೆ ಎಂದು ಥರ್ಸ್ಟನ್ ಹೇಳುತ್ತಾನೆ. ೧) ಸೋರಿಝಿಯ, ೨) ರಟ್ಟು ೩) ಚಿರುತಾಲಿ ಮತ್ತು ೪) ಪಿರುತಾಲಿ. ಹಾಗೇ ಈ ಸಮುದಾಯವು ೭೨ ನಾಡುಗಳಾಗಿ ವಿಭಜಿಸಲ್ಪಟ್ಟಿದ್ದು ೪೪ ನಾಡುಗಳ ಒಂದು ಗುಂಪು ಹಾಗೂ ೨೮ ನಾಡುಗಳ ಇನ್ನೊಂದು ಗುಂಪು ಇದರಲ್ಲಿದೆ. ಮೊದಲನೆಯ ಗುಂಪು ಮೇಲ್ವರ್ಗವೆಂದೂ ಎರಡನೆಯ ಗುಂಪು ಕೆಳವರ್ಗವೆಂದೂ ಹೇಳಲಾಗುತ್ತದೆ(ಥರ್ಸ್ಟನ್:೧೯೦೭). ಒಂದು ಕಾಲದಲ್ಲಿ ಇವರಲ್ಲಿ ದೇವದಾಸಿ ಪದ್ಧತಿ ಇತ್ತು ಎನ್ನಲಾಗಿದೆ.

೫. ಕುರ್ಣಿ: ಕುರ್ ಎಂದರೆ ಕುರಿ ವಣ್ಣಿ ಎಂದರೆ ರೋಮ. ಕುರಿಯ ರೋಮದಿಂದ ಕಂಬಳಿ ನೇಯುವವರು ಕುರ್ಣಿಗಳು ಎಂದು ಕರೆಯಲ್ಪಡುತ್ತಾರೆ. ಇವರಿಗೆ 'ಕುಣಿಗಿರಿ' ಎನ್ನುವ ಇನ್ನೊಂದು ಪರ್ಯಾಯ ನಾಮವೂ ಇದೆ. ಬಳ್ಳಾರಿ ಮತ್ತು ಆಂಧ್ರದಲ್ಲಿ ಇವರು ಕಂಡುಬರುತ್ತಾರೆ. ಇತ್ತೀಚೆಗೆ ಇವರು ಪಟ್ಟೆವಸ್ತ್ರಗಳನ್ನೂ ಹತ್ತಿಬಟ್ಟೆಗಳನ್ನೂ ನೇಯುತ್ತಾರೆ. ಶಲಿಕ ಎನ್ನುವುದು ಇವರ ಒಂದು ಗೋತ್ರ. ಇವರಲ್ಲಿ ಎರಡು ವಿಭಾಗಗಳಿವೆ. ಹಿರೇ ಮತ್ತು ಚಿಕ್ಕೆ. ಕುರುವಿನ ಶೆಟ್ಟಿಯವರಂತೆ ಇವರಿಗೂ ೬೬ ಗೋತ್ರಗಳಿವೆ. ಅವರದೇ ಪುರೋಹಿತರೂ ಇದ್ದಾರೆ. ಪುರೋಹಿತರನ್ನು ಚಿಟ್ಟಿಕಾರನ್ ಎಂದು ಕರೆಯುತ್ತಾರೆ. ಇವರಲ್ಲಿ ವಿಧವಾ ವಿವಾಹಕ್ಕೆ ಆಸ್ಪದವಿದೆ. ಆದರೆ ಅವಳು ಎರಡು ರಾತ್ರಿಗಳನ್ನು ದೇವಾಲಯದಲ್ಲಿ ಒಂಟಿಯಾಗಿ ಕಳೆಯಬೇಕು ಎಂಬ ನಿಯಮವಿದೆ.

೬. ಪಟ್ಟುನೂಲ್ ಕಾರನ್: ತಮಿಳುನಾಡಿನ ಕೆಲವು ಜಿಲ್ಲೆಗಳಲ್ಲಿ ಕಂಡುಬರುವ ನೇಕಾರ ವರ್ಗ . ಇವರನ್ನು ಸೌರಾಷ್ಟ್ರದವರು ಎಂದೂ ಕರೆಯುತ್ತಾರೆ. ಗುಜರಾತ್ ಹಾಗೂ ತಮಿಳುನಾಡಿನಲ್ಲಿ ಶಾಸನಗಳಲ್ಲಿ ಇವರ ಬಗ್ಗೆ ಉಲ್ಲೇಖವಿದೆ. ಪಟ್ಟಿಯುಕ ಎಂದು ಅಲ್ಲಿ ಗುರುತಿಸಲಾಗಿದೆ. ಇವರು ತಮ್ಮನ್ನು ಸೌರಾಷ್ಟ್ರ ಬ್ರಾಹ್ಮಣರು ಎಂದು ಗುರುತಿಸಿಕೊಳ್ಳುತ್ತಾರೆ. ಹಿಂದೆ

ಇವರು ಬ್ರಾಹ್ಮಣರಂತೆ ಋಗುಪಾಕರ್ಮದ ದಿನ ಜನಿವಾರವನ್ನು ಬದಲಾಯಿಸುವುದನ್ನು ವಿರೋಧಿಸಿ ಬ್ರಾಹ್ಮಣ ವರ್ಗವು ಮದ್ರಾಸು ಗವರ್ನರವನಿಗೆ ದೂರು ಕೊಟ್ಟಿತೆಂದೂ, ಆತ ೧೮ ಮಂದಿಯನ್ನು ಬಂಧಿಸಿದನೆಂದೂ, ವಿವಾದವು ರಾಣಿ ಮಂಗಮ್ಮನ ಬಳಿಗೆ ನ್ಯಾಯ ತೀರ್ಮಾನಕ್ಕಾಗಿ ಬಂದಾಗ ಆಕೆ ಇವರ ಪರವಾಗಿ ನ್ಯಾಯವನ್ನಿತ್ತಳೆಂದೂ ಹೇಳಲಾಗುತ್ತದೆ. ಇವರು ಕೆಲವೊಮ್ಮೆ ತಮ್ಮನ್ನು ಕ್ಷತ್ರಿಯರು ಎಂದೂ ಹೇಳಿಕೊಳ್ಳುವುದಿದೆ. ತಮ್ಮ ಹೆಸರುಗಳ ಮುಂದೆ ಅಯ್ಯಂಗಾರ್, ಅಯ್ಯರ್, ರಾವ್, ಭಾಗವತರ್, ಶಾಸ್ತ್ರಿ ಮುಂತಾದ ಉಪನಾಮಗಳನ್ನು ಇವರು ಹಾಕಿಕೊಳ್ಳುತ್ತಾರೆ. ವಿಧವಾ ವಿವಾಹವನ್ನು ಇವರು ವಿರೋಧಿಸುತ್ತಾರೆ. ಹಣೆಯಲ್ಲಿ ಅಯ್ಯಂಗಾರ್ ಚಿಹ್ನೆಯ ನಾಮವನ್ನು ಹಾಕುತ್ತಾರೆ. ಸಸ್ಯಾಹಾರವನ್ನು ಕಡ್ಡಾಯವಾಗಿ ಪಾಲಿಸುತ್ತಾರೆ. ಶಾಸ್ತ್ರೀಯವಾದ ನೇಯ್ಗೆ ಕಾಯಕವನ್ನು ಇವರು ಅನುಸರಿಸುತ್ತಾರೆ.

೭. ತಂತುವರ್ಧನನ್: ತಮಿಳುನಾಡಿನಲ್ಲಿ ಬ್ರಾಹ್ಮಣರಂತೆ ಇರುವ ಇನ್ನೊಂದು ನೇಕಾರ ವರ್ಗ. ಇವರನ್ನು 'ತಂತುವಾಯನ್' ಎಂದೂ ಹೇಳುತ್ತಾರೆ. ಚೆಟ್ಟಿ ಎನ್ನುವ ಉಪನಾಮದಿಂದ ಗುರುತಿಸಲ್ಪಡುತ್ತಾರೆ. ಬಟ್ಟೆ ವ್ಯಾಪಾರ ಇವರ ಮುಖ್ಯ ಕಸಬು. ನೇಯ್ಗೆಯನ್ನು ಮಾಡುತ್ತಾರೆ. ಆದರೆ ಬಹಳ ಕಡಿಮೆ. ಮುಖ್ಯವಾಗಿ ವ್ಯಾಪಾರಿಗಳೆಂದೇ ಇವರು ತಮಿಳುನಾಡಿನಲ್ಲಿ ಪರಿಚಿತರು .

೮. ತೆರುವನ್: ಕೊಡಗಿನ ಭಾಗಗಳಲ್ಲಿ ಕಂಡುಬರುವ ನೇಕಾರ ವರ್ಗ. ಬಹುಶ: ಇವರು ಕೇರಳದ ಶಾಲಿಯಾ ತೆರುಗಳಿಂದ ಹೋದವರಾಗಿರಬಹುದು. ತೆರುವಿನಿಂದ ಬಂದವನು, ತೆರುವಿನಲ್ಲಿ ವಾಸಿಸುವವನು ಎಂಬ ಅರ್ಥದಲ್ಲಿ 'ತೆರುವನ್' ಪದ ಬಳಕೆಯಾಗಿದೆ. ಎಡಂಗ ಶಾಲಿಯರಂತೆ ಇವರೂ ಶಕ್ತಿ ಆರಾಧಕರು. ನಿರ್ದಿಷ್ಟ ಮೂರ್ತಿಗಳನ್ನು ಇರಿಸಿ ಆರಾಧಿಸುವುದಿಲ್ಲ. ದರ್ಶನಪಾತ್ರಿಗಳಿಗೆ ದೈವಾವೇಶವಾಗುವುದು ಸಾಮಾನ್ಯ.

೯. ನೆಯ್ತಿಕ್ಕಾರ್: ಕೇರಳದ ಕರಾವಳಿ ತೀರಗಳಲ್ಲಿ ತೆಂಗಿನ ಹುರಿಹಗ್ಗವನ್ನು ನೇಯುವ ಒಂದು ವರ್ಗವನ್ನು ಈ ಹೆಸರಿನಿಂದ ಕರೆಯುತ್ತಾರೆ. ಆದರೆ ಕೇರಳದ ಶಾಲಿಯಾ ಸಮುದಾಯದ ಯಾವ ಸಂಬಂಧವೂ ಇವರಿಗೆ ಇಲ್ಲ. ಕರಾವಳಿಯ ಮೋಯ ಜನಾಂಗದ ಒಂದು ಉಪವಿಭಾಗವಿದು ಎಂದು ಹೇಳಲಾಗುತ್ತದೆ.

೧೦. ಸಮಯಮೂವರು: ರಣ ಸಮಯಮೂವರು ಪದದ ಸಂಕ್ಷಿಪ್ತ ರೂಪವೇ ಸಮಯಮೂವರು. ಎಂದರೆ ಯುದ್ಧರಂಗದಲ್ಲಿ ಯುದ್ಧಮಾಡುವವನು. ಪದ್ಮಶಾಲಿಯರ

ಮೂಲಪುರುಷನಾದ ಭುವನ ಮಹರ್ಷಿಯ ಜತೆಗೆ ಕಾಲವಾಸನನ್ ಎನ್ನುವ ರಾಕ್ಷಸನನ್ನು ಸಂಹಾರಮಾಡಲು ಇವರನ್ನು ಕರೆಸಿದರೆಂದು ಹೇಳಲಾಗುತ್ತದೆ.

೧೧. ಪಟ್ಟಾರ್ಯ: ದಕ್ಷಿಣ ಕೇರಳದ ಕೆಲವು ಭಾಗಗಳಲ್ಲಿ ಪಟ್ಟಾರ್ಯ ಎಂದು ಕರೆಯಲ್ಪಡುವ ನೇಕಾರ ವರ್ಗವಿದೆ. ತ್ರಿಶೂರು ಕಾನಾಟ್ಟುಂಗರ ಕೊಡುಂಗಲ್ಲೂರು ಇರಿಞ್‌ಲಕ್ಕುಡ, ಕೂಡೆಲ್ ಮಾಣಿಕ್ಯ ಕ್ಷೇತ್ರ ಪರಿಸರದಲ್ಲಿ ಇವರು ಜೀವಿಸುತ್ತಾರೆ. ಕೊಡುಂಗಲ್ಲೂರು ಭಗವತಿಯ ಪ್ರಮುಖ ಆರಾಧಕರು. ಹಾಗೇ ಗಣಪತಿಯನ್ನೂ ಆರಾಧಿಸುತ್ತಾರೆ. 'ಪಿಳ್ಳೆ' ಎನ್ನುವ ಉಪನಾಮವನ್ನು ಬಳಸಿಕೊಳ್ಳುತ್ತಾರೆ. ಗುರುವಾಯೂರಿನಲ್ಲಿ ಇವರನ್ನು 'ತಗರನ್ಮಾರ್' ಎಂದು ಕರೆಯುತ್ತಾರೆ.

೧೨. ಪಣಿಕ್ಕನ್: ಮಧುರೈ ಮತ್ತು ತಿರುನೆಲ್ವೇಲಿಯಲ್ಲಿ ಕಂಡುಬರುವ ನೇಕಾರ ವರ್ಗ. ಈ ಹೆಸರು ಕೂದಲು ತೆಗೆಯುವ ಕ್ಷೌರಿಕರಿಗೂ ಇದೆ.

೧೩. ತೊಗಟೆ: ದೇವಾಂಗರಂತೆ ಚೌಡೇಶ್ವರಿಯ ಆರಾಧಕರಾಗಿ ಇವರು ಕಂಡುಬರುತ್ತಾರೆ.

ಇವರನ್ನು ತೊಗಟವೀರರು ಎಂದೂ ಕರೆಯುತ್ತಾರೆ. ಪದ್ಮಶಾಲಿ ಮತ್ತು ತೊಗಟರಲ್ಲಿ ಕೆಲವು ಸಾಮ್ಯತೆಗಳಿವೆ.

೧೪. ಶಾಲಿ: ಆಂಧ್ರದಲ್ಲಿ ಕಂಡುಬರುವ ನೇಕಾರವರ್ಗದವರನ್ನೆಲ್ಲಾ ಶಾಲಿ ಎಂದೇ ಕರೆಯುತ್ತಾರೆ. ಪಟ್ಟು ಶಾಲಿ , ಸ್ವಕುಲಶಾಲಿ, ಸಮಯ ಶಾಲಿ, ಪದ್ಮಶಾಲಿ ಎಂದು ಹಲವು ಪ್ರಭೇದಗಳು ಇವರಲ್ಲಿವೆ. ಶಲಿಕ ಎಂಬ ಸಂಸ್ಕೃತ ಪದದಿಂದ ಇದು ಬಂದಿದೆ. ಇವರ ಹಿರಿಯರು ಸೇನಾಪತಿಗಳಾಗಿದ್ದರೆಂದು ಹೇಳಿಕೊಳ್ಳುತ್ತಾರೆ. ತಂಜಾವೂರು ಜಿಲ್ಲೆಯಲ್ಲಿ ಇವರು ಸಮೂಹವಾಗಿ ಜೀವಿಸುತ್ತಾರೆ.

೧೫. ಶಾಲಿಯಾ:- ಮಲಬಾರಿನಲ್ಲಿ ಜೀವಿಸುವ ನೇಕಾರ ವರ್ಗವಿದು. ಇವರಲ್ಲಿ ಎಡಂಗ, ಬಲಂಗ ಎಂದು ಎರಡು ಪ್ರಬೇಧಗಳಿವೆ.

೧೬. ನೇಯ್ಗಿ: ಮೈಸೂರು ಜಿಲ್ಲೆಯ ೧೮೯೧ ರ ಜನಗಣತಿ ವರದಿಯ ಪ್ರಕಾರ ಬಿಳಿಮಗ್ಗ, ದೇವಾಂಗ, ಖತ್ರಿ, ಪಟ್ಟೇಗಾರ್, ಸಾಲೆ, ಸೇನಿಗ ಮತ್ತು ತೊಗಟ್ ಎನ್ನುವ ಸಮುದಾಯಗಳನ್ನು ನೇಯ್ಗಿ ಎಂದು ದಾಖಲಿಸಲಾಗಿದೆ.

೧೭. ಹಟ್‌ಗಾರ್: ಹಟ್ ಗಾರ್, ಪಟಗಾರ, ಹಟಗಾರ ಎಂದೆಲ್ಲಾ ಕರೆಯಲ್ಪಡುವ ಈ ನೇಕಾರ ವರ್ಗದವರು ಉತ್ತರ ಕರ್ನಾಟಕ ಭಾಗಗಳಲ್ಲಿ ಕಂಡುಬರುತ್ತಾರೆ. ಇವರನ್ನು 'ಪಟ್ಟೆಗಾರರು' ಎಂದೂ ಕರೆಯುವ ರೂಢಿಯಿದೆ. ದೇವಾಂಗ ಸಮುದಾಯಕ್ಕೂ ಇವರಿಗೂ ನಿಕಟವಾದ ಸಂಬಂಧವಿದೆ. ಇವರನ್ನು ಆಂಧ್ರದಲ್ಲಿ ಪಡಿಗರಾಜುಲು ಎಂದು ಕರೆಯುತ್ತಾರೆ.

ಇಷ್ಟುಮಾತ್ರವಲ್ಲದೆ ಜೇಡ, ವಿಂಕಾರ್, ಜಾಂದ್ರ, ಶಲಪ್ಪು, ಮೊಟ್ಟೆಶಾಲಿ, ರಜ್ಜು, ಪರಯರ್, ಕುವಿಂದನ್ ಎಂದೂ ಹಲವು ಹೆಸರುಗಳು ಲಭ್ಯವಾಗಿವೆ. ಉತ್ತರ ಕರ್ನಾಟಕದ ಗಜೆಟಿಯರ್ (೧೮೮೩)ನಲ್ಲಿ ಜಾಡರು ಎಂಬ ವರ್ಗವನ್ನು ಉಲ್ಲೇಖಿಸಿ ಇವರಲ್ಲಿ ೧೮ ಒಳಜಾತಿಗಳಿವೆಯೆಂದು ಹೇಳಿದ್ದಾರೆ. ಸಾಲಿಗರೂ, ಜಾಡರೂ (ದೇವಾಂಗ?) ಬುನಾದಿಯಲ್ಲಿ ಒಂದೇ ಜಾತಿಯವರೆಂದು ವ್ಯಕ್ತವಾಗುತ್ತದೆ ಎಂದಿದ್ದಾರೆ. ಆದರೆ ಇದರಲ್ಲಿ ಸಾಲಿಯರು ಮಹಾರಾಷ್ಟ್ರದಿಂದ ಬಂದವರೆಂದು ಇದನ್ನು ಬರೆದ ವೆಂಕಟರಂಗೋಕಟ್ಟಿಯವರ ಅಭಿಪ್ರಾಯ. ಆದರೆ ಉತ್ತರ ಕರ್ನಾಟಕದಲ್ಲಿ ಮಾರಾಠಿ ಮಾತನಾಡುವವರಿಗೆ ಮಾತ್ರ ಇದು ಅನ್ವಯಿಸುತ್ತದೆ. (ಪದ್ಮಸಂಸ್ಮರಣಿಕಾ: ೨೦೦೦ : ಪುಟ ೪೧) ಉತ್ತರ ಭಾರತದಲ್ಲಿ ಕಾಣಸಿಗುವ ನೇಕಾರರ ಹೆಸರುಗಳು ಹೀಗಿವೆ: - ಭುಯ್ಯರ್, ಕೋಳಿ ಅಥವಾ ಕೋರಿ, ಓಶ್, ಬಲಾಯಿ, ಜುಲಾಹ (ಮುಸ್ಲಿಂ) ಪಂಕ, ಬುಂಕಾರ್, ಚೋರಿಯ, ತಂತಿ, ಕೋಷ್ಠಿ, ಪಟವಾ, ಸಾರಾಕ್, ಡೋಮ್, ನಾಥ್, ಕೊಟೋನಿ, ಮೇಮಾನ್, ಜೂಗಿ ಇತ್ಯಾದಿ.

ದಕ್ಷಿಣ ಭಾರತದ ಚಾಲೈ, ಸೇನಿಯರ್, ರಣ ಸಮಯಮೂವರ್, ಖತ್ರಿ (ಕ್ಷತ್ರಿಯ), ಶಲ್ಯ, ಕೈಕೋಳರ್ ಈ ಮೊದಲಾದ ನೇಕಾರರ ಹೆಸರುಗಳು ಯುದ್ಧ ಮತ್ತು ಸೈನ್ಯದ ಜತೆಗೆ ಇವರಿಗಿರುವ ಸಂಬಂಧವನ್ನು ಸೂಚಿಸುತ್ತದೆ. ಹಿಂದಿನ ಕಾಲದಲ್ಲಿ ವೃತ್ತಿಯೊಂದಿಗೆ ಯುದ್ಧರಂಗದಲ್ಲೂ ಇವರು ಪಾಲು ಗೊಳ್ಳುತ್ತಿರಬೇಕು.

ಹೋದಲ್ಲಿ ಹೊಂದಿಕೊಳ್ಳುವ ಬಂದುದನ್ನು ಸ್ವೀಕರಿಸುವ ಜನಾಂಗವಾಗಿ ನೇಕಾರರು ಕಂಡುಬರುತ್ತಾರೆ. ಬೇರೆ ಬೇರೆ ಹೆಸರುಗಳು ಇವರಿಗೆ ಇದ್ದರೂ ಇವರ ಮೂಲ ಸ್ವಭಾವ ಒಂದೇ.

ಕೇರಿಗಳನ್ನು ಕಟ್ಟಿ ವಾಸಿಸುವುದೇ ಇವರಿಗೆ ಪ್ರಿಯ. ಇವರ ಕೇರಿಗಳಲ್ಲಿ ಕೆಲವು ಮನೆಗಳು - ಒಂದು ಕೇರಿ - ಒಂದು ದೇವಸ್ಥಾನ ಇದ್ದೇ ಇರುತ್ತದೆ.

ಪದ್ಮಶಾಲಿ, ದೇವಾಂಗ, ಕುರುಹಿನ ಶೆಟ್ಟಿ, ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯರು (ಖತ್ರಿಗಳು) ಪಟ್ಟೆಗಾರರು ಈಶ್ವರನನ್ನು ಬೇರೆ ಬೇರೆ ಹೆಸರುಗಳಿಂದ ಪೂಜಿಸುತ್ತಾರೆ. ಮಾರ್ಕಂಡೇಯ ಸ್ವಾಮಿಯನ್ನು ಶಿವಲಿಂಗದ ಜತೆಗೆ ಪೂಜಿಸುವ ಪದ್ಧತಿ ದ.ಕ. ಜಿಲ್ಲೆಯನ್ನು ಹೊರತುಪಡಿಸಿದ ಕರ್ನಾಟಕದ ಇತರ ಭಾಗಗಳಲ್ಲಿದೆ. ಕುರುವಿನ ಶೆಟ್ಟಿಯವರು 'ನೀಲಕಂಠೇಶ್ವರ' ಎಂಬ ಹೆಸರಿನಿಂದ ಈಶ್ವರನನ್ನು ಪೂಜಿಸುತ್ತಾರೆ. ದೇವಾಂಗರು ರಾಮಲಿಂಗೇಶ್ವರನನ್ನು ಪೂಜಿಸುತ್ತಾರೆ. ನೇಕಾರ ಸಮುದಾಯದ ಎಲ್ಲ ಪಂಗಡಗಳೂ ಈಶ್ವರನನ್ನೂ ದೇವಿಯನ್ನೂ ಸಮಾನವಾಗಿ ಆರಾಧಿಸಿಕೊಂಡು ಬಂದಿವೆ. ನೇಕಾರಿಕೆಯನ್ನು ಕುಲಕಸುಬನ್ನಾಗಿಸಿಕೊಂಡ ನೇಕಾರ ವರ್ಗವೆಲ್ಲವೂ ಒಂದೇ ಎಂಬುದನ್ನು ಇದು ಶ್ರುತ ಪಡಿಸುತ್ತದೆ.

೧೬. ನೇಯ್ಗಿ: ಮೈಸೂರು ಜಿಲ್ಲೆಯ ೧೮೯೧ ರ ಜನಗಣತಿ ವರದಿಯ ಪ್ರಕಾರ ಬಿಳಿಮಗ್ಗ, ದೇವಾಂಗ, ಖತ್ರಿ, ಪಟ್ಟೇಗಾರ್, ಸಾಲೆ, ಸೇನಿಗ ಮತ್ತು ತೊಗಟ್ ಎನ್ನುವ ಸಮುದಾಯಗಳನ್ನು ನೇಯ್ಗಿ ಎಂದು ದಾಖಲಿಸಲಾಗಿದೆ.

೧೭. ಹಟ್‌ಗಾರ್: ಹಟ್ ಗಾರ್, ಪಟಗಾರ, ಹಟಗಾರ ಎಂದೆಲ್ಲಾ ಕರೆಯಲ್ಪಡುವ ಈ ನೇಕಾರ ವರ್ಗದವರು ಉತ್ತರ ಕರ್ನಾಟಕ ಭಾಗಗಳಲ್ಲಿ ಕಂಡುಬರುತ್ತಾರೆ. ಇವರನ್ನು 'ಪಟ್ವೆಗಾರರು' ಎಂದೂ ಕರೆಯುವ ರೂಢಿಯಿದೆ. ದೇವಾಂಗ ಸಮುದಾಯಕ್ಕೂ ಇವರಿಗೂ ನಿಕಟವಾದ ಸಂಬಂಧವಿದೆ. ಇವರನ್ನು ಆಂಧ್ರದಲ್ಲಿ ಪಡಿಗರಾಜುಲು ಎಂದು ಕರೆಯುತ್ತಾರೆ.

ಇಷ್ಟುಮಾತ್ರವಲ್ಲದೆ ಜೇಡ, ವಿಂಕಾರ್, ಜಾಂದ್ರ, ಶಲಪು, ಮೊಟ್ಟೆಶಾಲಿ, ರಜ್ಜು, ಪರಯರ್, ಕುವಿಂದನ್ ಎಂದೂ ಹಲವು ಹೆಸರುಗಳು ಲಭ್ಯವಾಗಿವೆ. ಉತ್ತರ ಕರ್ನಾಟಕದ ಗಜೆಟಿಯರ್ (೧೮೯೩)ನಲ್ಲಿ ಜಾಡರು ಎಂಬ ವರ್ಗವನ್ನು ಉಲ್ಲೇಖಿಸಿ ಇವರಲ್ಲಿ ೧೮ ಒಳಜಾತಿಗಳಿವೆಯೆಂದು ಹೇಳಿದ್ದಾರೆ. ಸಾಲಿಗರೂ, ಜಾಡರೂ (ದೇವಾಂಗ?) ಬುನಾದಿಯಲ್ಲಿ ಒಂದೇ ಜಾತಿಯವರೆಂದು ವ್ಯಕ್ತವಾಗುತ್ತದೆ ಎಂದಿದ್ದಾರೆ. ಆದರೆ ಇದರಲ್ಲಿ ಸಾಲಿಯರು ಮಹಾರಾಷ್ಟ್ರದಿಂದ ಬಂದವರೆಂದು ಇದನ್ನು ಬರೆದ ವೆಂಕಟರಂಗೋಕಟ್ಟಿಯವರ ಅಭಿಪ್ರಾಯ. ಆದರೆ ಉತ್ತರ ಕರ್ನಾಟಕದಲ್ಲಿ ಮಾರಾಠಿ ಮಾತನಾಡುವವರಿಗೆ ಮಾತ್ರ ಇದು ಅನ್ವಯಿಸುತ್ತದೆ. (ಪದ್ಮಸಂಸ್ಮರಣಿಕಾ: ೨೦೦೦ : ಪುಟ ೪೧) ಉತ್ತರ ಭಾರತದಲ್ಲಿ ಕಾಣಸಿಗುವ ನೇಕಾರರ ಹೆಸರುಗಳು ಹೀಗಿವೆ: – ಭುಯ್ಯರ್, ಕೋಳಿ ಅಥವಾ ಕೋರಿ, ಓಶ್, ಬಲಾಯಿ, ಜುಲಾಹ (ಮುಸ್ಲಿಂ) ಪಂಕ, ಬುಂಕಾರ್, ಚೋರಿಯ, ತಂತಿ, ಕೋಷ್ಠಿ, ಪಟವಾ, ಸಾರಾಕ್, ಡೋಮ್, ನಾಥ್, ಕೊಟೋನಿ, ಮೇಮಾನ್, ಜೂಗಿ ಇತ್ಯಾದಿ.

ದಕ್ಷಿಣ ಭಾರತದ ಚಾಲ್ಯೆ, ಸೇನಿಯರ್, ರಣ ಸಮಯಮೂವರ್, ಖತ್ರಿ (ಕ್ಷತ್ರಿಯ), ಶಲ್ಯ, ಕೈಕೋಳರ್ ಈ ಮೊದಲಾದ ನೇಕಾರರ ಹೆಸರುಗಳು ಯುದ್ಧ ಮತ್ತು ಸೈನ್ಯದ ಜತೆಗೆ ಇವರಿಗಿರುವ ಸಂಬಂಧವನ್ನು ಸೂಚಿಸುತ್ತದೆ. ಹಿಂದಿನ ಕಾಲದಲ್ಲಿ ವೃತ್ತಿಯೊಂದಿಗೆ ಯುದ್ಧರಂಗದಲ್ಲೂ ಇವರು ಪಾಲು ಗೊಳ್ಳುತ್ತಿರಬೇಕು.

ಹೋದಲ್ಲಿ ಹೊಂದಿಕೊಳ್ಳುವ ಬಂದುದನ್ನು ಸ್ವೀಕರಿಸುವ ಜನಾಂಗವಾಗಿ ನೇಕಾರರು ಕಂಡುಬರುತ್ತಾರೆ. ಬೇರೆ ಬೇರೆ ಹೆಸರುಗಳು ಇವರಿಗೆ ಇದ್ದರೂ ಇವರ ಮೂಲ ಸ್ವಭಾವ ಒಂದೇ.

ಕೇರಿಗಳನ್ನು ಕಟ್ಟಿ ವಾಸಿಸುವುದೇ ಇವರಿಗೆ ಪ್ರಿಯ. ಇವರ ಕೇರಿಗಳಲ್ಲಿ ಕೆಲವು ಮನೆಗಳು – ಒಂದು ಕೇರಿ – ಒಂದು ದೇವಸ್ಥಾನ ಇದ್ದೇ ಇರುತ್ತದೆ.

ಪದ್ಮಶಾಲಿ, ದೇವಾಂಗ, ಕುರುಹಿನ ಶೆಟ್ಟಿ, ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯರು (ಖತ್ರಿಗಳು) ಪಟ್ಟೆಗಾರರು ಈಶ್ವರನನ್ನು ಬೇರೆ ಬೇರೆ ಹೆಸರುಗಳಿಂದ ಪೂಜಿಸುತ್ತಾರೆ. ಮಾರ್ಕಂಡೇಯ ಸ್ವಾಮಿಯನ್ನು ಶಿವಲಿಂಗದ ಜತೆಗೆ ಪೂಜಿಸುವ ಪದ್ಧತಿ ದ.ಕ. ಜಿಲ್ಲೆಯನ್ನು ಹೊರತುಪಡಿಸಿದ ಕರ್ನಾಟಕದ ಇತರ ಭಾಗಗಳಲ್ಲಿದೆ. ಕುರುವಿನ ಶೆಟ್ಟಿಯವರು 'ನೀಲಕಂಠೇಶ್ವರ' ಎಂಬ ಹೆಸರಿನಿಂದ ಈಶ್ವರನನ್ನು ಪೂಜಿಸುತ್ತಾರೆ. ದೇವಾಂಗರು ರಾಮಲಿಂಗೇಶ್ವರನನ್ನು ಪೂಜಿಸುತ್ತಾರೆ. ನೇಕಾರ ಸಮುದಾಯದ ಎಲ್ಲ ಪಂಗಡಗಳೂ ಈಶ್ವರನನ್ನೂ ದೇವಿಯನ್ನೂ ಸಮಾನವಾಗಿ ಆರಾಧಿಸಿಕೊಂಡು ಬಂದಿವೆ. ನೇಕಾರಿಕೆಯನ್ನು ಕುಲಕಸುಬನ್ನಾಗಿಸಿಕೊಂಡ ನೇಕಾರ ವರ್ಗವೆಲ್ಲವೂ ಒಂದೇ ಎಂಬುದನ್ನು ಇದು ಶ್ರುತ ಪಡಿಸುತ್ತದೆ.

## ೪. ಪದ್ಮಶಾಲಿ ಅಥವಾ ಶೆಟ್ಟಿಗಾರ ಸಮಾಜ

ಕಾಸರಗೋಡು ಹಾಗೂ ದಕ್ಷಿಣ ಕನ್ನಡ ಪ್ರದೇಶದಲ್ಲಿ ವ್ಯಾಪಕವಾಗಿ ಹರಡಿರುವ ಇನ್ನೊಂದು ನೇಕಾರ ಸಮುದಾಯವು 'ಪದ್ಮಶಾಲಿ' ಸಮುದಾಯ. ಇವರು 'ಶೆಟ್ಟಿಗಾರ ' ಎಂದೂ 'ಸೆಟ್ಟಿಗಾರ ' ಎಂದೂ ಗುರುತಿಸಲ್ಪಡುತ್ತಿದ್ದಾರೆ. ಇದು ಇವರ ಉಪನಾಮವೂ ಹೌದು. ಇವರು ತಮ್ಮನ್ನು ಆಂಧ್ರದಿಂದ ಬಂದವರು ಎಂದು ಹೇಳಿಕೊಳ್ಳುತ್ತಾರೆ. ಆದರೆ ಯಾವಾಗ ಬಂದರು ಎನ್ನುವುದಕ್ಕೆ ಖಚಿತ ಪುರಾವೆಗಳು ಇಲ್ಲ. ಶಾಲಿಯಾ ಸಮುದಾಯದ ಮೇಲೆ ಕೇರಳದ ' ಮಲಯಾಳಂ ಸಂಸ್ಕೃತಿ ' ಪ್ರಭಾವ ಬೀರಿದಂತೆ, ಇವರ ಮೇಲೆ ತುಳು ಸಂಸ್ಕೃತಿಯು ಪ್ರಭಾವ ಬೀರಿರುವುದನ್ನು ಕಾಣಬಹುದು. ' ಪೊಡುಂಬ ' ಎಂಬ ಮಿಶ್ರಿತ ಭಾಷೆಯನ್ನು ಇವರು ಇತ್ತೀಚಿನವರೆಗೂ ಆಡುತ್ತಿದ್ದರು. ಆದುದರಿಂದಲೇ ಇವರನ್ನು ಹಿಂದೆ ಪರಂಬ ಶಾಲಿಯರು ಎಂದು ಗುರುತಿಸುತ್ತಿದ್ದರು. ಪೊಡುಂಬ ಶಾಲಿಯ > ಪೊರುಂಬಶಾಲಿಯಾಗಿ ಅದುವೇ ಪರಂಬ ಶಾಲಿಯೂ ಆಗಿರಬೇಕು. ' ಪೊಡುಂಬ' ಎನ್ನುವ ಪದಕ್ಕೆ ತುಳುವಿನಲ್ಲಿ ' ತಮಾಷೆ ' ಎಂಬ ಅರ್ಥವಿತ್ತು. ತಮ್ಮ ಮೂಲಭಾಷೆಯೊಂದಿಗೆ ಹಲವು ಭಾಷೆಗಳನ್ನು ಮಿಶ್ರಿತಗೊಳಿಸುವ ಇವರ ಹಾಸ್ಯ ಪ್ರವೃತ್ತಿಯೇ ಆ ಭಾಷೆಗೂ ಅದನ್ನಾಡುವ ಜನರಿಗೂ ಈ ಹೆಸರು ಬರಲು ಕಾರಣವಾಗಿರಬೇಕು. ಶಾಲಿಯರ ಸಂಸ್ಕಾರ - ಸಂಸ್ಕೃತಿಗಳಿಗಿಂತ ವಿಭಿನ್ನವಾದ ಸಂಸ್ಕೃತಿ ಇವರದಾದುದರಿಂದ ಅವರು ಶಾಲಿಯರಿಗಿಂತ ಪ್ರತ್ಯೇಕವಾಗಿ ಕಾಣುತ್ತಾರೆ. ಮೂಲತಃ ಈ ಎರಡು ಸಮುದಾಯವು ಒಂದೇ ಆಗಿರಬೇಕು. ಪೂರ್ವ ಕರಾವಳಿ ತೀರದಿಂದ ಕಾಲಾನುಕಾಲಕ್ಕೆ ವಲಸೆ ಬರುತ್ತಿದ್ದ ಹಲವು ಜನಾಂಗಗಳಂತೆ ನೇಕಾರ ವರ್ಗವೂ ಬೇರೆ ಬೇರೆ ಕಾಲದಲ್ಲಿ ಪಶ್ಚಿಮ ಕರಾವಳಿಗೆ ತಲುಪಿರಬಹುದು. ಶಾಲಿಯಾ ಸಮುದಾಯವು ಬರುವುದಕ್ಕಿಂತಲೂ ಕೆಲವು ಶತಮಾನಗಳಿಗಿಂತ ಮೊದಲೇ ಅದೇ ಪಂಗಡದಿಂದ ' ಪದ್ಮಶಾಲಿ ' ಎಂದೀಗ ತುಳುನಾಡಿನಲ್ಲಿ ಕರೆಯಲ್ಪಡುವ ನೇಕಾರ ವರ್ಗವು ಕವಲೊಡೆದು ಬಂದಿರುವ ಸಾಧ್ಯತೆಯಿದೆ. ಅಲ್ಲಿ ' ಚೆಟ್ಟಿಯಾರ್ ' ಎಂದೇ ಗುರುತಿಸಲ್ಪಡುತ್ತಿದ್ದ ಈ ಸಮುದಾಯವು ತುಳುನಾಡಿಗೆ ಬಂದಾಗ ಇಲ್ಲಿನ ' ಶೆಟ್ಟಿ' ಎನ್ನುವ ಉಪನಾಮವನ್ನಿಟ್ಟುಕೊಂಡ ಬಂಟ ಜನಾಂಗದ ಪ್ರಭಾವದಿಂದ ಇಲ್ಲಿನವರಿಗೆ ಪರಿಚಿತವಾದ ' ಶೆಟ್ಟಿ ' ಪದದಿಂದಲೇ ಗುರುತಿಸಲ್ಪಟ್ಟಿರಬಹುದು. ಆದರೆ ಇಲ್ಲಿನ ಪ್ರತಿಷ್ಠಿತ ಪ್ರಬಲ ವರ್ಗವೆನಿಸಿದ ಬಂಟರು ಹೊರಗಿನಿಂದ ಬಂದ ಇವರನ್ನೂ ತಮ್ಮ ಹಾಗೇ ' ಶೆಟ್ಟಿ ' ಎಂದು ಗುರುತಿಸುವುದನ್ನು ಇಷ್ಟಪಡದೆ ಅದನ್ನೇ ' ಸೆಟ್ಟಿ ' ಸೆಟ್ಟಿಗಾರ ' ಎಂದು ಮಾರ್ಪಡಿಸಿರುವ ಸಾಧ್ಯತೆಯಿದೆ. ಇವರೂ ಕೂಡಾ ಕೇರಳದ ಮುಖಾಂತರವಾಗಿಯೇ ಇಲ್ಲಿಗೆ ಹಾದುಬಂದಿರಬೇಕು. ಆದರೆ, ತಂಗಿದ್ದು ತುಳುನಾಡಿನಲ್ಲಿ ಇವರ ಭಾಷೆಯ ಬಗ್ಗೆ ಬರೆಯುತ್ತಾ ಖ್ಯಾತ ಸಂಶೋಧಕ ಸಿ.ರಾಘವನ್‌ರವರು ' ಪದ್ಮಶಾಲಿಯರ ' ಭಾಷೆಯು ಮಲಯಾಳದ್ದೇ ಒಂದು ಉಪಭೇದವಾಗಿದೆ ಎನ್ನುತ್ತಾರೆ. ಹಲವು ಕಾಲದ ತುಳುನಾಡಿನ ಸಂಪರ್ಕ ಇವರನ್ನು

ಮೂಲಸಂಸ್ಕೃತಿಯನ್ನು ಮರೆಯುವಂತೆ ಮಾಡಿ, ಪ್ರಾದೇಶಿಕ ಸಂಸ್ಕೃತಿಯನ್ನು ಸ್ವೀಕರಿಸುವಂತೆ ಮಾಡಿದೆ. ಆದುದರಿಂದ ಶಾಲಿಯಾ ಮತ್ತು ಪದ್ಮಶಾಲಿ ಎರಡೂ ಒಂದೇ ಮೂಲಕ್ಕೆ ಸೇರಿದವರು ಎಂದು ಹೇಳಬಹುದು.

ತುಳುನಾಡಿನ ಪದ್ಮಶಾಲಿಗಳ ಜನಸಂಖ್ಯೆ ಸುಮಾರು ೬೦,೦೦೦ ದಷ್ಟು ಇದೆ ಎನ್ನಲಾಗಿದೆ. ಇವರು ತುಳುನಾಡಿಗೆ ಬಂದ ಬಗ್ಗೆ ಐತಿಹ್ಯವೊಂದು ಹೀಗನ್ನುತ್ತದೆ. ಬಾರಕೂರು ಸಂಸ್ಥಾನದ ರಾಜನಾಗಿದ್ದ ಮಯೂರವರ್ಮ (ಕದಂಬ ರಾಜನೇ ಇರಬೇಕು) ಮಹಿಷಮರ್ದಿನಿ ದೇವಸ್ಥಾನವನ್ನು ನಿರ್ಮಿಸಿ ಪ್ರತಿಷ್ಠಾಪಿಸುವ ಸಂದರ್ಭದಲ್ಲಿ ಆತನಿಗೆ ಬಿಳಿಮಗ್ಗದವರು ನೇಯ್ದ ಬಿಳಿಬಟ್ಟೆ ಬೇಕಾಗಿತ್ತು. ಆಗ ತುಳುನಾಡಿನಲ್ಲಿ ಬಿಳಿಮಗ್ಗದವರಾದ ಪದ್ಮಶಾಲಿಯರು ಇರಲಿಲ್ಲ. ದೇವಿಯ ಸೂಚನೆಯಂತೆ ಬಿಳಿಮಗ್ಗದ ಪದ್ಮಶಾಲಿಗಳನ್ನು ತಮಿಳುನಾಡಿನಿಂದ ಕರೆಸಲಾಯಿತು. ಕ್ರಮೇಣ ಅವರು ತುಳುನಾಡಿನಲ್ಲೇ ನೆಲಸಿದರು.

ಇನ್ನೊಂದು ಐತಿಹ್ಯದಂತೆ ; ಭೂತಾಳ ಪಾಂಡ್ಯನ ಕಾಲದಲ್ಲಿ ಹಾಗೂ ಅನಂತರದ ಕಾಲದಲ್ಲಿ ತಮಿಳು ಪದ್ಮಶಾಲಿಗಳು ತಮಿಳುನಾಡಿನಿಂದ ಕ್ಷಾಮ, ಪಿಡುಗು, ಬಡತನ ಅಥವಾ ತೀರ್ಥಯಾತ್ರೆಯ ಕಾರಣದಿಂದ ಜಲಮಾರ್ಗವಾಗಿ ತುಳುನಾಡಿಗೆ ಬಂದು ನೆಲಸಿದರು ಹೀಗೆ ಬಂದವರು ಮಂಗಳೂರಿನಲ್ಲಿ ಎಂಟು (೮೦೦ನಗರ), ಪಡುಬಿದ್ರಿ ಏಳು (೭೦೦ ನಗರ) ಮತ್ತು ಮಲ್ಪೆ ಬಂದರಲ್ಲಿ ಐದು (೫೦೦ ನಗರ) ಕುಟುಂಬಗಳಂತೆ ಇಳಿದರೆಂದೂ ಹೇಳಲಾಗುತ್ತದೆ. (ಈ 'ನಗರ ' ಎನ್ನುವ ಪದವೇ ಇವರ ಮೂಲ ಹಾಗೂ ಶಾಲಿಯರ ಮೂಲ ಒಂದೇ ಎನ್ನುವುದನ್ನು ಸೂಚಿಸುತ್ತದೆ. ಆದರೆ ಪದ್ಮಶಾಲಿಯರು 'ನಗರ' ಎನ್ನುವುದನ್ನು ಈಗ ಬೇರೆಯೇ ಅರ್ಥದಲ್ಲಿ ಪರಿಭಾವಿಸುತ್ತಾರೆ.) ಶೃಂಗೇರಿ ಗುರುಗಳ ದರ್ಶನಕ್ಕೆಂದು ತಮಿಳುನಾಡಿನಿಂದ ಇವರು ಬಂದರೆಂದೂ ದಕ್ಷಿಣ ಕನ್ನಡದಲ್ಲೂ, ಕೇರಳದಲ್ಲೂ ನೆಲೆನಿಂತರೆಂದೂ ಮಲೆಯಾಳಿ ಪ್ರಭಾವ ಇರುವ ಪ್ರದೇಶಗಳಲ್ಲಿ ಇವರು 'ಸಾಲಿಯಾನ್ ' ಎಂದು ಹೆಸರಿಟ್ಟುಕೊಂಡರೆಂದು ಡಾ.ಸೂರ್ಯನಾಥಕಾಮತರು ಅಭಿಪ್ರಾಯಪಡುತ್ತಾರೆ. (ಪದ್ಮಸಂಸ್ಮರಣಿಕಾ ೨೦೦೦ ಪುಟ ೪೩) ಇಲ್ಲಿ ಉಲ್ಲೇಖಿತವಾದ 'ಸಾಲಿಯಾನ್ ' ಚಾಲಿಯರು ಅಥವಾ ಶಾಲಿಯರು. ಇವರು ಮೂಲತಃ ಆಂಧ್ರದವರೆಂದೂ. ಒಂದನೆಯ ರಾಜರಾಜ ಚೋಳನ ಕಾಲದಲ್ಲಿ ಇವರನ್ನು ಆಂಧ್ರದಿಂದ ತಮಿಳುನಾಡಿಗೆ ಬರಮಾಡಿಕೊಳ್ಳಲಾಯಿತೆಂದೂ ಸ್ಟುವರ್ಟ್ ಹೇಳುತ್ತಾನೆ. (Stuart Manual : 1886).

'ಶೆಟ್ಟಿಗಾರ' ರೆಂದರೆ ನವರತ್ನ, ನವಧಾನ್ಯ, ವಸ್ತ್ರಾದಿಗಳನ್ನು ಎತ್ತಿನ ಮೇಲೆ ಹೇರಾಟ ಮಾಡಿಕೊಂಡು ವ್ಯಾಪಾರ ಮಾಡುವವರು ಎಂದು ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸವನ್ನು ಬರೆದ ದಿ|ಅಮ್ಮುಂಜೆಗುತ್ತು ಶೀನಪ್ಪ ಹೆಗ್ಡೆಯವರು ಹೇಳಿದ್ದಾರೆ. ಮೂಡಬಿದಿರೆಯ ಜೈನ ಬಸದಿಯಲ್ಲಿ ಕ್ರಿ.ಶ ೧೨೮೧ ರ ಶಾಸನದಲ್ಲಿ ಬಲ್ಲಾಳರು, ಶೆಟ್ಟಿಗಾರರು, ಬಳಮೆ (S11 VOl. IX Part II No.೪೭೬) ಗಳ ಉಲ್ಲೇಖವಿದ್ದರೂ ಆ ಶೆಟ್ಟಿಗಾರರು

ಆ ಕಾಲದ ಜೈನ ವರ್ತಕರೇ ಇರಬೇಕು ಎಂದು ನಂಬಲಾಗಿದೆ. ಆದರೂ ಅವರ ವಂಶಜರು ಮದುವೆಯ ಸಮಾರಂಭದ ಒಂದಂಗವಾಗಿ ಮಗ್ಗದ ' ಲಾಳಿ ' ಯೊಂದಿಗೆ ಓಕುಳಿಯಾಟ ಆಡುತ್ತಿರುವುದು ಒಂದು ವೈಶಿಷ್ಟ್ಯ (ಬ್ರಹ್ಮಾನಂದ : ಮಗ್ಗದ ಸೀರೆ : ೧೯೯೪ : ಪುಟ ೨೮) ಶಾಸನದಲ್ಲಿ ಉಕ್ತರಾದ ಜೈನವರ್ತಕರು ಮೂಲತಃ ಪದ್ಮಶಾಲಿಗಳೇ ಆಗಿರಬಹುದು ಎಂದನ್ನಿಸುತ್ತದೆ. ( ಶೆಟ್ಟಿಗಾರ ಪದವು ಅವರಿಗೇ ಸೀಮಿತವಾದುದು.) ಜೈನಮತವು ತುಳುನಾಡಿಗೆ ಕಾಲಿಟ್ಟ ಕಾಲದಲ್ಲಿ ಇಲ್ಲಿ ವಾಸಿಸುತ್ತಿದ್ದ ಹಲವು ಜನಾಂಗಳು ಆ ಮತವನ್ನು ಸ್ವೀಕರಿಸಿದವು. ಉಳಿದವರಂತೆ ಅವರೂ ಜೈನಮತವನ್ನು ಸ್ವೀಕರಿಸಿರಬೇಕು. ಮೂಲತಃ ನೇಕಾರ ವರ್ಗವಾಗಿದ್ದುಕೊಂಡು 'ಚೆಟ್ಟಿಯಾರ್' ಎಂಬ ಉಪನಾಮವಿರಿಸಿಕೊಂಡ ಅವರನ್ನು ಸ್ಥಳೀಯರು 'ಶೆಟ್ಟಿಗಾರ' ಎಂದು ಕರೆದಿರುವ ಸಾಧ್ಯತೆಯಿದೆ. ಅವರು ಮಗ್ಗದ ಲಾಳಿಯೊಂದಿಗೆ 'ಓಕುಳಿ ' ಆಡುತ್ತಾರೆ ಎಂಬ ಬ್ರಹ್ಮಾನಂದರ ಹೇಳಿಕೆಯು 'ಸಾಂಸ್ಕೃತಿಕ ಅನನ್ಯತೆ ' ಹೇಗೆ ಉಳಿದುಕೊಳ್ಳುತ್ತದೆ ಎಂಬುದನ್ನು ಸೂಚಿಸುತ್ತದೆ. ಕ್ರಮೇಣ ತಾವು ಯಾರು ? ಎಲ್ಲಿಂದ ಬಂದವರು ಎಂದು ಮೂಲದ ವಿಚಾರಗಳು ಮರೆತುಹೋದರೂ ಕೆಲವು ಆಚರಣೆಗಳು ಉಳಿದುಬಿಡುವುದನ್ನು ಕಾಣಬಹುದು. ಹಿರಿಯರ ಸಂಪ್ರದಾಯ ಅಥವಾ ಆಚರಣೆಗಳನ್ನು ಕುರುಡಾಗಿ ಆಚರಿಸುವ, ಸಮಾಜದ ದೋಷವೇ ಕೆಲವೊಮ್ಮೆ ' ತನ್ನತನ ' ವನ್ನು ಮರೆಯಲು ಕಾರಣವಾಗುತ್ತದೆ. ಇಂತಹ ಸಂದರ್ಭದಲ್ಲಿ ಆಚರಣೆಗಳೇ ಮೂಲದ ಹುಡುಕಾಟಕ್ಕೆ ಸಹಕಾರಿಯಾಗುತ್ತದೆ. ಆದುದರಿಂದ ಮೂಡಬಿದಿರೆಯ ಶಾಸನದಲ್ಲಿ ಉಲ್ಲೇಖಿತರಾದ 'ಶೆಟ್ಟಿಗಾರ'ರು ' ನೇಕಾರ' ಸಮುದಾಯಕ್ಕೆ ಸೇರಿದವರು ಎನ್ನಬಹುದು. ಇಷ್ಟು ಮಾತ್ರವಲ್ಲದೆ ಇವರು ಜೈನವರ್ತಕರಾಗಿ ಪರಿವರ್ತಿತರಾದರೂ ಇತರ ಸಮುದಾಯದವರು ಇವರ ಮೂಲವೃತ್ತಿಯನ್ನು ಮರೆಯಲಿಲ್ಲ. ಆದುದರಿಂದಲೇ ಇವರ ಅನಂತರ ಬಂದ ನೇಕಾರ ಸಮುದಾಯವನ್ನು ಇವರು ' ಶೆಟ್ಟಿಗಾರ ' ಎಂದೇ ಗುರುತಿಸಿದರು. ಆದುದರಿಂದ ಮೂಲತಃ ನೇಕಾರರಾದ ' ಶೆಟ್ಟಿಗಾರ ' ಅಥವಾ ' ಚೆಟ್ಟಿಯಾರ್ ' ವರ್ಗವು ಯಾವುದೋ ಕಾಲದಲ್ಲಿ ತುಳುನಾಡಿಗೆ ಬಂದಿರಬೇಕು. ಈಗಿನ ಪದ್ಮಶಾಲಿಗಳಿಗಿಂತಲೂ ಮೊದಲೇ ಅವರು ವ್ಯಾಪಾರನಿಮಿತ್ತವಾಗಿ ಬಂದಿರುವ ಸಾಧ್ಯತೆಯಿದೆ. ಆರಂಭದಲ್ಲಿ ಬಟ್ಟೆ ವ್ಯಾಪಾರಕ್ಕಾಗಿ ಬಂದ ಅವರು ಕ್ರಮೇಣ ಇಲ್ಲಿ ಅದರ ಉತ್ಪಾದನೆ ಇಲ್ಲದುದರಿಂದ ಇತರ ಉತ್ಪಾದನೆಗಳನ್ನು ನಡೆಸಲು ಪ್ರಾರಂಭಿಸಿರಬಹುದು.

ಮೂಲ ಪದ್ಮಶಾಲಿ ಜನಾಂಗವು ಮಹಾರಾಷ್ಟ್ರ, ಆಂಧ್ರ, ತಮಿಳುನಾಡು ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲಸಿದ್ದಾರೆ. ಮಾರ್ಕಂಡೇಶ್ವರ, ವೆಂಕಟೇಶ್ವರ, ಭಾವನಾಋಷಿಗಳನ್ನು ಇವರು ಆರಾಧಿಸುತ್ತಾರೆ. ಆಂಧ್ರವಂತೂ ಇವರ ತಾಯಿನಾಡು ಎಂದೇ ಕರೆಯಲ್ಪಟ್ಟಿದೆ. ಮಹಾರಾಷ್ಟ್ರದ ಶೋಲಾಪುರದಲ್ಲಿ ಬಹಳಷ್ಟು ಸಂಖ್ಯೆಯಲ್ಲಿ ಇವರು ಇದ್ದಾರೆ. ಇವರು ತಮ್ಮನ್ನು ಭೃಗುವಂಶದವರು ಎಂದು ಹೇಳಿಕೊಳ್ಳುತ್ತಾರೆ. ಭೃಗುವಿನ

ಮಗಳು 'ಭಾರ್ಗವಿ' (ಲಕ್ಷ್ಮಿ) ಯನ್ನು ಶ್ರೀಮನ್ನಾರಾಯಣನು ವಿವಾಹವಾದುದರಿಂದ ವೆಂಕಟೇಶ್ವರನು ಇವರ ವಂಶದವರಿಗೆ ಅಳಿಯನಾಗುತ್ತಾನೆ. ತಾವು ಲಕ್ಷ್ಮಿಯ ತವರುಮನೆಯವರು ಎಂಬ ಹೆಮ್ಮೆ ಇವರಿಗಿದೆ. ಆದುದರಿಂದಲೇ ಶೋಲಾಪುರದ ಮಹಾಲಕ್ಷ್ಮಿಯ ದೇವಾಲಯದಲ್ಲಿ ಇವರಿಗೆ ವಿಶಿಷ್ಟ ಸ್ಥಾನವಿದೆ ಎನ್ನಲಾಗಿದೆ.

ಪದ್ಮಶಾಲಿ, ಪಟ್ಟುಶಾಲಿ, ಸ್ವಕುಲಶಾಲಿಗಳು ಒಂದೇ ಮೂಲವೆಂದು ಹೇಳಲಾಗಿದೆ. ಈಗಲೂ ಇವರಲ್ಲಿ ಅಂತರ್ಭೋಜನವಿದೆ. ಅಂತರ್ವಿವಾಹ ಮಾತ್ರ ನಿಷಿದ್ಧವಾಗಿತ್ತು. ಖ್ಯಾತ ಇತಿಹಾಸತಜ್ಞ ' ದುಬೆ ' ಕೂಡಾ ಇದನ್ನೇ ಹೇಳುತ್ತಾನೆ. ಇವರು ಮಾರ್ಕಂಡೇಯ ಋಷಿಯ ವಂಶಸ್ಥರೆಂದೂ ಇಲ್ಲಿ ಉಲ್ಲೇಖಿಸಲಾಗಿದೆ. ಇತರ ವೃತ್ತಿಯಾಧಾರಿತ ಜಾತಿ ಶ್ರೇಣೀಕರಣದಲ್ಲಿ ಇವರನ್ನು ಬ್ರಾಹ್ಮಣ ಮತ್ತು ವ್ಯಾಪಾರ ವರ್ಗದವರಿಗಿಂತ ನೇರ ಕೆಳಗೆ ನಮೂದಿಸಲಾಗಿದೆ.

ತುಳುನಾಡಿನ ಪದ್ಮಶಾಲಿ ಜನಾಂಗದ ಆರಾಧನಾ ದೈವ ವೀರಭದ್ರ ಕೆಲವರ ಮತದಂತೆ ವೀರಶೈವ ಜಂಗಮರು ತಾವು ಆರಾಧಿಸುತ್ತಿದ್ದ ವೀರಭದ್ರ ಕ್ಷೇತ್ರಗಳನ್ನು ಪದ್ಮಶಾಲಿಯರಿಗೆ ಬಿಟ್ಟುಹೊದರು ಎನ್ನಲಾಗಿದೆ. ಆದರೆ ಇದಕ್ಕೆ ಬಲವಾದ ಆಧಾರಗಳು ಇಲ್ಲ. ತಮಿಳುನಾಡು, ಆಂಧ್ರ ಹಾಗೂ ಕರ್ನಾಟಕದ ಇತರ ಪ್ರದೇಶಗಳಲ್ಲಿ ಇವರು ಮಾರ್ಕಂಡೇಯ ಸ್ವಾಮಿಯ ಆರಾಧಕರಾಗಿದ್ದಾರೆ. ಇವರಲ್ಲಿ ವೈಷ್ಣವರೂ ಶೈವರೂ ಇದ್ದಾರೆ. ದಕ್ಷಿಣ ಭಾರತದ ಶೈವ ಕ್ರಾಂತಿಯ ಕಾಲದಲ್ಲಿ ಪದ್ಮಶಾಲಿಯರು ಶೈವರಾಗಿ ವೀರಭದ್ರೋಪಾಸನೆಯನ್ನು ಪ್ರಾರಂಭಿಸಿರಬಹುದು. ಎಡ್ಗರ್ ಥರ್ಸನ್ ಪದ್ಮಶಾಲಿಯರಬಗ್ಗೆ ಹೀಗನ್ನುತ್ತಾನೆ. ಪದ್ಮಶಾಲಿಯರು ತೆಲುಗು ಮಾತೃಭಾಷೆಯ ನೇಕಾರರು. ಮದ್ರಾಸಿನ ತುಂಬಾ ಇವರು ವ್ಯಾಪಿಸಿರುವರು. ಕೈಕೋಳರಂತೆ ಇವರೂ ಹತ್ತಿ ಬಟ್ಟೆಗಳನ್ನು ನೇಯುತ್ತಾರೆ. ಪದ್ಮಶಾಲಿಯರಿಗೆ ಕೇವಲ ಒಂದೇ ಗೋತ್ರವಿದೆ. ಅದು ಮಾರ್ಕಂಡೇಯ. (ಇವರಲ್ಲಿ ೧೦೦ ಗೋತ್ರಗಳಿವೆ ಹೆಚ್ಚಿನವರು ವೈಷ್ಣವರು. ಕೆಲವರು ಮಾತ್ರ ಶೈವರು. ಭಾವನಾಋಷಿಯು ಅವರ ಮೂಲಪುರುಷ ಕೆಲವೆಡೆ ಆತನಿಗಾಗಿ ದೇವಾಲಯಗಳೂ ನಿರ್ಮಾಣವಾಗಿದೆ. ಪದ್ಮಶಾಲಿಯರು ಬಲಂಗೈವಿಭಾಗದವರೆಂದೂ ದೇವಾಂಗರು ಎಡಂಗೈ ವಿಭಾಗದವರೆಂದೂ ಹೇಳುತ್ತಾರೆ. ಮೂಲತಃ ಒಂದಾಗಿದ್ದ ಅವರಲ್ಲಿ ಪದ್ಮಶಾಲಿಯರು ಕುಲದೈವವಾದ ಚೌಡೇಶ್ವರಿಯನ್ನು ಛೇದಿಸಿ ತಲೆಯ ಭಾಗವನ್ನು ದೇವಾಂಗದವರಿಗೆ ಬಿಟ್ಟು, ಶರೀರದೊಂದಿಗೆ ಹೊರಟುಹೋದರು. (ಎಡ್ಗರ್ ಥರ್ಸ್ಟನ್ ೧೯:ಪು:೪೪೯) ತಮಿಳುನಾಡಿನ ಪದ್ಮಶಾಲಿಯರ ಬಗ್ಗೆ ಸ್ಟರ್ರಕ್ ಹೀಗೆನ್ನುತ್ತಾರೆ. "ಶಾಲೆಯರು ತೆಲುಗು ನೇಕಾರರು ಸಂಸ್ಕೃತದ ಸಾಲಿಕದಿಂದ ಈ ಶಬ್ದ ಬಂದಿದೆ. ಅವರಲ್ಲಿ ಕೆಲವರು ' ಮಲಯಾಳಂ' ನ ಅಪಭ್ರಂಶ ಭಾಷೆಯನ್ನು ಮಾತನಾಡುತ್ತಾರೆ. ದೇವತೆಗಳ ನೇಕಾರನಾಗಿದ್ದು ಮೃಕಂಡು ಮುನಿಯ ವಂಶಸ್ಥರೆಂದು ಅವರು ಕರೆದುಕೊಳ್ಳುತ್ತಾರೆ. ಈ ಜಾತಿಯ ಮುಖ್ಯ ವಿಭಾಗಗಳೆಂದರೆ ಪದ್ಮಶಾಲಿ ಮತ್ತು ಪಟ್ಟುಶಾಲಿ. ಇವರಲ್ಲಿ ಅನೇಕರು ಲಿಂಗಾಯತರು ಮತ್ತು ಆ

ಪಂಥದ ರೂಢಿಗಳಂತೆ ನಡೆಯುತ್ತಾರೆ. (ಸ್ಟರ್ರಕ್ - ೧೮೯೫ ) ಇವರ ವಿಭಾಗವೊಂದು ಕರಾವಳಿ ಪ್ರದೇಶಕ್ಕೆ ಬಂದು ಇಲ್ಲಿನ ಶೈವರೊಡನೆ ಬೆರೆತಿರುವ ಸಾಧ್ಯತೆ ಇದೆ.

ತಿರುವನಂತಪುರ ಜಿಲ್ಲೆಯ ಬಾಲರಾಮಪುರ ಹಾಗೂ ಅಮರವಿಳ ಜಿಲ್ಲೆಯ ಶಾಳಿಯರಿಗೆ ತಮಿಳುನಾಡಿನ ನಾಗರಕೋವಿಲಿನ ಶಾಲಿಯರೊಂದಿಗೆ ಸಂಬಂಧವಿದೆ. ಅದೇ ರೀತಿಯಲ್ಲಿ ತುಳುನಾಡಿನ ಪದ್ಮಶಾಲಿಯರಿಗೆ ಕರ್ನಾಟಕದೊಂದಿಗೆ ಸಂಬಂಧವಿದಿ ಅವಿಭಜಿತ ದಕ್ಷಿಣ ಕನ್ನಡದ ಬಾರಕೂರಿನಿಂದ ಕೇರಳದ ಕಾಞಂಗಾಡಿನವರೆಗೂ ಹಬ್ಬಿಕೊಂಡ ಈ ಸಮಾಜದ ಮೂಲ ಬಾರಕೂರು ಎನ್ನಲಾಗಿದೆ. (ಶಾಲಿಯರಿಗೆ 'ಪಟ್ಟುವಂ' ಇದ್ದಂತೆ) ಇವರಿಗೆ ೧೬ ಆರಾಧನಾ ಕ್ಷೇತ್ರಗಳಿವೆ. ಇವರು ವೀರಭದ್ರನೊಂದಿಗೆ ತುಳುನಾಡಿನ ಇತರ ಕೆಲವು ದೈವಗಳನ್ನು ಆರಾಧಿಸುತ್ತಾರೆ. ನಾಲ್ಕು ಕ್ಷೇತ್ರ ಸ್ಥಾನಿಕರು ಇವರಿಗಿದ್ದಾರೆ. ರಾಮಗುರಿಕಾರ, ಕಾಂತಣ್ಣಗುರಿಕಾರ, ಅಪ್ಪುಗುರಿಕಾರ, ಪೂವಪ್ಪಗುರಿಕಾರ ೧೬. ಆರಾಧನಾ ಕ್ಷೇತ್ರಗಳಲ್ಲಿ ದಕ್ಷಿಣದ ಎಂಟು ಕ್ಷೇತ್ರಗಳಿಗೆ ಮಂಗಳೂರು ಗುರುಸ್ಥಾನದಲ್ಲಿದ್ದರೆ. ಉತ್ತರದ ಎಂಟು ಕ್ಷೇತ್ರಗಳಿಗೆ ಬಾರಕೂರು ಗುರುಸ್ಥಾನದಲ್ಲಿದೆ. ಸಮಾಜಕ್ಕೆ ಸಂಬಂಧಪಟ್ಟ ವಿವಾದಗಳು ಇಲ್ಲಿ ಇತ್ಯರ್ಥವಾಗುತ್ತವೆ.

ತುಳುನಾಡಿನ ಪದ್ಮಶಾಲಿಯರೂ ಹಿಂದೆ ದೇವೀ ಆರಾಧಕರಾಗಿದ್ದರೆಂದು ಇತ್ತೀಚೆಗೆ ಕೆಲವು ದೇವಾಲಯಗಳಲ್ಲಿ 'ಸ್ವರ್ಣಪ್ರಶ್ನೆ' ಇಟ್ಟಾಗ ತಿಳಿದು ಬಂದಿದೆಯಂತೆ. ಮೂಲತಃ ಶಕ್ತಿ ಆರಾಧನೆಗೆ ಸೇರಿದ ಶಾಲಿಯಾ ಸಮುದಾಯದ ಒಂದು ಭಾಗ ತುಳುನಾಡಿನ 'ಪದ್ಮಶಾಲಿ' ಎಂಬುದನ್ನು ಇದು ಇನ್ನಷ್ಟು ಬಲಪಡಿಸುತ್ತದೆ. ಬೇರೆಡೆಗಳಲ್ಲಿ ಪದ್ಮಶಾಲಿಯರು ಗಂಗಮ್ಮ, ಮಾರಮ್ಮ, ಸುಂಕಾಲಮ್ಮ, ಕಿಂಕಿಣಿಯಮ್ಮ ಎಂದು ಹಲವು ಸ್ತ್ರೀ ದೇವತೆಗಳ ಆರಾಧಕರಾಗಿದ್ದಾರೆ.

ತುಳುನಾಡಿನ ಪದ್ಮಶಾಲಿಯರು ಉಪವೀತಧಾರಣೆಯನ್ನು ಮಾಡಿಕೊಳ್ಳುತ್ತಾರೆ. ದೇವಾಲಯಗಳಲ್ಲಿ ವೀರಭದ್ರಸ್ವಾಮಿಯ ಅರ್ಚನೆಗಾಗಿ ಬ್ರಾಹ್ಮಣ ಅರ್ಚಕರನ್ನು ನೇಮಿಸಿಕೊಳ್ಳುತ್ತಾರೆ. ವೀರಭದ್ರನೊಂದಿಗೆ 'ಮಹಮ್ಮಾಯಿ' ಯನ್ನೂ ಇವರು ಪೂಜಿಸುತ್ತಾರೆ. (ಮಹಮ್ಮಾಯಿ ಸ್ತ್ರೀ ದೇವತೆ ) ಪದ್ಮಶಾಲಿಯರಲ್ಲಿ ಹೆಚ್ಚಿನವರು ವೀರಶೈವರಾಗಿರುವುದೇ ತುಳುನಾಡಿನ ಪದ್ಮಶಾಲಿಗಳು ವೀರಭದ್ರಾರಾಧನೆ ಮಾಡಲು ಮೂಲ ಕಾರಣವಾಗಿದೆ. ನೇಕಾರ ವರ್ಗದ ಹೆಚ್ಚಿನವರೂ ದೇವೀ ಆರಾಧಕರಾದುದರಿಂದ ತಮ್ಮ ಮೂಲದೈವವಾದ ದೇವಿಯನ್ನು ಮಹಮ್ಮಾಯಿ ದುರ್ಗಾಪರಮೇಶ್ವರಿ, ಆದಿಶಕ್ತಿ ಮುಂತಾದ ಹೆಸರುಗಳಿಂದ ವೀರಭದ್ರನೊಂದಿಗೆ ಇವರು ಆರಾಧಿಸುತ್ತಿದ್ದಾರೆ. ಮಾರಿದೇವತೆಯ ಆರಾಧನೆಯೂ ಇವರಿಗೆ ಪ್ರಧಾನವಾಗಿದೆ.

ಇವರ ೧೬ ದೇವಾಲಯಗಳಿಗೂ ವಿಶೇಷವಾದ ಇತಿಹಾಸವಿದೆ. ದೇವಾರಾಧನೆಯೊಂದಿಗೆ

ದೈವಾರಾಧನೆಯೂ ನಡೆಯುತ್ತದೆ. ನಿರ್ದಿಷ್ಟ ಕುಟುಂಬಕ್ಕೆ ಅದರದೇ ಆದ ದೈವಸ್ಥಾನ, ಭೂತಾಲಯ, ಮೂಲಸ್ಥಾನ, ಪ್ರತ್ಯೇಕ ಆರಾಧನಾಲಯಗಳು ಇವೆ. ದೈವಸ್ಥಾನಗಳಲ್ಲಿ ಅರ್ಚನೆಯನ್ನು ಸ್ವಜಾತಿ ಬಾಂಧವರೇ ನಡೆಸುತ್ತಾರೆ. ಇವರನ್ನು 'ಮುಕಾಲ್ದಿ' ಎನ್ನುತ್ತಾರೆ. ದೈವಗಳ ದರ್ಶನಪಾತ್ರಿಗಳಾಗಿ ವಂಶಪಾರಂಪರ್ಯವಾಗಿ ಸೇವೆ ಮಾಡಿಕೊಂಡು ಬರುವವರೂ ಇದ್ದಾರೆ.

ವೀರಭದ್ರನ ಆರಾಧನೆ ಅವರಿಗೆ ವಲಸೆಬರುವಾಗಲೇ ಇತ್ತು ಎನ್ನುವುದನ್ನು ದೃಢೀಕರಿಸುವ ಕಥೆಯೊಂದು ಹಳೆಯಂಗಡಿ ದೇವಾಲಯದಲ್ಲಿ ಲಭ್ಯವಾಗಿದೆ. ಆ ದೇವಾಲಯದ ಬಳಿ ನಾರಾಯಣ ಪದ್ಮಶಾಲಿ ಎಂಬ ಓರ್ವ ಸಿದ್ಧವ್ಯಕ್ತಿಯಿದ್ದನಂತೆ, ಆತ ಆಂಧ್ರದಿಂದ ಬಂದವನು. ಆಂಧ್ರದಲ್ಲಿ ಮುಸ್ಲಿಮರ ಧಾಳಿಯ ಸಂದರ್ಭದಲ್ಲಿ (ಸುಮಾರು ೧೫ನೇ ಶತಮಾನ) ತನ್ನವರನ್ನೆಲ್ಲಾ ಕಳೆದುಕೊಂಡ ಆತ ತಾನು ಪೂಜಿಸುತ್ತಿದ್ದ ವೀರಭದ್ರ ಸ್ವಾಮಿಯ ವಿಗ್ರಹವನ್ನು ಸಮುದ್ರಕ್ಕೆ ಹಾಕಿದನೆಂದೂ, ಅದೇ ವಿಗ್ರಹವು ಹಳೆಯಂಗಡಿಗೆ ಬಂದು ಆತನಿಗೆ ಸಮುದ್ರಸ್ನಾನ ಮಾಡಲು ಆತನ ಕೈಗೆ ದೊರೆಯಿತೆಂದೂ ಹೇಳಲಾಗುತ್ತದೆ.

ತುಲಸಿಕಟ್ಟೆಯನ್ನು ಬಾಳೆಯಿಂದ ಸಿಂಗರಿಸಿ 'ಅರ್ಸಯ' ಹರಿ ಸೇವೆ ಎನ್ನುವ ಆರಾಧನೆಯನ್ನು ಕೆಲವು ಪದ್ಮಶಾಲಿಯರು ನಡೆಸುತ್ತಾರೆ. ಕೆಲವು ಮನೆಗಳಲ್ಲಿ ತಿರುಪತಿಯ ವೆಂಕಟರಮಣನ ಹೆಸರಿನಲ್ಲಿ 'ಮುಡಿಪು' ಇಟ್ಟು ವರ್ಷಕ್ಕೆ ಎರಡು ಬಾರಿ 'ಪಾನಕ ಪೂಜೆ' ಯನ್ನು ಮಾಡುತ್ತಾರೆ. ಇದು ಮೂಲತಃ ಪದ್ಮಶಾಲಿಯರು ವೈಷ್ಣವರು ಎಂಬುದನ್ನು ಸೂಚಿಸುತ್ತದೆ.

ಹಿಂದೂಗಳಲ್ಲಿ ಶಿವಾರಾಧನೆ ಮತ್ತು ವಿಷ್ಣುವಿನ ಆರಾಧನೆಗಳು ಒಮ್ಮೊಮ್ಮೆ ಪ್ರತ್ಯೇಕ ಪ್ರತ್ಯೇಕವಾಗಿ ಮತ್ತೊಮ್ಮೆ ಒಂದಾಗಿ ಕಂಡುಬರುವುದು ಸಾಮಾನ್ಯ ಅಂಶವಾಗಿದೆ. ಶಿವಾರಾಧನೆ ಪ್ರಬಲಗೊಂಡಾಗ ಶೈವಮತವಾಗುತ್ತದೆ. ವಿಷ್ಣುವಿನ ಆರಾಧನೆ ಪ್ರಬಲಗೊಂಡಾಗ ವೈಷ್ಣವಮತವಾಗುತ್ತದೆ. ಹಿಂದೂಧರ್ಮದಲ್ಲಿ ಕೆಲವು ಸಮುದಾಯದವರು ಕಟ್ಟುನಿಟ್ಟಾಗಿ ಶೈವಮತವನ್ನೋ, ವೈಷ್ಣವ ಮತವನ್ನೊ ಪರಿಪಾಲಿಸಿದರೆ, ಇನ್ನು ಕೆಲವರು ಆರಾಧನೆಯಲ್ಲಿ ಈ ಖಚಿತತೆಯನ್ನು ರೂಢಿಸಿಕೊಳ್ಳದಿರುವುದು ಕಂಡು ಬರುತ್ತದೆ. ಆದುದರಿಂದ ನೇಕಾರ ವರ್ಗದಲ್ಲಿ ಯಾರು ಯಾವಾಗ ವೈಷ್ಣವರು ? ಯಾರು ಯಾವಾಗ ಶೈವರು ? ಎಂಬುದನ್ನು ಪ್ರತ್ಯೇಕೀಕರಿಸುವುದು ಅಸಾಧ್ಯ.

ತುಳುನಾಡಿನಲ್ಲಿ ಇವರನ್ನು ಸಾಮಾನ್ಯವಾಗಿ ತಾಳ್ಯ, ಚಾಲ್ಯ ಎಂದು ಕರೆಯುತ್ತಾರೆ. ಕಾಸರಗೋಡು ಪ್ರದೇಶದಲ್ಲಿ 'ಪರಂಬಚಾಲ್ಯ' ಎಂಬ ಪದವೂ ಪ್ರಯೋಗದಲ್ಲಿದೆ.

ಪದ್ಮಶಾಲಿಯರ ಆರಾಧನಾ ಕೇಂದ್ರಗಳಾದ ೧೬ ದೇವಾಲಯಗಳಲ್ಲಿ ಕೆಲವು ಇವರಿಂದಲೇ

ನಿರ್ಮಿತವಾದವುಗಳೆಂದೂ, ಕೆಲವನ್ನು ಇತರ ಸಮುದಾಯದವರು ಬಿಟ್ಟುಕೊಟ್ಟಿರುವ ಅಥವಾ ಕಟ್ಟಿಕೊಟ್ಟಿರುವ ಸಾಧ್ಯತೆಗಳಿವೆ ಎಂದೂ ಊಹಿಸಲಾಗುತ್ತದೆ. ಈ ೧೬ ದೇವಾಲಯಗಳೂ ಇವರ ಸಾಂಸ್ಕೃತಿಕ ಬದುಕಿಗೆ ಕನ್ನಡಿ ಹಿಡಿಯುತ್ತದೆ.

**ಕರಾವಳಿ ಪದ್ಮಶಾಲಿ ಸಮುದಾಯದ ಹದಿನಾರು ಕ್ಷೇತ್ರಗಳ ಕಿರುಪರಿಚಯ**

೧. **ಬಾರಕೂರು : ಬ್ರಹ್ಮಲಿಂಗ ವೀರಭದ್ರ ದುರ್ಗಾಪರಮೇಶ್ವರಿ ದೇವಸ್ಥಾನ**

ಇದು ಪದ್ಮಶಾಲಿ ಜನಾಂಗದ ಕೇಂದ್ರಸ್ಥಾನ ಇಲ್ಲಿ ಕ್ರಿ.ಶ ೧೩೩೩ ರ ಕಾಲದಲ್ಲಿ ಹೊಯ್ಸಳರು ನಿಲ್ಲಿಸಿದ ಶಾಸನವೊಂದಿದೆ. ಆ ಶಾಸನದಲ್ಲಿ ಹೊಯ್ಸಳ ವಂಶದ ರಾಜನಾದ ವೀರಬಲ್ಲಾಳನು ಈ ದೇವಾಲಯಕ್ಕೆ ಉಂಬಳಿಯನ್ನು ನೀಡಿದ ಉಲ್ಲೇಖವಿದೆ. ವೀರಭದ್ರ ಇಲ್ಲಿಯ ಪ್ರಧಾನ ದೈವ. ನಿತ್ಯ ಬೆಳಿಗ್ಗೆ ಬ್ರಾಹ್ಮಣ ಅರ್ಚಕರಿಂದ ಪೂಜೆ ನಡೆಯುತ್ತದೆ. ನಾಲ್ಕು ಚಕ್ರಗಳುಳ್ಳ ಮರದ ರಥದ ಮೇಲೆ ನಿಂತಿರುವ ಖಡ್ಗಪಾಣಿಯಾದ ದೇವಿಯ ಮರದ ವಿಗ್ರಹವಿದೆ. ಸಂಕ್ರಮಣ ದಿನಗಳಲ್ಲಿ ದೇವಿಗೆ ಪೂಜೆ ಸಲ್ಲುತ್ತದೆ. ಕ್ಷೇತ್ರದ ಪರಿವಾರ ದೈವಗಳಾಗಿ ಬಬ್ಬರ್ಯ, ಪಂಜುರ್ಲಿ, ರಕ್ತೇಶ್ವರಿ ಮುಂತಾದ ದೇವತೆಗಳಿದ್ದಾರೆ. ಸುಮಾರು ೮೦ ಪದ್ಮಶಾಲಿಯರ ಮನೆಗಳು ಕ್ಷೇತ್ರದ ವ್ಯಾಪ್ತಿಗೆ ಬರುತ್ತದೆ ಎನ್ನಲಾಗಿದೆ. ದೇವಸ್ಥಾನದ ಆಡಳಿತವನ್ನು ನೋಡಿಕೊಳ್ಳಲು ಒಂದು ಸಮಿತಿಯಿದೆ. ಫೆಬ್ರವರಿ ತಿಂಗಳಲ್ಲಿ ವಾರ್ಷಿಕ ಉತ್ಸವ ನಡೆಯುತ್ತದೆ.

೨. **ಸಾಲಿಕೇರಿ : ಶ್ರೀದುರ್ಗಾಪರಮೇಶ್ವರಿ ಮತ್ತು ಶ್ರೀ ಬ್ರಹ್ಮಲಿಂಗ ವೀರಭದ್ರ ದೇವಸ್ಥಾನ :** ಉಡುಪಿ ತಾಲೂಕಿನ ಬ್ರಹ್ಮಾವರ ಎಂಬಲ್ಲಿದೆ. ' ಸಾಲಿಕೇರಿ' ಎಂಬ ಸ್ಥಳ ನಾಮವೇ ಒಂದು ಕಾಲದಲ್ಲಿ ಇದು 'ಸಾಲಿಗರ ಕೇಂದ್ರ' ವಾಗಿತ್ತು ಎಂಬುದನ್ನು ಸೂಚಿಸುತ್ತದೆ. ಈಗಲೂ ಇಲ್ಲಿ ದೊಡ್ಡ ಸಂಖ್ಯೆಯಲ್ಲಿ ಪದ್ಮಶಾಲಿಯರು ವಾಸಿಸುತ್ತಾರೆ. ಇಲ್ಲಿನ ವೀರಭದ್ರ ದೇವಾಲಯ ಸುಮಾರು ನಾನೂರು ವರ್ಷ ಪುರಾತನದ್ದಾಗಿದೆ. ಸುಮಾರು ೧೫೦ ವರ್ಷಗಳ ಹಿಂದೆ ಬಡಸಾಲಿಕೇರಿಯಿಂದ ಪ್ರಕೃತದ ಸ್ಥಳಕ್ಕೆ ವರ್ಗಾಯಿಸಲಾಯಿತೆಂದು ಹೇಳಲಾಗಿದೆ. ಶ್ರೀ ದುರ್ಗಾಪರಮೇಶ್ವರಿ ಮತ್ತು ಶ್ರೀ ವೀರಭದ್ರರ ಆರಾಧನೆ ನಡೆಯುತ್ತದೆ. ಪರಿವಾರ ದೈವಗಳಾಗಿ ಅಬ್ಬಗದಾರಗ, ಕ್ಷೇತ್ರಪಾಲ, ಭದ್ರಕಾಳಿ, ಮುಂಡತ್ತಾಯ, ಹಾಗೂ ನಾಗದೇವರ ಆರಾಧನೆ ನಡೆಯುತ್ತದೆ. ದೇವಾಲಯಕ್ಕಿಂತ ಅನತಿ ದೂರದಲ್ಲಿ ಕುಮಾರ ಕ್ಷೇತ್ರವೆಂಬ ದೇವಾಲಯವಿದೆ. ಪ್ರತಿ ಸಂಕ್ರಮಣಪೂಜೆ, ಶ್ರಾವಣ ಮಾಸದ ಪ್ರತಿ ಸಂಜೆ ಸೋಣೆ ಆರತಿ, ಯುಗಾದಿ, ನಾಗರಪಂಚಮಿ, ದೀಪಾವಳಿ, ಕದಿರಹಬ್ಬ, (ಸಿರ) ನವರಾತ್ರಿ ಪೂಜೆ ಇಲ್ಲಿಯ

ವಿಶೇಷ ಪೂಜೆಗಳು. ವರ್ಷದ ಜಾತ್ರೆ ಫೆಬ್ರವರಿಯಲ್ಲಿ ಮೂರು ದಿನ ನಡೆಯುತ್ತದೆ. 6 ಮಾಗಣೆ 7 ಗ್ರಾಮಗಳಿದ್ದು ೪೦೦೦ ಜನರು ಈ ಕ್ಷೇತ್ರದ ವ್ಯಾಪ್ತಿಯಲ್ಲಿದ್ದಾರೆ.

೩. **ಕಲ್ಯಾಣಪುರ : ಶ್ರೀ ಆದಿಶಕ್ತಿ - ಬ್ರಹ್ಮಲಿಂಗ ವೀರಭದ್ರ ದೇವಸ್ಥಾನ :** ಉಡುಪಿಯಿಂದ ಉತ್ತರಕ್ಕೆ ಐದು ಕಿ.ಮೀ. ದೂರದಲ್ಲಿರುವ ಸಂತೆಕಟ್ಟೆ ಎಂಬಲ್ಲಿದೆ. ಈ ದೇವಾಲಯಕ್ಕೆ ಸಾವಿರ ವರ್ಷಗಳ ಪ್ರಾಚೀನತೆಯನ್ನು ಹೇಳುತ್ತಾರೆ. ಶ್ರೀ ಆದಿಶಕ್ತಿ, ಮತ್ತು ವೀರಭದ್ರಸ್ವಾಮಿ ಇಲ್ಲಿನ ಪ್ರಧಾನ ದೇವತೆಗಳು, ನಾಗದೇವರು, ಮಹಾಕಾಳಿ, ಪಂಚಧೂಮಾವತಿ, ರಕ್ತೇಶ್ವರಿ, ಬಬ್ಬರ್ಯ, ಕಾಳಭೈರವ, ಕ್ಷೇತ್ರಪಾಲ ಮುಂತಾದ ದೇವ ದೇವತೆಗಳೂ ಆರಾಧಿಸಲ್ಪಡುತ್ತಾರೆ. ವರ್ಷಕ್ಕೆ ಎರಡು ಬಾರಿ ಜಾತ್ರೆ ನಡೆಯುತ್ತದೆ. ಧನುಮಾಸದಲ್ಲಿ ಬರುವ ಹುಣ್ಣಿಮೆಯಂದು ಮತ್ತು ಮೀನಮಾಸದಲ್ಲಿ ಬರುವ ಹುಣ್ಣಿಮೆಯಂದು 'ಹಾಲಿಟ್ಟು ಢಕ್ಕೆಬಲಿ' ಸೇವೆ ಇಲ್ಲಿನ ವೈಶಿಷ್ಟ್ಯ. ೮ ಗ್ರಾಮ ೬ ಮಾಗಣೆಗಳಿದ್ದು ೫,೦೦೦ ಜನರು ಈ ಕ್ಷೇತ್ರದ ವ್ಯಾಪ್ತಿಗೆ ಬರುತ್ತಾರೆ.

೪. **ಕಿನ್ನಿಮೂಲ್ಕಿ : ಶ್ರೀ ವೀರಭದ್ರ ದೇವಸ್ಥಾನ :-** ಉಡುಪಿಗೆ ಸಮೀಪದಲ್ಲಿರುವ ಕ್ಷೇತ್ರವಿದು. ಸುಮಾರು ೬೦ ವರ್ಷಗಳ ಇತಿಹಾಸವಿದೆ. ವೀರಭದ್ರ ಇಲ್ಲಿನ ಪ್ರಧಾನ ದೇವರು. ದೂಮಾವತಿ, ಬಂಟ, ಪಂಜುರ್ಲಿ ಇತ್ಯಾದಿ ಪರಿವಾರ ದೈವಗಳ ಆರಾಧನೆಯೂ ನಡೆಯುತ್ತದೆ. ಪ್ರತಿವರ್ಷ ಚೈತ್ರಮಾಸದ ಹುಣ್ಣಿಮೆಯಂದು ವೀರಭದ್ರ ಸ್ವಾಮಿಯ ಮಹೋತ್ಸವ, ಹಾಗೂ ದೈವಗಳ ಆರಾಧನೆಯೊಂದಿಗೆ ಜಾತ್ರೆ ನಡೆಯುತ್ತದೆ. ಸುಮಾರು ಮುನ್ನೂರಕ್ಕಿಂತಲೂ ಮೇಲ್ಪಟ್ಟು ಮನೆಗಳು ಈ ಕ್ಷೇತ್ರದ ವ್ಯಾಪ್ತಿಯಲ್ಲಿದೆ.

೫. **ಕಾಪು :- ಶ್ರೀ ಆದಿಶಕ್ತಿ ವೀರಭದ್ರ ದೇವಸ್ಥಾನ :-** ಉಡುಪಿಯಿಂದ ದಕ್ಷಿಣಕ್ಕೆ ಸುಮಾರು ೪-೫ ಕಿ.ಮೀ ದೂರದಲ್ಲಿದೆ. ಪುರಾತನತೆ ಇರುವ ದೇವಾಲಯ. ವೀರಭದ್ರ ಪ್ರಧಾನ ದೇವರು. ಧೂಮಾವತಿ ಪಂಜುರ್ಲಿ ಪರಿವಾರ ದೈವಗಳು, ಸ್ವಲ್ಪಕಾಲ ದೇವಾಲಯದಲ್ಲಿ ಪೂಜಾದಿಗಳಿರಲಿಲ್ಲ. ವಿಗ್ರಹವೇ ಕಾಣೆಯಾಯಿತು ಎಂದು ಹೇಳುತ್ತಾರೆ. ೧೯೮೨-೮೩ರಲ್ಲಿ ಪುನರ್ನವೀಕರಣವಾಗಿ ಇತ್ತೀಚೆಗೆ ಪೂಜೆ ನಡೆಯುತ್ತಿದೆ.

೬. **ಎರ್ಮಾಳು : ಶ್ರೀ ವೀರಭದ್ರ ದೇವಸ್ಥಾನ :** ಉಡುಪಿಯಿಂದ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ಸುಮಾರು ೬೦೦ ವರ್ಷಗಳ ಪ್ರಾಚೀನತೆ ಈ ಕ್ಷೇತ್ರಕ್ಕಿದೆ ಕಲ್ಯಾಣಪುರದಿಂದ ವೀರಭದ್ರ ಸ್ವಾಮಿ ಪದ್ಮಶಾಲಿಯೋರ್ವನೊಂದಿಗೆ ಇಲ್ಲಿಗೆ ಬಂದನೆಂಬ ಐತಿಹ್ಯವಿದೆ. ಇಲ್ಲಿನ ಅರಸು ದೇವಾಲಯ

ಕಟ್ಟಿಕೊಟ್ಟನೆಂದೂ ಹೇಳಲಾಗಿದೆ. ಇಲ್ಲಿಯೂ ವೀರಭದ್ರನೇ ಪ್ರಧಾನ ದೈವ. ಆರಂಭದಲ್ಲಿ ದಾರುಶಿಲ್ಪವಾಗಿದ್ದ ಮೂರ್ತಿಯ ಬದಲು ಈಗ ಕಲ್ಲಿನ ಮೂರ್ತಿಯನ್ನು ನಿಲ್ಲಿಸಲಾಗಿದೆ. ಪರಿವಾರ ದೇವತೆಗಳಾಗಿ ಧೂಮಾವತಿ, ರಕ್ತೇಶ್ವರಿ, ಪಂಜುರ್ಲಿ, ಬಬ್ಬರ್ಯ,ಗುಳಿಗ ಮುಂತಾದವರಿದ್ದಾರೆ. ಸಂಕ್ರಮಣ ಹಾಗೂ ನವರಾತ್ರಿ ದಿನಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತದೆ. ನಿತ್ಯಪೂಜೆಯೂ ಇದೆ. ಎರ್ಮಾಳು, ಎಲ್ಲೂರು, ಕುತ್ಯಾರು, ಇನ್ನ, ಬೆಳ್ಮಣ್ ಪ್ರದೇಶಗಳ ಸಮಾಜ ಬಾಂಧವರು ಕ್ಷೇತ್ರದ ವ್ಯಾಪ್ತಿಗೊಳಪಡುತ್ತಾರೆ.

೭. ಪಡುಬಿದ್ರಿ : ಶ್ರೀ ವೀರಭದ್ರ ದೇವಸ್ಥಾನ ಉಡುಪಿಯಿಂದ ದಕ್ಷಿಣಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿದೆ. ವೀರಭದ್ರ ಪ್ರಧಾನ ದೇವರು. ಪ್ರಾಚೀನತೆಯನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಸುಮಾರು ಒಂದು ಶತಮಾನದ ಹಿಂದೆ ಪಾಳುಬಿದ್ದು ಅನಂತರ ಊರವರ ಹಾಗೂ ಸಮಾಜ ಬಂಧುಗಳ ಸಹಕಾರದಿಂದ ದೇವಸ್ಥಾನವು ಜೀರ್ಣೋದ್ಧಾರವಾಯಿತು ಎಂದು ಹೇಳುತ್ತಾರೆ. ಮಹಮ್ಮಾಯಿಯನ್ನು ಇದೇ ಕಾಲದಲ್ಲಿ ಪ್ರತಿಷ್ಠಾಪಿಸಲಾಯಿತು ಎನ್ನುತ್ತಾರೆ. ದೇವರಿಗೆ ಕಾಲಾವಧಿ ಪೂಜೆ, ನವರಾತ್ರಿ ಪೂಜೆ ನಡೆಯುತ್ತದೆ.

೮. ಕಾರ್ಕಳ : ಶ್ರೀ ಆದಿಶಕ್ತಿ - ವೀರಭದ್ರ ದೇವಸ್ಥಾನ : ಈ ದೇವಾಲಯ ಯಾರಿಂದ ಯಾವಾಗ ಅಸ್ತಿತ್ವಕ್ಕೆ ಬಂತು ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಆದಿಮಾಯೆ ಹಾಗೂ ವೀರಭದ್ರನ ಪೀಠಗಳ ಮೇಲೆ ಕಂಚಿನ ಎರಡು ಕಲಶಗಳನ್ನಿಟ್ಟು ಪೂಜಿಸಲಾಗುತ್ತದೆ. ಕಾರ್ಕಳದ ವೆಂಕಟರಮಣ ದೇವಾಲಯಕ್ಕಿಂತಲೂ ಪ್ರಾಚೀನವಾದುದು ಎಂದು ಹೇಳುತ್ತಾರೆ. ಈ ದೇವಾಲಯದೊಂದಿಗೆ ವೆಂಕಟರಮಣ ದೇವಾಲಯಕ್ಕೆ ಸಂಪರ್ಕವಿದೆ. ಹಾಗೇ ಇಲ್ಲಿನ ಪುರಾತನ ಮಾರಿಗುಡಿ ದೇವಾಲಯಕ್ಕೂ ಸಂಬಂಧವಿದೆ.

೯. ಮೂಲ್ಕಿ : ಶ್ರೀ ವೀರಭದ್ರ - ಮಹಾಮ್ಮಾಯಿ ದೇವಸ್ಥಾನ :- ಮೂಲ್ಕಿಯಿಂದ ಪೂರ್ವಕ್ಕೆ ೨ ಕಿ.ಮೀ. ದೂರದಲ್ಲಿದೆ. ವೀರಭದ್ರ ಸ್ವಾಮಿಯು ಇಲ್ಲಿ ೯೦೦-೧೦೦೦ ವರ್ಷಗಳ ಹಿಂದೆ ನೆಲೆನಿಂತಿರುವುದರ ಪುರಾಣಾಂತರ್ಗತ ಕಥೆಯೊಂದನ್ನು ಹೇಳಲಾಗುತ್ತದೆ. "ಶಾಪದ ದೆಸೆಯಿಂದ ಭೂಲೋಕದಲ್ಲಿ ರಾಕ್ಷಸಿಯಾಗಿ ಜನಿಸಿದ ಅಪ್ಸರೆಯೋರ್ವಳಿಗೆಕುಂಜರಾಸುರನೆಂಬ ಮಗನಿದ್ದನು. ತಾಮಸೀ ಪ್ರವೃತ್ತಿಯ ಆತ ಈಗ ಕ್ಷೇತ್ರವಿರುವ ಪರಿಸರದಲ್ಲಿ ಜನರಿಗೆ ಕಾಟವನ್ನು ಕೊಡುತ್ತಿದ್ದನು. ಇಂತಹ ಸಂದರ್ಭದಲ್ಲಿ ಜೈನಯತಿಯೋರ್ವರು ಕ್ಷೇತ್ರ ಪರ್ಯಟನಾರ್ಥವಾಗಿ ಬಂದಿರಲು ಈತ ಕಾಲಿನಿಂದ

ಅವರನ್ನು ಒದೆಯಲು ಮುಂದಾಗುತ್ತಾನೆ. ಆಗ ಯತಿಯು ವೀರಭಧ್ರನನ್ನು ನೆನೆಯಲು, ಸ್ವಾಮಿಯು ಬಂದು ಅವನ ಸಂಹಾರವಾಡುತ್ತಾನೆ. ಬಹಳ ವರ್ಷಗಳ ವರೆಗೆ ಜೈನಮತದ ಅಧಿಕಾರವ್ಯಾಪ್ತಿಯಲ್ಲಿದ್ದ ದೇವಾಲಯವು ಅನಂತರ ಪದ್ಮಶಾಲಿಗರ ಕೈಗೆ ಬಂತು ಎನ್ನಲಾಗಿದೆ.

೪೦೦ ವರ್ಷಗಳ ಪ್ರಾಚೀನತೆಯುಳ್ಳ ಇಲ್ಲಿ ನೆಲೆನಿಂತ ಮಹಮ್ಮಾಯಿ ದೇವಿಯ ಬಗ್ಗೆಯೂ ಸುಳ್ಳೈತಿಹ್ಯ ಹೀಗನ್ನುತ್ತದೆ :-

'ಮೂಲ್ಕಿಯ ಅಕ್ಕಸಾಲಿಗರ ಕೇರಿಯಲ್ಲಿ ಶ್ರೀ ದೇವಿಯು ಬ್ರಾಹ್ಮಣರ ಮನೆಯಲ್ಲಿ ಪೂಜಿಸಲ್ಪಡುತ್ತಿದ್ದಳು. ಆದರೆ ಕಾಲಕ್ರಮೇಣ ಬ್ರಾಹ್ಮಣರ ವಂಶವು ಅವನತಿಯಾದಾಗ ಶ್ರೀ ದೇವಿಯ ಆರಾಧನೆಯ ಜವಾಬ್ದಾರಿ ಪದ್ಮಶಾಲಿಗರ ಮೇಲೆ ಬರುತ್ತದೆ. ಭಕ್ತರಾದ ಪದ್ಮಶಾಲಿಗರನ್ನು ಹಿಂಬಾಲಿಸಿ ಬಂದ ದೇವಿ ಈ ಕ್ಷೇತ್ರದಲ್ಲೇ ನೆಲೆನಿಂತಳು.

ಧೂಮಾವತಿ ಹಾಗೂ ಪರಿವಾರದೈವಗಳು ಇಲ್ಲಿ ಆರಾಧಿಸಲ್ಪಡುತ್ತವೆ. ವೀರಭದ್ರನಿಗೂ ಮಹಮ್ಮಾಯಿಗೂ ಇಲ್ಲಿನಿತ್ಯಪೂಜೆ ನಡೆಯುತ್ತದೆ. ಸಂಕ್ರಮಣದಂದು ವಿಶೇಷ ಪೂಜೆಯೊಂದಿಗೆ ದೇವಿ ದರ್ಶನವಿದೆ. ನಾಲ್ಕು ಮಾಗಣೆಗಳು ಈ ಕ್ಷೇತ್ರದ ವ್ಯಾಪ್ತಿಗೆ ಬರುತ್ತದೆ. (ಮೂಲ್ಕಿ, ಸಾಣೂರು, ಕಡಂದಲೆ ಮತ್ತು ತಾಳಿಪಾಡಿ)

೧೦. **ಹಳೆಯಂಗಡಿ : ಶ್ರೀ ವೀರಭದ್ರ - ಮಹಮ್ಮಾಯಿ ದೇವಸ್ಥಾನ, ಹಳೆಯಂಗಡಿ :-**

ಮಂಗಳೂರಿನಿಂದ ೨೬ ಕಿ.ಮೀ ಉತ್ತರದಲ್ಲಿ ಹಳೆಯಂಗಡಿಯ ಈ ದೇವಾಲಯವಿದೆ. ಈ ದೇವಾಲಯವಿರುವ ಪ್ರದೇಶವನ್ನು 'ಕಲ್ಲಾಪು' ಎಂದು ಹೇಳುತ್ತಾರೆ. ಕಲ್ಲೊಂದರಲ್ಲಿ ಹೂವು ಅರಳಿರುವುದರಿಂದ ಈ ಪ್ರದೇಶಕ್ಕೆ ಈ ಹೆಸರು ಬಂತೆಂದು ಅಭಿಪ್ರಾಯವಿದೆ.

ಇಲ್ಲಿ ಶ್ರೀ ಮಹಮ್ಮಾಯಿ ಹಾಗೂ ವೀರಭದ್ರ ಸ್ವಾಮಿ ಪ್ರಧಾನ ದೇವತೆಗಳಾಗಿ ಆರಾಧಿಸಲ್ಪಡುತ್ತಾರೆ. ೧೫ನೇ ಶತಮಾನದಲ್ಲಿ ಆಂಧ್ರದಲ್ಲಿದ್ದ ' ನಾರಾಯಣ ಪದ್ಮಶಾಲಿ ' ಎಂಬ ವ್ಯಕ್ತಿಯಿಂದ ಮಹಮ್ಮಾಯಿ ದೇವಾಲಯದ ಪಕ್ಕದಲ್ಲಿ ದೇವಿಯ ಬಲಭಾಗದಲ್ಲಿ ವೀರಭದ್ರ ಸ್ವಾಮಿಯ ಪ್ರತಿಷ್ಠಾಪನೆಯಾಯಿತು ಎನ್ನಲಾಗುತ್ತದೆ. ದೇವಾಲಯದಲ್ಲಿ ಧೂಮಾವತಿ, ಬಂಟ, ಉಳ್ಳಾಯ, ಮಲರಾಯ, ಪಂಜುರ್ಲಿ, ಮೈಸಂದಾಯ ಮುಂತಾದ ದೈವಗಳು ಆರಾಧಿಸಲ್ಪಡುತ್ತದೆ. ಇತ್ತೀಚೆಗೆ ಗಣಪತಿಯ ಮೂರ್ತಿಯೂ ಪ್ರತಿಷ್ಠಾಪಿಸಲ್ಪಟ್ಟಿದೆ. ವರ್ಷಂಪ್ರತಿ ತವಿಗೆ ಉತ್ಸವ, ನವರಾತ್ರಿ ಉತ್ಸವ

ಆಷಾಡ ಮಾರಿಪೂಜೆ, ಕುಂಭಪೂಜೆ, ಭೂತಗಳ ನೇಮೋತ್ಸವ ಜರಗುತ್ತದೆ. ಸುಮಾರು ೧೩೮ ಮನೆಗಳು ಇದರ ವ್ಯಾಪ್ತಿಗೆ ಬರುತ್ತದೆ.

೧೧. <u>ಸುರತ್ಕಲ್ - ಶ್ರೀ ವೀರಭದ್ರ - ದುರ್ಗಾಪರಮೇಶ್ವರಿ ದೇವಸ್ಥಾನ :-</u>

ಮಂಗಳೂರು ನಗರದಿಂದ ಉತ್ತರಕ್ಕೆ ೧೫ ಕಿ.ಮೀ. ದೂರದಲ್ಲಿ ಸುರತ್ಕಲ್ ಇದೆ. ಅಲ್ಲೇ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ ಈ ದೇವಾಲಯವಿದೆ. ೧೦೦೦ ವರ್ಷಗಳ ಪ್ರಾಚೀನತೆ ಇದೆ. ಪಕ್ಕದಲ್ಲೇ ಪುರಾತನ ಶ್ರೀ ಮಾರಿಯಮ್ಮ ದೇವಾಲಯವೂ ಇದೆ. ಇಲ್ಲಿ 'ತೆರು' ಎಂದು ಕರೆಯಲ್ಪಡುವ ಪ್ರದೇಶದಲ್ಲಿ ದೇವಾಲಯವಿದೆ. (ಶಾಲಿಯರ 'ತೆರು' ಪದದ ಪ್ರಯೋಗವನ್ನು ನಾವು ಇಲ್ಲಿ ಮಾತ್ರ ಕಾಣುತ್ತೇವಷ್ಟೆ. ಉಳಿದಂತೆ 'ನೇಕಾರ ಕೇರಿ' ಎಂಬ ಪ್ರಯೋಗವೇ ಇದೆ.)ಇಲ್ಲಿನ ಮಾರಿಯಮ್ಮ ಪಯಸ್ವಿನೀ ನದಿಯನ್ನು ದಾಟಿ ಬಂದವಳು ಎಂಬ ಐತಿಹ್ಯವಿದೆ. ಈ ದೇವಾಲಯದೊಳಗೆ ಭದ್ರಕಾಳಿ - ಮಹಾಕಾಳಿ - ದುರ್ಗಾದೇವಿಗಳೆಂದು ಮೂರು ದೇವತೆಗಳ ವಿಗ್ರಹಗಳಿವೆ. ವೀರಭದ್ರ ದೇವಾಲಯವೂ ಪುರಾತನವಾದುದು. ಗುಳಿಗ, ನಾಗರಾಜ, ಧೂಮಾವತಿ ಇತರ ದೈವಗಳು. ಪ್ರತೀ ಮಂಗಳವಾರ ದೇವೀದರ್ಶನ, ಸಂಕ್ರಮಣ ದಿನಗಳಂದು ವಿಶೇಷ ಪೂಜೆ ನಡೆಯುತ್ತದೆ. ಆಷಾಡಪೂಜೆ, ನವರಾತ್ರಿ ಉತ್ಸವ, ದೀಪಾವಳಿ ಹಬ್ಬ ರಂಗಪೂಜೆ ಕಾಲಾನುಕಾಲಕ್ಕೆ ನಡೆದುಬಂದಿದೆ.

೧೨. <u>ಸಿದ್ಧಕಟ್ಟೆ : ಪಣಂಬೂರು ಶ್ರೀ ವೀರಭದ್ರ - ಮಹಾಮ್ಮಾಯಿ ದೇವಸ್ಥಾನ ಸಿದ್ಧಕಟ್ಟೆ:-</u>

ಎಡಂಗ ಶಾಲಿಯರ ಪಣಂಬೂರು ನಗರ ಕ್ಷೇತ್ರವು ಸ್ಥಳಾಂತರಗೊಂಡ ಹಾಗೇ ಬಂದರು ನಿರ್ಮಾಣದ ಕಾಲದಲ್ಲಿ ಪದ್ಮಶಾಲಿಯರ ಈ ದೇವಾಲಯವು ಸಿದ್ಧಕಟ್ಟೆಗೆ ಸ್ಥಳಾಂತರವಾಗಿದೆ. ಸುಮಾರು ೮೦೦ ವರ್ಷಗಳ ಪ್ರಾಚೀನತೆ ಈ ದೇವಾಲಯಕ್ಕಿದೆ. ವೀರಭದ್ರ ದೇವಾಲಯ ಮೊದಲನೆಯದು. ಮಹಮ್ಮಾಯಿ ದೇವಾಲಯ ಅನಂತರದ್ದು. ಧೂಮಾವತಿ, ವಾರಾಹಿ, ಬಬ್ಬರ್ಯ, ಮಹಿಷಾಸುರ ಬೈಕಡ್ತಿ ದೈವಗಳು ಪರಿವಾರ ದೈವಗಳು, ವರ್ಷಂಪ್ರತಿ ನಡೆಯುವ ಮಾರಿಪೂಜೆ ಇಲ್ಲಿನ ವಿಶೇಷ ಉತ್ಸವ ಕರ್ಕಾಟಕ ಸಂಕ್ರಮಣದಂದು ಆಟಿಪೂಜೆ ನಡೆಯುತ್ತದೆ. ನವರಾತ್ರಿಯ ಕಾಲದಲ್ಲಿ ಒಂಬತ್ತು ದಿನ ವಿಶೇಷ ಪೂಜೆಗಳಿವೆ. ಸುಮಾರು ೧೫೦ ಮನೆಗಳು ಈ ದೇವಾಲಯದ ವ್ಯಾಪ್ತಿಗೆ ಬರುತ್ತದೆ.

೧೩. <u>ಮಂಗಳೂರು : ಶ್ರೀ ವೀರಭದ್ರ ಮಹಾಮ್ಮಾಯಿ ದೇವಸ್ಥಾನ :-</u>

ಮಂಗಳೂರಿನ ಮಠದ ಕಣಿ ಎಂಬಲ್ಲಿದೆ. ವೀರಭದ್ರ ಮತ್ತು ಮಹಮ್ಮಾಯಿ ಪ್ರಧಾನ

ದೈವವಾಗಿದ್ದಾರೆ. ಜತೆಗೆ ಕ್ಷೇತ್ರಪಾಲನ ಆರಾಧನೆಯೂ ನಡೆಯುತ್ತದೆ. ೮೦೦ ವರ್ಷಗಳ ಇತಿಹಾಸ ಈ ದೇವಾಲಯಕ್ಕಿದೆ. ಮಂಗಳೂರಿನ ಡೊಂಗರಕೇರಿ ಎಂಬ ಪ್ರದೇಶದಿಂದ ಈಗಿರುವ ಸ್ಥಳಕ್ಕೆ ಸ್ಥಳಾಂತರವಾಯಿತು ಎಂದು ಹೇಳುತ್ತಾರೆ. ಅನ್ಯಮತೀಯರ ಧಾಳಿಯ ಸಂದರ್ಭದಲ್ಲಿ ಮೂಲಸ್ಥಾನವನ್ನು ಬಿಟ್ಟು ದೇವರು ಈ ಸ್ಥಳದಲ್ಲಿ ನೆಲಸಿದ್ದಾಗಿಯೂ, ಭಕ್ತರೊಬ್ಬರ ಮೇಲೆ ಆವೇಶ ಬಂದು ಈಗಿರುವ ಸ್ಥಳದಲ್ಲಿ ದೇವಸ್ಥಾನ ನಿರ್ಮಾಣವಾಗಲು ದೈವಾಜ್ಞೆಯುಂಟಾಯಿತು ಎಂದೂ ಹೇಳಲಾಗುತ್ತದೆ. ಇಲ್ಲಿ ಮಹಾಗಣಪತಿ ದೇವರ ಗುಡಿಯೂ ಇದೆ. ನವರಾತ್ರಿಯಲ್ಲಿ ೯ ದಿನ ವಿಶೇಷ ಪೂಜೆ, ಚೌತಿಹಬ್ಬ, ಶಿವರಾತ್ರಿ, ಸಂಕ್ರಮಣಗಳು, ಸೌರಮಾನಯುಗಾದಿ ಮುಂತಾದವುಗಳು ನಡೆಯುತ್ತದೆ.

ಉತ್ತರದ ಮುಲ್ಕಿಯಿಂದ ದಕ್ಷಿಣದ ಹೊಸದುರ್ಗದವರೆಗಿನ ಕ್ಷೇತ್ರಗಳ ಗುರುಸ್ಥಳವಾಗಿ ಇದನ್ನು ಪರಿಗಣಿಸಲಾಗಿದೆ.

೧೪. <u>ಉಳ್ಳಾಲ : ಶ್ರೀ ವೀರಭದ್ರ - ದುರ್ಗಾಪರಮೇಶ್ವರಿ ದೇವಸ್ಥಾನ :-</u> ಮಂಗಳೂರಿನಿಂದ ದಕ್ಷಿಣಕ್ಕೆ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ಈ ದೇವಾಲಯಕ್ಕೆ ೬೦೦ ವರ್ಷಗಳ ಪ್ರಾಚೀನತೆ ಇರಬಹುದು. ಇಲ್ಲಿ ವೀರಭದ್ರ - ದುರ್ಗಾಪರಮೇಶ್ವರಿಯರಿಗೆ ಪೂಜೋಪಚಾರಗಳು ನಡೆಯುತ್ತಿವೆ. ನಿತ್ಯವೂ ಪೂಜೆಯಿದೆ . ನವರಾತ್ರಿ, ದೀಪಾವಳಿ, ಚೌತಿ ಮೊದಲಾದ ಪರ್ವಕಾಲ ಗಳಲ್ಲೂ ಪೂಜೆ ನಡೆಯುತ್ತದೆ. ಆಡಳಿತ ಮಂಡಳಿಯೊಂದಿದ್ದು ಎಲ್ಲಾ ಉಸ್ತುವಾರಿಕೆಯನ್ನು ನೋಡಿಕೊಳ್ಳುತ್ತಿದೆ.

೧೫. <u>ಬಂಗ್ರ ಮಂಜೇಶ್ವರ : ಶ್ರೀ ವೀರಭದ್ರ ದೇವಾಲಯ :</u> ಇದು ಮಂಗಳೂರಿನಿಂದ ದಕ್ಷಿಣಕ್ಕೆ ೨೫ ಕಿ.ಮೀ ದೂರದಲ್ಲಿದೆ. ಪ್ರಸ್ತುತ ಕಾಸರಗೋಡು ಜಿಲ್ಲೆಯಲ್ಲಿದೆ. ಈ ದೇವಾಲಯಕ್ಕೆ ೮೦೦ ವರ್ಷಗಳ ಪ್ರಾಚೀನತೆಯಿದೆ. ವೀರಭದ್ರನೇ ಪರಮದೈವ. ಪಕ್ಕದಲ್ಲಿಯೇ ಅನ್ನಪೂರ್ಣೇಶ್ವರೀ ದೇವಿಯ ದೇವಾಲಯವಿದೆ. ಮಲರಾಯ, ಚಾಮುಂಡೇಶ್ವರಿ, ಧೂಮಾವತಿ,ಬಂಟ, ಕೊರತಿ, ಬಬ್ಬರ್ಯ ಮುಂತಾದ ದೈವಗಳಿವೆ. ದೇವಾಲಯದಲ್ಲಿ ನಿತ್ಯಪೂಜೆಯಿದೆ. ಪತ್ತನಾಜೆ, ದೀಪಾವಳಿ, ನವರಾತ್ರಿ ಪೂಜೆ ನಡೆಯುತ್ತದೆ. ಮಾರಿಪೂಜೆಯೂ ವೈಭವದಿಂದ ನಡೆಯುತ್ತದೆ. ೮ ಗ್ರಾಮಗಳ ೩೦೦ ಮಂದಿ ಪದ್ಮಶಾಲಿಯರು ಈ ಕ್ಷೇತ್ರದ ವ್ಯಾಪ್ತಿಗೆ ಬರುತ್ತಾರೆ.

೧೬. **ಹೊಸದುರ್ಗ :** ಶ್ರೀ ವೀರಭದ್ರ - ಮಹಾಮಾಯೀ ಪ್ರಸನ್ನ: ಇಲ್ಲಿ ದೇವಾಲಯವಿಲ್ಲ ಹತ್ತು ಮನೆಗಳು ಮಾತ್ರ ಇವೆ. ನೂರು ವರ್ಷಗಳ ಹಿಂದೆ ಎರಡನೇ ಗುರಿಕಾರನ ಮನೆಯಲ್ಲಿ ವೀರಭದ್ರನ ಸಂಕೇತವಾಗಿ

ಒಂದು 'ಭಂಡಾರ ' ಹಾಗೂ ದೇವಿಯ ಹೆಸರಿನಲ್ಲಿ ಒಂದು 'ಕಲಶ ' ಇಟ್ಟು ಪೂಜೆ ನಡೆಯುತ್ತಾ ಬಂದಿದೆ. ನವರಾತ್ರಿ ಸಮಯದಲ್ಲಿ ವಿಶೇಷ ಪೂಜೆ ಹಾಗೂ ಸಂಕ್ರಮಣದ ದಿನಗಳಲ್ಲಿ ಪೂಜೆಗಳು ನಡೆಯುತ್ತಾ ಇದೆ.

ತುಳುನಾಡಿನ ಪದ್ಮಶಾಲಿಯರ ಈ ೧೬ ದೇವಾಲಯಗಳ ಆಡಳಿತವು ಹಕ್ಕಿನ ಮೊಕ್ತೇಸರರಿಂದಲೂ, ಚುನಾಯಿತ ಸಮಿತಿಯಿಂದಲೂ ಟ್ರಸ್ಟಿಗಳಿಂದಲೂ ನಡೆಯುತ್ತದೆ. ಆಚಾರವರ್ಗದವರು ಇದ್ದರೂ ಶಾಲಿಯ ಸಮುದಾಯದ 'ನಗರಂ' ಗಳ ಆಚಾರವರ್ಗದಷ್ಟು ಅಧಿಕಾರಗಳು ಅವರಿಗಿಲ್ಲ. ನಗರಂಗಳ ಬದಲು ದೇವಾಲಯದಲ್ಲಿ 'ಕೂಡುಕಟ್ಟು' ಗಳಿವೆ.ಶಾಲಿಯರ 'ಕಾಲ್‌ವರ ' ದಂತೆಯೇ ' ವರಾಡ ' ಎಂಬ ವಂತಿಗೆಯನ್ನು ಹದಿನೆಂಟು ವರ್ಷಕ್ಕೆ ಮೇಲ್ಪಟ್ಟ ಇದರ ಸದಸ್ಯರು ಕೊಡಬೇಕಾಗುತ್ತದೆ. ಆದರೆ ಕ್ಷೇತ್ರದಲ್ಲಿ ಸದಸ್ಯತ್ವವನ್ನು ಪಡೆದುಕೊಳ್ಳಲು ಶಾಲಿಯರಂತೆ ವಿಶೇಷ ಆಚರಣೆಗಳೇನೂ ಇಲ್ಲ.

<u>ಕ್ಷೇತ್ರದ ಗುರಿಕಾರರು :-</u> ಪ್ರಧಾನ ಮೊಕ್ತೇಸರರು (ಗುರಿಕಾರರು) ದೇವಸ್ಥಾನದ ಮೊದಲನೇ ಪ್ರಜೆಯಂತಿದ್ದು ದೇವಾಲಯದಲ್ಲಿ ದಿನಂಪ್ರತಿ ನಡೆಯುವ ಎಲ್ಲಾಕೆಲಸಗಳು ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳುತ್ತಾರೆ. (ಮೂತೆ ಚೆಟ್ಟಿಯಾರ್‌ರಂತೆ ) ವರ್ಷಾವಧಿ ಉತ್ಸವಗಳೂ ಇವರ ಉಪಸ್ಥಿತಿಯಲ್ಲಿಯೇ ನಡೆಯಬೇಕು. ಗುರಿಕಾರ ಪದವಿ ತಂದೆಯಿಂದ ಮಗನಿಗೆ ಬರುತ್ತದೆ. (ಶಾಲಿಯಾ ಸಮುದಾಯದಲ್ಲಿ ಮರುಮಕ್ಕತ್ತಾಯಮ್ (ಅಳಿಯಕಟ್ಟಿನ) ಕ್ರಮದಲ್ಲಿ ಬರುತ್ತದೆ ) ದೇವಸ್ಥಾನದ ಕೂಡುಕಟ್ಟಿಗೆ ಸೇರಿದ ಸರ್ವಸದಸ್ಯರೂ ಒಮ್ಮತದಿಂದ ಆಚಾರಪದವಿಯನ್ನು ನೀಡುತ್ತಾರೆ.

ಗುರಿಕಾರರನ್ನು ಮನೆಯ ಪ್ರತಿಯೊಂದು ಶುಭಕಾರ್ಯಕ್ಕೂ ಆಹ್ವಾನಿಸಲಾಗುತ್ತದೆ. ಆದರೆ ವಿಶೇಷ ಸ್ಥಾನ ವಿಲ್ಲ. ಮದುವೆ ಮುಂತಾದ ಸಮಾರಂಭಗಳಲ್ಲಿ ಬ್ರಾಹ್ಮಣ ಅರ್ಚಕರಿಗೇ ಸ್ಥಾನ. (ಪದ್ಮಶಾಲಿಯರಲ್ಲಿ ಧಾರೆ ಎರೆದು ಕೊಡುವ ಮದುವೆಯ ಕ್ರಮವಿದೆ ) ದೇವಾಲಯಕ್ಕೆ ಸದಸ್ಯನು ನೀಡಬೇಕಾದ ವರಾಡ (ವಂತಿಗೆ ) ನೀಡದೇ ಇದ್ದರೆ ಅದನ್ನು ವಸೂಲು ಮಾಡುವ ಹಕ್ಕು ಗುರಿಕಾರನಿಗಿದೆ. ದೇವಸ್ಥಾನಕ್ಕೆ ನೀಡಬೇಕಾಗಿದ್ದ ಹಣ ನೀಡದೇ ಬಾಕಿ ಉಳಿದಿದ್ದಲ್ಲಿ, ಹೆಣವನ್ನು ಸಾಗಿಸಲೂ ಬಿಡದಿದ್ದ ನಿದರ್ಶನಗಳಿವೆ. ದೇವಸ್ಥಾನದ ಕೂಡು-ಕಟ್ಟಿಗೆ ವಿರುದ್ಧವಾಗಿ ನಡೆದರೆ (ಉದಾ: ಸಗೋತ್ರ ವಿವಾಹ ಮಾಡಿಕೊಳ್ಳುವುದು, ದೈವಸ್ಥಾನಕ್ಕೆ ವಂತಿಗೆ ಬಾಕಿ ಇಡುವುದು ಇತ್ಯಾದಿ..) ಅವರನ್ನು

ದೇವಾಲಯದಿಂದ ದೂರ ಇಡಲಾಗುತ್ತಿತ್ತು.

ಶಾಲಿಯಾರಂತೆ ಶುಭಕಾರ್ಯಗಳಿಗೆ ಕ್ಷೇತ್ರದ ಅನುಮತಿ ಪಡೆದುಕೊಳ್ಳುವ ಕ್ರಮವಿಲ್ಲ. ಶುಭ ಸಮಾರಂಭಕ್ಕೆ ಮುಂಚಿತವಾಗಿ 'ಅಂಬಲದ ವೀಳ್ಯ' ಇಡುವ ಪದ್ಧತಿ ಇದೆ. (ಅಂಬಲರ ' ಎಂದರೆ ಮಲಯಾಳದಲ್ಲಿ ದೇವಸ್ಥಾನ ಎಂದರ್ಥ. ಪದ್ಮಶಾಲಿಯರಿಗೂ ಮಲಯಾಲೀ ಶಾಲಿಯರಿಗೂ ಸಂಬಂಧವಿದೆ ಎನ್ನುವುದು ಇದರಿಂದಲೂ ಸ್ಪಷ್ಟ) ದೇವರ ಸಮ್ಮುಖದಲ್ಲಿ ಗುರಿಕಾರರು ಹಾಗೂ ಪ್ರಮುಖರು ದೇವರಿಗೆ ಕಾಣಿಕೆಯಿಟ್ಟು ಮಂಗಲಕಾರ್ಯ ನಿರ್ವಿಘ್ನವಾಗಿ ನಡೆಯಬೇಕೆಂದು ಪ್ರಾರ್ಥಿಸುತ್ತಾರೆ. ಶುಭಕಾರ್ಯಗಳಿಗೆ ಕ್ಷೇತ್ರಕ್ಕೆ ಕಾಣಿಕೆ ನೀಡುವ ಕ್ರಮವಿದೆ. ದೇವಾಲಯದಸದಸ್ಯನು ತನ್ನ ಮನೆಯಲ್ಲಿ ಮದುವೆಯಂತಹ ಸಮಾರಂಭವಿದ್ದರೆ ದೇವಾಲಯದಲ್ಲಿ 'ಕೂಟ ಹಾಕುವುದು' ಎಂಬ ಕ್ರಮವಿದೆ. ದೇವಾಲಯದ ಸರ್ವ ಸದಸ್ಯರನ್ನು ಆಹ್ವಾನಿಸಿ ತಾಂಬೂಲ ನೀಡಿ ಮದುವೆಯ ವಿವರವನ್ನು ನೀಡಿ 'ಮದುವೆಗೆ ಬಂದು ಸಹಕರಿಸಬೇಕು' ಎಂದು ಆಹ್ವಾನಿಸುವುದು. ಹೀಗೆ ಆಹ್ವಾನಿಸಿದ ಮೇಲೆ ಮತ್ತೆ ಪ್ರತ್ಯೇಕವಾದ ಆಹ್ವಾನವಿಲ್ಲ.

ಗೋತ್ರ ಅಥವಾ ಬರಿ: ಮೂಲದ ಮನೆಗಳ ಬಗೆಗಾಗಲೀ ಗೋತ್ರದ ಬಗೆಗಾಗಲೀ ಸ್ಪಷ್ಟ ಕಲ್ಪನೆ ಇಲ್ಲ. ತುಳುನಾಡಿನವರಂತೆ ಗೋತ್ರವನ್ನು ಬರಿ ಎಂದೇ ಕರೆಯುತ್ತಾರೆ. ಮೂಲ ಪದ್ಮಶಾಲಿಯರಂತೆ ಇವರಿಗೆ ೧೦೧ ಗೋತ್ರಗಳು ಇಲ್ಲ. ೧೪ ಗೋತ್ರಗಳು ಇವೆ ಎಂದರೂ ಹದಿನಾಲ್ಕರ ಹೆಸರು ಲಭ್ಯವಿಲ್ಲ. ಕೆಲವು ಬರಿಗಳ ಹೆಸರು ದೊರೆಯುತ್ತದೆ. ಆದರೆ ಅವುಗಳಿಗೂ ಮೂಲ ಪದ್ಮಶಾಲಿಯರ ಗೋತ್ರಗಳಿಗೂ ಸಂಬಂಧ ತೀರಾ ಅಲ್ಪವಾಗಿ ಕಾಣುತ್ತದೆಯಷ್ಟೆ. ತುಳುನಾಡಿನ ಉತ್ತರಭಾಗದಲ್ಲಿ ತೋಳಾರ, ಶಿರಿನ್, ಶೆಟ್ಟಿ ಕಡಾನ್, ಮುಂತಾದ ಬಳಿಗಳಿದ್ದರೆ ದಕ್ಷಿಣ ಭಾಗದಲ್ಲಿ ಚೋರಡ, ಕರ್ತುನೂಕೊಲು, ಸಾಮೆಡ, ಕೌಡೆಂಜಿ, ಕಡಮನೂಕ್ಕೊಲು, ಮೋಚಡ, ಉಪ್ಪಣ್ಣ ಎಂಬೀ ೭ ಗೋತ್ರಗಳ ಹೆಸರುಗಳು ಲಭ್ಯವಾಗಿವೆ. ಶಾಲಿಯರ ಬರಿಯ ಹೆಸರುಗಳಿಗೂ ಇವರ ಬರಿಯ ಹೆಸರುಗಳಿಗೂ ಯಾವುದೇ ಸಂಬಂಧ ಕಂಡುಬರುವುದಿಲ್ಲ.

**ಜೀವನಾವರ್ತನ ಆಚರಣೆಗಳು** :

ಅ) ನಿಶ್ಚಿತಾರ್ಥ : ಹಿರಿಯರ ಕಾಲದಲ್ಲಿ ಹೆಣ್ಣು ನೋಡಲು ಗಂಡನ್ನು ಮಾತ್ರ ಕರೆದುಕೊಂಡು ಹೋಗುತ್ತಿದ್ದರು. ಹೆಂಗಸರು ಹೋಗುವ ಕ್ರಮವಿರಲಿಲ್ಲ . ಚಾತಕ ಅಥವಾ ' ಪ್ರಸಾದ ' (ದೇವರ

ಮುಂದೆ ಹೂವಿಟ್ಟು ನೋಡುವುದು) ದ ಮೂಲಕವಾಗಿ ಎರಡೂ ಕಡೆಯವರಿಗೂ ಒಪ್ಪಿಗೆಯಾದರೆ, ಹೆಣ್ಣಿನ ಮನೆಯಲ್ಲಿ ಶುಭಮುಹೂರ್ತದಂದು ನಿಶ್ಚಿತಾರ್ಥ, ಗಂಡಿನ ಕಡೆಯ ಹಿರಿಯರು ಆ ದಿನ ಅಡಿಕೆ-ವೀಳ್ಯದೆಲೆಯೊಂದಿಗೆ, ಹುಡುಗಿಗೆ ಕೊಡಬೇಕಾದ ಹೂವು, ಅರಿಶಿನ, ಕುಂಕುಮ, ಬಳೆ, ಕನ್ನಡಿ, ಸೀರೆ-ರವಿಕ ಕಣ ಇತ್ಯಾದಿಕೊಂಡೊಯ್ಯುತ್ತಾರೆ. ನಿಶ್ಚಿತಾರ್ಥಕ್ಕೆ ಎರಡೂ ಕಡೆಗಳಿಂದಲೂ ದೇವಸ್ಥಾನದ ಗುರಿಕಾರರಿರುತ್ತಾರೆ. ನಿಗದಿಪಡಿಸಿದ ಶುಭಮುಹೂರ್ತದಲ್ಲಿ ಹುಡುಗಿಗೆ ಹೂವು-ಸೀರೆ ಇತ್ಯಾದಿಗಳನ್ನು ದೇವರ ಸನ್ನಿದಿಯಲ್ಲಿ ಗುರಿಕಾರರು ಇಟ್ಟು ಪ್ರಾರ್ಥಿಸಿ ಹುಡುಗನ ತಂದೆ-ತಾಯಿ ಹುಡುಗಿಗೆ ಕೊಡುತ್ತಾರೆ. ಸಂಪ್ರದಾಯದಂತೆ ಹಿರಿಯರ ಆಶೀರ್ವಾದ ಪಡೆಯಲು ಹುಡುಗಿಗೆ ತಿಳಿಸುತ್ತಾರೆ. ಎರಡೂ ಕಡೆಯ ಗುರಿಕಾರರು ಮತ್ತು ಮುಖ್ಯಸ್ಥರು ಕುಳಿತು ಮದುವೆ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಾರೆ. ಹಿಂದೆ ಪದ್ಮಶಾಲಿಯರಲ್ಲಿವರದಕ್ಷಿಣೆ ಪದ್ಧತಿ ಜಾರಿಯಲ್ಲಿ ಇರಲಿಲ್ಲ. ಮದುವೆ ನಡೆಯಬೇಕಾದ ಸ್ಥಳ, ಸೇರಲಿರುವ ಜನಸಂಖ್ಯೆ, ಇತ್ಯಾದಿಗಳ ಬಗ್ಗೆ ಮತ್ತು ಹುಡುಗನ ಕಡೆಯವರು ಮತ್ತು ಹುಡುಗಿ ಕಡೆಯವರು ಮಾಡಿಕೊಂಡ ಒಪ್ಪಂದದ ಬಗ್ಗೆ ಗುರಿಕಾರರು ಪುನಃ ವಿವರಿಸುವಂತೆ ತಿಳಿಸುತ್ತಾರೆ (ಹುಡುಗನ ಕಡೆಯವರು ಚಿನ್ನಾಭರಣ, ಹಣ ಇತ್ಯಾದಿಗಳ ಬಗ್ಗೆ ಹುಡುಗಿ ಕಡೆಯವರನ್ನು ಕೇಳಿರುವರೋ? ಎಂಬುದನ್ನು ತಿಳಿಯುವುದೇ ಇದರ ಉದ್ದೇಶವಾಗಿತ್ತು) ಒಂದು ತೀರ್ಮಾನಕ್ಕೆ ಬಂದ ಮೇಲೆ ಹುಡುಗನ ತಂದೆ ಹಾಗೂ ಹುಡುಗಿಯ ತಂದೆ ಪರಸ್ಪರ ಅಡಿಕೆ-ವೀಳ್ಯದೆಲೆಯನ್ನು ವಿನಿಮಯ ಮಾಡಿಕೊಳ್ಳುವಂತೆ ಗುರಿಕಾರರು ಸೂಚಿಸುತ್ತಾರೆ. ಒಂದು ದೊಡ್ಡ ಹರಿವಾಣದಲ್ಲಿ ವೀಳ್ಯದೆಲೆ ಹಾಗೂ ಐದು ಅಡಿಕೆಯನ್ನು ಇಟ್ಟು ಅದರೊಂದಿಗೆ 5 ನಾಣ್ಯಗಳನ್ನಿಟ್ಟು ಹುಡುಗಿಗೆ ಕೊಡುತ್ತಾರೆ. ಗುರಿಕಾರರು ಹುಡುಗನ ಕಡೆಯವರು ಮತ್ತು ಹುಡುಗಿ ಕಡೆಯವರು ಸಂಬಂಧ ಕೂಡಿಸುವ ಬಗ್ಗೆ, ಮತ್ತು ನಿಶ್ಚಿತಾರ್ಥವು ತಪ್ಪಬಾರದೆಂಬ ಬಗ್ಗೆ ಕುಲದೇವರು, ಗ್ರಾಮದೇವರು, ಇಷ್ಟದೇವರು ಹಾಗೂ ಇನ್ನಿತರ ಪ್ರಮುಖ ದೇವರ ಹೆಸರಲ್ಲಿ ಪ್ರಮಾಣ ಮಾಡಿಸುತ್ತಾರೆ.

ಹುಡುಗಿಯು ವರನ ಕಡೆಯವರು ನೀಡಿರುವ ಸೀರೆ-ಕುಪ್ಪಸ, ಹೂವುಗಳಿಂದ ಅಲಂಕೃತಳಾದ ಮೇಲೆ ಅವಳಿಗೆ ಆರತಿ ಮಾಡಿ ಅಕ್ಷತೆ ಹಾಕಿ ಬಂದವರೆಲ್ಲ ಆಶೀರ್ವದಿಸುವ ಪದ್ಧತಿ ಇದೆ.

ಅ) ಮದುವೆ : ಹೆಣ್ಣಿನ ಮನೆಯಲ್ಲೇ ಮದುವೆ ಸಮಾರಂಭ ನಡೆಯುತ್ತದೆ. ಗಂಡಿನ ದಿಬ್ಬಣವೇ ಬರಬೇಕು, ಬ್ರಾಹ್ಮಣ ಸಂಪ್ರದಾಯದಂತೆ ಬ್ರಾಹ್ಮಣ ಪುರೋಹಿತರಿಂದಲೇ ಮದುವೆಯು ನಡೆಯುತ್ತದೆ. (ಹಿಂದಿನ ಕಾಲದಲ್ಲಿ ಇವರದೇ ಆದ ಪುರೋಹಿತರೂ ಗುರಿಕಾರರೂ ಸೇರಿ ಮದುವೆ ನಡೆಸುತ್ತಿದ್ದರು)

ಆ) ಮದುವೆಯ ಹಾಗೇ ಸಮಾಜದಲ್ಲಿ ಸೀಮಂತ ಕಾರ್ಯಕ್ರಮವೂ ಒಂದೊಂದು ಊರಲ್ಲಿ ಒಂದೊಂದು ರೀತಿ ನಡೆಯುತ್ತದೆ. ಶಾಸ್ತ್ರೋಕ್ತವಾಗಿ ಸೀಮಂತ ಕ್ರಮ ನಡೆಸುವವರು ಬಹಳ ವಿರಳ. ಶಾಸ್ತ್ರೋಕ್ತವಾಗಿ ಸೀಮಂತ ಕ್ರಮದಲ್ಲಿ ಗರ್ಭಿಣಿ ಸ್ತ್ರೀಗೆ 9 ತರಹದ ಹೂವನ್ನು (ಸಿಂಗಾರ ಹೂವು ಸೇರಿ) ಕಣೆ ಹಂದಿಯ ಮುಳ್ಳಿನಲ್ಲಿ 2 ಅಡಿಕೆಗಳನ್ನು ಸುರಿದು ಮುಡಿಸುತ್ತಾರೆ ಈ ರೀತಿ ಹೂವು ಮುಡಿಸುವುದನ್ನು ಶಾಸ್ತ್ರದಲ್ಲಿ ತಿಳಿಸಿದ ಮುಹೂರ್ತದಲ್ಲಿ ಗಂಡು-ಹೆಣ್ಣಿನ ತಲೆಮೇಲಿಟ್ಟು ಕಟ್ಟುತ್ತಾರೆ. ಹೋಮವನ್ನು ಕೂಡಾ ಮಾಡುತ್ತಾರೆ. ಸೀಮಂತವಿಧಿಯನ್ನು ಪುರೋಹಿತರು ಪೂರೈಸುತ್ತಾರೆ. ಮುತ್ತೈದೆಯರು ಮುಡಿ ತುಂಬಿಸಿ, ಶೋಭಾನೆ ಹಾಡಿನಿಂದ ಆರತಿ ಬೆಳಗಿಸುತ್ತಾರೆ. ಗಂಡು ಅಡಿಕೆಮರಕ್ಕೆ ಗುಂಡಿತೋಡಿ ನೆಟ್ಟರೆ ಹೆಣ್ಣು ನೀರುಹಾಕುತ್ತಾಳೆ. ಮುಡಿಸಿದ ಹೂವಿನೊಂದಿಗೆ ಕಟ್ಟಲಾದ ಅಡಿಕೆ ಮೊಳೆತು ಸಸಿಯಾಗಿ ಫಲನೀಡುವ ಮರವಾಗ ಬೇಕೆಂಬ ಶಾಸ್ತ್ರ.

ಎ) **ಋತುಮತಿಯಾದಾಗಿನ ಕ್ರಮಗಳು:**

ವಿಶೇಷವಾಗಿ ಕನ್ಯೆ ಋತುಮತಿಯಾದಾಗ ಕಾರ್ಯಕ್ರಮಗಳೇನೂ ಇರುವುದಿಲ್ಲ. ನಾಲ್ಕನೇ ದಿನ ಸ್ನಾನ ಮಾಡಿಸುತ್ತಾರೆ. 5ನೇ ದಿನದಲ್ಲಿ ಪುಣ್ಯಾರ್ಚನೆ ಮಾಡಿ ಪಂಚಗವ್ಯ ಸ್ನಾನವನ್ನು ಮಾಡಿಸುತ್ತಾರೆ. ಮನೆಯಲ್ಲಿ ಶಾಸ್ತ್ರ ಸಂಪ್ರದಾಯ ಇರುವ ಮನೆಗಳಲ್ಲಿ ಮಾತ್ರ ಈ ವಿಧಾನವಿದೆ. ಈ ಸಮಯದಲ್ಲಿ ಯಾರನ್ನೂ ಮುಟ್ಟುವಂತಿಲ್ಲ. ಪುಣ್ಯಾರ್ಚನೆ ಮಾಡಿದ ಕನ್ಯೆಯು ಮಂಗಲಕಾರ್ಯಗಳಿಗೆ ಯೋಗ್ಯಳಾಗುತ್ತಾಳೆ.

ಏ) **ಮರಣಾನಂತರ ಕ್ರಮಗಳು:**

ಮೃತ ವ್ಯಕ್ತಿಯ ಹಿರಿಯ ಮಗ ಅಥವಾ ಕಿರಿಯ ಮಗನಿಗೆ ಮಾತ್ರ ಮೃತರ ಕ್ರಿಯೆ ಹಿಡಿಯುವ ಅಧಿಕಾರವಿರುತ್ತದೆ. ಮೃತ ಶರೀರಕ್ಕೆ ಎಣ್ಣೆ, ಸೀಗೆ, ಅರಸಿನದಿಂದ ಸ್ನಾನ ಮಾಡಿಸುವುದು, ಮನೆಯ ಆವರಣದ ಹೊರಗೆ ತೆಂಕು ದಿಕ್ಕಿಗೆ ಒಲೆ ಹಾಕಿ ನೀರು ಕಾಯಿಸುತ್ತಾರೆ, ಈ ನೀರಿನಿಂದ ಸ್ನಾನ, ಬಿಸಿ ಮಾಡಿದ ನೀರನ್ನು ತಣ್ಣಗೆ ಮಾಡಲು ಪುನಃ ನೀರು ಸೇರಿಸುವಂತಿಲ್ಲ. ಸ್ನಾನ ಮಾಡಿಸಿದ ನಂತರ ಬೈರಾಸವನ್ನು ಉಡಿಸಿ ನಂತರ ಬಿಳಿ ಬಟ್ಟೆ, ಹೂವಿನಿಂದ ಅಲಂಕರಿಸುತ್ತಾರೆ, ಬಿದಿರಿನ ಚಟ್ಟದ ಮೇಲೆ ಒಂಟಿ ಎಲೆಯ ಮೇಲೆ ಮಲಗಿಸಿ ಶ್ಮಶಾನಕ್ಕೆ ಕೊಂಡೊಯ್ದು ಅಂತ್ಯ ಸಂಸ್ಕಾರ ಮಾಡುತ್ತಾರೆ. ಚಿತೆಗೆ ಅಗ್ನಿ ಸ್ಪರ್ಶ ಮಾಡುವ ಹೊಣೆ ಹಿರಿಯ ಮಗನಿಗೆ ಅಥವಾ ಕಿರಿಯ ಮಗನಿಗೆ ಇರುತ್ತದೆ. ಚಿತಾ ಭಸ್ಮವನ್ನು 3ನೇ ದಿನ ಸಂಗ್ರಹಿಸುತ್ತಾರೆ.

ಐ) ಚಿತಾ ಭಸ್ಮವನ್ನು ಸಂಗ್ರಹಿಸಿದ ದಿನದಿಂದ ಉತ್ತರ ಕ್ರಿಯೆ ಕ್ರಮ ನಡೆಯುತ್ತದೆ. ಕೆಲವು ಊರಿನಲ್ಲಿ ಗುರಿಕಾರನವರೇ ನಿಂತು ಪಿತೃಗಳ ಕ್ರಿಯೆ ಹಿಡಿಯುವಂತೆ ಹೊಸ ಬಟ್ಟೆ ತೊಡುವ ಕ್ರಮವಿದೆ. ಪಿತೃ ಋಣ ತೀರಿಸುವ ಅಧಿಕಾರ ಮಕ್ಕಳಿಗೆ ಮಾತ್ರ ಇರುತ್ತದೆ. ಇಲ್ಲಿ ಗುರಿಕಾರನು ಮಾಡುವ ಕೆಲಸವೇನೂ ಇಲ್ಲ. ಚಿತಾ ಭಸ್ಮವನ್ನು ಸಂಗ್ರಹಿಸುವ ಕೆಲಸ ಮಕ್ಕಳಾದವರೇ ಮಾಡಬೇಕು. ಶಾಸ್ತ್ರೋಕ್ತವಾಗಿ ಮಾಡುವಾಗ ಸ್ಮಶಾನದಲ್ಲಿಯೇ ಪಿಂಡ ಹಾಕುವುದು, ತಿಲತರ್ಪಣ ಮಾಡುವುದು ಕ್ರಮವಿದೆ. ಆದುದರಿಂದ ಬ್ರಾಹ್ಮಣರನ್ನು ಕರೆದು ಉತ್ತರ ಕ್ರಿಯೆಯನ್ನು ಮೃತಪಟ್ಟ ೧೧ನೇ ಅಥವಾ ೧೧ನೇ ದಿನದಂದು ಮಾಡುತ್ತಾರೆ. ೧೨ ನೇ ದಿನ ಸಪಿಂಡೀಕರಣ ಮಾಡಿ ೧೩ ಅಥವಾ ೧೪ನೇ ದಿನದಂದು ವೈಕುಂಠ ಸಮಾರಾಧನೆ ಮಾಡುವ ವಿಧಾನವಿದೆ. ೧೦ ರಾತ್ರಿಗಳು ಕಳೆದರೆ ಕುಟುಂಬ ಶುದ್ಧಿ, ೧೧ ರಾತ್ರಿ ಕಳೆದಾಗ ನೇರ ಕುಟುಂಬಕ್ಕೆ ಶುದ್ಧಿಯಾಗುವುದಾಗಿ ನಂಬಿಕೆ. ೧೨ನೇ ದಿನದಂದು ಕುಟುಂಬಸ್ಥರನ್ನು ಮಾತ್ರ ಒಟ್ಟು ಮಾಡಿ ಶ್ರಾದ್ಧ ಮಾಡುತ್ತಾರೆ. ೧೨ನೇ ದಿನ ಬೇರೆಯವರಿಗೆ ಬರಲು ಹೇಳಿದರೂ ಯಾರೂ ಬರುವುದಿಲ್ಲ. ವೈಕುಂಠ ಸಮಾರಾಧನೆಗೆ ಸಾಮಾನ್ಯವಾಗಿ ಎಲ್ಲರೂ ಬರುತ್ತಾರೆ.

**ಇತರ ವಿಚಾರಗಳು:**

ಉಡುಪಿ ಜಿಲ್ಲೆಯಲ್ಲಿ ವೃತ್ತಿಗೆ ಸಂಬಂಧಪಟ್ಟಂತಹ ಆಚರಣೆಗಳು ಇಲ್ಲದಿದ್ದರೂ ದೀಪಾವಳಿ ಹಬ್ಬದಂದು ಧನ ಲಕ್ಷ್ಮೀ ಪೂಜೆ ಮಾಡುವುದು, ಪಾಡ್ಯದಂದು ಮಗ್ಗದ ಕೆಲಸ ಮಾಡದಿರುವುದು ಆಚರಣೆಯಲ್ಲಿದೆ. ದ.ಕ. ಜಿಲ್ಲೆಯಲ್ಲಿ ಪ್ರತೀ ಅಮಾವಾಸ್ಯೆಯಂದು ಯಾರೂ ಮಗ್ಗದ ಕೆಲಸ ಮಾಡುವುದಿಲ್ಲ.

**ಪದ್ಮಶಾಲಿಯರ ಭಾಷೆ:**

ಪದ್ಮಶಾಲಿ ಜನಾಂಗಕ್ಕೆ ಅವರದೇ ಆದ ಭಾಷೆಯಿದೆ ಪೊಡುಂಬ ಅಥವಾ 'ಪೊರುಂಬ' ಎಂಬ ಮಿಶ್ರಿತ ಭಾಷೆಯನ್ನು ಅವರು ಕೆಲವು ವರ್ಷಗಳ ಹಿಂದಿನವರೆಗೂ ಆಡುತ್ತಿದ್ದರು. ಈ ಭಾಷೆಯೇ ಮೂಲತಃ ಅವರು ಎಲ್ಲಿಂದ ಬಂದವರು ಎಂಬ ಶೋಧನೆಗೆ ಸಹಕಾರಿಯಾಗುತ್ತದೆ. ಇದನ್ನು ಆಧಾರವನ್ನಾಗಿಟ್ಟುಕೊಂಡೇ ಸಿ. ರಾಘವನ್‌ರವರು "ಪದ್ಮಶಾಲಿಗಳು ಆಡುವ ಭಾಷೆಯು ಮಲಯಾಳಕ್ಕೆ ತೀರಾ ಸನಿಹವಾಗಿದೆ. ಆದುದರಿಂದ ಇವರು ಮಲಯಾಳೀ ಶಾಲಿಯ / ದೇವಾಂಗ ಸಮಾಜದ ಒಂದು ಗುಂಪೇ ಆಗಿರಬೇಕು ಎನ್ನುತ್ತಾರೆ. ಪದ್ಮಶಾಲಿಗಳ ಭಾಷೆಯನ್ನು ಅವಲೋಕಿಸಿದಾಗ ಈ ವಿಷಯದ ತಥ್ಯಾಂಶದ ಅರಿವಾಗುತ್ತದೆ. ಈ ಭಾಷೆಯ ಬಗ್ಗೆ ಈ ಕೆಳಗಿನ ಅಭಿಪ್ರಾಯಗಳಿವೆ.:-

೧. **ಪದ್ಮಶಾಲಿ ಭಾಷೆಗೆ ತೆಲುಗು ಮೂಲವಾಗಿದೆ:**

ಪದಾಂತ್ಯದಲ್ಲಿ 'ಡ್' ಮತ್ತು 'ಉ' ಎನ್ನುವ ಅಕ್ಷರಗಳನ್ನು ಇವರು ಹೆಚ್ಚಾಗಿ ಬಳಸುವುದೇ ಈ ಅಭಿಪ್ರಾಯಕ್ಕೆ ಕಾರಣವಾಗಿದೆ. ಉದಾ: 'ಡ' ಕಾರಾಂತ್ಯ : ಒರಕಡ್, ಮಾಡ್, ಮೂಂಡು, ಪೈನೂಂಡು, ಪೈಮೂಂಡು, ಒರ್ತಡ, ತಂದಂಗಡ್, ಸಂಘುತಡ್, ನಂಬಡ.

'ಉ' ಕಾರಾಂತ್ಯ:- ಕರ್ತುನೂಕುಲು, ಕಡಮ್ಮ ನೂಕುಲು, ಎಲೆವುಲು, ಮೂತೆವುಲು, ಒರು, ನೂರು, ಎಲ್ಲೊರುಮು, ಬೇನು.

೨. **ಈ ಭಾಷೆಯ ಮೂಲ ತಮಿಳು:**

ಇವರು ಭಾಷೆಯಲ್ಲಿ ಬಳಸಲ್ಪಡುವ ಹೆಚ್ಚಿನ ಪದಗಳು ತಮಿಳಿನವು: ಉದಾ: ಆಚಿ = ಆಯಿತು, ನೀರ್ = ನೀರು, ನೇರ = ಸಮಯ ನಲ್ಲಬೆಳ್ = ತಿಂಗಳ ಬೆಳಕು. ಇಲ್ಲೆ = ಇಲ್ಲ, ಉಲ್ಲ = ಇದ್ದಾರೆ, ಮುಟ್ಟೆ = ತತ್ತಿ, ಪೆರಪ್ಪ = ದೊಡ್ಡಪ್ಪ, ಚಿರಪ್ಪ = ಚಿಕ್ಕಪ್ಪ, ಪುಲ್ರಲೆ = ಮಗು, ಪಯ್ಯ = ಹುಡುಗ, ಪೆರಮ್ಮೆ = ದೊಡ್ಡಮ್ಮ. ಸಂಖ್ಯಾವಾಚಕಗಳಂತೂ ತಮಿಳಿನವುಗಳೇ ಆಗಿವೆ.

೩. **<u>ಈ ಭಾಷೆಯ ಮೂಲ ಮಲಯಾಳಂ :</u>** ತಮಿಳಿನಂತೇ ಮಲಯಾಳಂ ಶಬ್ದಗಳೂ ಇವರ ಭಾಷೆಯಲ್ಲಿ ಬಹಳಷ್ಟು ಕಂಡು ಬರುತ್ತವೆ. ಉದಾ: ಮಚ್ಚಿನ = ಮೈದುನ, ಮಚ್ಚಿನಿ = ನಾದಿನಿ, ಅಡುಪು = ಒಲೆ, ಕುಳಿ = ಸ್ನಾನ, ಪಿಚತಿ = ಚೂರಿ, ಚಕ್ಕೆ = ಹಲಸಿನ ಹಣ್ಣು, ಪಿನ್ನೆ = ನಂತರ, ಬೆಯಿಲ್ = ಬಿಸಿಲು, ನಿರಳ್ = ನೆರಳು.

ಮೇಲೆ ಸೂಚಿಸಿದ ಮೂರು ಅಭಿಪ್ರಾಯಗಳಿಂದ ತಿಳಿದು ಬರುವುದೇನೆಂದರೆ, ತುಳುನಾಡಿನ ಪದ್ಮಶಾಲಿಯರು ಮೂಲತಃ ಆಂಧ್ರದವರು ಅಲ್ಲಿಂದ ಅವರು ತಮಿಳುನಾಡಿಗೆ ಬಂದರು ತಮಿಳುನಾಡಿನಲ್ಲಿ ಹೆಚ್ಚುಕಾಲ ಅವರು ಬಾಳಿದವರು. ಆದುದರಿಂದ ಕ್ರಮೇಣ ಅವರ ಭಾಷೆ ತಮಿಳಾಯಿತು. ಆದುದರಿಂದ ಅವರ ಭಾಷೆಯಲ್ಲಿ ಹೆಚ್ಚು ತಮಿಳು ಪದಗಳೇ ಇದೆ. ಅಲ್ಲಿಂದ ಅವರು ಕೇರಳದ ಮುಖಾಂತರವಾಗಿ ತುಳುನಾಡಿಗೆ ಬರುವಾಗ, ಮಲಯಾಳ ಭಾಷೆಯೂ ಅವರ ಭಾಷೆಯ ಮೇಲೆ ಪ್ರಭಾವ ಬೀರಿತು. ಮಲಯಾಳಂಗೆ ನಿಕಟ ಸಂಪರ್ಕವಿರುವುದರಿಂದ ಮೂಲ ತಮಿಳು ಪದಗಳು ಮಲಯಾಳೀಕರಣಗೊಂಡಿರುವ ಸಾಧ್ಯತೆಗಳು ಬೇಕಾದಷ್ಟು ಇವೆ.

೪. ಇವರದು ತುಳು, ಕನ್ನಡ, ಮಲಯಾಳ ಮತ್ತು ಕೊಡಗು ಮಿಶ್ರಗೊಂಡ ಭಾಷೆ, ಅದೊಂದು ಸ್ವತಂತ್ರ

ಭಾಷೆಯಲ್ಲಿ ಎಂಬ ಅಭಿಪ್ರಾಯವು ಇದೆ. ತುಳುನಾಡಿನಲ್ಲಿ ನೆಲಸಿದ ಪದ್ಮಶಾಲಿಯರು ಉತ್ತರ ಕನ್ನಡ, ಕೊಡಗು, ಕಾಸರಗೋಡು, ತುಳುನಾಡು ಈ ಮೊದಲಾದ ಕಡೆ ಬಟ್ಟೆ ವ್ಯಾಪಾರಕ್ಕೆ ಹೋಗುತ್ತಿದ್ದರು. ಆ ಕಾರಣದಿಂದಾಗಿ ಅವರ ಭಾಷೆಯೊಂದಿಗೆ ಸಹಜವಾಗಿಯೇ ಈ ನಾಲ್ಕು ಭಾಷೆಗಳ ಪದಗಳು ಸೇರಿಕೊಂಡಿರಬಹುದು. 'ತಮಗೆ ಹಲವು ಭಾಷೆ ಬರುತ್ತದೆ' ಎಂಬುದನ್ನು ತೋರಿಸಲು ತಮಾಷೆಯಾಗಿ (ಪೊಡುಂಬ) ಈ ರೀತಿ ಮಿಶ್ರಗೊಳಿಸಿ ಇವರು ಮಾತನಾಡುತ್ತಿದ್ದಿರಬಹುದು. ಇದರಿಂದ ಇವರ ಮೂಲ ಭಾಷೆ ಯಾವುದು ಎಂದು ತಿಳಿಯದಷ್ಟು ಭಾಷೆಗಳು ಕಲಬೆರೆಕೆಯಾಗಿ ಪದ್ಮಶಾಲಿಯರ ಪ್ರತ್ಯೇಕ ಭಾಷೆಯೊಂದು ರೂಪು ತಾಳಿರಬಹುದು.

ಇವರು ಮೂಲತಃ ತಮಿಳುನಾಡಿನವರಾಗಿರಬಹುದು. ಆದರೆ ಕಾಸರಗೋಡಿನ ಶಾಲಿಯ / ದೇವಾಂಗ ಸಮುದಾಯದವರಿಗೆ ತಮಿಳುನಾಡಿನವರೊಂದಿಗೆ ಇರುವ ಸಾಮಿಪ್ಯ ಇವರಿಗೆ ಕಾಣದೇ ಇರಲು ಮೂಲ ಕಾರಣ ಅವರಿಗಿಂತಲೂ ಬಹಳ ಹಿಂದೆಯೇ ಇವರು ಬಂದುದಾಗಿರಬಹುದು ತುಳುನಾಡಿನ ಪ್ರಭಾವ ಇವರ ಸಂಸ್ಕೃತಿಯಲ್ಲಿ ಹೆಚ್ಚಾಗಿರಲೂ ಇದೇ ಕಾರಣವೆನ್ನಬಹುದು.

## ೫. ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ / ದೇವಾಂಗ ಸಮಾಜ

ದಕ್ಷಿಣ ಭಾರತದಲ್ಲಿ ನೇಯ್ಗೆ ಕಾಯಕವನ್ನು ಹಮ್ಮಿಕೊಂಡಂತಹ ಎರಡು ಅತಿ ದೊಡ್ಡ ಗುಂಪುಗಳು ದೇವಾಂಗ ಹಾಗೂ ಪದ್ಮಶಾಲಿ. ಒಂದು ಕಾಲದಲ್ಲಿ ಒಂದೇ ಆಗಿದ್ದಂತಹ ಈ ಜನಾಂಗ ಯಾವುದೋ ಕಾರಣದಿಂದ ಎರಡಾಗಿ ವಿಭಜನೆ ಹೊಂದಿರುವ ಸಾಧ್ಯತೆ ಇದೆ. ಆರು ಲಕ್ಷಕ್ಕಿಂತಲೂ ಮೇಲ್ಪಟ್ಟು ಜನಸಂಖ್ಯೆಯಿರುವ ಈ ಗುಂಪುಗಳಲ್ಲಿ ಯಾವುದೋ ಒಂದು ಗುಂಪಿನಿಂದ, ಬೇರ್ಪಟ್ಟು ಬಂದಂತಹ ಗುಂಪು ಕೇರಳದ ಶಾಲಿಯಾ. 'ಶಾಲಿ' ಎನ್ನುವ ಹೆಸರು ನೇಕಾರರೆಲ್ಲರಿಗೂ ಸಾಮಾನ್ಯವಾದರೂ ' ಪದ್ಮಶಾಲಿ ' ಎಂಬ ಗುಂಪಿನಿಂದ ಬೇರ್ಪಟ್ಟ ವರ್ಗಗಳೇ ಇದನ್ನು ಬಳಸಿಕೊಳ್ಳುತ್ತವೆ. ಇವರು ತಮಿಳುನಾಡಿನವರಾಗಿದ್ದುಕೊಂಡು ಕೇರಳದ ಮುಖಾಂತರವಾಗಿ ಹಾದು ಬಂದು ಕರ್ನಾಟಕದ ದಕ್ಷಿಣ ಭಾಗವಾದ ದಕ್ಷಿಣ ಕನ್ನಡದವರೆಗೂ ವ್ಯಾಪಿಸಿದರು. ತಮಿಳುನಾಡಿನಿಂದ ಕೇರಳ; ಕೇರಳದಿಂದ ಕಾಸರಗೋಡು; ಕಾಸರಗೋಡಿನಿಂದ ದಕ್ಷಿಣ ಕನ್ನಡ; ದಕ್ಷಿಣ ಕನ್ನಡದಿಂದ ಪೂರ್ವದ ಭಾಗಗಳು; ಅಲ್ಲಿಂದ ಪುನಃ ಹಿಂತಿರುಗಿ ಕಾಸರಗೋಡು ಹೀಗೇ ಚಲನಾತ್ಮಕವಾದ ಈ ವಲಸೆಗೆ ಇವರ ವೃತ್ತಿಯೇ ಕಾರಣವಾಗಿದೆ ಎನ್ನಬಹುದು. ಆದರ ಹಿಂದೆ ಕೆಲವು ಐತಿಹ್ಯಗಳೂ ಕೇಳಿ ಬರುತ್ತವೆ. ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಬೆಳೆದುಕೊಂಡು ಬಂದಿರುವ, ಹಿಂದೆ ವಾಸ್ತವವಾಗಿ ನಡೆದಿದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯರೂಪದ ನಿರೂಪಣೆ. (ಸುಬ್ಬಣ್ಣ ರೈ೧೯೯೪ : ಪುಟ೧೦) ಈ ಅಭಿಪ್ರಾಯದಂತೆ ಶಾಲಿಯಾ ಸಮುದಾಯದ ಈ ವಲಸೆಯ ಹಿಂದೆ ಯಾವುದೋ ಒಂದು ಕತೆ ನಡೆದಿರಬೇಕು. ಆ ಐತಿಹ್ಯ ಹೀಗಿದೆ :-

ಕಲ್ಲಿಕೋಟೆಯ ಸಾಮೂದಿರಿ ರಾಜನು ರೇಶ್ಮೆ ವಸ್ತ್ರಗಳನ್ನು ನೇಯುವ ನೇಕಾರರನ್ನು ಪಾಂಡ್ಯ ದೇಶದಿಂದ ಕರೆಸಿಕೊಂಡನು. ಬ್ರಾಹ್ಮಣರಂತೆ ಜನಿವಾರವನ್ನು ಧರಿಸಿಕೊಂಡು ಕರ್ಮಾನುಷ್ಠಾಯಿಗಳಾದ ಅವರನ್ನು ಬ್ರಾಹ್ಮಣರೆಂದೇ ಬಗೆದ ರಾಜನು ಅತ್ಯಂತ ಗೌರವದಿಂದ ಕಾಣುತ್ತಿದ್ದನು. ದಿನನಿತ್ಯ ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದನು. ಅವರ ಬಗ್ಗೆ ರಾಜನು ಇಷ್ಟೊಂದು ಆಸ್ಥೆ ವಹಿಸುವುದನ್ನು ಸಹಿಸಲಾರದ 'ಮಾಜಾಟ್ ಅಚ್ಚನ್ ' ಎನ್ನುವ ಮಂತ್ರಿಯು ಇವರನ್ನೋಡಿಸಲು ತಕ್ಕ ಸಮಯಕ್ಕಾಗಿ ಕಾಯುತ್ತಿದ್ದನು. ಹೀಗಿರಲು ಒಂದು ಬಾರಿ ಇವರು ರಾಜನಲ್ಲಿ ಭೋಜನದ ವಿಷಯದಲ್ಲಿ ತಮಗೆ ಅತೃಪ್ತಿಯಿದೆ ಎಂದು ಹೇಳಿದರು. ವಿಷಯುವರಿತ 'ಮಾಜಾಟ್ ಅಚ್ಚನ್' ಇದೇ ತಕ್ಕ ಸಮಯವೆಂದು ಭೋಜನದಲ್ಲಿ ಮೀನು ಬೆರೆಸಿ ಉಣಬಡಿಸುವಂತೆ

ಅಡಿಗೆಯವರಿಗೆ ಹೇಳಿದನು. ವಿಷಯವರಿಯದ ಶಾಲಿಯರು, ರಾಜನು 'ಈಗ ಭೋಜನ ಹೇಗಿದೆ?' ಎಂದು ಕೇಳಿದಾಗ 'ಉತ್ಕೃಷ್ಟವಾಗಿದೆ' ಎಂದು ಉತ್ತರಿಸಿದರು. ಮಾಜಾಟ್ ಅಚ್ಚನ್‌ನಿಂದ ವಿಷಯವರಿತ ರಾಜನು ಮೀನು ತಿನ್ನುವ ಇವರು ಬ್ರಾಹ್ಮಣರಲ್ಲ ಎಂದು ಜನಿವಾರವನ್ನು ಕಿತ್ತು ಅವರನ್ನು ಅಲ್ಲಿಂದ ಓಡಿಸಿದನು. ಅವರಲ್ಲಿ ಕೆಲವರು ಉತ್ತರಕ್ಕೂ ಕೆಲವರು ದಕ್ಷಿಣಕ್ಕೂ ಚೆದುರಿ ಹೋದರು. ಉತ್ತರಕ್ಕೆ ಓಡಿ ಬಂದ ಶಾಲಿಯರು ಚಿರಕ್ಕಲ್‌ನ ರಾಜನಾದ ಕೋಲತ್ತಿರಿಯ ಆಶ್ರಯವನ್ನು ಪಡೆದು ರಾಜಕುಟುಂಬಕ್ಕೆ ಬೇಕಾದ ಬಟ್ಟೆಗಳನ್ನು ತಯಾರಿಸಿ ಕೊಡುತ್ತಿದ್ದರು. ಮಿಕ್ಕಿದ ವಸ್ತ್ರಗಳನ್ನು ಹೊರಗೆ ಮಾರಾಟ ಮಾಡಿಕೊಂಡು ಅವರು ಜೀವಿಸುತ್ತಿದ್ದರು. ಹೀಗಿರಲು ಒಂದು ಬಾರಿ ಇವರು ನೂಲನ್ನು ನಯಗೊಳಿಸಿ ಬಲಪಡಿಸಲು ತಯಾರಿಸಿದ ಗಂಜಿಯನ್ನು ರಾಜನ ನಾಯಿಯು ಕುಡಿಯಿತು. ಸಿಟ್ಟುಗೊಂಡ ಶಾಲಿಯರು ನಾಯಿಯನ್ನು ಕೊಂದರು. ಆ ನಾಯಿಯ ಬಗ್ಗೆ ರಾಜನಿಗೆ ವಿಶೇಷವಾದ ವಾತ್ಸಲ್ಯವಿತ್ತು. ಆತ ತಾನು ಉಣ್ಣುವಾಗ ನಾಯಿಗೆ ಅನ್ನದ ಉಂಡೆಯನ್ನು ನೀಡುವುದೂ ಆ ನಾಯಿ ಹಾರಿ ಅವನ ಕೈಯಿಂದ ಅನ್ನದ ಉಂಡೆಯನ್ನು ತೆಗೆದುಕೊಳ್ಳುವುದೂ ಒಂದು ಪರಿಪಾಠವಾಗಿತ್ತು. ತನ್ನ ಪ್ರೀತಿ ಪಾತ್ರವಾದ ನಾಯಿ ಶಾಲಿಯರ ಕೈಯಿಂದ ಸತ್ತು ಹೋಯಿತು ಎಂದು ತಿಳಿದಾಗ ಕುಪಿತನಾದ ರಾಜನು ಆ ಕೂಡಲೇ ಶಾಲಿಯರನ್ನು ಆಸ್ಥಾನಕ್ಕೆ ಬರಿಸಿ, ತನಗೆ ಅಂತಹುದೇ ಚಿನ್ನದ ನಾಯಿಯನ್ನು ತಯಾರಿಸಿ ಕೊಡಬೇಕೆಂದೂ, ತನ್ನ ನಾಯಿಯಂತೇ ಆ ನಾಯಿಯೂ ತನ್ನದೇ ಕೈಯಿಂದ ಅನ್ನದ ಉಂಡೆಯನ್ನು ಹಾರಿ ಪಡೆದುಕೊಳ್ಳಬೇಕೆಂದೂ, ಅಲ್ಲದಿದ್ದರೆ ಶಾಲಿಯರ ತೆರುವನ್ನೇ ಸರ್ವನಾಶ ಮಾಡಿಬಿಡುವೆನೆಂದೂ ಗದರಿಸಿದನು. ಚಿಂತಿತರಾದ ಶಾಲಿಯರು ಏನು ಮಾಡುವುದೆಂದು ತೋಚದೆ ತಮ್ಮ ಆರಾಧ್ಯ ದೈವವಾದ ಶಾಸ್ತಾರನನ್ನು ಧ್ಯಾನಿಸಿದರು. ಅವರ ಮುಂದೆ ಪ್ರತ್ಯಕ್ಷನಾದ ಶಾಸ್ತಾರನು ರಾಜನು ಆಜ್ಞಾಪಿಸಿದ ನಾಯಿಯನ್ನು ತಯಾರಿಸಿ ಕೊಡಲು ಹೇಳಿದನು. ಮರುದಿನ ಅವರು ಚಿನ್ನದ ನಾಯಿಯನ್ನು ತಯಾರಿಸಿ ರಾಜನ ಆಸ್ಥಾನಕ್ಕೆ ತಂದರು. ರಾಜನು ತಿರಸ್ಕಾರ ಭಾವದಿಂದ ಅದನ್ನು ನೋಡಿ, ಅನ್ನದ ಉಂಡೆಯನ್ನು ನಾಯಿಯ ಮುಂದೆ ಹಿಡಿದನು. ಅಪ್ರತೀಕ್ಷಿತವಾಗಿ ಆ ನಾಯಿಯು ರಾಜನನ್ನು ಕಂಡು ಬೊಗಳುವುದು ಮಾತ್ರವಲ್ಲ, ಅನ್ನದ ಉಂಡೆಯನ್ನು ಹಿಡಿದ ಅವನ ಕೈಯನ್ನೇ ಬಲವಾಗಿ ಕಚ್ಚಿಬಿಟ್ಟಿತು. ಇದರಿಂದ ಅವಮಾನಿತನಾದ ರಾಜನು ಶಾಲಿಯರ ಬಗ್ಗೆ ಇನ್ನಷ್ಟು ಕೋಪಗೊಂಡು ತನ್ನ ರಾಜ್ಯದಲ್ಲೇ ಅವರು ಇರಬಾರದೆಂದೂ, ಆ ಕೂಡಲೇ ಅವರು ಅಲ್ಲಿಂದ ಹೊರಡಬೇಕೆಂದೂ ಆಜ್ಞಾಪಿಸಿದನು. ಅಲ್ಲಿಂದ ಹೆದರಿ ಓಡಿದ ಶಾಲಿಯರು ಶಾಸ್ತಾರನನ್ನೇ ಧ್ಯಾನಿಸಿಕೊಂಡು ಉತ್ತರದ ಕಡೆಗೆ ಬಂದುದು ಮಾತ್ರವಲ್ಲ ; ಉತ್ತರದ ಒಂದೊಂದೇ ಪ್ರದೇಶಗಳಲ್ಲಿ ಒಂದೊಂದು ಕುಟುಂಬದಂತೆ ವಾಸಿಸತೊಡಗಿದರು. ತಮ್ಮನ್ನು ರಕ್ಷಿಸಿದ ಶಾಸ್ತಾವಿನ ಬಗ್ಗೆ ಅಪರಿಮಿತ ಭಕ್ತಿಯುಳ್ಳ ತಾವು ಶಾಸ್ತಾವಿನ ಭಕ್ತರು ಮತ್ತು ಎಲ್ಲಿದ್ದರೂ

ಒಂದೇ ಕುಟುಂಬಕ್ಕೆ ಸೇರಿದವರು ಎನ್ನುವುದನ್ನು ನೆನಪಿಸಲೋಸುಗ ಕೀಟೂರಿನ 'ಶಾಸ್ತಾ' ವಿನ ದೇವಾಲಯದಲ್ಲಿ ವರ್ಷಕ್ಕೊಮ್ಮೆ ವೃಶ್ಚಿಕ ಮಾಸದ ೨ನೇ ಶನಿವಾರ ಸೇರಿಕೊಳ್ಳುತ್ತಾರೆ.

ಈ ಐತಿಹ್ಯದ ಹಿಂದೆ ಅವಾಸ್ತವತೆ ಇದ್ದರೂ, ಶಾಲಿಯಾ ಸಮುದಾಯಕ್ಕೆ ರಾಜ ಹಾಗೂ ಅವರ ಅಧಿಕಾರದ ಅಹಂಕಾರದ ಬಗ್ಗೆ ಒಂದು ರೀತಿಯ ತುಚ್ಛ ಭಾವನೆಯಿದೆ ಎನ್ನುವುದು ಇವರ 'ಪೊರಾಟ್' ಎನ್ನುವ ಕಲೆಯಿಂದ ವ್ಯಕ್ತವಾಗುತ್ತದೆ. ರಾಜನ ನಿರಂಕುಶ ಪ್ರಭುತ್ವವನ್ನು ವಿಡಂಬಿಸುವಂತಹ ರೀತಿಯಲ್ಲಿ ದೇವಾಲಯಗಳಲ್ಲಿ ಇವರು ವೇಷಗಳನ್ನು ಕಟ್ಟುವುದೂ, ಅದನ್ನೇ ಎತ್ತಿ ಹೇಳುವುದೂ ರಾಜರಿಂದ ಇವರಿಗೇನೋ ತೊಂದರೆ ಒಂದು ಕಾಲದಲ್ಲಿ ಉಂಟಾಗಿದೆ ಎನ್ನುವುದನ್ನು ವಿಶದಪಡಿಸುತ್ತದೆ. ಇವರು ನಡೆಸುವ ಈ ವಿಡಂಬನೆಯನ್ನು ಪ್ರಶ್ನಿಸುವ ದಾರ್ಷ್ಟ್ಯ ರಾಜನಿಗೂ ಇಲ್ಲದ ಕಾರಣದಿಂದ ಅದು ಒಂದು ಆಚರಣೆಯಾಗಿ ಮೂಡಿ ಬಂದು, ಕ್ರಮೇಣ ಸಾಮಾಜಿಕ, ರಾಜಕೀಯ ವಿಷಯಗಳು ಇವರ ಪೊರಾಟ್ ಎನ್ನುವ ವಿಡಂಬನಾತ್ಮಕ ಕಲೆಗೆ ವಸ್ತುವಾಗಿರುವ ಸಾಧ್ಯತೆ ಇದೆ.

ಪೊರಾಟ್ ಎನ್ನುವ ಕಲೆಗೂ, ಶಾಲಿಯರು ಉತ್ತರಕ್ಕೆ ಬಂದಂತಹ ಐತಿಹ್ಯಕ್ಕೂ ನಿಕಟವಾದ ಸಂಬಂಧವನ್ನು ನಾವು ಇದರಿಂದ ಕಲ್ಪಿಸಿಕೊಳ್ಳಬಹುದು. 'ಚಿನ್ನದ ನಾಯಿ ಬೊಗಳಿತು ಮತ್ತು ರಾಜನ ಕೈಯನ್ನು ಕಚ್ಚಿತು' ಎನ್ನುವ ವಿಷಯದಲ್ಲಿ ಕಾಣುವ ಅವಾಸ್ತವತೆಯು, ಐತಿಹ್ಯಗಳು ರೂಪಾಂತರ ಗೊಳ್ಳುತ್ತಾ ಬಾಯಿಯಿಂದ ಬಾಯಿಗೆ ದಾಟಿ ಬರುವ ಸಂದರ್ಭದಲ್ಲಿ ಸೇರಿಕೊಳ್ಳುವ 'ವೈಭವೀಕರಣ ಪ್ರಕ್ರಿಯೆ' ಯನ್ನು ಸೂಚಿಸುತ್ತದೆ. 'ತಮ್ಮ ಜಾತಿಯವರು ಸಾಮಾನ್ಯರಲ್ಲ' ಎಂದು ಮೇಲ್ಮೆಯನ್ನು ಸೂಚಿಸಲು ಜನರು ಪವಾಡಗಳನ್ನು ಐತಿಹ್ಯಗಳೊಂದಿಗೆ ಸೇರಿಸಿಕೊಳ್ಳುತ್ತಾರೆ. ಇದು 'ಧಾರ್ಮಿಕ ಭಯ'ವನ್ನು ಸಾಮಾನ್ಯರಲ್ಲಿ ಹುಟ್ಟಿಸಿ ಆ ಮೂಲಕ ಜಾತಿ ಗೌರವವನ್ನು ಹೆಚ್ಚಿಸುವ ಒಂದು ಪ್ರಯತ್ನ. ಇದರಿಂದ ಐತಿಹಾಸಿಕ ವಿಷಯಗಳು ಪುರಾಣಗಳಾಗಿ, ಪವಾಡಗಳಾಗಿ ಪರಿವರ್ತಿತವಾಗುತ್ತವೆ.

ಶಾಲಿಯರಿಗೂ ಕೀಟೂರು ದೇವಾಲಯಕ್ಕೂ ಇದ್ದ ನಿಕಟವಾದ ಸಂಬಂಧದ ಬಗ್ಗೆ ಹಾಗೂ ವರ್ಗ ತಾರತಮ್ಯದಿಂದ ಅವರು ಅದರಿಂದ ವಂಚಿತವಾದುದರ ಬಗ್ಗೆ ಇನ್ನೊಂದು ಐತಿಹ್ಯ ಹೀಗೆ ಹೇಳುತ್ತದೆ.

ಶಾಲಿಯಾ ಸಮುದಾಯದ ರಕ್ಷಕದೈವ 'ಶಾಸ್ತಾರ'ನಾದುದರಿಂದ ಅಲ್ಲಿ ಅವರಿಗೆ ವಿಶೇಷವಾದ ಸ್ಥಾನವಿತ್ತು. ಬ್ರಾಹ್ಮಣರಂತೆ ಗರ್ಭಗುಡಿಯವರೆಗೂ ಅವರಿಗೆ ಪ್ರವೇಶವಿತ್ತು. ಹೀಗಿರಲು ಒಂದು ಬಾರಿ ಪೂಜಾ ವೇಳೆಯಲ್ಲಿ ಶಾಲಿಯನೊಬ್ಬನು ಚಂದ್ರಗಿರಿ ಹೊಳೆಗೆ ಮೀನು ಹಿಡಿಯಲು ಹೋಗಿದ್ದನು. ಪೂಜೆಯ ಸ್ವರ ಕೇಳಿದಾಗ ಮೈತೊಳೆದುಕೊಳ್ಳದೆ ನೇರವಾಗಿ

ದೇವಾಲಯದೊಳಗೆ ಪ್ರವೇಶಿಸಿದನು. ಅವನ ಬೆನ್ನಿನ ಮೇಲೆ ಮೀನಿನ ಅವಶಿಷ್ಟವನ್ನು ಕಂಡ ಬ್ರಾಹ್ಮಣರು ಕೂಡಲೇ ಅರ್ಚಕರಿಗೆ ತಿಳಿಸಲು ಅವರು 'ಎಡಂಗ ಕುಲಂ ಪಡಿಕ್ಕ್ ಪುರತ್ತ್ '(ಎಡಂಗ ಕುಲ (ಎಡಂಗ ಶಾಲಿಯಾ) ವು ಹೊಸ್ತಿಲಿನಿಂದ ಹೊರಗೆ) ಎಂದು ಆಜ್ಞಾಪಿಸಿದರು. ಅಂದಿನಿಂದ ಶಾಲಿಯಾ ಸಮುದಾಯಕ್ಕೆ ಕೀಟೂರು ದೇವಾಲಯದ ಒಳಭಾಗಕ್ಕೆ ಪ್ರವೇಶವಿರಲಿಲ್ಲ. (ಮುಂದೆ ನಾರಾಯಣ ಗುರುಗಳಂತಹವರ ಆಂದೋಲನದಿಂದ ಕೇರಳದಲ್ಲಿ ಎಲ್ಲಾ ಕೆಳವರ್ಗದವರಿಗೂ ದೇವಾಲಯಗಳೊಳಗೆ ಪ್ರವೇಶಾವಕಾಶ ದೊರಕಿತು).

ಪಯ್ಯನ್ನೂರು ಭಾಗದಲ್ಲಿ ಪ್ರಚಲಿತವಾದ 'ಪಯ್ಯನ್ನೂರು ಪಾಟ್ ' ನಲ್ಲಿ ಶಾಲಿಯರು ಹಡಗಿನಲ್ಲಿ ವ್ಯಾಪಾರ ನಡಸುತ್ತಿದ್ದ ಬಗ್ಗೆ ಉಲ್ಲೇಖವಿದೆ. ಇದರಲ್ಲಿ ಉಲ್ಲೇಖಿತನಾದ ನಂಬುಚೆಟ್ಟಿ ಎಡಂಗ ಶಾಲಿಯನೇ ಆಗಿರಬೇಕು. ಕ್ರಿ.ಶ.೧೩-೧೪ ನೇ ಶತಮಾನದ್ದೆಂದು ಹೇಳಲಾದ ಪಯ್ಯನ್ನೂರು ಪ್ಪಾಟಿನಿಂದ ಶಾಲಿಯರು ಆ ವೇಳೆಗಾಗಲೇ ಉತ್ತರ ಕೇರಳದ ಭಾಗದಲ್ಲಿ ವ್ಯಾಪಾರಸ್ಥರಾಗಿದ್ದರು ಎಂದು ತಿಳಿದು ಬರುತ್ತದೆ. ಪಶ್ಚಿಮದ ಸಮುದ್ರತೀರವು ಸುರಕ್ಷಿತವಾದ ಜಲಮಾರ್ಗವಾದುದರಿಂದ ಸಾಗರದ ಮೂಲಕವಾಗಿ ತಮ್ಮ ಸರಕುಗಳನ್ನು ಸಾಗಿಸಲು ಇವರು ಪೂರ್ವ ಕರಾವಳಿ ತೀರದಿಂದ ಪಶ್ಚಿಮ ಕರಾವಳಿಯ ತೀರಕ್ಕೆ ಬಂದಿರಬೇಕು. (ಪೂರ್ವ ಸಮುದ್ರದಲ್ಲಿ ಚಂಡಮಾರುತಗಳು ಸಾಮಾನ್ಯ ತಾನೇ?) ಕೇರಳದ ತೀರ ಪ್ರದೇಶದಲ್ಲಿಯೇ ಇವರು ಹೆಚ್ಚಾಗಿ ಕಂಡುಬರಲು ಇದೇ ಕಾರಣವಾಗಿರಬಹುದು. ಕ್ರಿ.ಶ. ೧೫೧೬ ನೇ ಶತಮಾನಕ್ಕಿಂತ ಮುನ್ನ ಜಲಮಾರ್ಗವಾಗಿ ಬಟ್ಟೆ ವ್ಯಾಪಾರವನ್ನು ನಡೆಸುತ್ತಿದ್ದ ಇವರು 'ವಳಂಜಿಯರ್ ' ಎಂದು ಕರೆಯಲ್ಪಟ್ಟಿರಬೇಕು. ಪಾಶ್ಚಾತ್ಯರು ಸಮುದ್ರ ಮಾರ್ಗದ ವ್ಯಾಪಾರದ ಮೇಲೆ ತಮ್ಮ ಅಧಿಪತ್ಯವನ್ನು ಸಂಸ್ಥಾಪಿಸಿದಾಗ, ಅನ್ಯದಾರಿಯಿಲ್ಲದೆ ಕಾಲ್ನಡಿಗೆಯಲ್ಲಿ ವ್ಯಾಪಾರ ನಡೆಸಲು ಆರಂಭಿಸಿರಬೇಕು. ತಲೆಯ ಮೇಲೆ ಬಟ್ಟೆಯ ಗಂಟನ್ನು ಹೊತ್ತು ಒಂದೆಡೆಯಿಂದ ಮತ್ತೊಂದೆಡೆಗೆ ವ್ಯಾಪಾರ ಮಾಡುತ್ತಾ ಉತ್ತರದ ಕಡೆಗೆ ಸಾಗಿ ಬಂದ ಇವರು ಚಂದ್ರಗಿರಿ ಹೊಳೆಯನ್ನು ದಾಟಿ ಉತ್ತರಕ್ಕೆ ಬಂದು, ಅಲ್ಲಿಂದ ಕಾಲ್ನಡಿಗೆ ದೂರದ ಪ್ರದೇಶಗಳಿಗೆ ಹೋಗಿ ನೆಲೆಸಿರುವ ಸಾಧ್ಯತೆಗಳಿವೆ. ಚಂದ್ರಗಿರಿ ಹೊಳೆಯ ದಕ್ಷಿಣ ಭಾಗಕ್ಕೆ ಸುಮಾರು ೧೩-೧೪ನೇ ಶತಮಾನಕ್ಕೆ ಬಂದ ಇವರು, ಹೊಳೆದಾಟಿ ಕಾಸರಗೋಡಿಗೆ ೧೬-೧೭ನೇ ಶತಮಾನಗಳಲ್ಲಿ ಬಂದಿರಬೇಕು. ಆದುದರಿಂದಲೇ 'ನಗರಂ'ಗಳ ಬಗೆಗಿನ 'ದೈವದ ನುಡಿಗಟ್ಟ'ನಲ್ಲಿ (ಆರುಳಪ್ಪಾಡ್) ೧೪ ತೆರುಗಳನ್ನು ಹೇಳುವಾಗ ಹದಿನಾಲ್ಕು ನಗರ ಎಂದು ಒಮ್ಮೆಲೇ ಹೇಳದೆ ಹತ್ತು ಮತ್ತು ನಾಲ್ಕು ಹದಿನಾಲ್ಕು ನಗರ (ಪತ್ತುಂ ನಾಲುಂ ಪದಿನಾಲ್ ನಗರಂ) ಎಂದು ಹೇಳಲಾಗುತ್ತದೆ ಮೊದಲು ಚಂದ್ರಗಿರಿಯ ದಕ್ಷಿಣದಲ್ಲಿ ಹತ್ತು ನಗರಂಗಳು ಸೃಷ್ಟಿಯಾಗಿ ಕ್ರಮೇಣ ಚಂದ್ರಗಿರಿಯ ಉತ್ತರದಲ್ಲಿ ನಾಲ್ಕು ನಗರಗಳು ಸೃಷ್ಟಿಯಾದವು. ಕ್ರಮೇಣ ಹತ್ತರೊಂದಿಗೆ ಈ

ನಾಲ್ಕನ್ನೂ ಸೇರಿಸಿ ಹದಿನಾಲ್ಕು ಎಂದು ಹೇಳತೊಡಗಿರಬೇಕು. ಕಾಸರಗೋಡಿನ ಭಾಗಕ್ಕೆ ಶಾಲಿಯರು ಒಟ್ಟಾಗಿ ಬಂದಿರುವ ಸಾಧ್ಯತೆಯಿಲ್ಲ. ಆದಕ್ಕೆ ಸಂಬಂಧಪಟ್ಟ ಯಾವುದೇ ಐತಿಹ್ಯಗಳೂ ಇಲ್ಲ. ಆದುದರಿಂದ ಬಿಡಿ ಬಿಡಿಯಾಗಿ ಒಂದೊಂದೇ ಕುಟುಂಬವು ಈ ಪ್ರದೇಶಕ್ಕೆ ಬಟ್ಟೆ ವ್ಯಾಪಾರ ಮಾಡುತ್ತಾ ಬಂದು ತಮಗೆ ಪ್ರಶಸ್ತವೆನ್ನಿಸಿದ ಕಡೆ ಸ್ಥಳೀಯ ಮೇಲ್ವರ್ಗದವರ ಆಶ್ರಯದಲ್ಲಿ ಒಕ್ಕಲುಗಳಾಗಿ ನೆಲೆ ನಿಂತಿರಬೇಕು. ಹೀಗೆ ನಿಂತವರಿಂದ ಇಲ್ಲಿನ ವಿದ್ಯಮಾನವನ್ನರಿತ ಇತರರು ಕ್ರಮೇಣ ಇಲ್ಲಿಗೆ ಬಂದು ತಮ್ಮದೇ ಮನೆ, ಆಸ್ತಿಗಳನ್ನು ಮಾಡಿ ಸ್ವತಂತ್ರರಾದ್ದೂ ಇದೆ. ಕಾಸರಗೋಡಿನಿಂದ ಪಣಂಬೂರುವರೆಗಿನ ಪ್ರದೇಶಗಳಲ್ಲಿ ಆರಂಭದಲ್ಲಿ ಇವರು ತೀರಪ್ರದೇಶದಿಂದ ೧೦-೨೦ ಕಿ.ಮೀ. ಒಳಭಾಗದಲ್ಲೇ ನೆಲಸಿದ್ದರು ಎನ್ನುವುದು ಇಲ್ಲಿನ ಶಾಲಿಯಾ ಕುಟುಂಬದವರ ಮನೆತನಗಳ ಹೆಸರಿನಿಂದ ವ್ಯಕ್ತವಾಗುತ್ತದೆ. ಪೇರೂರು, ಕೋಳಾರ್, ಬಾಯಾರ್, ಇಚ್ಲಂಪಾಡಿ, ಮಂಟಂಪಾಡಿ, ಶ್ರೇಣಿ, ಪೆರ್ಲ, ಪೂಕ್ಕಳಂ, ಪಡ್ರ್, ಕಾರಪ್ಪಾಡಿ, ಕಣ್ಣೂರು, ಮಾರಾರಿಕೇರಿ, ಚೇವಾರು, ಜೋಡುಕಲ್ಲು, ಕುಂಬ್ಡಾಜೆ, ಬೇಳ, ಬೆಳ್ಳೂರು, ಪುತ್ತಿಗೆ, ನೆಕ್ರಾಜೆ, ಮುಳಿಯಾರು, ದೇರಂಬಳ ಈ ಮುಂತಾದ ಸ್ಥಳ ನಾಮಗಳು ಕಾಸರಗೋಡಿನ ಭಾಗದಲ್ಲಿ ವಾಸಿಸುವ ಶಾಲಿಯರ ಮನೆತನದ ಹೆಸರುಗಳಾಗಿವೆ. ಇವೆಲ್ಲವೂ ಕಾಸರಗೋಡಿನಿಂದ ಪೂರ್ವಕ್ಕೆ ಇವೆ. ಮೊದಲು ಒಳನಾಡಿಗೆ ಬಟ್ಟೆ ವ್ಯಾಪಾರ ಮಾಡುತ್ತಾ ಹೋಗಿ ನೆಲೆನಿಂತ ಶಾಲಿಯರು, ಕ್ರಮೇಣ ಕುಳಿಮಗ್ಗಗಳನ್ನು ಅಲ್ಲೇ ಸ್ಥಾಪಿಸಿ ಬಟ್ಟೆ ಉತ್ಪಾದನೆಗೆ ಆರಂಭಿಸಿದರು. ತಮ್ಮವರ ಸಂಖ್ಯೆ ಹೆಚ್ಚಾದಾಗ ಮೊದಲಿನಿಂದಲೇ ಸಮುದಾಯವಾಗಿ ತೆರುವಿನಲ್ಲಿ ವಾಸಿಸಿಯೇ ಅಭ್ಯಾಸವಾಗಿದ್ದ ಇವರು ಆದಕ್ಕೆ ಸಮರ್ಪಕವಾದ ಸ್ಥಳವನ್ನು ಕಂಡುಕೊಂಡು ತಮ್ಮದೇ ಆದ ಆರಾಧನಾಲಯವನ್ನು ನಿರ್ಮಾಣ ಮಾಡಿ, 'ನಗರಂ' ನ್ನು ಸೃಷ್ಟಿಸಿಕೊಂಡು ಆದರ ಸುತ್ತಮುತ್ತಲೂ ಒಟ್ಟಾಗಿ ವಾಸಿಸತೊಡಗಿದರು. ಕಾಸರಗೋಡಿನ ಭಾಗದ ತೆರುಗಳು ಹೀಗೆ ಸೃಷ್ಟಿಯಾಗಿರಬೇಕು. ಸ್ವತಂತ್ರವಾಗಿಯೇ ಬದುಕಿ ಅಭ್ಯಾಸವಿದ್ದ ಮಹಾಸ್ವಾಭಿಮಾನಿಗಳಾದ ಈ ವರ್ಗವು ಯಾವತ್ತೂ ಇನ್ನೊಬ್ಬರ ಅಡಿಯಾಳಾಗಿ ಹೆಚ್ಚು ಕಾಲ ಇರುವುದಿಲ್ಲ. ಹಿಂದೆ ಇಲ್ಲಿ ಒಳನಾಡುಗಳಲ್ಲಿ ಶ್ರೀಮಂತರ ಬಳಿಯಲ್ಲಿ ನೆಲೆನಿಂತ ಕುಟುಂಬಗಳು ಆಗಾಗ ಒಕ್ಕಲೆದ್ದು ಹೋಗಿ, ಇನ್ನೊಂದೆಡೆ ಆಶ್ರಯ ಪಡೆದುಕೊಳ್ಳುವುದು ಸಾಮಾನ್ಯವಾಗಿತ್ತು. 'ಹತ್ತು ವರ್ಷಗಳಲ್ಲಿ ಹತ್ತು ಬಾರಿ ಒಕ್ಕಲೆದ್ದವರ' ಕತೆಯನ್ನು ಹಿರಿಯರು ಹೇಳುತ್ತಾರೆ. ಸ್ವತಂತ್ರರಾಗಿ ತಮ್ಮವರ ಜತೆಗೆ ಬಾಳುವುದನ್ನೇ ಎಂದಿಗೂ ಬಯಸುವ ಇವರ ಈ ಪ್ರವೃತ್ತಿಯೇ ತೆರುಗಳ ಸೃಷ್ಟಿಗೆ ಕಾರಣವಾಗಿದೆ. ನಮ್ಮ ಜಾತಿಯವರ ಮಧ್ಯೆ ಇದ್ದೇನೆ ಎಂಬುದು ಒಂದು ರೀತಿಯ ಸುರಕ್ಷತಾ ಭಾವವನ್ನೂ ಹುಟ್ಟಿಸುತ್ತದೆ.

ಹೀಗೆ ಚಂದ್ರಗಿರಿಯ ಉತ್ತರದ ಕಾಸರಗೋಡಿನಿಂದ ಮಂಗಳೂರಿನವರೆಗೂ ನೆಲಸಿದ ಶಾಲಿಯಾ ಸಮುದಾಯದವರ ಹೆಚ್ಚಿನ ಮೂಲದ ಮನೆಗಳು (ತರವಾಡು) ಚಂದ್ರಗಿರಿಯ ದಕ್ಷಿಣದ ನೀಲೇಶ್ವರ, ಪಿಲಿಕ್ಕೋಡು, ಉದುಮ, ಕಾಞಂಗಾಡ್, ಕೀಟೂರು, ತಳಿಪ್ಪರಂಬ ಮುಂತಾದ ಕಡೆಗಳಲ್ಲಿವೆ. ಈಗಲೂ ವರ್ಷಕ್ಕೊಮ್ಮೆ ತರವಾಡುಗಳಲ್ಲಿ ನಡೆಯುವ 'ಸತ್ತವರಿಗೆ ಬಡಿಸುವ' ಕಾರ್ಯಕ್ರಮಕ್ಕೆ ಇಲ್ಲಿನವರು ಹೋಗುತ್ತಾರೆ. ಇಲ್ಲಿಯೂ ತರವಾಡುಗಳು ಇದ್ದರೂ ಮೂಲವೆಂದು ಅಲ್ಲಿಗೆ ಹೋಗುವ ಈ ಪ್ರಕ್ರಿಯೆಯು ಸುಮಾರು ಆರೇಳು ತಲೆಮಾರುಗಳ ಹಿಂದೆ ಇವರ ಹಿರಿಯರು ಅಲ್ಲೇ ಇದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ.

ಕಾಸರಗೋಡು ಪ್ರದೇಶದಲ್ಲಿರುವ ಶಾಲಿಯಾ ಸಮುದಾಯದವರು ತಮ್ಮನ್ನು 'ದೇವಾಂಗ' ದವರು ಎಂದು ಗುರುತಿಸಿಕೊಳ್ಳುವುದಕ್ಕೆ ಇಷ್ಟಪಡುತ್ತಾರೆ. ಆದರೆ ಇಲ್ಲಿನ ಇತರ ಸಮುದಾಯದವರು ಇವರನ್ನು ಚಾಲಿಯಾ, ತಾಲಿಯಾ, ತಾಲ್ಯ ಎಂದು ಕರೆಯುತ್ತಾರೆ. ಮೂಲದ ಬಗೆಗೆ ಸ್ಪಷ್ಟ ಕಲ್ಪನೆಯಿಲ್ಲದೆ 'ದೇವಾಂಗ' ಎಂಬ ನೇಕಾರರ ಮುಖ್ಯ ಪ್ರವಾಹದಲ್ಲಿ ತಮ್ಮನ್ನು ಸೇರಿಸಿಕೊಳ್ಳುವಲ್ಲಿ ಸಂತೋಷವ್ಯಕ್ತಪಡಿಸುವ ಇವರು ಅದಕ್ಕೆ ಕಾರಣವನ್ನೂ ಕೊಡುತ್ತಾರೆ. ನೇಕಾರರ ಪುರಾಣ ಹಾಗೂ ಇತಿಹಾಸದಲ್ಲಿ ದೇವಾಂಗರನ್ನು ಎಡಂಗೈಯವರೆಂದೂ, ಈಶ್ವರನ ಎಡಭಾಗದಲ್ಲಿರುವ ದೇವಿಯನ್ನು ಆರಾಧಿಸುವವರೆಂದೂ ಉಲ್ಲೇಖವಿದೆ. (ಪದ್ಮಶಾಲಿಯರು ಬಲಂಗೈಯವರು.) ಪಟ್ಟುವದಿಂದ ಪಣಂಬೂರು ವರೆಗಿನ ಶಾಲಿಯರು ಎಡಂಗ ಶಾಲಿಯರು ಎಂದು ಗುರುತಿಸಲ್ಪಡುತ್ತಾರೆ. ಆದುದರಿಂದಲೇ ಎಡಂಗೈ ದೇವಾಂಗರಿಗೂ ತಮಗೂ ಸಂಬಂಧವನ್ನು ಇವರು ಕಲ್ಪಿಸಿಕೊಳ್ಳುತ್ತಾರೆ. (ಕೇರಳದ ಶಾಲಿಯಾ ಸಮುದಾಯದ ಎಡಂಗ ಬಲಂಗ ವಿಭಾಗಗಳು ಎಡಂಗೈ ಬಲಂಗೈ ವಿಭಾಗಕ್ಕೆ ಸಮನಾದುದೇ ಎನ್ನುವುದು ಇನ್ನೂ ಸ್ಪಷ್ಟವಾಗಿಲ್ಲ. ಉಳಿದೆಡೆಗಳಲ್ಲಿ ಎಡಂಗೈ ಬಲಂಗೈ ವಿಭಾಗಗಳಲ್ಲಿರುವಷ್ಟು ಸ್ಪಷ್ಟವಾದ ಅಂತರ ಇಲ್ಲಿನ ಎಡಂಗ ಬಲಂಗದಲ್ಲಿ ಯಾವತ್ತೂ ಇರಲಿಲ್ಲ ಎನ್ನುವುದೂ ಅಷ್ಟೇ ಸತ್ಯದ ವಿಚಾರವಾಗಿದೆ. ಕೇರಳದ ಶಾಲಿಯರ ಈ ವಿಭಾಗವು ಸುಮಾರು ಮೂರ್ನಾಲ್ಕು ಶತಮಾನಗಳ ಹಿಂದೆ ಸಣ್ಣ ರೂಪದಲ್ಲಿ ಸೃಷ್ಟಿಯಾದುದು). ಕೇರಳದ ಶಾಲಿಯರು ಮೊದಲು ಒಂದೇ ಆಗಿದ್ದರು. ಕ್ರಮೇಣ ಸಮುದಾಯದ ಮಧ್ಯೆ ಉಂಟಾದ ಬಿರುಕು ಎಡಂಗ ಬಲಂಗ ಎಂದು ಗುರುತಿಸಲ್ಪಟ್ಟಾಗ ಸಹಜವಾಗಿಯೇ 'ಎಡಂಗ' ಎಂಬುದನ್ನು ಎಡಂಗೈ ಎಂದರೆ 'ದೇವಾಂಗ' ಎಂದು ಗುರುತಿಸಿಕೊಂಡರು. ತತ್ಪರಿಣಾಮವಾಗಿ 'ಲವಂಗರು' ಪದ್ಮಶಾಲಿಯರಾದರು.

ಇತ್ತೀಚೆಗೆ ಈ ವಿಭಾಗಗಳೆಲ್ಲಾ ಅರ್ಥಹೀನವೆಂದು ಮನಗಂಡು ವಿದ್ಯಾವಂತ ಶಾಲಿಯಾ ಸಮುದಾಯದವರು ಕೇರಳದುದ್ದಕ್ಕೂ "ಪದ್ಮಶಾಲಿಯಾ" ಎಂದೇ ಗುರುತಿಸಲ್ಪಡುತ್ತಾರೆ. ಏಕೆಂದರೆ

"ಶಾಲಿ" ಎನ್ನುವ ಪದವೇ ನೇಕಾರರ ಮೂಲಪದ. ಉಳಿದವುಗಳೆಲ್ಲವೂ ಆನಂತರ ನಿರ್ಮಾಣವಾದವು.

ಕೇರಳದ ನೇಕಾರರನ್ನು 'ಶಾಲಿಯಾ' ಅಥವಾ 'ಚಾಲಿಯನ್' ಎಂದು ಕರೆಯುತ್ತಿದ್ದರು ಎಂದು ಎಡ್ಗರ್ ಥರ್ಸ್ಟನ್ ಹೇಳುತ್ತಾನೆ. "ಉತ್ತರ ಕೇರಳದಲ್ಲಿ ಇತರ ಕುಶಲಕರ್ಮಿಗಳಂತೆಯೇ ಇರುವ ಇವರು ಪಟ್ಟಾರ್ಯ ಬ್ರಾಹ್ಮಣರ ಹಾಗೇ ಬೀದಿಗಳಲ್ಲಿ ವಾಸ ಮಾಡುತ್ತಾರೆ. ಕೇರಳದ ಉಳಿದ ಜಾತಿಯವರಲ್ಲಿ ಇಲ್ಲದ ಈ 'ಬೀದಿ' (ತೆರು) ಸಂಸ್ಕೃತಿಯು ಇವರು ಪೂರ್ವ ಕರಾವಳಿಯಿಂದ ಬಂದವರು ಎಂಬುದನ್ನು ಋತಪಡಿಸುತ್ತದೆ. ಇವರಿಗೆ ಇವರದೇ ಆದ ಪುರೋಹಿತರಿರುವರು. ಉಪವೀತವನ್ನು ಧರಿಸದೇ ಉಪವೀತಧಾರಣೆಯ ಕ್ರಮವನ್ನು ಆಚರಿಸುತ್ತಾರೆ. ತಮ್ಮ ಹಿರಿಯರನ್ನು ಆರಾಧಿಸುವ ಕ್ರಮ ಇವರಿಗಿದೆ. ಕೇರಳದಲ್ಲಿ ಬಲಂಗೈ ಎಡಂಗೈ ಎಂಬ ಪಂಗಡ ಕೇವಲ ಇವರಲ್ಲಿ ಮಾತ್ರವಿದೆ. (Madras Census Report -1901)

ಥರ್ಸ್ಟನ್‌ನ ಈ ಹೇಳಿಕೆಯೂ ಶಾಲಿಯಾ ಸಮುದಾಯದ ಮೂಲವನ್ನು ತಮಿಳುನಾಡಿಗೇ ಒಯ್ಯುತ್ತದೆ. ಕೇರಳದ ದಕ್ಷಿಣದ ಕಡೆಯಿಂದ ಉತ್ತರದೆಡೆಗೆ ಬಂದಿರುವ ಜನಾಂಗಗಳ ವಲಸೆಯ ಬಗ್ಗೆ ಶ್ರೀ ಅಮೃತ ಸೋಮೇಶ್ವರರು ಹೀಗೆ ಅಭಿಪ್ರಾಯ ಪಡುತ್ತಾರೆ ೮-೯ ನೆಯ ಶತಮಾನದಲ್ಲಿ ಕೇರಳದಲ್ಲಿ ಉಂಟಾದ ತೀವ್ರ ದುರ್ಭಿಕ್ಷೆ (ಬರಗಾಲ) ಯಿಂದಲಾಗಿ ಹಲವು ಜನಾಂಗದವರು ಉತ್ತರದ ಕಡೆಗೆ ವಲಸೆ ಬಂದರು. ಇವರಲ್ಲಿ ಮೋಯ, ತೀಯ, ವಾಣಿಯ ಮತ್ತು ಶಾಲಿಯ ಜನಾಂಗದವರು ಪ್ರಮುಖರು. ಉತ್ತರ ಕೇರಳದ ಕಾಸರಗೋಡು ಹಾಗೂ ದಕ್ಷಿಣ ಕನ್ನಡದ ದಕ್ಷಿಣ ಭಾಗದಲ್ಲಿ ಜೀವಿಸುವ ಇವರೆಲ್ಲರ ಜೀವನ ಶೈಲಿಯಲ್ಲಿ ಬಹಳಷ್ಟು ಸಾಮ್ಯತೆಯನ್ನು ಗುರುತಿಸಬಹುದು. ವೃತ್ತಿ ಬೇರೆಯಾದರೂ ಈ ಸಾಮ್ಯತೆಯು ಇವರು ಒಂದೇ ಪ್ರಾದೇಶಿಕ ಸಂಸ್ಕೃತಿಗೆ ಒಳಪಟ್ಟವರು ಎನ್ನುವುದನ್ನು ದೃಢಪಡಿಸುತ್ತದೆ. ಆದುದರಿಂದಲೇ ಈ ನಾಲ್ಕು ಸಮುದಾಯದವರು ಕೇಂದ್ರ ಸ್ಥಾನವಾದ ಕೀಟೂರಿನಲ್ಲಿ ವೃಶ್ಚಿಕ ಮಾಸದಲ್ಲಿ ಸೇರುತ್ತಾರೆ.

ಈ ನಾಲ್ಕು ಸಮುದಾಯಗಳೂ ಕೋಲತ್ತಿರಿಯ ಸೈನ್ಯದಲ್ಲಿ ಇದ್ದಿರಬೇಕು. ಕಳನಾಡ್. ರೈಲ್ವೇ ನಿಲ್ದಾಣದ ಪಕ್ಕದಲ್ಲಿ ಕೀಟೂರು ಕ್ಷೇತ್ರವಿದೆ. ಇಲ್ಲಿಯೇ 'ಪಯೋಟ್ಟ' ಎಂದು ಕರೆಯಲ್ಪಡುವ ಹಳೆಯ ಕೋಟೆಯ ಅವಶೇಷಗಳಿವೆ. ಇದನ್ನು 'ಚಂದ್ರಗಿರಿ ಕೋಟೆ ' ಎಂದು ಹೇಳುತ್ತಾರೆ. ಕೋಲತ್ತಿರಿ ರಾಜನ ಪ್ರಬಲವಾದ ಒಂದು ಸೈನ್ಯ ವಿಭಾಗದ ಕೇಂದ್ರಸ್ಥಾನವು ಕೀಟೂರು 'ಶಾಸ್ತಾ' ಕ್ಷೇತ್ರವಾಗಿತ್ತು. 'ಐಯ್ಯೂರು ನಾಯರ್‌ಗಳು' ಎಂದು ಕರೆಯಲ್ಪಡುವ ಆ

ಸೇನಾ ವಿಭಾಗವು ಕೋಲತ್ತಿರಿಯ ರಾಜ್ಯವನ್ನು ಆಕ್ರಮಿಸಲು ಪ್ರಯತ್ನಿಸುತ್ತಿದ್ದ ಇಕ್ಕೇರಿ ನಾಯಕರನ್ನು ನಿಯಂತ್ರಿಸಲು ಇಲ್ಲಿ ನೆಲೆ ನಿಲ್ಲಿಸಿರಬಹುದು. ಅಯ್ನೂರು ನಾಯನ್ಮಾರರ ಸೈನ್ಯದಲ್ಲಿ ತೀಯಾ, ಶಾಲಿಯಾ, ವಾಣಿಯಾ, ಮೋಯಾ ಜನಾಂಗದವರೂ ಇದ್ದಿರಬಹುದು. ಕ್ರಿ.ಶ.೧೯೪೪-೧೬೬೬ ನಡುವೆ ಶಿವಪ್ಪ ನಾಯಕನ ಸೈನ್ಯ ಹಾಗೂ ಕೋಲತ್ತಿರಿಯ ಸೈನ್ಯ ಹಲವು ಬಾರಿ ಮುಖಾಮುಖಿಯಾಗಿರಬಹುದು. ಈ ಯುದ್ಧದಲ್ಲಿ ಶಾಲಿಯರೂ ಭಾಗವಹಿಸಿರಬಹುದು. ಆದರೆ ಉಳಿದ ಜನಾಂಗಗಳಿಗಿಂತಲೂ ಹೆಚ್ಚು ಶಾಲಿಯಾ ಜನಾಂಗವೇ ಕೀಟೂರಿನ ಸುತ್ತಮುತ್ತಲೂ ಜೀವಿಸುತ್ತಿದ್ದಾರೆ. ಮಾತ್ರವಲ್ಲದೆ, ವೃಶ್ಚಿಕ ಮಾಸದ ಎರಡನೇ ಶನಿವಾರ ಶಾಲಿಯಾ ಸಮುದಾಯವು ಅಲ್ಲಿ ಸೇರುವುದೂ, ನಾಯನ್ಮಾರರು ಅದರ ನಾಯಕತ್ವವನ್ನು ವಹಿಸುವುದನ್ನೂ ನೋಡಿದರೆ ಉಳಿದವರಿಗಿಂತ ಶಾಲಿಯರೇ ಐಯ್ನೂರು ನಾಯನ್ಮಾರರ ಸೈನ್ಯದಲ್ಲಿ ಅಧಿಕವಾಗಿದ್ದರು ಎಂದು ಊಹಿಸುವಂತಾಗುತ್ತದೆ.

ಕೋಲತ್ತಿರಿ ರಾಜನ ರಾಜಧಾನಿ ಚಿರಕ್ಕಲ್. ಹೀಗಿರಲು ಅವನ ಭಯದಿಂದ ಚಿರಕ್ಕಲ್ ಬಿಟ್ಟು ಇವರು ಉತ್ತರಕ್ಕೆ ಬಂದರು ಎಂಬುದಕ್ಕೆ ವಿಶೇಷವಾದ ಅರ್ಥವು ಕಾಣುವುದಿಲ್ಲ. ಏನೋ ಒಂದು ಸಣ್ಣ ಘಟನೆ ನಡೆದಿರಬಹುದಷ್ಟೆ. ಅಥವಾ ಇನ್ನಾವುದೋ ಕಾರಣವೂ ಇದರ ಹಿಂದೆ ಇರಬಹುದು. ಆದರೆ ಚಿರಕ್ಕಲ್ ರಾಜರ ಜತೆಗೆ ಇವರ ಸಂಬಂಧವು ಇಂದಿನವರೆಗೂ ಚೆನ್ನಾಗಿಯೇ ಇದೆ. ದಕ್ಷಿಣದ ನಡುವೆ 'ನಗರಂ' ಗಳ ಸ್ಥಾನಿಕರಿಗೆ ಇಂದೂ ಅಧಿಕಾರವನ್ನು ನೀಡುವವರು ಚಿರಕ್ಕಲ್ ರಾಜವಂಶವೇ ಎಂಬುದು ಗಮನಾರ್ಹ. ಕಾಸರಗೋಡಿನ ಶಾಲಿಯರ ಪೂರ್ವಿಕರು ಕೇರಳದ ಕಡೆಯಿಂದ ಬಂದಿರಬಹುದು ಎಂದು ಇದರಿಂದ ಊಹಿಸಬಹುದು.

ದಕ್ಷಿಣ ಕನ್ನಡ ಮತ್ತು ಕಾಸರಗೋಡಿನಲ್ಲಿ ಈಗ ಇವರು ಹೆಚ್ಚಾಗಿ ವಾಸಿಸುವ ಸ್ಥಳಗಳು:

ಕಾಸರಗೋಡಿನಲ್ಲಿ: ಕಾಸರಗೋಡು ತೆರುವತ್ತು ಮತ್ತು ಕೂಡ್ಲು ರಾಮದಾಸನಗರ.

ಕಾಡಗಂನಲ್ಲಿ: ಮುಳ್ಳೇರಿಯ, ಬೋವಿಕ್ಕಾನ, ಕಾಡಗಂ.

ಕುಂಬಳೆಯಲ್ಲಿ : ಕುಂಬಳೆ ಪೇಟೆ, ಶಾಂತಿಪಳ್ಳ, ಮುಂಗಿಲ, ನಾಯಿ ಕಾಪು, ಬದಿಯಡ್ಕ.

ಮಂಗಲಪಾಡಿಯಲ್ಲಿ (ಮಂಜೇಶ್ವರ) : ಜೋಡುಕಲ್ಲು, ಉದ್ಯಾವರ, ಬೇಕೂರು, ಐಲ.

ಮಂಗಳೂರುನಲ್ಲಿ: ಅಶೋಕನಗರ, ಉರ್ವಚಿಲಿಂಬಿ, ಶಕ್ತಿನಗರ, ಪದೀಲ್.

ಬಹುಶಃ ಇವರು ಪಯಸ್ವಿನೀ ನದಿ (ಚಂದ್ರಗಿರಿ) ದಾಟಿ ಕಾಸರಗೋಡಿಗೆ ಬಂದ ಸಂದರ್ಭದಲ್ಲಿ ಕುಂಬಳೆಯ ರಾಜರ ಆಶ್ರಯವನ್ನು ಪಡೆದುಕೊಂಡು ಮತ್ತೆ ಈ ಪರಿಸರದ ಇತರ ಪ್ರದೇಶಗಳಿಗೆ ಹೋಗಿರಬೇಕು. ಕಾಸರಗೋಡಿನಲ್ಲಿ ಇವರ ಸ್ಥಾನಂಗಳಲ್ಲಿ 'ಆಚಾರ ವರ್ಗ' ಕ್ಕೆ ಅಧಿಕಾರವನ್ನು ಕೊಡುವ ಹಕ್ಕು ಕುಂಬಳೆಯ ಅರಸರಿಗಿದೆ. ಮುಂದೆ ಮಂಜೇಶ್ವರಕ್ಕೆ ಬಂದಾಗ ಬಂಗಾಡಿ ಅರಸರ ಆಶ್ರಯವನ್ನು ಪಡೆದುಕೊಂಡರು. ಅಲ್ಲಿನ ಆಚಾರ ವರ್ಗವು ಬಂಗಾಡಿ ಅರಸರ ಕೈಯಿಂದ ಅಧಿಕಾರವನ್ನು ಪಡೆದುಕೊಳ್ಳುತ್ತದೆ.

ಹಿಂದಿನ ಕಾಲದಲ್ಲಿ ಯಾವುದೇ ಜಾತಿಯಲ್ಲೂ ಆಚಾರ ವರ್ಗಗಳು ತಾವೇ ಅಧಿಕಾರವನ್ನು ವಹಿಸಿಕೊಳ್ಳುವ ಪರಿಪಾಠವಿರಲಿಲ್ಲ. ನಿರ್ದಿಷ್ಟ ವ್ಯಕ್ತಿಯನ್ನು ಆಚಾರ ವರ್ಗಕ್ಕೆ ಆರಿಸುವ ಹಕ್ಕು ಜಾತಿ ಬಾಂಧವರಿಗಿದ್ದರೆ, ಅವನಿಗೆ ಅಧಿಕಾರವನ್ನು ಕೊಡುವ ಹಕ್ಕು ಆಯಾ ಪ್ರದೇಶದ ಅರಸರದಾಗಿತ್ತು. ಇದು ಒಂದು ರೀತಿಯಲ್ಲಿ ಅಧಿಕಾರವನ್ನು ದಾಖಲಿಸುವ (Registration) ವಿಧಾನ.

# ೬. ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯರು ಯಾರು?

'ದೇವಾಂಗ' 'ಪದ್ಮಶಾಲಿಯಾ' 'ಶಾಲಿಯಾ' ಎಂದೆಲ್ಲಾ ಕರೆಯಲ್ಪಡುವ ದ.ಕ. ಹಾಗೂ ಕಾಸರಗೋಡಿನ ಶಾಲಿಯಾ/ದೇವಾಂಗ ಜನಾಂಗದ ಮೂಲ ಯಾವುದಾಗಿರಬಹುದು ಎನ್ನುವ ಬಗ್ಗೆ ಏಕಾಭಿಪ್ರಾಯವಿಲ್ಲ. ಇವರು ದೇವಾಂಗರಲ್ಲ ಎಂದು ಕೆಲವರು ಹೇಳಿದರೆ, ಇವರು ಪದ್ಮಶಾಲಿಯರಲ್ಲ ಎಂದು ಇನ್ನು ಕೆಲವರು ಹೇಳುತ್ತಾರೆ. ಯಾವುದೂ ಅಲ್ಲದಿದ್ದರೂ ಇವರು 'ಶಾಲಿಯಾ' ಅಥವಾ 'ಚಾಲಿಯಾ' ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಈ ಹೆಸರು ಹೇಗೆ ಹುಟ್ಟಿಕೊಂಡಿತು? ಇವರು ಇಲ್ಲಿಗೆ ಎಲ್ಲಿಂದ ಬಂದರು? ಎನ್ನುವುದು ಜಿಜ್ಞಾಸೆಯ ವಿಷಯವಾಗಿದೆ. ಹಲವು ಅಭಿಪ್ರಾಯಗಳನ್ನು ಸಂಗ್ರಹಿಸಿದಾಗ ಇವರು ಮೂಲತಃ ಪೂರ್ವ ಕರಾವಳಿ ತೀರದಿಂದ ವಲಸೆ ಬಂದ 'ದೇವಾಂಗರು' ಎಂಬ ಅಭಿಪ್ರಾಯ ಕೆಲವೆಡೆ ದೊರಕಿದರೆ, ಮತ್ತೆ ಕೆಲವೆಡೆ 'ಪದ್ಮಶಾಲಿ' ಜನಾಂಗ ವಲಸೆ ಬಂದು ಕೇರಳಕ್ಕೆ ತಲುಪಿದಾಗ 'ಶಾಲಿಯಾ' ಅಥವಾ 'ಚಾಲಿಯಾ' ಆಗಿ ಮಾರ್ಪಟ್ಟಿರಬಹುದು ಎಂಬ ಅಭಿಪ್ರಾಯ ದೊರಕಿತು. ದಕ್ಷಿಣ ಭಾರತದಲ್ಲಿ ನೆಯ್ಗೆ ಕಾಯಕವನ್ನು ಹಮ್ಮಿಕೊಂಡಂತಹ ಎರಡು ಅತಿ ದೊಡ್ಡ ಗುಂಪುಗಳು ದೇವಾಂಗ ಹಾಗೂ ಪದ್ಮಶಾಲಿ. ಒಂದು ಕಾಲದಲ್ಲಿ ಒಂದೇ ಆಗಿದ್ದಂತಹ ಈ ಜನಾಂಗ ಬಹಳ ಹಿಂದೆ ಎರಡಾಗಿ ವಿಭಜನೆ ಹೊಂದಿರುವ ಸಾಧ್ಯತೆ ಇದೆ. ಈ ಎರಡು ಗುಂಪುಗಳಲ್ಲಿ ಯಾವುದೋ ಒಂದು ಗುಂಪಿನಿಂದ ಬೇರ್ಪಟ್ಟು ಬಂದಂತಹ ಗುಂಪು ಕೇರಳದ 'ಶಾಲಿಯಾ' ಎಂಬ ಗುಂಪು. ತಮಿಳುನಾಡಿನ ಮುಖಾಂತರ ಕೇರಳಕ್ಕೆ ಬಂದ ಈ ಗುಂಪು ಅಲ್ಲಿಂದ ಕೇರಳದ ಉದ್ದಗಲಕ್ಕೂ ವ್ಯಾಪಿಸಿತು. ಅಂತಹ ಗುಂಪುಗಳಲ್ಲಿ ಒಂದು ಉತ್ತರ ಕೇರಳದ ಕಾಸರಗೋಡು ಪ್ರದೇಶ ಹಾಗೂ ದಕ್ಷಿಣ ಕನ್ನಡದ ಪ್ರದೇಶಗಳಲ್ಲಿ ಬಂದು ನೆಲೆಸಿತು. ಕೇರಳದ ಮುಖಾಂತರವಾಗಿ ಬಂದ ಕಾರಣದಿಂದ ತಮ್ಮ ಮೂಲ ಸಂಸ್ಕೃತಿಯನ್ನು ಸ್ವಲ್ಪ ಮಟ್ಟಿಗೆ ಕಳೆದುಕೊಂಡ ಈ ಜನಾಂಗ ಕೇರಳದ ಸಂಸ್ಕೃತಿಯನ್ನೇ ತಮ್ಮದನ್ನಾಗಿಸಿಕೊಂಡುದೂ ಇದೆ. ಮೂಲಭಾಷೆ ತಮಿಳು ಅಥವಾ ತೆಲುಗು ಆಗಿದ್ದರೂ ಕೇರಳದಲ್ಲಿ ಬಂದು ನೆಲೆಸಿದ ಮೇಲೆ ಮಲಯಾಳವನ್ನೇ ತನ್ನ ಭಾಷೆಯನ್ನಾಗಿ ಅದು ಸ್ವೀಕರಿಸಿಕೊಂಡಿತು. ಈ ಜನಾಂಗದ ಇನ್ನೊಂದು ವೈಶಿಷ್ಟ್ಯವೆಂದರೆ, ಇವರು ಯಾವ ಪ್ರದೇಶಕ್ಕೆ ಹೋದರೂ ಆಯಾ ಪ್ರದೇಶದ ಭಾಷೆಯನ್ನೂ, ಸಂಸ್ಕೃತಿಯನ್ನೂ ಬಹಳ ಬೇಗ ತಮ್ಮದನ್ನಾಗಿಸಿಕೊಳ್ಳುವುದು. ಇತ್ತೀಚೆಗೂ ಈ ಒಂದು ಜಾಯಮಾನವನ್ನು ಇವರು ಬೆಳೆಸಿಕೊಂಡಿರುವುದನ್ನು ಕಾಣಬಹುದು. ಕರ್ನಾಟಕದ ಕಡೆಯಲ್ಲಿ ನೆಲೆಸಿರುವ ಈ ಜನಾಂಗದವರು ಹೆಚ್ಚಾಗಿ ಕನ್ನಡವನ್ನೇ ಆಡಿದರೆ ಮುಂಬಯಿಯಲ್ಲಿ ನೆಲೆಸಿದವರು ಮನೆಯಲ್ಲಿ ಹಿಂದಿಯನ್ನೋ ಮರಾಠಿಯನ್ನೋ ತಮ್ಮ ಭಾಷೆಯನ್ನಾಗಿಸಿಕೊಂಡಿದ್ದಾರೆ. ಮಂಗಳೂರಿನಲ್ಲಿ ಹೆಚ್ಚಿನವರು ತುಳುವನ್ನೇ ಆಡುತ್ತಾರೆ. ಕೇರಳದಲ್ಲಿ ಇವರ ಭಾಷೆ [illegible]

ಮಲಯಾಳವಾಗಿದ್ದರೆ ಕಾಸರಗೋಡು ಪ್ರದೇಶದಲ್ಲಿ ಮಲಯಾಳವು ಪ್ರಾಬಲ್ಯತೆಯನ್ನು ಪಡೆದುಕೊಳ್ಳುವುದಕ್ಕಿಂತಲೂ ಮುನ್ನ ಕೆಲವು ವರ್ಷಗಳ ಹಿಂದೆ ಹಲವು ಭಾಷೆಗಳು ಸೇರಿದ ಕಾಸರಗೋಡು ಪ್ರದೇಶದ 'ಮಿಶ್ರಿತ ಮಾಲಯಾಳ'ವೊಂದು ಇವರ ಭಾಷೆಯಾಗಿತ್ತು. (ಈಗ ಕಾಸರಗೋಡಿನ ಶಾಲಿಯರಲ್ಲಿ ಹೆಚ್ಚಿನವರೂ ಅಪ್ಪಟ ಮಲಯಾಳವನ್ನೇ ಆಡುತ್ತಾರೆ.) ಈ ಭಾಷೆಯನ್ನೇ ಅಲ್ಲಿ ನೆಲೆಸಿರುವ ಇತರ ಸಮುದಾಯದವರು ಆಡುತ್ತಿದ್ದರೂ, ಇವರದೇ ಆದ ಒಂದು ವಿಶಿಷ್ಟತೆ (ಇದನ್ನು ಶಾಲಿಯಾ ಅಥವಾ ಚಾಲಿಯಾ ವೈಶಿಷ್ಟ್ಯ ಎನ್ನಬಹುದು) ಇವರ ಭಾಷೆಯಲ್ಲಿದೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

'ಶಾಲಿಯಾ' ಎನ್ನುವ ಹೆಸರು ಇವರಿಗಿರುವ ಕಾರಣದಿಂದ ಬಹುಶಃ ಇವರು ಮೂಲ 'ಪದ್ಮಶಾಲಿ' ಸಮಾಜದಿಂದಲೇ ಬೇರ್ಪಟ್ಟು ಬಂದಿರುವ ಸಾಧ್ಯತೆ ಇದೆ. 'ಶಾಲಿಯಾ' ಎನ್ನುವ ಮೂಲ ಹೆಸರಿನ ಈ ಜನಾಂಗ ತುಳುನಾಡಿಗೆ ಬಂದಾಗ 'ತಾಲಿಯಾ' ಆಗಿ ಮಾರ್ಪಟ್ಟಿತು. ತುಳುವಿನಲ್ಲಿ 'ತಾಲಿಯಾ' ಎಂಬ ಪದಕ್ಕೆ 'ಜೇಡ' ಎಂಬ ಅರ್ಥವಿರುವ ಕಾರಣದಿಂದ, ಆ ಹೆಸರಿನಿಂದ ಬೇಸತ್ತ ಇವರು ತಮಗೊಂದು ಉತ್ತಮ ಹೆಸರನ್ನು ಆಯ್ದುಕೊಳ್ಳಬೇಕು ಎಂದು ಒಟ್ಟುಗೂಡಿ 'ದೇವಾಂಗ' ಎನ್ನುವ ಹೆಸರನ್ನೇ ಒಮ್ಮತದಿಂದ ಸ್ವೀಕರಿಸಿಕೊಂಡರು. ಆದರೆ ಕರ್ನಾಟಕದ ತಮಿಳು ತೆಲುಗು ದೇವಾಂಗರಿಗೂ ಇವರಿಗೂ ವಿಶೇಷವಾದ ಬೇರಾವ ಸಂಬಂಧವೂ ಇಲ್ಲಿ ಕಂಡು ಬರುವುದಿಲ್ಲ. ಯಾವುದೋ ಕಾಲದಲ್ಲಿ ಬೇರ್ಪಟ್ಟು ಬಂದಿರಬಹುದು ಎನ್ನುವುದನ್ನು ಬಿಟ್ಟು! ಇತ್ತೀಚೆಗೆ ಕಾಸರಗೋಡು ಕಡೆಯವರು ಅದನ್ನೂ ಬಿಟ್ಟುಕೊಟ್ಟು ತಮ್ಮನ್ನು ಪದ್ಮಶಾಲಿಯಾ ಎಂದು ಕರೆದುಕೊಳ್ಳುತ್ತಿದ್ದಾರೆ. ಉತ್ತರ ಕೇರಳದಲ್ಲಿ ಈ ಹೆಸರೇ ಈಗ ಚಾಲ್ತಿಯಲ್ಲಿದೆ.

ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯರು ಯಾರು? ಎಂಬ ಪ್ರಶ್ನೆ ಈ ಸಮುದಾಯದ ಕುರಿತು ಅಧ್ಯಯನವನ್ನು ಕೈಕೊಂಡಾಗ ಎದುರಾಯಿತು. ಈ ಮೂಲದ ಹುಡುಕಾಟವನ್ನು ನಡೆಸಿದಾಗ ದಕ್ಷಿಣ ಕನ್ನಡದ ಪದ್ಮಶಾಲಿ, ದಕ್ಷಿಣ ಭಾರತದ ದೇವಾಂಗ, ತಮಿಳುನಾಡಿನ ಕೈಕೋಳನ್‌ರೊಂದಿಗೆ ಇವರಿಗೆ ಅಲ್ಪಸ್ವಲ್ಪ ಸಾಮ್ಯತೆ ಇರುವ ಅಂಶಗಳು ಕಂಡು ಬಂದವು. ಆದುದರಿಂದ ಈ ಸಮುದಾಯಗಳೊಂದಿಗಿನ ಇವರ ಸಂಬಂಧವನ್ನು ಶೋಧಿಸುವ ಪ್ರಯತ್ನವಿದು.

೧. ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯರು ದ.ಕ.ದ ಪದ್ಮಶಾಲಿಗಳೇ?

ಅ) ಶಾಲಿಯರ ಹೆಸರಿನಲ್ಲೇ ಇರುವ 'ಶಾಲಿ' ಎಂಬ ಪದವು ಪದ್ಮಶಾಲಿಯರ ಶಾಲಿಯಿಂದಲೇ ಹುಟ್ಟಿರಬಹುದು. ಮೂಲದಲ್ಲಿ ಒಂದಾಗಿ ಅನಂತರ ಬೇರ್ಪಟ್ಟು ಕೇರಳಕ್ಕೆ ಬಂದಾಗ ಪದ್ಮವು ಲುಪ್ತವಾಗಿ 'ಶಾಲಿ' ಮಾತ್ರ ಉಳಿದಿರಬಹುದು.

ಆ) ಶಾಲಿಯರು ಭಗವತೀ ಆರಾಧಕರಾದರೆ ಇಲ್ಲಿನ ಪದ್ಮಶಾಲಿಯರು ಮಹಮ್ಮಾಯಿಯನ್ನು ಆರಾಧಿಸುತ್ತಾರೆ. ಪದ್ಮಶಾಲಿಯರಿಗೆ ಪ್ರಧಾನ ದೈವ ವೀರಭದ್ರ.

ಇ) ತುಳುನಾಡಿನ ಪದ್ಮಶಾಲಿಯರು ವೀರಭದ್ರನನ್ನು ದೇವಿಯರನ್ನೂ ಸಾತ್ವಿಕ ರೀತಿಯಿಂದ ಪೂಜಿಸುತ್ತಾರೆ. ಅದರೊಂದಿಗೆ ಇತರ ದೈವಗಳ ಆರಾಧನೆಯನ್ನು ತಾಮಸ ರೀತಿಯಿಂದ (ಅಸುರಕ್ರಿಯೆ) ಆರಾಧಿಸುವ ಕ್ರಮವಿದೆ. ಶಾಲಿಯರು ತಮ್ಮ ಮೂಲದೇವತೆ ಭಗವತಿಯನ್ನು ಸಾತ್ವಿಕ ರೀತಿಯಿಂದ ಆರಾಧಿಸಿದರೆ, ಉಳಿದ ಕೆಲವು ದೈವಗಳಿಗೆ ಅಸುರಕ್ರಿಯೆ ನಡೆಸುತ್ತಾರೆ.

ಈ) ತುಳುನಾಡಿನ ಪದ್ಮಶಾಲಿಯರು ವೀರಭದ್ರನನ್ನು ಆರಾಧಿಸಿದರೆ, ಶಾಲಿಯರು ಪಡವೀರನ್ ಎಂಬ ದೈವವನ್ನು ಆರಾಧಿಸುತ್ತಾರೆ. ನೀಲೇಶ್ವರದ ಇವರ ಕ್ಷೇತ್ರದ ಹೆಸರೇ 'ವೀರರ್‌ಕಾವ್'.

ಉ) ತುಳುನಾಡಿನ ಅತ್ಯಂತ ಉತ್ತರದ ಶಾಲಿಯಾ ಕ್ಷೇತ್ರವಾದ ಪಣಂಬೂರು (ಮಂಗಳೂರು) ಕ್ಷೇತ್ರದಲ್ಲಿ ಧೂಮವತಿ ಆರಾಧನೆಗೊಳ್ಳುತ್ತಾಳೆ. ಪದ್ಮಶಾಲಿಯರೂ ಧೂಮವತಿಯನ್ನು ಕುಲದೈವದಂತೆ ಆರಾಧಿಸುತ್ತಾರೆ.

ಊ) ಶಾಲಿಯರ ಉಪನಾಮವು ಚೆಟ್ಟಿಯಾರ್, ಪದ್ಮಶಾಲಿಯರ ಉಪನಾಮವು ಶೆಟ್ಟಿಗಾರ್. ಪದ್ಮಶಾಲಿಯರ ಮೂಲ ಉಪನಾಮವು ಚೆಟ್ಟಿಯಾರೇ ಆಗಿರಬೇಕು. ಈ ಪ್ರದೇಶದ ಇತರ 'ಶೆಟ್ಟಿ' ಉಪನಾಮ ವರ್ಗಗಳಿಂದ ಪ್ರಭಾವಿತರಾಗಿ ಇವರು ಶೆಟ್ಟಿಗಾರ ಎಂದು ಗುರುತಿಸಿಕೊಂಡಿರಬಹುದು.

ಎ) ತಮಿಳುನಾಡಿಲ್ಲಿ ರಾಜಕೀಯ, ಸಾಮಾಜಿಕ, ಪ್ರಾಕೃತಿಕ ಕಾರಣಗಳಿಂದಾಗಿ ಒಂದೊಂದೇ ನೇಕಾರರ ಗುಂಪು ವ್ಯಾಪಾರಕ್ಕಾಗಿ ಪಶ್ಚಿಮ ಕರಾವಳಿಯನ್ನು ಸೇರತೊಡಗಿತು. ಇಂತಹ ಒಂದು ಗುಂಪು ತುಳುನಾಡಿನ ಪದ್ಮಶಾಲಿಗಳು. ದೋಣಿಗಳಲ್ಲಿ ಕುಳಿತು ಸಮುದ್ರ ಮಾರ್ಗವಾಗಿ ವ್ಯಾಪಾರ ಮಾಡುತ್ತಾ ಇವರು ತುಳುನಾಡಿನ ಕರಾವಳಿ ಪ್ರದೇಶಕ್ಕೆ ಬಂದು ಇಳಿದಿರಬಹುದು. ಇವರು ಇಲ್ಲಿಗೆ ಬಂದು ಹಲವು ವರ್ಷಗಳ ನಂತರ ಇನ್ನೊಂದು ನೇಕಾರರ ಗುಂಪು ಕೇರಳದ ಕಡೆಗೆ ಬಂದಿತು. ಇವೆರಡಕ್ಕೂ ಮೂಲ ಒಂದೇ ನೇಕಾರ ಗುಂಪಾಗಿರಬಹುದು. ಇವೆರಡೂ 'ವೀರಬಾಹು'ವನ್ನು ಆರಾಧಿಸುವ ಕೈಕೋಳರ್ ಎನ್ನುವ ನೇಕಾರ ವರ್ಗವೂ ಆಗಿರುವ ಸಾಧ್ಯತೆಯಿದೆ.

ಏ) ಶಾಲಿಯಾ ಸಮುದಾಯದಲ್ಲಿರುವಂತೆ ಇವರ ಸಮುದಾಯದಲ್ಲೂ ಯುವಕನಾದವನು ದೇವಾಲಯದ ಸದಸ್ಯನಾಗಿ ನಿಶ್ಚಿತ ವಂತಿಗೆಯನ್ನು ಕಡ್ಡಾಯವಾಗಿ ಸಲ್ಲಿಸಬೇಕು. ಆದರೆ ಶಾಲಿಯರಂತೆ ಯುವಕನನ್ನಾಗಿಸುವ ಕ್ರಮವಿಲ್ಲ. ಆದರೆ ಉಪವೀತಧಾರಣೆ ಇತ್ತು.

ಐ) ಶಾಲಿಯರಿಗೆ ಇರುವಂತೆ ಇವರಿಗೂ ೧೪ ಗೋತ್ರಗಳಿವೆ. ಆದರೆ ಗೋತ್ರಗಳ ಹೆಸರುಗಳು ವ್ಯತ್ಯಾಸವಾಗಿವೆ.

ಒ) ಶಾಲಿಯರಂತೆ ಇವರು ಮಕ್ಕಳಕಟ್ಟು - ಅಳಿಯಕಟ್ಟು ಎರಡನ್ನೂ ರೂಢಿಸಿಕೊಂಡಿದ್ದಾರೆ. ಮಕ್ಕಳಿಗೆ ಶಾಲಿಯರಂತೇ ತಾಯಿಯ ಗೋತ್ರವೇ ಮುಂದುವರೆಯುತ್ತದೆ.

ಓ) ಶಾಲಿಯಾ ಸಮುದಾಯದಲ್ಲಿರುವಂತೆ ಇವರು ವಾಸಿಸುವ ಕೇರಿಗೆ 'ತೆರು' ಎಂಬ ಹೆಸರು ಇತ್ತು. ಆದರೆ ಕ್ರಮೇಣ ಇದು ಶಿಥಿಲಗೊಂಡಿರಬಹುದು. ಸುರತ್ಕಲ್‌ನ ವೀರಭದ್ರ ದೇವಾಲಯವಿರುವ ಕ್ಷೇತ್ರ ಪರಿಸರವನ್ನು ಮಾತ್ರ ಈಗ 'ತೆರು' ಎನ್ನಲಾಗಿದೆ. ಬಹ್ಮಾವರದಲ್ಲಿ 'ಸಾಲಿಕೇರಿ'ಯಿದೆ. ಕೇರಿ ಎಂದರೂ ತೆರು ಎಂದೇ ಅರ್ಥ.

ಇನ್ನೂ ಸೂಕ್ಷ್ಮವಾಗಿ ನೋಡಿದರೆ ಇನ್ನಷ್ಟು ಸಮಾನವಾದ ಅಂಶಗಳು ಬೆಳಕಿಗೆ ಬರಬಹುದು. ಆಚರಣೆಗಳಲ್ಲಿ ಪದ್ಮಶಾಲೀಯರು ತುಳುನಾಡಿನ ಪ್ರಭಾವಕ್ಕೆ ಹೆಚ್ಚು ಒಳಗಾಗಿರುವುದರಿಂದ ಅದರಲ್ಲಿ ಇವರ ಮೂಲವನ್ನು ಹುಡುಕಲು ಸಾಧ್ಯವಾಗುವುದಿಲ್ಲ. ಆರಾಧನೆ, ಸಮೂಹಜೀವನ, ವೃತ್ತಿ ಇವುಗಳ ಹಿನ್ನೆಲೆಯಿಂದ ಅವುಗಳ ಪತ್ತೆ ಹಚ್ಚಬಹುದಷ್ಟೇ. ವೃತ್ತಿಗೆ ಬಳಸುವ ಸಾಮಗ್ರಿಗಳ ಬಹಳಷ್ಟು ಹೆಸರುಗಳು ಸಮಾನವಾಗಿರುವುದು ಇನ್ನೊಂದು ಗಮನಾರ್ಹ ಅಂಶವೆಂದು ಹೇಳಲುಬಹುದು. (ಉದಾ: ಅಚ್ಚೋಡಿ, ಬೀದ್, ತೋದ್ ಈ ಮೊದಲಾದ ಪದಗಳು)

**೨. ಶಾಲಿಯರು ದೇವಾಂಗರೇ?**

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶ ಶಾಲಿಯರಿಗೂ ದೇವಾಂಗರಿಗೂ ಸಮಾನವಾದ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು.

ಅ) ಎಡಂಗ ಬಲಂಗ ವಿಭಾಗ :- ದೇವಾಂಗರು ಎಡಂಗೈಯವರೆಂದೂ, ಪದ್ಮಶಾಲಿಯರು ಬಲಂಗೈಯವರೆಂದೂ ಹೇಳಲಾಗುತ್ತದೆ. ಕಾಸರಗೋಡಿನ ಶಾಲಿಯರು ಎಡಂಗಶಾಲಿಯರಾದುದರಿಂದ ಇವರು ದೇವಾಂಗದವರಾಗಿರಬಹುದು ಎಂದು ಊಹಿಸಬಹುದು.

ಆ) ಪದ್ಮಶಾಲೀಯರು ಮಾರ್ಕಂಡೇಯನ ಆರಾಧಕರು. ಶಾಲಿಯರು ಹಾಗೂ ದೇವಾಂಗರು ದೇವೀ ಆರಾಧಕರು.

ಇ) ದೇವಾಂಗರಲ್ಲಿ ಪುರುಷನು ಉಪವೀತಧಾರಣೆ ಮಾಡುತ್ತಾನೆ. ಶಾಲಿಯರ ಎಡಂಗಾಚಾರವೂ ಅದೇ ಹಿನ್ನೆಲೆಯಿಂದ ಬಂದುದಾಗಿರಬೇಕು.

ಈ) ದೇವಾಂಗ ಪುರಾಣದಲ್ಲಿ 'ದೇವಲ'ನ ಒಂದು ಅವತಾರ ದೇವಶಾಲಿ. ಇಲ್ಲಿನ 'ಶಾಲಿ' ಪದವು ದೇವಾಂಗ ಪದದ ಇನ್ನೊಂದು ರೂಪವೆನ್ನಬಹುದು. ಆದುದರಿಂದ ಶಾಲಿಯು 'ಶಾಲಿ' ಎಂಬ ಜಾತಿ ಹೆಸರನ್ನಿಟ್ಟುಕೊಂಡ ದೇವಾಂಗದವರಾಗಿರಬಹುದು.

ಉ) ದೇವಾಂಗರು ಚೌಡೇಶ್ವರಿಯ ಆರಾಧಕರು. ಶಾಲಿಯರ ಹೆಚ್ಚಿನ ಕ್ಷೇತ್ರಗಳಲ್ಲಿ ಉಪದೈವವಾಗಿ ಚಾಮುಂಡಿಯ ಆರಾಧನೆ ನಡೆಯುತ್ತದೆ. ಚಾಮುಂಡಿಯೇ 'ಚೌಡಿ' ಯಾಗಿರುವ ಹಿನ್ನೆಲೆಯಿಂದಲೇ ಆ ಆರಾಧನೆಯು ಬಂದಿರಬಹುದು.

ಊ) ಶಾಲಿಯರಿಗೆ ದೇವಾಂಗರೊಂದಿಗೆ ಒಂದು ರೀತಿಯ ಭಾವನಾತ್ಮಕ ಸಂಬಂಧವಿರುವಂತೆ ಕಂಡು ಬರುತ್ತದೆ. ಇವರು ತಮ್ಮನ್ನು 'ದೇವಾಂಗರು' ಎಂದು ಗುರುತಿಸಿಕೊಳ್ಳುವುದಕ್ಕೆ ಬಯಸುವುದರಲ್ಲಿ ನಾವಿದನ್ನು ಕಾಣಬಹುದು. ಸೂಕ್ಷ್ಮವಾದ ಅಧ್ಯಯನಕ್ಕೆ ಈ ವಿಷಯವನ್ನು ಒಳಪಡಿಸಿದರೆ ಇನ್ನಷ್ಟು ಅಂಶಗಳು ಬೆಳಕಿಗೆ ಬರಬಹುದು ಅನ್ನಿಸುತ್ತದೆ.

**೩. ಶಾಲಿಯರ ಮೂಲ ಕೈಕೋಳನ್‌ರೇ?**

ಅ) ಕೈಕೋಳನ್ ಎನ್ನುವ ಪದದ ಅರ್ಥವು ಕೈಯಲ್ಲಿ ಕೋಲನ್ನು ಹಿಡಿದವರು ಎಂದು. ಇವರನ್ನು 'ಚೆಂಗುಂಗದವರ್' ಎಂದೂ ಹೇಳುತ್ತಾರೆ. ಚೆಂಗುಂದವರ್ ಎಂದರೆ ಕೆಂಪು ದಂಡವನ್ನು ಹಿಡಿದವರು ಎಂದು ಅರ್ಥ. ಈಟಿ, ಶಲ್ಯ ಈ ಮೊದಲಾದ ಅರ್ಥಗಳೂ ಇದಕ್ಕಿದೆ ಈ ಹಿನ್ನಲೆಯಿಂದ ಶಾಲಿಯರನ್ನು ಶಲ್ಯ ಈಟಿ ಅಥವಾ ಭರ್ಚಿಯನ್ನು ಹಿಡಿದವರು ಎಂದು ಹೇಳಬಹುದು. ಶಲ್ಯ ಎಂದರೂ ಕೈಕೋಳನ್ ಎಂದರೂ ಒಂದೇ. ಆದುದರಿಂದ ಇವೆರಡೂ ಒಂದೇ ವರ್ಗದ ನೇಕಾರರಿರಬಹುದು.

ಆ) ಶಾಲಿಯಾ ಸಮುದಾಯವು 'ನಗರ'ಗಳಾಗಿ ವಿಭಜಿಸಲ್ಪಟ್ಟಂತೆ ಕೈಕೋಳನ್‌ರೂ ತಮಿಳುನಾಡಿನಲ್ಲಿ ೭೨ ನಾಡುಗಳಾಗಿ ವಿಂಗಡಿಸಲ್ಪಟ್ಟಿದ್ದಾರೆ.

ಇ) ಶಾಲಿಯರ ೯೬ ನಗರಗಳು ಉತ್ತರಭಾಗ ಮತ್ತು ದಕ್ಷಿಣ ಭಾಗದಲ್ಲಿ ಎರಡು ಗುಂಪುಗಳಾದಂತೆ, ಕೈಕೋಳನ್‌ರ ೭೨ ನಾಡುಗಳೂ ವಿಭಜಿತವಾಗಿವೆ.

ಈ) ಕೇರಳದ ಶಾಲಿಯರಲ್ಲಿ ಚರಡ್‌ಕಟ್ಟಲ್ ಇರುವಂತೆ, ಕೈಕೋಳನ್‌ರಲ್ಲೂ ಹುಡುಗಿಯರಿಗೆ ಆಚಾರವರ್ಗದವರಿಂದ ತಾಲಿಕಟ್ಟಿಸುವ ಸಂಪ್ರದಾಯವಿತ್ತು ಎನ್ನಲಾಗಿದೆ.

ಉ) ಶಾಲಿಯರು ನೇಕಾರಿಕೆಗೆ ಬಳಸುವ ವಿಧಾನವು ಹೆಚ್ಚು ಕಡಿಮ ತಮಿಳುನಾಡಿನ ಕೈಕೋಳನರು ಬಳಸುವ ವಿಧಾನವೇ ಆಗಿದೆ. (ಹಾಸು ಬೀಸುವುದು, ಒಣಗಿಸುವುದು ಮುಂತಾದವು)

ಊ) 'ಚಿರಕ್ಕಲ್ ಪ್ರದೇಶದಿಂದ ರಾಜಕೋಪಕ್ಕೆ ಗುರಿಯಾಗಿ ಹೊರಟ ಶಾಲಿಯರು ಶಾಸ್ತಾವನ್ನು ಧ್ಯಾನಿಸುತ್ತಾ ಉತ್ತರಕ್ಕೆ ಬಂದರು' ಎನ್ನುವ ಮಾತಿನಿಂದ ಯುದ್ಧವೀರನಾದ ಶಾಸ್ತಾವು ಇವರ ಆರಾಧ್ಯದೇವನೆಂದು ತಿಳಿದು ಬರುತ್ತದೆ. ಪದ್ಮಶಾಲಿಯರ ವೀರಭದ್ರ, ಕೈಕೋಳನ್‌ರ ವೀರಬಾಹು, ಶಾಲಿಯರ ಶಾಸ್ತಾವು ಈ ಮೂವರೂ ಈಶ್ವರಾಂಶ ಸಂಭೂತರು. ಆದುದರಿಂದ ಮೂಲತಃ ಒಂದಾದ ಈ ಸಮುದಾಯ ಈ ರೀತಿಯಲ್ಲಿ ಒಂದೇ ಅಂಶದಿಂದ ಜನಿಸಿದ ದೇವತೆಗಳನ್ನು

ವಿಭಿನ್ನ ಪ್ರದೇಶಗಳಲ್ಲಿ ಆರಾಧಿಸುತ್ತಿದ್ದಿರಬಹುದು. ಶಾಲಿಯರ ಮೂಲ ತಮಿಳುನಾಡು ಎಂದೂ, ಕೈಕೋಳನರ ಜತೆಗೆ ಇವರಿಗೆ ಸಂಬಂಧವಿದೆಯೆಂದೂ ಈ ಮೂಲಕ ತಿಳಿದುಕೊಳ್ಳಬಹುದು.

**ಇವೆಲ್ಲಾ ಅಂಶಗಳಿಂದ ತಿಳಿದು ಬರುವುದೇನೆಂದರೆ :-**

೧. ಶಾಲಿಯರು ಮೂಲತಃ ಕೇರಳದವರಲ್ಲ.

೨. ಇವರು ಬಹು ಅಂಶ ತಮಿಳುನಾಡಿನ ಪದ್ಮಶಾಲಿ ಅಥವಾ ಕೈಕೋಳನ್ ಎನ್ನುವ ನೇಕಾರ ವರ್ಗಕ್ಕೆ ಸೇರಿದವರು.

ಕಾಸರಗೋಡಿನ ಶಾಲಿಯರು ಕೆಲವು ವರ್ಷಗಳ ಹಿಂದೆ ತಮ್ಮನ್ನು 'ಎಡನ್ನ ಕುವಿನ್ನ' ಅಥವಾ 'ಕುವಿಂದ' ಎಂದು ಗುರುತಿಸಲ್ಪಡುತ್ತಿದ್ದರು. 'ಎಡಂಗ ಕುವಿಂದ ಮಹಾಸಭಾ' ಎಂಬ ಒಂದು ಸಂಘವೇ ಇತ್ತು. ಕುವಿನ್ನ ಮತ್ತು ಕುವಿಂದ ಪದಗಳು 'ಕುರುವಿನ ಶೆಟ್ಟಿ' ಎಂಬ ನೇಕಾರ ವರ್ಗವನ್ನು ಗುರುತಿಸುವಂತಹವುಗಳು. ಆದುದರಿಂದ ಇವರು ಕುರುವಿನ ಶೆಟ್ಟಿಯ ವಿಭಾಗದವರಿಂದ ಬೇರ್ಪಟ್ಟಿರುವ ಸಾಧ್ಯತೆಯೂ ಇದೆ ಎನ್ನುವುದನ್ನು ಅಲ್ಲಗೆಳೆಯಲಾಗುವುದಿಲ್ಲ.

**೪. ಶಾಲಿಯರು ಕ್ಷತ್ರಿಯರೇ?**

ಶಾಲಿಯಾ ಪದದ ಮೂಲರೂಪ 'ಶಲ್ಯ' ಎಂದಾದಾಗ ಇವರು ಕ್ಷತ್ರಿಯರಾಗಿರುವ ಸಾಧ್ಯತೆಗಳಿವೆ. ಕೆಲವು ಆಧಾರಗಳೂ ಇದನ್ನು ಪುಷ್ಟೀಕರಿಸುತ್ತದೆ. ಇವರು ಹಿಂದೆ ರಾಜರ ಸೈನ್ಯದಲ್ಲಿ ಶಲ್ಯ ಅಥವಾ ಈಟಿಯನ್ನು ಹಿಡಿದು ಯುದ್ಧ ಮಾಡುವುದರಲ್ಲಿ ಪ್ರಾವೀಣ್ಯತೆಯನ್ನು ಪಡೆದುಕೊಂಡಂತಹ ಕ್ಷತ್ರಿಯರಾಗಿರಬಹುದು. ಯುದ್ಧವಿಲ್ಲದ ಕಾಲದಲ್ಲಿ ಜೀವನೋಪಾಯಕ್ಕಾಗಿ ನೇಕಾರ ವೃತ್ತಿಯನ್ನು ಅವಲಂಬಿಸಿರುವ ಸಾಧ್ಯತೆ ಇದೆ. ಹಿಂದಿನ ಕಾಲದಲ್ಲಿ ನೇಯ್ಗೆಯು ಗೌರವಾನ್ವಿತ ವೃತ್ತಿ ಎಂದು ಪರಿಗಣಿಸಲ್ಪಟ್ಟಿತ್ತು. (ಕೆಲವು ಬ್ರಾಹ್ಮಣರೂ ತಮಗೆ ಬೇಕಾದ ಬಟ್ಟೆಗಳನ್ನು ನೇಯುತ್ತಿದ್ದರು). ತಾವು ಉತ್ಪಾದಿಸುವ ಬಟ್ಟೆಯನ್ನು ಮಾರಾಟ ಮಾಡುವ ಕಾಲದಲ್ಲಿ ವ್ಯಾಪಾರಿಗಳಿಗೆ ಸಾಮಾನ್ಯವಾಗಿ ಅನ್ವಯಿಸುವ 'ವ್ಯಾಪಾರಿ' - 'ವರ್ತಕ' ಎನ್ನುವ ಅರ್ಥದ ಶೆಟ್ಟಿ ಅಥವಾ ಚೆಟ್ಟಿ, ಉಪನಾಮವು ಇವರ ಹೆಸರಿನೊಂದಿಗೆ ಸೇರಿರುವ ಸಾಧ್ಯತೆಯಿದೆ. ಇತ್ತೀಚಿನವರೆಗೂ ಕೆಲವು ಪ್ರದೇಶಗಳ ರಾಜರ ಸೈನ್ಯದಲ್ಲಿ ಯುದ್ಧ ಸಂದರ್ಭದಲ್ಲಿ ಇವರು ಭಾಗವಹಿಸಿದ್ದು ಇವರ ಕ್ಷತ್ರಿಯ ಗುಣವಾದ ಯುದ್ಧಾಸಕ್ತಿಗೆ ಸಾಕ್ಷಿಯಾಗಿದೆ. ತಮಿಳುನಾಡಿನ ಕೈಕೋಳರ್ ಎನ್ನುವ ನೇಕಾರ ವರ್ಗಕ್ಕೆ ಆ ಹೆಸರು "ಕೈಯಲ್ಲಿ ಕೋಲನ್ನು ಹಿಡಿದು ವೀರಬಾಹುವಿನ ಜತೆಗೂಡಿಕೊಂಡು ಯುದ್ಧ ಮಾಡಿದ ಕಾರಣದಿಂದ ಬಂದಿದೆ" ಎಂದು ಹೇಳುವುದೂ ಅವರ ಆರಾಧ್ಯದೈವವಾಗಿ 'ವೀರಬಾಹು' ಆಗಿರುವುದೂ ನೇಕಾರ ವರ್ಗವು ಕ್ಷತ್ರಿಯ ಮೂಲದವರು ಎನ್ನುವುದನ್ನು ಸೂಚಿಸುತ್ತದೆ.

ವೀರಭದ್ರ, ಪಡವೀರನ್, ಶಾಸ್ತಾವ್, ಮೂವಾಳಂಕುಳಿ ಭಗವತಿ ಮುಂತಾದ ಯುದ್ಧ ದೇವತೆಗಳು ಇವರ ಆರಾಧನಾ ದೈವಗಳಾಗಿರುವುದೂ ಈ ವಿಷಯಕ್ಕೇ ಒತ್ತು ಕೊಡುವಂತೆ ಮಾಡುತ್ತದೆ. 'ಶಾಲಿಯಾ ಪೋರಾಟ್' ಅಂತೂ ಶಾಲಿಯರು ಮೂವಾಳಿ ಕುಟಿ ಚಾಮುಂಡಿಯೊಂದಿಗೆ ಸೇರಿಕೊಂಡು ಯುದ್ಧ ಮಾಡಿದುದರ ಪುನರ್ ಸ್ಮರಣೆಯಾಗಿಯೇ ಆಚರಿಸಲಾಗುತ್ತದೆ. ಮಾಡಾಡ್ ತೆರುವಿನಲ್ಲಿ 'ಪಡಯೋಟ್ಟಂ' ಎನ್ನುವ ಒಂದು ಜಾನಪದ ಕಲೆಯೂ ಇವರು ನಡೆಸಿದ ಯುದ್ಧವೊಂದನ್ನು ಪುನರ್ ಸ್ಮರಿಸುವ ಕಲೆಯಾಗಿದೆ. ಬಡಿಗೆಯೊಂದಿಗೆ ಓಡುವ ಶಾಲಿಯರನ್ನು ಈ ಕಲೆಯಲ್ಲಿ ಕಾಣಬಹುದು.

ನೇಕಾರರಲ್ಲಿ 'ಸೇವಿಯರ್' ಎಂಬ ಹೆಸರಿನ ಸಮುದಾಯವಿರುವುದೂ, ನೇಕಾರರು ಸೈನಿಕರಾಗಿದ್ದುದನ್ನು ಸೃಷ್ಟಿಪಡಿಸುತ್ತದೆ. 'ಸಮಯ ಮೂವರು' ಎನ್ನುವ ನೇಕಾರ ವರ್ಗದವರು ಭಾವನಾಋಷಿಯೊಂದಿಗೆ ಸೇರಿಕೊಂಡು 'ಕಾಲವಾಸನ'ನೆನ್ನುವ ರಾಕ್ಷಸನ ಜತೆಗೆ ಹೋರಾಡಿದವರು ಎಂದು ಹೇಳುತ್ತಾರೆ.

ಕಾಸರಗೋಡಿನ ಶಾಲಿಯರು ಕೋಲತ್ತಿರಿಯ ಸೈನ್ಯದೊಂದಿಗೆ ಚಂದ್ರಗಿರಿ ಪ್ರದೇಶಕ್ಕೆ ಬಂದವರು ಎನ್ನಲಾಗಿದೆ. ಇಲ್ಲಿನ ಆರಾಧ್ಯ ದೈವವಾದ ಶಾಸ್ತಾರನಂತೂ ಯುದ್ಧ ದೇವತೆ ಎಂದೇ ಕರೆಯಲ್ಪಡುತ್ತಾನೆ. ಈ ಎಲ್ಲಾ ಕಾರಣಗಳಿಂದ ಶಾಲಿಯರು ಕ್ಷತ್ರಿಯರಾಗಿರುವ ಸಾಧ್ಯತೆಗಳಿವೆ. ಕ್ರಮೇಣ ನೇಕಾರ ವೃತ್ತಿಗೆ ಅಂಟಿಕೊಂಡ ಮೇಲೆ ಶಲ್ಯ ಎಂಬ ಪದವು ಶಾಲಿ, ಸಾಲೆ, ಶಾಲೆ ಎಂದು ಪರಿವರ್ತಿತವಾಗಿ ಸಕುಲ, ಪಟ್ಟೆ, ಸಮಯ, ಪದ್ಮ ಈ ಮೊದಲಾದ ವಿಶೇಷಣಗಳು ಇದಕ್ಕೆ ಸೇರಿಕೊಂಡಿರುವ ಸಾಧ್ಯತೆಗಳು ಇವೆ.

ವ್ಯಾಪಾರ ನಿಮಿತ್ತವಾಗಿಯೋ, ರಾಜರ ರಾಜ್ಯವಿಸ್ತಾರದ ಸಂದರ್ಭದಲ್ಲಿ ಯುದ್ಧದಲ್ಲಿ ಭಾಗವಹಿಸಲಿಕ್ಕಾಗಿಯೋ ಬೇರೆ ಬೇರೆಡೆಗೆ ವಲಸೆ ಬರಬೇಕಾಗಿ ಬಂದ ಇವರು ಕೇರಳದ ಕಡೆಗೂ ಬಂದಿರಬೇಕು. ಹಾಗೇ ಕಾಸರಗೋಡು ಹಾಗೂ ದಕ್ಷಿಣಕನ್ನಡ ಭಾಗಕ್ಕೂ ಬಂದಿರುವ ಸಾಧ್ಯತೆಗಳು ಇವೆ ಎನ್ನಬಹುದು.

# ಅಧ್ಯಾಯ – ೩

## ಶಾಲಿಯಾ/ದೇವಾಂಗರ ಸಾಂಸ್ಕೃತಿಕ ಜೀವನದ ಅಂಗವಾಗಿ "ತೆರು ಹಾಗೂ ನಗರಂ ವ್ಯವಸ್ಥೆ"

೧) ತೆರು ಹಾಗೂ ನಗರಂ ವ್ಯವಸ್ಥೆಯ ಉದ್ಭವ

೨) ನಿಟಿಲ್ ವಿರಿಕ್ಕಲ್ ಅಥವಾ ನಗರಂ ಚೇರಲ್

೩) ಪಟ್ಟುವಂನಿಂದ ಪಣಂಬೂರುವರೆಗಿನ ನಗರಗಳು

## ಅಧ್ಯಾಯ ೩

## ಶಾಲಿಯಾ : ದೇವಾಂಗರ ಸಾಂಸ್ಕೃತಿಕ ಜೀವನದ ಅಂಗವಾಗಿ ತೆರು ಹಾಗೂ ನಗರ ವ್ಯವಸ್ಥೆ

### ೧. ತೆರು ಹಾಗೂ ನಗರ ವ್ಯವಸ್ಥೆಯ ಉದ್ಭವ

ಮನುಷ್ಯನು ಸಂಘ ಜೀವಿ. ತಮ್ಮ ತಮ್ಮೊಳಗೆ ಭಾವನಾತ್ಮಕ ಸಂಬಂಧವನ್ನು ಬೆಳೆಸಿಕೊಳ್ಳುವ ಆತನು ತನ್ನವರಿಂದ ದೂರವಾಗಿರಲು ಬಯಸುವುದಿಲ್ಲ. ತನ್ನ ಭಾಷೆ ಮತ್ತು ಜಾತಿಯ ಅಭಿಮಾನ ಅವನನ್ನು ತನ್ನ ಬಂಧುಗಳಿಂದ ದೂರ ನಿಲ್ಲದಂತೆ ತಡೆಯುತ್ತದೆ. ಸಾಧ್ಯವಾದಷ್ಟೂ ತನ್ನವರೊಂದಿಗೆ ಇರಲು ಆತ ಇಷ್ಟ ಪಡುತ್ತಾನೆ. ಈ ಮನುಷ್ಯ ಮನೋಭಾವ ಒಂದೇ ಜಾತಿಯವರು ಸಮೂಹವಾಗಿ ಜೀವಿಸುವ ಪ್ರದೇಶಗಳು ಹುಟ್ಟಿಕೊಳ್ಳಲು ಮೂಲಕಾರಣವಾಯಿತು. ಜೀವನೋಪಾಯಕ್ಕಾಗಿ ಕೆಲವೊಮ್ಮೆ ಆತ ತನ್ನವರಿಂದ ದೂರಕ್ಕೆ ಹೋದರೂ ಆತನ ಮನಸ್ಸಿನೊಳಗೆ ತನ್ನವರಿಂದ ದೂರವಾಗಿದ್ದೇನಲ್ಲಾ ಎನ್ನುವ ನೋವು ಕಾಡದೇ ಇರುವುದಿಲ್ಲ. ವೃದ್ಧಾಪ್ಯ ಸಮೀಪಿಸುವಾಗಲಂತೂ ಆ ನೆನಪು ಅವನಲ್ಲಿ ಇನ್ನಷ್ಟು ಗಾಢವಾಗುತ್ತದೆ. ತನ್ನವರ ಮಧ್ಯೆ ಒಂದು ಸುರಕ್ಷತಾ ಭಾವವೂ ಅವನಿಗಿದ್ದೇ ಇರುತ್ತದೆ. ಪರಸ್ಪರ ದ್ವೇಷ ಅಸೂಯೆ ಸಣ್ಣ ಪುಟ್ಟ ಜಗಳಗಳು ಮಧ್ಯದಲ್ಲಿ ಹುಟ್ಟಿಕೊಂಡರೂ, ಅಂತರಂಗದೊಳಗೆ ಒಂದು ರೀತಿಯ ಪ್ರೀತಿ ಭಾವ ಜಾತಿ ಬಂಧುಗಳನ್ನು ಪರಸ್ಪರ ಬಂಧಿಸಿರುತ್ತದೆ. ಇದೆಲ್ಲವೂ ಒಂದೇ ಜಾತಿಯವರು ಒಂದು ಕಡೆ ಸಮೂಹವಾಗಿ ಜೀವಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಕೆಳವರ್ಗದವರಲ್ಲಿ ಒಂದೇ ಜಾತಿಯವರು ಸಮೂಹವಾಗಿ ತಮ್ಮದೇ ಕೇರಿಗಳನ್ನು ಕಟ್ಟಿಕೊಂಡು ಜೀವಿಸುವುದರ ಹಿಂದೆ ಇನ್ನೊಂದು ಪ್ರಮುಖ ಕಾರಣವಿದೆ. ಮೇಲುವರ್ಗದವರ ಮಧ್ಯೆ ಜೀವಿಸುವಂತಹ ಸಂದರ್ಭದಲ್ಲಿ ಜಾತಿಯಿಂದ ಕೆಳವರ್ಗದವರು ಎಂಬ ಕಾರಣಕ್ಕಾಗಿ ಸಹಜವಾಗಿಯೇ ಹಲವು ರೀತಿಯ ಸಾಮಾಜಿಕ ಮತ್ತು ಮಾನಸಿಕ ಶೋಷಣೆಗಳಿಗೆ ಅವರು ತುತ್ತಾಗಬೇಕಾಗುತ್ತದೆ. ಇದು ಅವರಿಗೆ ಒಂದು ರೀತಿಯ ನೋವನ್ನು ಕೊಡುತ್ತದೆ. ಹೆಚ್ಚಿನವರು ಬಡವರೇ ಆಗಿರುವುದರಿಂದ ಅವರಿಗೆ ಅವರದೇ ಆದ ನೋವುಗಳೂ ಸಮಸ್ಯೆಗಳೂ ಇರುತ್ತವೆ. ಇದಾವುದೂ ಮೇಲ್ವರ್ಗದವರಿಗೆ ಅರ್ಥವಾಗುವಂತಹುದ್ದಲ್ಲ. ಆದುದರಿಂದ ವರ್ಗೀಯ ಶೋಷಣೆಯಿಂದ ದೂರವಾಗುವ ಉದ್ದೇಶ ಮಾತ್ರವಲ್ಲ, "ಅವರ ಕೈಕೆಳಗೆ ದುಡಿಯುವುದಕ್ಕಿಂತಲೂ ಸ್ವತಂತ್ರವಾಗಿರುವುದೇ ಮಿಗಿಲು" ಎಂಬ ಭಾವನೆ ಈ ರೀತಿ ಒಂದೇ ಜಾತಿಯವರು ಸಮೂಹವಾಗಿ ಜೀವಿಸಲು ಕಾರಣವಾಗುತ್ತದೆ.

ಈ ರೀತಿ ಬೀದಿ ಅಥವಾ ಕೇರಿಗಳಲ್ಲಿ ವಾಸಿಸುವವರು ಸಾಮಾನ್ಯವಾಗಿ ಒಂದೇ ವೃತ್ತಿಯನ್ನು ಅವಲಂಬಿಸಿದವರು. ವೃತ್ತಿಯನ್ನು ಕೈಗೊಳ್ಳುವಾಗ ಉಂಟಾಗುವ ಸಮಸ್ಯೆಗಳು ಈ

ರೀತಿ ಸಮಾನ ವೃತ್ತಿಯನ್ನವಲಂಬಿಸಿದವರು ಜತೆಯಾಗಿ ಜೀವಿಸುವಾಗ ಕಡಿಮೆಯಾಗುತ್ತದೆ. ಪರಸ್ಪರ ಸಹಕಾರದಿಂದ ಬಹುಬೇಗ ಪರಿಹಾರವನ್ನು ಕಂಡುಕೊಳ್ಳಲಾಗುತ್ತದೆ. ನೇಯ್ಗೆಯಂತಹ ವೃತ್ತಿಯಲ್ಲಂತೂ ಪರಸ್ಪರ ಸಹಕಾರವಿಲ್ಲದೆ ವೃತ್ತಿ ಮುನ್ನಡೆಯುವುದೇ ಕಷ್ಟವಾಗುತ್ತದೆ. ನೇಕಾರ ಸಮುದಾಯದವರು ಒಂದು ಪ್ರದೇಶದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಜೀವಿಸುವುದಿಲ್ಲ. ಸಾಮೂಹಿಕವಾಗಿ ಜೀವಿಸುವುದನ್ನೇ ಕಾಣಬಹುದು. ದಕ್ಷಿಣ ಭಾರತದ ಉದ್ದಗಲದಲ್ಲಿ ಹರಡಿಕೊಂಡಿರುವ ನೇಕಾರರೆಲ್ಲರೂ ಎಲ್ಲಿ ಹೋದರೂ ತಮ್ಮದೇ ಆದ ಕೇರಿಗಳನ್ನು ಕಟ್ಟಿಕೊಂಡು ಜೀವಿಸುತ್ತಾರೆ. ಆಂಧ್ರ, ಕರ್ನಾಟಕ, ತಮಿಳುನಾಡು ಪ್ರದೇಶಗಳಲ್ಲಿ ಇವರು ಸಾಮೂಹಿಕವಾಗಿರುವ ಪ್ರದೇಶಗಳನ್ನು ಕಾಣಬಹುದು. ತಮಿಳುನಾಡಿನಲ್ಲಿ ಮತ್ತು ಕೇರಳದಲ್ಲಿ ಇವರು ವಾಸಿಸುವ ಬೀದಿಗಳನ್ನು "ತೆರು" ಎಂದು ಕರೆಯುತ್ತಾರೆ. ಕರ್ನಾಟಕ ಹಾಗೂ ಆಂಧ್ರದಲ್ಲಿ "ಕೇರಿ" ಅಥವಾ "ಬೀದಿ" ಎನ್ನುತ್ತಾರೆ. ನೇಕಾರರ ಬೀದಿಗಳಲ್ಲಿ ಸಾಮಾನ್ಯವಾಗಿ ಹತ್ತು ಮನೆಗಳಿಂದ ಆರಂಭಗೊಂಡು ಮುನ್ನೂರು ಮನೆಗಳವರೆಗೆ ಇರುವುದೂ ಇದೆ. ಪ್ರತೀ ಬೀದಿಗಳಲ್ಲೂ ಅವರದೇ ಆದ ಕುಲದೇವತೆಯ ಆರಾಧನಾ ಸ್ಥಳಗಳಿರುತ್ತವೆ. ಕೆಲವೊಮ್ಮೆ ಒಂದೇ ಊರಿನಲ್ಲಿ ಬೇರೆ ಬೇರೆಡೆ ಎರಡು ಮೂರು ತೆರುಗಳಿರುವುದೂ ಇದೆ. ಯಾವುದಾದರೂ ಒಂದು ತೆರುವಿನಲ್ಲಿ ಮಾತ್ರ ಆರಾಧನಾ ಕೇಂದ್ರವಿರುತ್ತದೆ. ಇದನ್ನು "ಕ್ಷೇತ್ರಂ", "ತಾನ", "ಕಟಿಗಂ", "ಕಾವು" ಎಂದೆಲ್ಲಾ ಕರೆಯುತ್ತಾರೆ. ಆ ಪ್ರದೇಶದ ಇಡೀ ಸಮುದಾಯವನ್ನು ನಿಯಂತ್ರಿಸುವ ಅಧಿಕಾರಿಕ ಕೇಂದ್ರಗಳಾಗಿ ಸಂಘಟನಾ ಘಟಕವಾದ "ನಗರ" (ಸಭೆ)ಗಳು ಆಯಾ ಕ್ಷೇತ್ರಗಳಲ್ಲೇ ಇರುತ್ತವೆ.

ಕೆಲವೊಮ್ಮೆ ವೈಯಕ್ತಿಕ, ಆಂತರಿಕ, ಸಾಮಾಜಿಕ ಮತ್ತು ಬಾಹ್ಯ ಕಾರಣಗಳಿಂದ ಇವರು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಮೂಹಿಕವಾಗಿಯೋ, ಪಂಗಡ—ಪಂಗಡಗಳಾಗಿಯೋ ಬೇರೆ ಬೇರೆ ಕಾಲಗಳಲ್ಲಿ ವಲಸೆ ಹೋಗುವುದು ಇದೆ. ಈ ರೀತಿ ವಲಸೆ ಹೋಗುವಾಗ ತಮ್ಮೊಂದಿಗೆ ತಮ್ಮ ಕ್ಷೇತ್ರದ ದೈವಗಳನ್ನು ಕೊಂಡೊಯ್ದು ಅಲ್ಲಿ "ಹೊಸ ತೆರುವನ್ನು" ನಿರ್ಮಾಣ ಮಾಡಿಕೊಳ್ಳುತ್ತಾರೆ. ಇಂತಹ "ತೆರು"ಗಳು ಒಮ್ಮೆಲೇ ಉದ್ಭವಗೊಳ್ಳುವುದಿಲ್ಲ. ಹೆಚ್ಚಾಗಿ, ಉದ್ಯೋಗ ಮತ್ತು ವ್ಯಾಪಾರ ನಿಮಿತ್ತವಾಗಿ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರದೇಶವೊಂದಕ್ಕೆ ಕುಟುಂಬಗಳಾಗಿಯೋ, ಪಂಗಡಗಳಾಗಿಯೋ ಬಂದಂತಹ ಜನಾಂಗ, ಆರಂಭದಲ್ಲಿ ಆ ಪ್ರದೇಶದ ಬೇರೆ ಬೇರೆ ಸ್ಥಳಗಳಲ್ಲಿ ವಾಸವಾಗಿದ್ದು, ಕ್ರಮೇಣ ಸಮುದಾಯಕ್ಕೆ ಸೇರಿದವರ ಸಂಖ್ಯೆ ಅಧಿಕವಾದಾಗ ಒಂದೆಡೆ ಸೇರಿಕೊಂಡು ಸಂಘಟಿತರಾಗುವ ಅಗತ್ಯವನ್ನು ಕಂಡುಕೊಳ್ಳುತ್ತಾರೆ. ಇದಕ್ಕೆ ನಿದರ್ಶನವಾಗಿ ಕಾಸರಗೋಡಿನ ತೆರುವನ್ನೇ ತೆಗೆದುಕೊಳ್ಳಬಹುದು. ಈ ತೆರುವಿನಲ್ಲಿರುವ ಹೆಚ್ಚಿನ ಮನೆಗಳನ್ನು ಹಾಗೂ ಮನೆಮಂದಿಯನ್ನು ಗುರುತಿಸುವಾಗ ಕಾಸರಗೋಡಿನ ಸುತ್ತಮುತ್ತಲಿನ ಹಲವು ಊರುಗಳ ಹೆಸರಗಳು ಮನೆ ಹೆಸರುಗಳಾಗಿ ಬಳಕೆಯಾಗುವುದನ್ನು ಕಾಣಬಹುದು.

ಶೇಣಿ, ಕೋಳಾರ್, ಕಾರಪ್ಪಾಡಿ, ಪೂಕ್ಕಳ, ಪೇರೂರು, ಇಚ್ಲಂಪಾಡಿ ಇತ್ಯಾದಿ. ಚಂದ್ರಗಿರಿ ಹೊಳೆಯನ್ನು ದಾಟಿ ಬೇರೆ ಬೇರೆ ಸಂದರ್ಭದಲ್ಲಿ ವಸ್ತ್ರ ಮಾರಾಟಕ್ಕಾಗಿ ಬಂದಂತಹ ವಿಭಿನ್ನ ನೇಕಾರ ಕುಟುಂಬಗಳು ತಮಗೆ ಸರಿಯೆನಿಸಿದ ಸ್ಥಳಗಳಲ್ಲಿ ಆರಂಭದಲ್ಲಿ ನೆಲೆಸಿ, ಕ್ರಮೇಣ ತಮ್ಮ ಬಾಂಧವರ ಸಂಖ್ಯೆ ಹೆಚ್ಚಾದಾಗ ನಿರ್ದಿಷ್ಟ ಪ್ರದೇಶವೊಂದನ್ನು ಆರಿಸಿಕೊಂಡು ಅಲ್ಲಿ ಒಂದು ಆರಾಧನಾ ಕೇಂದ್ರವನ್ನು ನಿರ್ಮಿಸಿ, ಅದರ ಆಸುಪಾಸಿನಲ್ಲಿಯೇ ನೆಲಸಿರಬೇಕು. ಫ್ರೇಮ್ ಮಗ್ಗಗಳು ಬಂದ ಮೇಲಂತೂ ಅದರಲ್ಲಿ ನೇಯಬೇಕಿದ್ದರೆ ಪರಸ್ಪರ ಸಹಕಾರದ ಅಗತ್ಯವಿರುವುದೂ ಇದಕ್ಕೆ ಕಾರಣವಾಗಿರಬಹುದು.

ಕೇರಳದ ಪಟ್ಟುವಂನಿಂದ ದಕ್ಷಿಣ ಕನ್ನಡದ ಪಣಂಬೂರುವರೆಗೆ ಹರಡಿಕೊಂಡಿರುವ ಎಡಂಗ ಶಾಲಿಯರು ಸುಮಾರು ೨೨ ತೆರುಗಳಲ್ಲಿ ವಿಭಜಿತರಾಗಿರುವರು. "ಪಟ್ಟುವಂ ತೊಟ್ಟು ಪಣಂಬೂರುವರೆಗೆ ಪದಿನಾಲ್ ನಗರಂ" ಎಂದೂ ಹೇಳಿದರೂ ಈಗಿನ ೨೨ ತೆರುಗಳಲ್ಲಿ ೨೨ ಆಡಳಿತ ಘಟಕಗಳು ಇದ್ದು ತಮ್ಮದೇ ಆದ ಸ್ವತಂತ್ರ ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡಿವೆ. ಪಟ್ಟುವಂ ತೆರುವಿನಿಂದ ಉತ್ತರಕ್ಕೆ "ಎಡಂಗ ಶಾಲಿಯಾ"ರ ತೆರುಗಳು ಆರಂಭಗೊಂಡು ಆರಾಧನಾ ಶೈಲಿ ಹಾಗೂ ಜೀವನ ಶೈಲಿ ವ್ಯತ್ಯಾಸವಾಗುತ್ತಲೇ ಹೋಗುತ್ತದೆ. ಪಟ್ಟುವಂನಲ್ಲಿ ಒಂದೇ ಭಗವತಿಯ ಕ್ಷೇತ್ರವಿದ್ದರೆ ಉತ್ತರಕ್ಕೆ ಬಂದಂತೆಲ್ಲಾ ತೆರುವಿನ ಕ್ಷೇತ್ರಗಳಲ್ಲಿರುವ ದೇವತೆಗಳ ಸಂಖ್ಯೆ ಜಾಸ್ತಿಯಾಗುತ್ತದೆ. ದೇವಿಯರ ಹೆಸರೂ ಬದಲಾಗುತ್ತದೆ. ಕ್ಷೇತ್ರ ಪರಿಸರದಲ್ಲಿ ಹಲವು ದೈವಗಳ ಗುಡಿಗಳು ಕಂಡು ಬರುತ್ತದೆ.

"ನಗರ"ಗಳು : ಪ್ರಾಚೀನ ಕೇರಳದ ಕೋಲತ್ತನಾಡು ಹಾಗೂ ಅಳ್ಳಡ ಸಾಮ್ರಾಜ್ಯಗಳಲ್ಲಿ "ಕಳಿಗಂ" ಎನ್ನುವ ಆರಾಧನಾಲಯಗಳು ಮೊದಲು ರೂಪುಗೊಂಡವು. "ಕಳಿಗಂ" ಎಂದರೆ "ಸಭೆ" ಎಂದರ್ಥವಿದೆ. ಸಂಸ್ಕೃತದ "ಘಟಕವು" ತಮಿಳು ಮತ್ತು ಮಲಯಾಳಂಗಳಲ್ಲಿ "ಕಳಿಗಂ" ಎಂದಾಗಿದೆ. ದೈವಸಾನ್ನಿಧ್ಯವನ್ನು ಕಲ್ಪಿಸಲಾದ ಇಲ್ಲಿ ಸಮುದಾಯದ ತರ್ಕಗಳು ಇತ್ಯರ್ಥಗೊಳ್ಳುತ್ತಿದ್ದವು. ಕ್ರಮೇಣ ಅವು ಆರಾಧನಾಲಯಗಳಾಗಿ ಮಾರ್ಪಟ್ಟಿರುವ ಸಾಧ್ಯತೆಗಳಿವೆ. ಇದುವೇ ಶಾಲಿಯಾ ಸಮುದಾಯದ "ನಗರಂ"ಗಳ ಅಸ್ತಿತ್ವಕ್ಕೆ ಮೂಲ ಕಾರಣವಾಗಿರಬಹುದು.

ಪ್ರಾಚೀನ ಇತಿಹಾಸವನ್ನು ಶೋಧಿಸುವಾಗ ಮೆಸಪೊಟೇಮಿಯಾ, ಭಾರತ, ಚೈನ, ಈಜಿಪ್ಟ್‌ನಂತಹ ದೇಶಗಳಲ್ಲಿ ನಗರ ಸಂಸ್ಕೃತಿಗಳು ಹುಟ್ಟಿ ಬೆಳೆದು ಬಂದಿರುವುದನ್ನು ಕಾಣಬಹುದು. ಇಂದೂ ಕೂಡಾ ಉತ್ಖನನಗಳ ಸಂದರ್ಭದಲ್ಲಿ ಅದೆಷ್ಟೋ "ನಗರ ಸಂಸ್ಕೃತಿಗೆ" ಸಂಬಂಧಪಟ್ಟ ವಿಷಯಗಳು ಬೆಳಕಿಗೆ ಬರುತ್ತಿರುವುದು ಸರ್ವವಿದಿತ.

ಮನುಷ್ಯನ ಸಮೂಹ ಜೀವನದ ಒಂದು ನಿರ್ದಿಷ್ಟ ಭೌತಿಕ ಸ್ವರೂಪವನ್ನು "ನಗರ" ಎನ್ನುವುದು ಸೂಚಿಸುತ್ತದೆ. ಮಾನವ ಸಮುದಾಯದ ಸಂಸ್ಕೃತಿಯಲ್ಲಿ ಮೂರು ಸಂಸ್ಕೃತಿಗಳನ್ನು

ಗುರುತಿಸಬಹುದು. ೧) ಆದಿ ಮಾನವ ಸಂಸ್ಕೃತಿ, ೨) ಜಾನಪದ ಗ್ರಾಮೀಣ ಸಂಸ್ಕೃತಿ, ೩)ನಗರ ಸಂಸ್ಕೃತಿ. ಇದರಲ್ಲಿ ಶಾಲಿಯಾ ಸಮುದಾಯದ ಸಂಸ್ಕೃತಿ "ನಗರ ಸಂಸ್ಕೃತಿ". ಇಲ್ಲಿ "ನಗರ" ಎಂದರೆ "ಪಟ್ಟಣ" ಎನ್ನುವ ಸಾಮಾನ್ಯ ಅರ್ಥವಲ್ಲ. "ಸುಸಂಬದ್ಧವಾದ ಜೀವನವನ್ನು ಅಳವಡಿಸಿಕೊಂಡ ಪ್ರದೇಶ ಹಾಗೂ ಅದಕ್ಕೆ ತನ್ನನ್ನು ಒಳಪಡಿಸಿಕೊಂಡ ಜನಸಮುದಾಯವಿರುವ ಸ್ಥಳ" ಎಂಬ ವಿಶಾಲವಾದ ಅರ್ಥವಿದೆ. ವ್ಯಕ್ತಿಯು ಸಮೂಹ ಸಂಸ್ಕೃತಿಗೆ ತನ್ನನ್ನು ಒಳಪಡಿಸಿಕೊಂಡು ಬದುಕುವುದನ್ನೇ ಹಿಂದಿನವರು ಅರ್ಥಪೂರ್ಣ ಎಂದು ಪರಿಗಣಿಸಿರುವುದೇ ಇಂತಹ "ನಗರಂ"ಗಳ ಉದ್ಭವಕ್ಕೆ ಇನ್ನೊಂದು ಕಾರಣಾವಾಗಿರಬೇಕು. ಇಲ್ಲಿ "ನಗರ" ಮತ್ತು "ಸಂಸ್ಕೃತಿ" ಎನ್ನುವುದು ಜತೆ ಜತೆಯಾಗಿ ಪ್ರಯೋಗಗೊಳ್ಳುತ್ತವೆ. ಇವೆರಡೂ ಮಾನವನ ಬದುಕನ್ನು ರೂಪಿಸುವ ಪ್ರಮುಖ ಸಾಧನಗಳು. ಸಂಸ್ಕೃತಿಗೂ ನಾಗರಿಕತೆಗೂ ವ್ಯತ್ಯಾಸವಿದೆ ಎನ್ನುವುದು ಸರ್ವಸಾಮಾನ್ಯವಾದ ಸಂಗತಿ. ಮನುಷ್ಯನು ತನ್ನ ಅನುಕೂಲತೆಗಾಗಿ ಮಾಡಿಕೊಂಡ ಬಾಹ್ಯ ಬದಲಾವಣೆಗಳನ್ನು "ನಾಗರಿಕತೆ" ಎಂದರೆ ಮಾನವನು ಹುಟ್ಟಿನಿಂದ ರೂಢಿಸಿಕೊಂಡು ಬರುವ ಸಂಸ್ಕಾರಗಳಿಗೆ "ಸಂಸ್ಕೃತಿ" ಎನ್ನುತ್ತಾರೆ. ಆದರೆ ಅವರೆಡರ ಮಧ್ಯೆ ಕೊಡು ಕೊಳ್ಳುವಿಕೆ ಇದೆ ಎನ್ನುವುದನ್ನು ಶಾಲಿಯಾ/ ದೇವಾಂಗರ "ನಗರ ಪದ್ಧತಿ"ಯಲ್ಲಿ ಕಾಣಬಹುದು. ನಗರ ಸಂಸ್ಕೃತಿಯು ಸಮಾಜದ ಪ್ರತಿಯೊಂದು ಅಂಗವನ್ನೂ ತನ್ನೊಂದಿಗೆ ಸೇರಿಸಿಕೊಂಡು ಒಂದು ಸುಸಂಸ್ಕೃತ ಜೀವನದ ರೂಪುರೇಷೆಗಳನ್ನು ಹಾಕಿಕೊಟ್ಟು ಆದರಂತೆ ನಡೆಯಲು ಸಮುದಾಯವನ್ನು ಪ್ರೇರೇಪಿಸುತ್ತದೆ.

ತಲತಲಾಂತರದಿಂದ ಸಮುದಾಯವು ರೂಢಿಸಿಕೊಂಡು ಬಂದ ರೀತಿ ನೀತಿ ನಿಯಮಗಳನ್ನು ಪಾಲಿಸಿಕೊಂಡು ತನ್ನದೇ ಆದ ಪ್ರಾದೇಶಿಕ ಅಂಶಗಳನ್ನು ಸೇರಿಸಿಕೊಂಡು ಶಾಲಿಯಾ ಸಮುದಾಯದ ಕ್ಷೇತ್ರಗಳಲ್ಲಿ "ನಗರ ಸಿದ್ಧಾಂತ"ವೊಂದು ರೂಪು ತಾಳುತ್ತದೆ. ಆ ಸಿದ್ಧಾಂತವನ್ನು ಒಪ್ಪಿಕೊಂಡು ಆ "ನಗರಂ"ಗೆ ಸೇರಿದವನು. ಯಾವ ಸಂದರ್ಭದಲ್ಲೂ ಅದನ್ನು ಉಲ್ಲಂಘಿಸದೆ ಬದುಕಬೇಕಾಗುತ್ತದೆ. ಸಮುದಾಯದ ಹಿತದೃಷ್ಟಿಯಿಂದ ಇದು ಅನಿವಾರ್ಯವಾಗುತ್ತದೆ.

ಕ್ರೈಸ್ತ ಸಮುದಾಯದಲ್ಲಿ "ಪೇರಿಶ್" ( Parish) ಎಂದೂ, ಮುಸ್ಲಿಂ ಸಮುದಾಯದಲ್ಲಿ "ಜಮಾತ್" (Zamath) ಎಂದೂ ಕರೆಯಲ್ಪಡುವ ಇದೇ ತೆರವಾದ ಸಾಂಘಿಕ ವ್ಯವಸ್ಥೆಯೊಂದು ಇದೆ. ಸಾಧಾರಣವಾಗಿ ಎಲ್ಲಾ ಸಮುದಾಯಕ್ಕೂ ಹಿಂದಿನ ಕಾಲದಲ್ಲಿ ಇಂತಹ ಒಂದು ವ್ಯವಸ್ಥೆ ರೂಢಿಯಲ್ಲಿತ್ತು. ಶಾಲಿಯಾರ "ನಗರ"ವೂ ಕೂಡಾ ಅಂತಹ ಒಂದು ಸಾಂಘಿಕ ವ್ಯವಸ್ಥೆ. ಆದರೆ, ಉಳಿದೆಲ್ಲಾ ಸಮುದಾಯಕ್ಕಿಂತಲೂ ವ್ಯವಸ್ಥಿತವಾದ ರೀತಿಯಿಂದ ಈ "ನಗರ"ಗಳು ಶಾಲಿಯಾ ಕ್ಷೇತ್ರಗಳಲ್ಲಿ ಇತ್ತೀಚಿನವರೆಗೂ ರೂಢಿಯಲ್ಲಿದ್ದುವು. ಈಗಲೂ ಕೆಲವೆಡೆ ಅದನ್ನು ಹಾಗೇ ಅನುಸರಿಸಿಕೊಂಡು ಬರುತ್ತಾರೆ.

"ನಗರಂ" ಮತ್ತು "ಕ್ಷೇತ್ರ"ಕ್ಕೆ ನಿಕಟ ಸಂಬಂಧವಿದೆ. ಕ್ಷೇತ್ರವಿರುವಲ್ಲಿಯೇ ನಗರವಿಯತ್ತದೆ. ಸಮುದಾಯದವರು ಒಂದಾಗುವ ಈ ನಗರಗಳಲ್ಲಿ ದೈವಭೀರುಗಾದ ಜನರ ತರ್ಕಗಳು ಇತ್ಯರ್ಥಗೊಳ್ಳಬೇಕಾದ ಕಾರಣ ದೈವ ಸಾನ್ನಿಧ್ಯವನ್ನು ಇಲ್ಲಿ ಕಲ್ಪಿಸಿಕೊಂಡಿರಬಹುದು. ತೆಗೆದುಕೊಳ್ಳಬೇಕಾದ ತೀರ್ಮಾನಗಳನ್ನೂ, ಚರ್ಚಿಸಬೇಕಾದ ವಿಷಯವನ್ನೂ ದೇವರ ಮುಂದೆಯೇ ನಡೆಸಿದರೆ, ಅಲ್ಲಿ ಕಾಪಟ್ಯಕ್ಕೆ ಅವಕಾಶವಿರುವುದಿಲ್ಲ.ಆದುದರಿಂದ ನಗರ ಪ್ರಮುಖರು ದೈವಾರಾಧಕರೂ ಆಗಿರುತ್ತಾರೆ. ಸಮುದಾಯದವರೂ ಇವರೂ ಸೇರಿಯೇ ದೇವರ ಮುಂದೆ ತರ್ಕಗಳಿಗೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ಸಮಾಜದ ಮುಖ್ಯಸ್ಥ (ಚೆಟ್ಟಿಯಾರ್) ದೈವವನ್ನು ಮುಂದಿಟ್ಟುಕೊಂಡು ತನ್ನ ತೀರ್ಮಾನವನ್ನು ನೀಡುತ್ತಾನೆ. ಇದರಿಂದ ತರ್ಕವನ್ನು ತಂದವರಿಗೂ ಸಮಾಧಾನವಾಗುತ್ತದೆ. "ಇಡೀ ಸಮಾಜಕ್ಕೆ ಸಂಬಂಧಪಟ್ಟ ಪ್ರಾದೇಶಿಕ ಘಟಕಗಳು "ನಗರಸಭಾ" ಇವು ದೈವಸ್ಥಾನಗಳಲ್ಲಿರುತ್ತವೆ." — (ಅಮೃತ ಸೋಮೇಶ್ವರ : ೧೯೯೮ : ಪುಟ : ೨೪೨)

ಕೆಲವೆಡೆ "ಕ್ಷೇತ್ರಂ" (ತಾನಂ) ಮತ್ತು "ನಗರಂ" ಎರಡೂ ಸಮಾನಾರ್ಥಕ ಪದಗಳಾಗಿಯೇ ಬಳಕೆಯಾಗುವುದೂ ಇದೆ. ಕ್ಷೇತ್ರ ಎಂದರೆ ದೈವ ಸನ್ನಿಧಿ. "ನಗರಂ" ಎಂದರೆ "ಸಮುದಾಯದ ನಾಗರಿಕರು ಸೇರುವ ಸ್ಥಳ" ಎಂದರ್ಥ. ಅಲ್ಲಿ ಸೇರಿದವರು ಅನಾಗರಿಕರಂತೆ ವರ್ತಿಸಬಾರದು ಎನ್ನುವ ಕಲ್ಪನೆಯೇ "ನಗರ" ಎನ್ನುವ ಪದವು ಬಳಕೆಯಲ್ಲಿ ಬರಲು ಕಾರಣವಾಗಿರಬಹುದು. ಇದು ಭಾರತದ ಪ್ರಾಚೀನ ಸಾಮಾಜಿಕ ಜೀವನದ ವ್ಯವಸ್ಥೆಯೆಡೆಗೆ ಬೆಳಕು ಚೆಲ್ಲುತ್ತದೆ.

"ನಗರಂ" ಎನ್ನುವುದನ್ನು ಒಂದು ವ್ಯವಸ್ಥಿತವಾದ ಆಡಳಿತ ಸಮಿತಿ ( Governing Council) ಎಂದು ಕರೆಯಬಹುದು. ಪ್ರಾಚೀನ ಕೇರಳದ ಕೋಲತ್ತುನಾಡು, ಪ್ರಾಟ್ಟುರ, ಇರುವನಾಡು, ಕಡತ್ತನಾಡು ಎಂಬೀ ನಾಲ್ಕು ಸಾಮ್ರಾಜ್ಯಗಳಲ್ಲಾಗಿ ಮೊದಲು ಶಾಲಿಯಾರ ೯೬ ನಗರಗಳಿದ್ದುವೆಂದು ಉಲ್ಲೇಖಿತವಾಗಿದೆ. ಅದರಲ್ಲಿ ೮೨ ಬಲಂಗ ಶಾಲಿಯರ ನಗರವೆಂದೂ, ೧೪ ಎಡಂಗ ಶಾಲಿಯಾರ ನಗರವೆಂದೂ ಗುರುತಿಸಲಾಗಿತ್ತು. ಎಡಂಗ ಮತ್ತು ಬಲಂಗ ಶಾಲಿಯಾ ನಗರಾಡಳಿತ ವ್ಯವಸ್ಥೆ ರೂಪುರೇಷೆಗಳು ಹೆಚ್ಚು ಕಡಿಮೆ ಸಮಾನವಾಗಿದೆ. ಅದನ್ನು ಈ ರೀತಿ ಯಲ್ಲಿ ರೂಪೀಕರಿಸಬಹುದು.

ಇವರೆಲ್ಲರೂ ಆಯಾ ಸ್ಥಾನಗಳಲ್ಲಿದ್ದುಕೊಂಡು ದೈವಿಕ ಹಾಗೂ ಸಾಮಾಜಿಕ ಕಾರ್ಯಗಳ ನಿಯಂತ್ರಕರಾಗಿರುತ್ತಾರೆ. ಇಂತಹ ಪರಿಪೂರ್ಣ ವ್ಯವಸ್ಥಿತವಾದ "ಆಡಳಿತ ವ್ಯವಸ್ಥೆ" ಉಳಿದ ಸಮುದಾಯಗಳಲ್ಲಿ ಸ್ವಲ್ಪ ವಿಭಿನ್ನ ರೀತಿಯಲ್ಲಿ ಈ ಪರಿಸರದಲ್ಲಿ ರೂಢಿಯಲ್ಲಿತ್ತು.

ಹದಿನೆಂಟು ವರ್ಷಕ್ಕಿಂತ ಮೇಲ್ಪಟ್ಟ ಸಮಯದಾಯಕ್ಕೆ ಸೇರಿದವನು ಇದರ ಸದಸ್ಯನಾಗಿರುತ್ತಾನೆ. ನಿರ್ದಿಷ್ಟ ನಗರದ ಸದಸ್ಯತನವನ್ನು ಪಡೆದುಕೊಂಡವರು ಬೇರೆಡೆ ವಾಸಮಾಡಬಹುದು. ಆದರೆ ಆ ನಗರದ ಸದಸ್ಯತ್ವವನ್ನು ಆತ ಬಿಟ್ಟು ಕೊಡುವ ಹಾಗಿಲ್ಲ. ಒಂದು ವೇಳೆ ಬೇರೊಂದು ನಗರದಲ್ಲಿ ಆತ ಸೇರಿಕೊಳ್ಳಬೇಕಾದರೆ ತಾನು ಕ್ಷೇತ್ರಕ್ಕೆ ಸಲ್ಲಿಸಬೇಕಾದ ಎಲ್ಲಾ ಶುಲ್ಕಗಳನ್ನು ಪಾವತಿಸಬೇಕು. (ಇದನ್ನು "ಕಾಲ್‌ವರ" ಎಂದೂ ತಲವರ(ರಿ) ಎಂದೂ ಹೇಳುತ್ತಾರೆ). ಆ "ನಗರಂ"ನವರು ನೀಡಿದ "ಜಾಡ ರಶೀದಿ"ನ್ನು ಪಡೆದುಕೊಳ್ಳಬೇಕು. ಅನಂತರ ಅದನ್ನು ತೋರಿಸಿ ಇನ್ನೊಂದು ನಗರದಲ್ಲಿ ಸೇರಿಕೊಳ್ಳಬಹುದು. ಈ ಸದಸ್ಯತನವು "ಪಿತೃಪ್ರಧಾನ" ವ್ಯವಸ್ಥೆಯನ್ನು ಅವಲಂಬಿಸಿದೆ. ತಂದೆ ಯಾವ ನಗರದ ಸದಸ್ಯನಾಗಿದ್ದಾನೆಯೋ ಅದೇ ನಗರದಲ್ಲಿ ಮಗನೂ ಸದಸ್ಯನಾಗುತ್ತಾನೆ. ಹೆಣ್ಣು ಮಕ್ಕಳಿಗೆ "ಚಪ್ಪರದ ಮದುವೆ"ಯನ್ನು ತಂದೆಯ "ನಗರಂ"ನಲ್ಲೇ ನಡೆಸುತ್ತಾರೆ. (ಮೂಲತಃ ಇವರು "ಪಿತೃಪ್ರಧಾನ" ವ್ಯವಸ್ಥೆಯವರು ಎನ್ನುವುದನ್ನು ಇದು ತೋರಿಸಿಕೊಡುತ್ತದೆ.) ಸಮುದಾಯಕ್ಕೆ ಸೇರಿದ ಹುಡುಗಿಯೊಬ್ಬಳು ಅನ್ಯ ಜಾತಿಯವನೊಬ್ಬನನ್ನು ವಿವಾಹವಾದರೆ, ಅವಳ ಪತಿಯನ್ನು ಸಮುದಾಯಕ್ಕೆ ಸೇರಿಸಿ ಸದಸ್ಯನಾಗಿಸುವ ಹಕ್ಕು ಚೆಟ್ಟಿಯಾರ್‌ಜನಿಗೆ ಇದೆ. ಹಾಗೇ ಇನ್ನೊಂದು "ನಗರಂ"ನಿಂದ ಯಾವುದಾದರೂ ಕಾರಣಕ್ಕೆ ಸದಸ್ಯನೊಬ್ಬನನ್ನು ಹೊರಹಾಕಿದ್ದರೆ ಆತನನ್ನು ತಮ್ಮ ನಗರಕ್ಕೆ ಸದಸ್ಯರ ಸಮ್ಮತಿಯೊಂದಿಗೆ ಸೇರಿಸುವುದೂ ಇದೆ. ಒಂದು ತೆರುವಿನ "ನಗರಂ"ನ ಸದಸ್ಯನಾಗಿದ್ದುಕೊಂಡು ಬೇರೆ ಬೇರೆ ಕಾರಣದಿಂದ ಇನ್ನೊಂದು ತೆರುವಿನಲ್ಲಿ ಆತ ವಾಸಿಸಿದರೂ ಆತನನ್ನು ಆತ ಸದಸ್ಯನಾಗಿರುವ "ನಗರಂ"ನ ಹೆಸರಿನಿಂದಲೇ ಗುರುತಿಸಲಾಗುವುದು. ಅನ್ಯ "ನಗರಂ"ನ "ತಾನಂ"ಗೆ ಅವನು ಹೋದರೆ ಅಲ್ಲಿ ಅವನಿಗೆ ವಿಶೇಷವಾದ ಅತಿಥಿ ಮರ್ಯಾದೆ ಸಲ್ಲಬೇಕು. ವೀಳ್ಯವನ್ನು (ವೀಳ್ಯದೆಲೆ ಮತ್ತು ಅಡಿಕೆ) ಅವನಿಗೆ ಪ್ರತ್ಯೇಕವಾಗಿ ಕರೆದು ನೀಡಬೇಕು. ಈ ರೀತಿ ನೀಡದೆ ಇದ್ದರೆ ಅದು "ನಗರಂ"ನ ಗೌರವಕ್ಕೆ ಕುಂದು ಎಂದು ಪರಿಗಣಿಸಲಾಗುವುದು. ಮರ್ಯಾದೆಯ ಸೂಚಕವಾದ ವೀಳ್ಯದೆಲೆಯನ್ನು ನೀಡುವಾಗ ಯಾರನ್ನೂ ಬಿಡಬಾರದು. ಹಾಗೇನಾದರೂ ಅದು ದೊರಕದೇ ಇದ್ದರೆ, ಅದನ್ನು "ಸಾಮಾಜಿಕ ಅವಗಣನೆ" ಎಂದು ಭಾವಿಸಿ ನೊಂದ ಸದಸ್ಯನು ಕೆಲವೊಮ್ಮೆ ತನ್ನ ಸದಸ್ಯತನವನ್ನು ಹಿಂದೆಗೆದುಕೊಳ್ಳಬಹುದು. ಅಸಮಾಧಾನಗೊಂಡ ಕೆಲವರು ಸೇರಿ ಹೊಸತೊಂದು "ನಗರ"ವನ್ನೇ ಸೃಷ್ಟಿಸಬಹುದು. ಈ ರೀತಿ ಸಣ್ಣ ಪುಟ್ಟ ವಿಷಯಗಳಲ್ಲಿ ವೈಮನಸ್ಸು ಉಂಟಾಗುವುದೂ ಕ್ಷೇತ್ರವನ್ನು ಬಿಟ್ಟು ತೆರಳುವುದೂ

ಈ ಸಮುದಾಯದಲ್ಲಿ ಹಿಂದೆ ಸಾಮಾನ್ಯವಾಗಿತ್ತು. ಮಂಜೇಶ್ವರಂ "ನಗರಂ"ನ ಕ್ಷೇತ್ರದಲ್ಲಿ ಅವಮರ್ಯಾದೆಯಾಯಿತು ಎಂದು ಅಲ್ಲಿನ ಆಚಾರ ಸ್ಥಾನದಲ್ಲಿದ್ದ ವ್ಯಕ್ತಿಯೋರ್ವರು ತಾನೇ ಸ್ವಂತ ಕ್ಷೇತ್ರವೊಂದನ್ನು ನಿರ್ಮಿಸಲು ಪ್ರಯತ್ನಿಸಿದ ಕಥೆಯೂ, ತೆರುಪಿನ ಕ್ಷೇತ್ರವೊಂದರಲ್ಲಿ ಪೀಳ್ಯವನ್ನು ನೀಡುವಾಗ ಸಿಗದೇ ಇದ್ದ ಕೆಲವರು ಅಸಮಾಧಾನಗೊಂಡು ಹೊಸ ಕ್ಷೇತ್ರವನ್ನು ಕಟ್ಟಿ ನಗರ ನಿರ್ಮಾಣ ಮಾಡಿದ ಕಥೆಯೂ ಎಡಂಗ ಶಾಲಿಯಾ ಸಮುದಾಯದ ನೂರಿನ್ನೂರು ವರ್ಷಗಳ ಈಚಿನ ಇತಿಹಾಸದಲ್ಲಿದೆ.

"ಆರವಕಾತಿ" (ವಿವರಗಳಿಗೆ ೬ನೇ ಅಧ್ಯಾಯವನ್ನು ನೋಡಿ) ಹಾಗೂ ಸಮಾಜದ ಸದಸ್ಯರನ್ನೊಳಗೊಂಡ ಈ ಸಮಿತಿಯು ರೂಪಿಸುವ ನಿಯಮಗಳು ಸಾಧಾರಣ ಎಲ್ಲಾ "ನಗರಂ"ಗಳಿಗೂ ಏಕಪ್ರಕಾರವಾಗಿರುತ್ತವೆ. ಕೆಲವೆಡೆ ಕೆಲವು ನಿಯಮಗಳು ಸಡಿಲವಾಗಿರಬಹುದು. ಇನ್ನು ಕೆಲವೆಡೆ ಕೆಲವು ನಿಯಮಗಳು ಸೇರಿಕೊಂಡಿರಬಹುದು.

೧. ಪ್ರತಿಯೋರ್ವ ಸದಸ್ಯನೂ ತನ್ನ ನಿಗದಿತ ಸದಸ್ಯತನದ ಶುಲ್ಕವನ್ನು ವರ್ಷಂಪ್ರತಿ ಪಾವತಿಸಬೇಕು.

೨. ತನ್ನ ಮನೆಯಲ್ಲಿ ಯಾವುದೇ ಶುಭಾಶುಭ ಕಾರ್ಯಕ್ರಮಗಳನ್ನು ನಡೆಸಬೇಕಾದರೆ "ನಗರ"ದ "ಅಚ್ಚಾಮ್ಮಾರ್"ರಿಂದ ಅನುಮತಿ ಪಡೆದುಕೊಳ್ಳಬೇಕು. ಇದನ್ನು "ಅನುವಾಸಂ" ಎಂದು ಹೇಳುತ್ತಾರೆ.

೩. ಮದುವೆ, ಸೀಮಂತ, ನಾಮಕರಣ, ಶುದ್ಧೀಕರಣ, ಉತ್ತರಕ್ರಿಯೆ ಈ ಮೊದಲಾದುವುಗಳನ್ನು ನಡೆಸುವಾಗ ಸಮುದಾಯವು ಏನನ್ನು ಆಚರಿಸಿಕೊಂಡು ಬಂದಿದೆಯೋ ಆ ಎಲ್ಲಾ ವಿಧಿ ನಿಯಮಗಳನ್ನು ಅನುಸರಿಸಬೇಕು. ವಿರುದ್ಧವಾಗಿ ಏನನ್ನೂ ಮಾಡಲು ಹೋಗಬಾರದು.

೪. ತನ್ನ ಸಮುದಾಯದವರೊಡನೆ ಅಲ್ಲದೆ ಬೇರೆಯವರೊಡನೆ ವಿವಾಹವೇ ಮುಂತಾದ ಸಾಮಾಜಿಕ ಸಂಬಂಧಗಳನ್ನು ಬೆಳೆಸಿಕೊಳ್ಳಬಾರದು. ಒಂದು ವೇಳೆ ಬೆಳೆಸಿದರೂ ಅದಕ್ಕೆ "ನಗರಂ"ನ "ಅಚ್ಚಮ್ಮಾರ್"ರಿಂದ ಸಮ್ಮತಿಯನ್ನು ಪಡೆದುಕೊಳ್ಳಬೇಕು.

೫. ನಗರದ "ಅಚ್ಚಮ್ಮಾರ್"ರ ಅಪ್ಪಣೆ ಇಲ್ಲದೆ ಇನ್ನೊಂದು ಕಡೆ ಸದಸ್ಯನಾಗಬಾರದು.

೬. ತನ್ನ ಮನೆಯ ಯಾವುದೇ ಕಾರ್ಯಕ್ರಮದಲ್ಲೂ ಮೊದಲನೆಯ ಗೌರವ ಸ್ಥಾನವನ್ನು "ಅಚ್ಚಮ್ಮಾರ್"ರಿಗೆ ನೀಡಬೇಕು.

ಈ ಮೇಲಿನ ನಿಯಮಗಳನ್ನು ಮೀರಿದವರನ್ನು "ಜಾತಿ ಬಾಹಿರ" ಎಂದು ಸಮಾಜದಿಂದ ಹೊರಗಾಡಲಾಗುತ್ತಿತ್ತು. ಈ ರೀತಿಯಲ್ಲಿ ಎಷ್ಟೋ ತೆರುಗಳಲ್ಲಿ "ಜಾತಿ ಬಾಹಿರ"ರೆನ್ನಿಸಿಕೊಂಡವರು ಇರುತ್ತಿದ್ದರು. ಅವರನ್ನು "ಶುದ್ಧಂ ಮಾರಿಯವರ್" ಎಂದು ಪ್ರತ್ಯೇಕವಾಗಿ ಇರಿಸಲಾಗುತ್ತಿತ್ತು. ಅವರೊಡನೆ ಸಮುದಾಯದವರು ಸಂಬಂಧವನ್ನು ಇರಿಸಿಕೊಳ್ಳಬಾರದು ಎಂದು ನಿಷೇಧವೂ

ಇತ್ತು. ಕೆಲವೆಡೆ ಮದುವೆ, ಸೀಮಂತದಂತಹ ಸಮಾರಂಭಗಳನ್ನು ಮೂರು ದಿನಗಳವರೆಗೂ ನಡೆಸುತ್ತಿದ್ದರು. ಮೂರು ದಿನದ ಕಾರ್ಯಕ್ರಮವನ್ನು ಮೊಟಕುಗೊಳಿಸಿ ಒಂದು ದಿನಕ್ಕೋ ಎರಡು ದಿನಕ್ಕೋ ಮಾಡಿದ ಕಾರಣದಿಂದ "ನಗರಂ"ನಲ್ಲಿ ವಿವಾದವು ಹುಟ್ಟಿ ಆ "ನಗರಂ"ನ ಚೆಟ್ಟಿಯಾರ್‌ಚನಿಗೆ ಪರಿಹರಿಸಿ ತೀರ್ಮಾನ ನೀಡಲು ಸಾಧ್ಯವಾಗದೆ ಪ್ರದೇಶದ ಅರಸರವರೆಗೂ ದೂರು ಹೋಗಿ ನ್ಯಾಯ ತೀರ್ಮಾನವಾದ ಪ್ರಕರಣಗಳೂ ಇವೆ. ಹಾಗೇ ನಿರ್ದಿಷ್ಟ ಸಮಾರಂಭಕ್ಕೆ ನಿರ್ದಿಷ್ಟ ಆಹಾರವನ್ನೇ ತಯಾರಿಸಬೇಕು ಎಂಬ ನಿಯಮವೂ ಹಿಂದೆ ಇತ್ತು. ಮೊದಲು ಸೀಮಂತಕ್ಕೆ ಮಾಂಸಾಹಾರವು ಅಗತ್ಯವಾಗಿತ್ತು ಯಾವುದೋ ಒಂದು ಕುಟುಂಬ ಅದನ್ನು ಉಲ್ಲಂಘಿಸಿ ಸಸ್ಯಾಹಾರವನ್ನು ಮಾಡಿದ ಕಾರಣದಿಂದ ಹುಟ್ಟಿದ ವಿವಾದಕ್ಕೆ ರಾಜನೇ ಕೊನೆಯ ತೀರ್ಮಾನವನ್ನು ನೀಡುವಂತಾಗಿತ್ತು. ಇಂತಹ ವಿವಾದಗಳು "ನಗರಂ"ಗಳಿಗೆ ತೀರ್ಮಾನಕ್ಕಾಗಿ ಬಂದಾಗ "ಚೆಟ್ಟಿಯಾರ್‌ಚ"ನಿಗೆ ಸಮಸ್ಯೆಗಳು ಹುಟ್ಟಿಕೊಳ್ಳುತ್ತಿದ್ದವು. ಕೆಲವರು ಪರವಾಗಿಯೂ ಕೆಲವರು ವಿರೋಧವಾಗಿಯೂ ಮಾತನಾಡುವಾಗ ಏನು ಮಾಡಬೇಕೆಂದೇ ತೋಚದ ಸ್ಥಿತಿಗೆ ಬಂದಾಗ "ಕೋಮರ"ರು ದರ್ಶನದ ಮೂಲಕವಾಗಿ ಪರಿಹಾರವನ್ನು ಸೂಚಿಸುವುದೂ ಇತ್ತು. ಅದು "ದೈವಿಕ ಪ್ರೇರಣೆ" ಎಂದು ತಿಳಿದವರು ಅದಕ್ಕೆ ಅಂಗೀಕಾರದ ಮುದ್ರೆಯನ್ನು ಒತ್ತುವುದೂ ಸಾಮಾನ್ಯವಾಗಿತ್ತು.

ಇಂತಹ ವಿವಾದಗಳ ಕಾರಣದಿಂದ ಸಮುದಾಯದೊಳಗೆ ವೈಮನಸ್ಸು ಉಂಟಾದಾಗ ಸಮುದಾಯವು ಎರಡಾಗಿ ಒಡೆಯಬಹುದು. ಆಗ "ನಗರಂ"ಗಳು ಎರಡಾಗಬಹುದು. ಅದೇ ರೀತಿಯಲ್ಲಿ ಕ್ಷೇತ್ರದ ಪರಿಧಿಯು ವಿಸ್ತೃತವಾದಾಗ "ನಗರಂ" ಮತ್ತು "ತಾನಂ"ನ ಪರಿಸರದಿಂದ ಬಹಳಷ್ಟು ದೂರದಲ್ಲಿ ಸಮುದಾಯವು ವಾಸಿಸಬಹುದು. ಇದು "ನಗರಂ"ನ ಸಂಪರ್ಕವನ್ನು ಮೊಟಕುಗೊಳಿಸಬಹುದು. ಇಂತಹ ಸಂದರ್ಭದಲ್ಲಿ ಕೆಲವರು ತಮ್ಮ ಅನುಕೂಲತೆಗಾಗಿ ತಾವಿರುವ ಪ್ರದೇಶದಲ್ಲಿ ಹೊಸ ತೆರುವನ್ನು ನಿರ್ಮಾಣ ಮಾಡಿ "ನಗರ" ಹಾಗೂ "ತಾನಂ"ನ್ನು ಸೃಷ್ಟಿಸಬಹುದು. ಇಂತಹ ಹಲವಾರು ಕಾರಣಗಳೇ ಹದಿನಾಲ್ಕು ನಗರಗಳು ೨೨ ನಗರಗಳಾಗಿ ರೂಪು ತಾಳಲು ಕಾರಣವಾಗಿರಬಹುದು. ಚಂದ್ರಗಿರಿ ಹೊಳೆಯ ಉತ್ತರ ಭಾಗದ ಶಾಲಿಯರು ದಕ್ಷಿಣದವರಿಗಿಂತ ಅಲ್ಪ ಭಿನ್ನವಾಗಿ ಕಾಣುತ್ತಾರೆ. ಮಧ್ಯೆ ಇರುವ ಹೊಳೆಯು ಇವರನ್ನು ಸಾಂಸ್ಕೃತಿಕವಾಗಿಯೂ ಸಾಮಾಜಿಕವಾಗಿಯೂ ಕ್ರಮೇಣ ಪ್ರತ್ಯೇಕೀಕರಿಸಿದೆ. ಆದುದರಿಂದಲೇ, "ಪತ್ತುಂ ನಾಲುಂ ಪದಿನಾಲ್ ನಗರಂ" ಎಂದು ಹೇಳಲಾಗುತ್ತದೆ. "ಹತ್ತರ ಜತೆ ಮತ್ತೆ ನಾಲ್ಕನ್ನು ಸೇರಿಸಿದ್ದು" ಎನ್ನುವ ಅರ್ಥ ಬರುವ ಈ ನುಡಿಗಟ್ಟು ಚಂದ್ರಗಿರಿಯ ಉತ್ತರದ ನಾಲ್ಕು ತೆರುಗಳು ಮತ್ತೆ ನಿರ್ಮಾಣವಾದದ್ದು ಎನ್ನುವುದನ್ನು ಸೂಚಿಸುತ್ತದೆ. ಇಲ್ಲಿನ ನಾಲ್ಕು ತೆರುಗಳು "ಕಾರಡ್ಕ"ವನ್ನೂ ಸೇರಿಸಿ ಒಂದಾಗಿ ಹಿಂದೆ "ದ.ಕ. ಜಿಲ್ಲಾ ಪಂಚ ನಗರಗಳು" ಎಂದು ಪ್ರತ್ಯೇಕ ಸಮಿತಿಯನ್ನು ರೂಪೀಕರಿಸಿದ್ದವು ಎನ್ನಲಾಗಿದೆ.

ಪಟ್ಟುವದಿಂದ ಪಣಂಬೂರುವರೆಗಿನ ಎಡಂಗ ಶಾಲಿಯಾರ ನಗರಗಳು ಹದಿನಾಲ್ಕು ಎಂದು ನುಡಿಗಟ್ಟು ಹೇಳುತ್ತದೆ. ಈ ಹದಿನಾಲ್ಕು ವಿಭಾಗದ ಅಚ್ಚಮ್ಮಾರರ ಪ್ರಮುಖರು ಆಯಾ ಪ್ರಾದೇಶಿಕ ರಾಜರಿಂದ ಚಿನ್ನದ ಬಳೆ, ಬೆತ್ತ, ಕಠಾರಿ, ತಾಳೆಗರಿಯ ಕೊಡೆಗಳನ್ನು ಅಧಿಕಾರ ಸೂಚಕವಾಗಿ ತೆಗೆದುಕೊಳ್ಳುತ್ತಾ ಬಂದಿದ್ದಾರೆ. ಆಯಾ "ತಾನಂ"ನಲ್ಲಿ ದೈವಗಳನ್ನು ಕಟ್ಟುವ ಸಂದರ್ಭದಲ್ಲಿ ದೈವವು ಶಾಲಿಯಾ ಸಮುದಾಯದವರನ್ನು ಸಾಮಾನ್ಯವಾಗಿ "ನಗರೇ..... ನಗರೇ....." ಎಂದು ಸಂಭೋದಿಸುತ್ತದೆ. ಈ ವಿಶಿಷ್ಟವಾದ ಪದವನ್ನು ಇವರಿಗೆ ಅನ್ವಯಿಸುವುದು ಇವರ ಜೀವನ ರೀತಿಯನ್ನು ದೃಷ್ಟಿಯಲ್ಲಿರಿಸಿಕೊಂಡೇ ಇರಬಹುದು. "ನಾಗರಿಕ", "ಅನಾಗರಿಕ" ಎನ್ನುವ ಪದಗಳಲ್ಲೇ ನಾವಿದರ ಮೂಲವನ್ನು ಕಾಣಬಹುದು. ಜೀವನಕ್ಕೆ ಅತೀ ಅಗತ್ಯವಾದ ವಿಷಯಗಳ ನಿಯಮರಾಹಿತ್ಯ ಮಾಡುವವರನ್ನು "ಅನಾಗರಿಕರು" ಎನ್ನಲಾಗುತ್ತದೆ. ರೀತಿ ನೀತಿ ನಿಯಮಗಳಿಗೆ ತಮ್ಮನ್ನು ಒಳಪಡಿಸಿಕೊಂಡು ಬದುಕುವವರನ್ನು "ನಾಗರಿಕರು" ಎನ್ನಲಾಗುತ್ತದೆ. ಒಂದು ದೇವಾಲಯ, ಅಲ್ಲಿನ ಅಂಗತ್ವ, ಆಚಾರ ವರ್ಗದವರ ಅಜ್ಞಾನುವರ್ತಿಗಳಾಗಿ ಕಟ್ಟುನಿಟ್ಟಿನ ಶಿಸ್ತಿನ ಜೀವನವನ್ನು ಈ ಸಮುದಾಯ ಪರಂಪರಾಗತವಾಗಿ ರೂಢಿಸಿಕೊಂಡು ಬಂದಿದೆ. ಹೀಗೆ ಆಚಾರಾನುಷ್ಠಾನಗಳನ್ನೂ ಪಾಲಿಸಿಕೊಂಡು ಬರುವ "ಶಾಲಿಯಾ" ವರ್ಗ "ನಾಗರಿಕ" ಎಂದೇ ಗುರುತಿಸಲ್ಪಟ್ಟಿರಬೇಕು. ಅದರ ಸದಸ್ಯನು ತನ್ನ ಆರಾಧನಾ ಕ್ಷೇತ್ರದ ಪರಿಸರದಿಂದ ಅಥವಾ ತನ್ನ "ತೆರು"ವಿನಿಂದ ದೂರ ಎಲ್ಲಿದ್ದರೂ ತನಗದು ವಿಧಿಸಿದ ಕಟ್ಟುನಿಟ್ಟಿನ ಶಿಸ್ತಿನ ಜೀವನವನ್ನು ಮರೆಯದೆ ಪಾಲಿಸಿಕೊಂಡು ಬರುತ್ತಾನೆ. ದೇವಾಲಯದೊಂದಿಗೆ ಸಂಬಂಧವನ್ನು ಉಳಿಸಿಕೊಳ್ಳುತ್ತಾನೆ. ಈ ರೀತಿ ಶಿಸ್ತಿನ ಜೀವನವನ್ನು ನಡೆಸುವ ನಾಗರಿಕರು ಜೀವಿಸುವ ಪ್ರದೇಶವು "ನಗರಂ" ಎಂದು ಕರೆಯಲ್ಪಟ್ಟು ಆ "ನಗರಂ"ನಲ್ಲಿ ಸದಸ್ಯತನವನ್ನು ಪಡೆದುಕೊಂಡವರು ಎಲ್ಲಿದ್ದರೂ ಅವರು ಆ ನಗರದವರೆಂದೇ ಗುರುತಿಸಲ್ಪಟ್ಟರು. ಈ ರೀತಿಯಲ್ಲಿ "ಶಾಲಿಯಾರ ತೆರು" ಮತ್ತು "ನಗರಾಡಳಿತ ವ್ಯವಸ್ಥೆ"ಯಲ್ಲಿ ಕಂಡು ಬರುವ ಶಿಸ್ತು ಗಮನಾರ್ಹವಾದುದು.

ಕರ್ನಾಟಕದ ಉಳಿದ ಭಾಗ, ಆಂಧ್ರ, ತಮಿಳುನಾಡಿನ ಪ್ರದೇಶಗಳಲ್ಲಿ ವಾಸಿಸುವ ನೇಕಾರ ವರ್ಗಕ್ಕೂ ಅವರದೇ ಆದ ಸಮುದಾಯ ವ್ಯವಸ್ಥೆಯಿದೆ. ಕೇರಿ, ಕೇರಿಯಲ್ಲೊಂದು ದೇವಾಲಯ, ದೇವಾಲಯದಲ್ಲೊಂದು ಆಡಳಿತ ಘಟಕ, ಕ್ಷೇತ್ರದೊಳಗಿನ ಈ ಘಟಕದೊಂದಿಗೆ ಒಂದು ರೀತಿಯ ನಿಯಮಬದ್ಧ ಸಂಬಂಧವಿರಿಸಿಕೊಂಡ ಸಮುದಾಯದ ಸದಸ್ಯರು ಇವೆಲ್ಲವೂ ಇವೆ. "ನಗರಂ"ಗಳು ಕೆಲವೆಡೆ "ನಾಡು"ಗಳಾಗುತ್ತವೆ. ಕೆಲವೆಡೆ "ಮಾಗಣೆ"ಗಳಾಗುತ್ತದೆ. ಆರಾಧಿಸುವ ದೈವಗಳು, ಸಮುದಾಯದ ಅಂಗತ್ವವನ್ನು ನೀಡುವ ಪದ್ಧತಿ ಇವೆಲ್ಲಾ ಅಲ್ಪ ವಿಭಿನ್ನವಿರಬಹುದು. ಈ ಸಾಮ್ಯತೆಯೇ ನೇಕಾರ ಸಮುದಾಯದ ಹೆಚ್ಚಿನ ವಿಭಾಗಗಳೂ ಒಂದೇ ಮೂಲದಿಂದ ಬಂದವು ಎನ್ನುವುದನ್ನು ದೃಢಪಡಿಸುತ್ತದೆ.

ಈಗಲೂ ಹಲವೆಡೆ ಶಾಲಿಯಾ ಸಮುದಾಯ ಕೆಲವು ನಿಯಮಗಳನ್ನು ಪಾಲಿಸಿಕೊಂಡು ಹೋಗುತ್ತದೆ. ಪ್ರಾದೇಶಿಕ ರಾಜರೇ ಈಗಲೂ "ಚೆಟ್ಟಿಯಾರ್"ಗೆ ಪದವಿ ಪ್ರಧಾನ ಮಾಡುತ್ತಾರೆ. ಇದು ಕ್ಷೇತ್ರಕ್ಕೂ ಸಮುದಾಯಕ್ಕೂ ಪ್ರಾದೇಶಿಕ ಅರಸರ ಜತೆಗಿರುವ ಸಂಬಂಧ ಹಾಗೂ ರಾಜಾಡಳಿತವನ್ನು ಒಪ್ಪಿಕೊಂಡು ನಡೆಯುವ ಸಂಪ್ರದಾಯವನ್ನು ಸೂಚಿಸುವುದರೊಂದಿಗೆ ಪ್ರಾಚೀನ ಸಂಸ್ಕೃತಿಯ ಪ್ರತಿಬಿಂಬವಾಗಿ ಕಾಣುತ್ತದೆ. ಪ್ರಜಾಪ್ರಭುತ್ವ ಬಂದ ಮೇಲೂ ಪ್ರದೇಶದ ರಾಜರಿಗೆ ಸಲ್ಲಬೇಕಾದ ಗೌರವವನ್ನು ಸಮುದಾಯದವರು ಸಲ್ಲಿಸುತ್ತಲೇ ಬಂದಿದ್ದಾರೆ. ಕ್ಷೇತ್ರದ ಆಡಳಿತವು ಕ್ಷೇತ್ರಾಡಳಿತ ಮಂಡಳಿಯ ಕೈಯಲ್ಲಿ ಇದ್ದರೂ ಆಚಾರ ವರ್ಗವನ್ನು ಒಪ್ಪಿಕೊಳ್ಳುವ, ಆ ಪಟ್ಟವನ್ನು ಕಟ್ಟುವ ಹಕ್ಕು ಅದೇ ರಾಜ ವಂಶಕ್ಕೆ ಸೀಮಿತವಾದುದು ಇಂದಿಗೂ ನಡೆದು ಬಂದ ಪದ್ಧತಿ. ತುಳುನಾಡಿನ ಇತರ ಸಮುದಾಯದವರೂ ಇದನ್ನು ಅನುಸರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಇದು ರಾಜ ಹಾಗೂ ಪ್ರಜೆಗಳ ನಡುವೆ ಪ್ರಾಚೀನ ಕಾಲದಲ್ಲಿ ಇದ್ದಂತಹ ಭಾವನಾತ್ಮಕ ಸಾಂಸ್ಕೃತಿಕ ಸಂಬಂಧವನ್ನು ಪ್ರತಿನಿಧೀಕರಿಸುತ್ತದೆ.

ಇತ್ತೀಚೆಗೆ ಕೆಲವೆಡೆ ಅಚ್ಚಮ್ಮಾರರ (ಆಚಾರ ವರ್ಗದವರ) ಸ್ಥಾನವನ್ನು ಸ್ವೀಕರಿಸಲು ಸಮುದಾಯದ ಸದಸ್ಯರು ಹಿಂದೇಟು ಹಾಕುತ್ತಿರುವುದರಿಂದ ಕೆಲವು ಕ್ಷೇತ್ರಗಳಲ್ಲಿ ಆಚಾರ ವರ್ಗದವರ ಸ್ಥಾನವು ಹಲವು ಕಾಲಗಳಿಂದ ತೆರವಾಗಿಯೇ ಉಳಿದೆ. ಇಂತಹ ಸಂದರ್ಭದಲ್ಲಿ ಇತ್ತೀಚೆಗೆ "ಕ್ಷೇತ್ರ ಸಮಿತಿ"ಯೊಂದು ರೂಪು ತಾಳಿ ಕ್ಷೇತ್ರದ ಆಡಳಿತ ನಿರ್ವಹಣೆಯನ್ನು ಮಾಡುತ್ತಿದೆ. ಈ "ಆಧುನಿಕ ವ್ಯವಸ್ಥೆ"ಯು ಕ್ರಮೇಣ ಶ್ರೀಮಂತ ಸಂಸ್ಕೃತಿಯೊಂದನ್ನು ಕೆಲವೇ ವರ್ಷಗಳಲ್ಲಿ ಮೂಲೆಗೆ ತಳ್ಳುವುದರಲ್ಲಿ ಸಂಶಯವಿಲ್ಲ. ಆಗ "ನಗರ"ಗೆ ಹೊಸ ಪರಿಭಾಷೆಯೊಂದನ್ನು ರೂಪಿಸಬೇಕಾದೀತು.

## ೨. ನಿಟಿಲ್ ವಿರಿಕ್ಕಲ್ ಅಥವಾ ನಗರಂ ಚೇರಲ್

ಕಾರಣಾಂತರದಿಂದ ಚಿರಕ್ಕಲ್ ಪ್ರದೇಶದಿಂದ ಉತ್ತರದ ಕಡೆಗೆ ಬಂದಂತಹ ಶಾಲಿಯಾ ಸಮುದಾಯವು ಹದಿನಾಲ್ಕು ವಿಭಾಗಗಳಾಗಿ ವಿಭಜಿಸಲ್ಪಟ್ಟರೂ ಅವರ ಮಧ್ಯೆ ಒಂದು ರೀತಿಯ ಆಂತರಿಕವಾದ ಸಂಬಂಧದ ಉಳಿಕೆಗಾಗಿ ಪ್ರಾಚೀನ ಕಾಲದಿಂದಲೇ ರೂಢಿಸಿಕೊಂದು ಬಂದ ಒಂದು ಪದ್ಧತಿ "ನಿಟಿಲ್ ವಿರಿಕ್ಕಲ್" ಅಥವಾ "ನಗರಂ ಚೇರಲ್" (ನೆರಳು ಹಾಸುವುದು ಅಥವಾ ನಗರಗಳು ಸೇರುವುದು). ಇದನ್ನು ಇಂದಿಗೂ ಇವರು ಉಳಿಸಿಕೊಂಡು ಬಂದಿರುವುದಂದ ಇವರು ಒಂದೇ ಮೂಲಕ್ಕೆ ಸೇರಿದವರು ಎನ್ನುವುದನ್ನು ಇದು ದೃಢಪಡಿಸುವುದರೊಂದಿಗೆ, ಚಂದ್ರಗಿರಿಯ ದಕ್ಷಿಣದ ಕೇರಳದೊಂದಿಗೆ ಇವರಿಗಿರುವ ಸಂಬಂಧವನ್ನು ಬಲಪಡಿಸುತ್ತದೆ. ಸಾರಿಗೆ ಸೌಕರ್ಯಗಳು ಇಲ್ಲದಿದ್ದ ಕಾಲದಲ್ಲಿಯೂ ಚಂದ್ರಗಿರಿಯ ಹೊಳೆಯನ್ನು ದೋಣಿಯ ಮುಖಾಂತರ ದಾಟಿ ನಿಟಿಲ್ ವಿರಿಕ್ಕಲ್‌ನ ದಿನ ಕಾಸರಗೋಡಿನಿಂದ ಪಣಂಬೂರಿನವರೆಗೆ ಇದ್ದ ಶಾಲಿಯಾ ಸಮುದಾಯ ಅಲ್ಲಿ ಸೇರುತ್ತಿತ್ತು. ಹದಿನಾಲ್ಕು ನಗರಗಳ ಕೇಂದ್ರ ಸ್ಥಾನವೆಂದು ಅದನ್ನು ಗುರುತಿಸಲಾಗಿತ್ತು. ಚಿರಕ್ಕಲ್‌ನಿಂದ ಹೊರಟ ಶಾಲಿಯಾರ ಗುಂಪು ತಾವು ಒಂದಾಗಿ ಸೇರಿಕೊಳ್ಳಲು ಪ್ರಶಸ್ತವಾದ ಸ್ಥಳವನ್ನಾಗಿ "ಕೀಟೂರು" ಧರ್ಮಶಾಸ್ತಾ ದೇವಾಲಯವನ್ನು ಆಯ್ಕೆ ಮಾಡಿಕೊಂಡರು. ಅವರ ಆರಾಧ್ಯ ದೈವವೂ ಆತನಾಗಿದ್ದನೆಂದು ಐತಿಹ್ಯಗಳಿಂದ ತಿಳಿದು ಬರುತ್ತದೆ. ಒಂದು ಐತಿಹ್ಯದ ಪ್ರಕಾರವಾಗಿ ಚಿರಕ್ಕಲ್ ರಾಜನ ಬಳಿಯಿಂದ ಶಾಸ್ತಾವನ್ನು ನೆನೆಯುತ್ತಾ ಬಂದ ಶಾಲಿಯಾರ ಜೊತೆಗೆ ಒಂದು ನಾಯಿ ಇತ್ತೆಂದೂ ಆ ನಾಯಿ ಕೀಟೂರಿನ ಶಾಸ್ತಾವೇಶ್ವರ ದೇವಾಲಯಕ್ಕೆ ಇವರು ತಲುಪಿದಾಗ ಮಾಯವಾಯಿತೆಂದೂ, ಶಾಸ್ತಾವೇ ನಾಯಿಯ ರೂಪದಿಂದ ತಮ್ಮನ್ನು ರಕ್ಷಿಸಿ ಇಲ್ಲಿಯವರೆಗೆ ಕರೆತಂದದ್ದೆಂದೂ ಶಾಲಿಯರು ಅಭಿಪ್ರಾಯ ಪಡುತ್ತಾರೆ. ಇನ್ನೊಂದು ಐತಿಹ್ಯದ ಪ್ರಕಾರ ಚಿರಕ್ಕಲ್‌ನಿಂದ ರಾಜನು ತನ್ನ ಸಿಂಹಾಸನವನ್ನೇ ಆತನಿಗೆ ಬಿಟ್ಟು ಕೊಟ್ಟನಂತೆ ಇಂದೀಗ ಶಾಸ್ತಾವಿನ ಕ್ಷೇತ್ರವಾಗಿರುವ ದೇವಾಲಯವೇ ಆತನ ಅರಮನೆಯಾಗಿತ್ತು ಎಂದೂ ಹೇಳಲಾಗುತ್ತದೆ. ಈ ಮಾತನ್ನು ಪುಷ್ಟೀಕರಿಸುವಂತೆ ಆ ದೇವಾಲಯದಲ್ಲಿ ಶಾಸ್ತಾವನ್ನು ಸಿಂಹಾಸನದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯದ ಆಡಳಿತವನ್ನು ನಾಯರ್ ವರ್ಗದವರು ನೋಡಿಕೊಳ್ಳುತ್ತಾರೆ.

"ಶಾಸ್ತಾವು" ಓರ್ವ ರಾಜವಂಶದ ಸೈನ್ಯಾಧಿಪತಿಯಾಗಿರಬೇಕು. ಯುದ್ಧಾರ್ಥವಾಗಿ ಬಂದಂತಹ ಅವನೊಂದಿಗೆ ಸೇನಾನಿಗಳಾಗಿ ಐನೂರು ನಾಯನ್ಮಾರರೂ, ಶಾಲಿಯಾ, ಮೋಯಾ ಮತ್ತು ತೀಯಾ ಸಮುದಾಯದವರೂ ಬಂದಿರಬೇಕು ಎಂದು ಕೆಲವರ ಅಭಿಪ್ರಾಯ. ಶಾಸ್ತಾವು ಯುದ್ಧ ದೇವತೆ ಎನ್ನುವುದನ್ನು ಸ್ಪಷ್ಟಪಡಿಸುವಂತೆ ಆತನಿಗೆ ಹರಕೆಯ ರೂಪದಲ್ಲಿ ಆಯುಧಗಳನ್ನು

ನೀಡಲಾಗುತ್ತದೆ. ಇದನ್ನು ಪುಷ್ಟೀಕರಿಸುವಂತೆ ಐತಿಹ್ಯ ಒಂದು ಪ್ರಚುರವಾಗಿದೆ. ಒಂದು ಬಾರಿ ಓರ್ವ ಶಾಲಿಯನು ಅಲ್ಲಿರುವ ಆಯುಧಗಳ ರಾಶಿಯನ್ನು ಕಂಡು "ಇಷ್ಟೆಲ್ಲವನ್ನೂ ಯಾಕೆ ಇಲ್ಲಿ ಇಟ್ಟಿರುವಿರಿ ? ಅವುಗಳಲ್ಲಿ ಒಂದನ್ನು ನನಗೆ ಕೊಡಿ" ಎಂದು ಕೇಳಿದನಂತೆ. ಆ ಧರ್ಮದರ್ಶಿಗಳು "ನೀನು ಇವತ್ತು ರಾತ್ರಿ ಇಲ್ಲಿ ಮಲಗು. ಅದಕ್ಕೆ ಸಂಬಂಧಪಟ್ಟವರು ಅದನ್ನು ಕೊಂಡು ಹೋಗಿ ಉಳಿದುದನ್ನು ನೀನು ತೆಗೆದುಕೊಂಡು ಹೋಗು" ಎಂದರಂತೆ. ಆತ ಅಲ್ಲೇ ಮಲಗಿದ. ರಾತ್ರಿ ಕನಸಿನಲ್ಲೋ ಎನ್ನುವಂತೆ ದೊಡ್ಡ ಸೈನಿಕರ ಗುಂಪೊಂದು ಬಂದು ಅಲ್ಲಿರುವ ಆಯುಧಗಳನ್ನೆಲ್ಲಾ ತೆಗೆದುಕೊಂಡು ಸಾಕಾಗದೆ ಇವನ ಬಳಿಗೆ ಬಂದು ಇವನ ಕೈಯಲ್ಲಿರುವ ಕತ್ತಿಯನ್ನೂ ಕೊಂಡೊಯ್ದರೆಂದು ಐತಿಹ್ಯವಿದೆ. ಈ ನಾಲ್ಕು ಸಮುದಾಯಗಳೂ ವೃಶ್ಚಿಕ ಮಾಸದ ಒಂದೊಂದು ಶನಿವಾರದಂದು ಅಲ್ಲಿ ಸೇರಿಕೊಳ್ಳುತ್ತಾರೆ. ಮೊದಲನೆಯ ಶನಿವಾರ ನಾಯರ್ ಸಮುದಾಯವೂ, ಎರಡನೇಯ ಶನಿವಾರ ಶಾಲಿಯಾ ಸಮುದಾಯವೂ, ಮೂರನೇ ಶನಿವಾರ ಮೋಯಾ ಸಮುದಾಯವೂ ನಾಲ್ಕನೇ ಶನಿವಾರ ತೀಯಾ ಸಮುದಾಯವೂ ಇಲ್ಲಿ ಸೇರುತ್ತವೆ. ಕೊಲತ್ತಿರಿಯ ಸೈನ್ಯದೊಂದಿಗೆ ಇವರು ಬಂದಿರಬೇಕು. ಬೇರೆ ಬೇರೆಡೆ ಹರಿಹಂಚಾಗಿ ಹೋದ ಜಾತಿಯವರು ಒಂದುಗೂಡಲೂ, ಮೂಲಮಾತೃ ವಿಭಾಗಕ್ಕೆ ನಾವು ಸೇರಿದವರು ಎನ್ನುವುದನ್ನು ಜ್ಞಾಪಿಸಿಕೊಳ್ಳಲೂ ಈ ರೀತಿಯಲ್ಲಿ ಸೇರಿಕೊಳ್ಳುತ್ತಿರಬಹುದು. ಈಗ ಶಾಲಿಯಾ ಸಮುದಾಯದವರು ಮಾತ್ರ ನಿಖರವಾಗಿ ವೃಶ್ಚಿಕ ಮಾಸದ ಎರಡನೇ ಶನಿವಾರ ಸೇರಿಕೊಳ್ಳುತ್ತಾರೆ. ಇದನ್ನು "ನಗರಂ ಚೇರಲ್" ಎಂದು ಹೇಳುತ್ತಾರೆ.

ಕೀಬೂರಿನ ಧರ್ಮಶಾಸ್ತಾ ದೇವಾಲಯವು ಉತ್ತರ ಕೇರಳದ ಪ್ರಸಿದ್ಧ ಕ್ಷೇತ್ರಗಳಲ್ಲಿ ಒಂದು ತ್ರಿಕ್ಕನ್ನಾಡಿನ (ಕಾಸರಗೋಡು ಜಿಲ್ಲೆಯ ಉದುಮ ಎನ್ನುವ ಊರಿಗೆ ಸಮೀಪ) ಶಿವ ಕ್ಷೇತ್ರವು ಪರಶುರಾಮನಿಂದ ಸ್ಥಾಪಿಸಲ್ಪಟ್ಟ ನೂರೆಂಟು ಕ್ಷೇತ್ರಗಳಲ್ಲಿ ಒಂದಾಗಿದ್ದು ಕೀಬೂರು ಧರ್ಮಶಾಸ್ತಾ ಕ್ಷೇತ್ರವು ಇದರ ಒಂದು ಭಾಗವೆಂದು ಪರಿಗಣಿಸಲ್ಪಟ್ಟಿದೆ. ಈ ತ್ರಿಕ್ಕನ್ನಾಡು ಕ್ಷೇತ್ರದ ಜತೆಗೆ ದಕ್ಷಿಣದ ಎಡಂಗ ಶಾಲಿಯಾ ಸಮುದಾಯದ ಆರಾಧ್ಯ ದೈವಗಳಲ್ಲಿ ಒಂದಾದ ಮೂವಾಳಂ ಕುಝಿ ಚಾಮುಂಡಿಗೆ ವಿಶೇಷ ಸಂಬಂಧವಿದೆ.

ವೃಶ್ಚಿಕ ಮಾಸದ ಎರಡನೇಯ ಶನಿವಾರಂದು ಪಟ್ಟುವಂನಿಂದ ಪಣಂಬೂರುವರೆಗಿನ ಚೆಟ್ಟಿಯಾರ್ ಗಳು ಇಲ್ಲಿ ಸೇರುತ್ತಾರೆ. ಮೂತೆ ಚೆಟ್ಟಿಯಾರ್‌ಗೆ ಬರಲಾಗದಿದ್ದರೆ ಅವರ ಪ್ರತಿನಿಧಿಯಾಗಿ ಇಳಯ ಚೆಟ್ಟಿಯಾರ್ ಅಥವಾ ಇತರ ಆಚಾರ ವರ್ಗದವರು ಬರುತ್ತಾರೆ. ಕುಂಬಾರರು ತಯಾರಿಸಿದ "ನಾಯಿಕೋಲ" (ನಾಯಿಯ ರೂಪ) ಮತ್ತು ಒಂದು ಹೊಸ ಮುಂಡು ಶಾಸ್ತಾವಿನ ಗರ್ಭಗುಡಿಯ ಬಾಗಿಲಲ್ಲಿ ಇರಿಸಿ, ೧೪ ನಗರಗಳ ಅಚ್ಚಮ್ಮಾರರು ದೇವಾಲಯದ ಬಡಗು ದಿಕ್ಕಿನಲ್ಲಿರುವ ಅಗ್ರಸಾಲೆ (ಗೋಪುರ)ಯಲ್ಲಿ ತಮಗಾಗಿ ಕಾದಿರಿಸಿದ

ಸ್ಥಳಗಳಲ್ಲಿ ಕುಳಿತುಕೊಳ್ಳುತ್ತಾರೆ. ಅವರ ಅಧಿಕಾರವನ್ನೂ, ನಾಯಕತ್ವವನ್ನೂ, ಅಂತಸ್ತನ್ನೂ ಸೂಚಿಸುವಂತೆ ಕೆಲವು ವರ್ಷಗಳ ಹಿಂದೆ ನಾಯರ್‌ರಿಗೆ ಕುಳಿತುಕೊಳ್ಳಲು ಹುಲ್ಲಿನ ಚಾಪೆಯನ್ನೂ, ಶಾಲಿಯರಿಗೆ ತೆಂಗಿನ ಗರಿಯಿಂದ ಹೆಣೆದ ಮಡಲಿನ ಚಾಪೆಯನ್ನೂ ನೀಡಲಾಗುತ್ತಿತ್ತು. "ನಾಯರ್ ವರ್ಗಕ್ಕಿಂತ ಕೆಳವರ್ಗದವರು ಶಾಲಿಯರು" ಎಂಬುದನ್ನು ಇದು ಸಂಕೇತಿಸುತ್ತದೆ. (ಊಳಿಗಮಾನ್ಯತೆಯ ಪ್ರತೀಕವಾದ ಇದು ಈಗ ರೂಢಿಯಲ್ಲಿಲ್ಲ) ನಾಯರ್‌ಗಳೊಂದಿಗಿನ ಈ ಸೇರುವಿಕೆಯು ಶಾಲಿಯರು ನಾಯರ್‌ಗಳ ಕೈಕೆಳಗೆ ಯುದ್ಧಗಳಲ್ಲಿ ಭಾಗಿಯಾಗಲೋಸುಗವೇ ಇತ್ತ ಕಡೆ ಬಂದಿರಬೇಕು ಎಂಬುದನ್ನು ದೃಢಪಡಿಸುತ್ತದೆ.

ಎಲ್ಲರೂ ಕುಳಿತ ಮೇಲೆ "ಅಚ್ಚಮ್ಮಾರರು" ಅವರವರ "ನಗರಂ"ಗಳಿಂದ ತಂದ "ತರಕ್" ಎನ್ನುವ ಸಾಕ್ಷಿ ಪತ್ರವನ್ನು ಸಭೆಯ ಮುಂದಿಡುತ್ತಾರೆ. ತಮ್ಮ "ನಗರಂ"ನ ವಿವಾದಗಳೋ ಸಮಸ್ಯೆಗಳೋ ಇದ್ದರೆ ಅದನ್ನು ಹೇಳುತ್ತಾರೆ. ನಾಯನ್ಮಾರರ ಅಧ್ಯಕ್ಷತೆಯಲ್ಲಿ ಎಲ್ಲರೂ ಸೇರಿ ಒಂದು ತೀರ್ಮಾನಕ್ಕೆ ಬರುತ್ತಾರೆ. ಎಲ್ಲಾ "ನಗರಂ"ಗಳ ಅಚ್ಚಮ್ಮಾರರೂ, ನಾಯನ್ಮಾರರೂ ತೆಗೆದುಕೊಂಡ ತೀರ್ಮಾನಕ್ಕೆ ಉಳಿದವರು ತಲೆಬಾಗುತ್ತಿದ್ದರು. ಕೆಲವೊಮ್ಮೆ ಏನಾದರೂ ವಿವಾದಗಳಿದ್ದರೆ, ಹಲವು ಗಂಟೆಗಳವರೆಗೆ ಚರ್ಚೆಗಳು ಮುಂದುವರಿಯುವುದೂ ಇದೆ. ಚರ್ಚೆ ಮುಗಿದು ಅಚ್ಚಮ್ಮಾರರು ಏಳುವವರೆಗೆ ದೇವಾಲಯದ ಪೂಜೆ ನಡೆಯುವಂತಿಲ್ಲ. ಪೂಜೆಯಾಗದೆ ಯಾರೂ ಉಣ್ಣುವಂತಿಲ್ಲ. ಹಿಂದೆಲ್ಲಾ ಸಂಜೆಯವರೆಗೂ ಈ ರೀತಿ ಚರ್ಚೆಗಳು ಮುಂದುವರಿದ ಕತೆಗಳು ಇವೆ.

ಪಂಚಾಯತಿ ಕಳೆದ ಮೇಲೆ ಕ್ಷೇತ್ರದ ಗೋಪುರದಲ್ಲಿ ಒಂದು ಕಪ್ಪು ಕಂಬಳಿಯನ್ನು ಹಾಸಲಾಗುತ್ತದೆ. ಅದರ ಮೇಲೆ ಬಿಳಿಯ ವಸ್ತ್ರವನ್ನು ಕೀಚೂರಿನ ತೆರುವಿನ ಮೂತ್ತ ಚೆಟ್ಟಿಯಾರ್ ಹಾಸುತ್ತಾರೆ. ಇದನ್ನು "ವೆಳ್ಳಯುಂ ಕರಿಂಬಡವುಂ"(ಬಿಳಿ ಮತ್ತು ಕಪ್ಪು ಬಟ್ಟೆ)ಎಂದು ಹೇಳುತ್ತಾರೆ. ಇದನ್ನೊಂದು "ಪವಿತ್ರ ಕಾರ್ಯ" ಎಂದು ಪರಿಗಣಿಸಲಾಗುತ್ತದೆ. ಅದರ ಮೇಲೆ ಪಟ್ಟುವಂ ತೆರುವಿನ ಚೆಟ್ಟಿಯಾರ್ ರೇಶ್ಮೆ (ಪಟ್ಟೆ)ವಸ್ತ್ರವನ್ನು ಹಾಸುತ್ತಾರೆ. ಇದನ್ನು "ನಿಬಿಲ್ ವಿರಿಕ್ಕಲ್" (ನೆರಳು ಹಾಸುವುದು) ಎಂದು ಹೇಳುತ್ತಾರೆ. ಹೀಗೆ ಹಾಸಿದ ಪಟ್ಟೆ ವಸ್ತ್ರದ ಮೇಲೆ ಪ್ರತೀ ನಗರದವರು ಕಾಣಿಕೆಯ ರೂಪದಲ್ಲಿ ಹಣವನ್ನು ಹಾಕುತ್ತಾರೆ. ಈ ಹಣವನ್ನು ಗಂಟುಗಟ್ಟಿ ಅಲ್ಲೇ ಹತ್ತಿರದಲ್ಲಿರುವ ಶಾಲಿಯಾರ "ತಾನಂ" ಆದ "ಕಳರಿ ಅಂಬಲಂ"ನ "ಕುದಿರಕಾಳಿಯಮ್ಮನ" ಗರ್ಭಗುಡಿಯ ಮುಂದಿನ ಹೊಸ್ತಿಲಲ್ಲಿ ಇಡಲಾಗುತ್ತದೆ. ಅದು ಅಲ್ಲಿನ ಪ್ರಧಾನ ಅರ್ಚಕ (ಮೇಲ್‌ಶಾಂತಿ)ನಿಗೆ ಸಲ್ಲಬೇಕಾದುದು. ಅನಂತರ ಪೂಜೆಯಾಗಿ ನೈವೇದ್ಯ ದೊರಕಿದರೆ ಈ ಸಂಪ್ರದಾಯ ಮುಕ್ತಾಯವಾದಂತೆ.

ಸಮುದಾಯದೊಳಗೆ ಏಕತೆಯನ್ನು ಸಾಧಿಸಲು ಸಮೂಹ ನಿರ್ಮಿಸಿಕೊಂಡ ವ್ಯವಸ್ಥೆಯಿದು. ಹದಿನಾಲ್ಕು ನಗರಗಳಿಂದ ಬರುವ ಅಚ್ಚಮ್ಮಾರರನ್ನೂ ಬಂದು ಬಾಂಧವರನ್ನೂ ಸತ್ಕರಿಸುವ ಹೊಣೆಯು ಕೀಚೂರು ತೆರುವಿನವರದು. ಸಾಂಕೇತಿಕವಾದ ಈ ಕ್ರಿಯೆಯ ಹಿಂದೆ ಕೆಲವು ಅರ್ಥಗಳು ಹುದುಗಿರುವುದನ್ನು ಕಾಣಬಹುದು.

೧) "ನಾಯ್‌ಕೋಲ" ಅಥವಾ "ನಾಯಿಯ ರೂಪ"ವನ್ನು ಶಾಸ್ತಾವಿಗೆ ಅರ್ಪಿಸುವುದು ನಾಯಿಯ ರೂಪದಿಂದ ಶಾಸ್ತಾವು ತಮ್ಮನ್ನು ರಕ್ಷಿಸಿದ್ದನ್ನು ಪುನಃಸ್ಮರಣೆ ಮಾಡಿಕೊಳ್ಳಲಿಕ್ಕಾಗಿ ಆಗಿರಬಹುದು. ಅಥವಾ ಶಾಸ್ತಾವಿನ ಪ್ರಿಯವಾದ ಪ್ರಾಣಿ ನಾಯಿಯಾದುದರಿಂದ ದೇವರ ಪ್ರೀತ್ಯರ್ಥವಾಗಿ ಆಗಿರಬಹುದು.

೨) "ನಿಟಿಲ್ ಎರಿಕ್ಕಲ್"ನ ಸಮಯದಲ್ಲಿ ಕಪ್ಪು ಮತ್ತು ಬಿಳಿ ಬಟ್ಟೆಯನ್ನು ಹಾಸುವಾಗ ಮೊದಲು ಕಪ್ಪು ಬಟ್ಟೆಯನ್ನು ಹಾಸುವುದು "ನಾವು ದೂರವಾಗಿರಬೇಕಾಯಿತಲ್ಲಾ" ಎಂಬ ದುಃಖ ಸೂಚಕವಾಗಿರಬಹುದು (ಕಪ್ಪು ವರ್ಣ ದುಃಖ ಸೂಚಕ ತಾನೇ ?) ಅದರ ಮೇಲೆ ಬಿಳಿಯ ಬಟ್ಟೆ ಹಾಸುವುದು "ನಾವು ದೂರವಾಗಿದ್ದರೂ, ಒಂದಾಗಿ ಇಲ್ಲಿ ಶಾಂತಿಯಿಂದ ಸೇರೋಣ" ಎನ್ನುವುದನ್ನು ಸೂಚಿಸಲು ಆಗಿರಬಹುದು. (ಬಿಳಿಯ ಶಾಂತಿ ಸೂಚಕವಲ್ಲವೇ ?). "ದುಃಖದ ಹಿಂದೆ ಸುಖವಿದೆ. ದುಃಖ ಮೊದಲು ಸುಖ ಅನಂತರ" ಎಂಬುದನ್ನು "ಮೊದಲು ಕಪ್ಪು ಬಟ್ಟೆ ಮತ್ತು ಅನಂತರ ಬಿಳಿ ಬಟ್ಟೆ ಹಾಸುವುದು ಸಂಕೇತಿಸುತ್ತದೆ. ಅದನ್ನು ಕೀಟೂರು ತೆರುವಿನವರು ಹಾಸುವುದು "ಇದು 'ಕೇಂದ್ರ ಸ್ಥಾನ' ನಾವಿಲ್ಲಿ ಸೇರೋಣ" ಎಂಬ ಸಂಕೇತವಾಗಿರಬಹುದು.

೩) ಪಟ್ಟುವಂ ತೆರುವಿನವರು "ನಿಟಿಲ್ ಎರಿಕ್ಕಲ್"ನ್ನು ನಡೆಸುವುದು ಮತ್ತು ಅದಕ್ಕೆ ರೇಶ್ಮೆ ಬಟ್ಟೆಯನ್ನು ಬಳಸುವುದು ಪಟ್ಟುವಂ ಮೂಲಸ್ಥಾನ ಎನ್ನುವುದರ ಸೂಚಕ ಮಾತ್ರವಲ್ಲ, ಇವರು ಮೂಲತಃ ರೇಶ್ಮೆ ಬಟ್ಟೆಯನ್ನು ನೇಯುತ್ತಿದ್ದವರು ಎನ್ನುವುದನ್ನು ಸಂಕೇತಿಸುತ್ತದೆ.

೪) ಹಾಸಿದ ಬಟ್ಟೆಯ ಮೇಲೆ ನಿರ್ದಿಷ್ಟ ಮೊತ್ತವನ್ನು ಹಾಕುವುದು ಮತ್ತು ಅದನ್ನು ಗಂಟು ಕಟ್ಟಿ ಅಲ್ಲಿರುವ ತಮ್ಮದೇ "ತಾನಂ"ಗೆ ಸಮರ್ಪಿಸುವುದು, "ತಾನಂ"ಗಳ ಜತೆಗೆ ಅವರಿಗಿರುವ ಸಂಬಂಧವನ್ನು ಸೂಚಿಸಿಕೊಡುತ್ತದೆ. "ನಾವೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿದ್ದರೂ ಒಂದೇ "ತಾನಂ"ನ ಭಾಗಗಳು, ಒಂದೇ ನೆರಳಿನಲ್ಲಿ ಇರಬೇಕಾದವರು ಮತ್ತು ಹಲವು ನಗರಗಳಾಗಿ ವಿಭಾಗವಾಗಿದ್ದರೂ, ಸುಖ ದುಃಖವೆನ್ನುವ ಜೀವನದ ನೆರಳಿನಲ್ಲಿ ಒಂದಾಗಿ ಸೇರಿಕೊಂಡು, ನಮ್ಮದೇ ಆರಾಧ್ಯದೈವವನ್ನು ಅರ್ಚಿಸೋಣ, ನಂಬಿಕೊಂಡು ಬರೋಣ" ಎನ್ನುವುದನ್ನು ಸಂಕೇತಿಸಲೋಸುಗ ಆಗಿರಬಹುದು ಅನ್ನಿಸುತ್ತದೆ.

ಈ ಪದ್ಧತಿಯು ಯಾವಾಗ ಪ್ರಾರಂಭವಾಯಿತು ಎನ್ನುವುದಕ್ಕೆ ಯಾವುದೇ ಲಿಖಿತ ಪುರಾವೆ ದೊರಕದಿದ್ದರೂ, ಹಿರಿಯರ ಅಭಿಪ್ರಾಯದಂತೆ ಸುಮಾರು ೨೦೦ ವರ್ಷಗಳಿಗಿಂತಲೂ ಹಿಂದಿನಿಂದಲೇ ಈ ಪದ್ಧತಿಯು ರೂಢಿಯಲ್ಲಿತ್ತು ಎಂದು ತಿಳಿದು ಬಂದಿದೆ.



ನಗರಂ ಚೇರಲ್
ನಗರದ ಅಚ್ಚಮ್ಮಾರರ ಮಿಲನ



ನಗರದ ಅಚ್ಚಮ್ಮಾರರು



ನಿಟಿಲ್ ವಿರಿಕಲ್
(ನೆರಳು ಹಾಸುವುದು)



ಕ್ಷೇತ್ರದ ಉತ್ಸವದ ಸಂದರ್ಭದಲ್ಲಿ
ಅಚ್ಚಮ್ಮಾರರ ಪಾತ್ರ

# ೨. 'ಪಟ್ಟುವಂ' ನಿಂದ 'ಪಣಂಬೂರು' ವರೆಗಿನ ನಗರಗಳು

## ೧. ಪಟ್ಟುವಂ ನಗರಂ

ಕೇರಳದ ಅತ್ಯಂತ ದೊಡ್ಡ ಜಲಾಶಯಗಳಲ್ಲಿ ಒಂದು ಚಿರಕ್ಕಲ್ ಜಲಾಶಯ. ಇದರ ತೀರದಲ್ಲಿಯೇ ಕೋಲತ್ತುನಾಡಿನ ಕೋಲತ್ತಿರಿಯ ಅರಮನೆಯಿತ್ತು. ಅದರ ಎರಡೂ ದಡಗಳಲ್ಲಿ ನೇಕಾರರು ನೇಯ್ಗೆ ಕಾಯಕವನ್ನು ಅವಲಂಬಿಸಿಕೊಂಡು ಬಹಳ ಹಿಂದಿನ ಕಾಲದಿಂದಲೇ ಜೀವಿಸುತ್ತಿದ್ದರು. 'ವಿಲಿಯಂ ಲೋಗಾನ್' ತನ್ನ ಮಲಬಾರ್ ಮೇನ್ಯುವಲ್‌ನಲ್ಲಿ "ಚಿರಕ್ಕಲ್ ಎನ್ನುವುದು ಚಿರಕ್ಕಲ್ ರಾಜರ ವಾಸಸ್ಥಳ. ಅಲ್ಲಿ ಒಂದು ವಿಸ್ತಾರವಾದ ಸರೋವರವಿದೆ. ಸರೋವರದ ದಕ್ಷಿಣ ಭಾಗದಲ್ಲಿ ಕೋವಿಲಿಗಂ ಅಥವಾ ಅರಮನೆ ಇದೆ. ಆ ಸರೋವರವು ೧೧೪೨ ಅಡಿ ಉದ್ದ ಹಾಗೂ ೪೯೨ ಅಡಿ ಅಗಲವಿದೆ. ಅದರ ಪಶ್ಚಿಮ ಭಾಗದಲ್ಲಿ ಸುಮಾರು ಅರ್ಧ ಮೈಲು ಉದ್ದಕ್ಕೆ ನೇಕಾರರ ಬೀದಿಗಳಿವೆ". ಎಂದು ಹೇಳುತ್ತಾನೆ.

ಕೋಲತ್ತುನಾಡಿನಲ್ಲಿ ಕೋಲತ್ತಿರಿಯ ಕೈಕೆಳಗೆ ಬಲಂಗ ಶಾಲಿಯರ ೧೮ ತೆರುಗಳು ಇದ್ದವು ಎಂದು ಹೇಳಲಾಗುತ್ತದೆ. ಇವೆಲ್ಲವೂ ಚಿರಕ್ಕಲ್ ಸರೋವರದ ದಕ್ಷಿಣ ಭಾಗದಲ್ಲಿದೆ. ಚಿರಕ್ಕಲ್ ಸರೋವರದ ಬಳಿಯ 'ಪಟ್ಟುವಂ 'ದಿಂದ ಎಡಂಗಶಾಲಿಯಾ ಸಮುದಾಯದ ತೆರುಗಳು ಪ್ರಾರಂಭವಾಗುತ್ತವೆ.

"ತೊನ್ನೂಟ್ಟಾರ್ ನಗರಂ ಪಿನ್ನೆ
ಪಟ್ಟುವಂ ತೊಟ್ಟ್ ಪಣಂಬೂರುವರೆ
ಪತ್ತುಂ ನಾಲುಂ ಪದಿನಾಲ್ ನಗರಂ "
(ತೊಂಬತ್ತಾರು ನಗರಗಳು ಮತ್ತು
ಪಟ್ಟುವದಿಂದ ಆರಂಭಗೊಂಡು ಪಣಂಬೂರುವರೆಗೆ
ಹತ್ತು ಮತ್ತು ನಾಲ್ಕು ಹದಿನಾಲ್ಕು ನಗರಗಳು)

ಎಂಬ ನುಡಿಕಟ್ಟಿನಂತೆ ಚಂದ್ರಗಿರಿಯ ದಕ್ಷಿಣಕ್ಕೆ ಹತ್ತು ಶಾಲಿಯಾ ನಗರಗಳು, ಉತ್ತರಕ್ಕೆ ನಾಲ್ಕು ಶಾಲಿಯಾ ನಗರಗಳು ಇವೆ. ಪಟ್ಟುವದಿಂದ ಶಾಲಿಯಾರು ದಕ್ಷಿಣಕ್ಕೆ ಬಂದುದಕ್ಕೆ ಕಾರಣವನ್ನು ಹೇಳುವ ಐತಿಹ್ಯವೇನೇ ಇದ್ದರೂ ಅವರು ಅಲ್ಲಿಂದ ಬಂದವರು ಎನ್ನುವುದಕ್ಕೆ ಈ ಹಿಂದಿನ ಅಧ್ಯಾಯದಲ್ಲಿ ಕಾರಣವನ್ನು ನಾವು ಗುರುತಿಸಿಕೊಂಡಿದ್ದೇವೆ. ಚಿರಕ್ಕಲ್ ಜಲಾಶಯದ ಒಂದು ಕೊನೆಯಾದ 'ಕಡಲಾಯಿ ತೆರು' ವಿನಿಂದ 'ಬಲಂಗ ಶಾಲಿಯರ ತೆರು' ಆರಂಭವಾಗುತ್ತದೆ. ಇನ್ನೊಂದು ಕೊನೆಯಾದ 'ಪಟ್ಟುವಂ' ನಿಂದ 'ಎಡಂಗ ಶಾಲಿಯರ ತೆರು' ಆರಂಭಗೊಳ್ಳುತ್ತದೆ. ಎಡಂಗ ಶಾಲಿಯರ ಹದಿನಾಲ್ಕು ತೆರುಗಳಲ್ಲಿ ಪ್ರಮುಖ ಸ್ಥಾನವು 'ಪಟ್ಟುವಂ ತೆರು'ವಿಗೆ ಸಲ್ಲುತ್ತದೆ. "ಪಟ್ಟುವಂ " ಎನ್ನುವ ಪದವು ಪಟ್ಟ್(ರೇಷ್ಮೆ) ಎನ್ನುವುದರಿಂದ ಉತ್ಪತ್ತಿಯಾಗಿದೆ. 'ರೇಷ್ಮೆ ವಸ್ತ್ರ ನಿರ್ಮಾಣ

ಮಾಡುವ ಸ್ಥಳ' ಎನ್ನುವ ಕಾರಣದಿಂದ ಈ ಹೆಸರು ಬಂದಿರಬಹುದು, 'ಪಟ್ಟುವಾಣಿಬ' ಎನ್ನುವುದು ಇದರ ಮೂಲ ಹೆಸರೆಂದೂ ಹೇಳುತ್ತಾರೆ. 'ವಾಣಿಬ' ಎನ್ನುವ ಪದವು 'ವಾಣಿಜ್ಯ' ವನ್ನು ಸೂಚಿಸುತ್ತದೆ. ಆದುದರಿಂದ ಈ ಪ್ರದೇಶದಲ್ಲಿ ಒಂದು ಕಾಲದಲ್ಲಿ ರೇಷ್ಮೆ ವಸ್ತ್ರಗಳ ನಿರ್ಮಾಣ ಹಾಗೂ ಮಾರಾಟ ಇತ್ತು ಎಂದು ಹೇಳಬಹುದು. ಆದರೆ ಈಗ ಇಲ್ಲಿರುವ ಕೆಲವೇ ನೇಕಾರರ ಮನೆಗಳಲ್ಲಿ ಹತ್ತಿಬಟ್ಟೆಯನ್ನೇ ನೇಯಲಾಗುತ್ತದೆ. ಇಲ್ಲಿನ ಎಡಂಗ ಶಾಲಿಯಾರ ಕ್ಷೇತ್ರವನ್ನು 'ಶ್ರೀ ಕುರುಂಬಾ ಭಗವತಿ ಕ್ಷೇತ್ರಂ' ಎನ್ನುತ್ತಾರೆ.

ಈ ನಗರದ ಕ್ಷೇತ್ರದಲ್ಲಿ ಎರಡು ದೈವಗಳ ಗುಡಿಯಿದೆ. ಒಂದು ಗುಡಿಯಲ್ಲಿ 'ಕುರುಂಬಾ' (ಚೇರುಂಬಾ) ಭಗವತಿ ಕ್ಷೇತ್ರವೂ, ಇನ್ನೊಂದು ಗುಡಿಯಲ್ಲಿ 'ಕೋಲಸ್ವರೂಪತ್ತಿಂಗಳ್‌ತಾಯ ಕ್ಷೇತ್ರ'ವೂ ಇದೆ. 'ಕೋಲಸ್ವರೂಪತ್ತಿಂಗಳ್‌ತಾಯ್' ಕೋಲತ್ತುನಾಡಿನ ರಾಜರ ಅಧಿದೇವತೆ. ಉಪದೇವತೆಗಳಾಗಿ ವೇಟ್ಟಕ್ಕೊರುಮಗನ್ ಊರಪಜಿಶ್ಯಿ, ಪಡವೀರನ್, ಚೂಳಿಯಾರ್ ಭಗವತಿ, ಚಾಮುಂಡಿ, ವಿಷ್ಣುಮೂರ್ತಿ, ಗುಳಿಗನ್ ದೈವಗಳಿಗೂ ಇಲ್ಲಿ ಸ್ಥಳಗಳನ್ನು ಇಲ್ಲಿ ಕಲ್ಪಿಸಲಾಗಿದೆ. 'ಕಳಿಯಾಟ್ಟಂ'ನ ಸಂದರ್ಭದಲ್ಲಿ 'ದೈವಂ ಕೆಟ್ಟಿ ಆಡಿಕ್ಕಲ್' (ಕೋಲಕಟ್ಟಿ ಆಡಿಸುವುದು) ಎಂದು ಇವುಗಳನ್ನು ಆಡಿಸಲಾಗುತ್ತದೆ. ಮಲಯ ಹಾಗೂ ವಣ್ಣಾನ್ ಜಾತಿಯವರು ದೈವಗಳನ್ನು ಕಟ್ಟುತ್ತಾರೆ.

ಇಲ್ಲಿ 'ಕಳಿಯಾಟಂ' ಉತ್ಸವವು ಆರಂಭವಾಗುವುದಕ್ಕಿಂತಲೂ ಮೊದಲು ಈ ಪ್ರದೇಶದ ಪ್ರಧಾನ ಕ್ಷೇತ್ರವಾದ 'ಕಳರಿಪಾದುಕ್ಕಲ್' ಕ್ಷೇತ್ರದಿಂದ ದೀಪ ಮತ್ತು ಅಕ್ಕಿಯನ್ನು ತರಲಾಗುತ್ತದೆ. ಪ್ರಾದೇಶಿಕ ಕ್ಷೇತ್ರಗಳ ಜತೆಗೆ ಸಮುದಾಯದ ಕ್ಷೇತ್ರಗಳಿರುವ ಸಂಬಂಧವನ್ನು ಇದು ಸೂಚಿಸುತ್ತದೆ. ಈ ಕ್ಷೇತ್ರದ ಪರಿಸರದಲ್ಲಿ ಅತ್ಯಂತ ಪುರಾತನವಾದ ಒಂದು ಸಂಪಿಗೆಯ ಮರವಿದೆ. ಇದಕ್ಕೆ ಪ್ರದಕ್ಷಿಣೆ ಬಂದರೆ, ಸಂಕಷ್ಟಗಳು ದೂರವಾಗುತ್ತದೆ ಎಂಬ ನಂಬಿಕೆ ಆ ಪರಿಸರದ ಶಾಲಿಯಾ ಸಮುದಾಯದಲ್ಲಿದೆ.

ಕ್ಷೇತ್ರ ಪರಿಸರದ ತೆರುವಿನಲ್ಲಿ ಸಮಾಜ ಬಾಂಧವರ ಸಂಖ್ಯೆ ಹಾಗೂ ನೇಕಾರಿಕೆ ಇತ್ತೀಚೆಗೆ ಗಣನೀಯವಾಗಿ ಇಳಿಮುಖವಾಗುತ್ತಿದೆ. ಈ 'ನಗರಂ'ನ ಅಚ್ಚಮ್ಮಾರರಿಗೆ ೧೪ ನಗರಗಳಲ್ಲೂ ಪ್ರಮುಖ ಸ್ಥಾನವನ್ನು ನೀಡಲಾಗುತ್ತದೆ.

## ೨. ಅಡ್‌ತಿಲ ನಗರಂ

ಪಟ್ಟುವಂ ನಿಂದ ಉತ್ತರಕ್ಕೆ ಬಂದಂತಹ ಶಾಲಿಯಾ ಸಮುದಾಯ ಮೊದಲು ಇಲ್ಲಿ ನೆಲೆಸಿಂತರೆಂದೂ, ಕ್ರಮೇಣ ಇಲ್ಲಿ ಒಂದು 'ತೆರು' ನಿರ್ಮಾಣವಾಗಿ 'ಕ್ಷೇತ್ರ ಹಾಗೂ ನಗರಂ' ಅಸ್ತಿತ್ವಕ್ಕೆ ಬಂತು ಎಂದೂ ಹೇಳಲಾಗುತ್ತದೆ. ಇದು ಪಯಜಾಡಿಗೆ ಸಮೀಪದಲ್ಲಿದೆ. "ಕುರುಂಬಾ ಭಗವತೀ ಕ್ಷೇತ್ರವೆಂದು ಇಲ್ಲಿಯ 'ತಾನಂ'ಗೆ ಹೆಸರು. ಭಗವತಿ ಪ್ರಧಾನ ದೈವವಾಗಿದ್ದು, ಗುಳಿಗ, ಮೂವಾಬಂ ಕುಜು ಚಾಮುಂಡಿ ಮೊದಲಾದ ಉಪದೈವಗಳಿವೆ. ಈ ಕ್ಷೇತ್ರಕ್ಕೂ ಇಲ್ಲಿನ 'ಮಾಡಾಯಿ' ಎನ್ನುವಲ್ಲಿನ ದೇವೀ ಕ್ಷೇತ್ರಕ್ಕೂ ನಿಕಟವಾದ ಸಂಬಂಧವಿದೆ. ಮಾಡಾಯಿ ಕ್ಷೇತ್ರದ ದೇವಿಯ ಪ್ರತ್ಯರ್ಥವಾಗಿ ಇಲ್ಲಿ 'ಮೀನಮೃತೆಬುನ್ನಳ್ಳತ್' (ವಿವರಗಳಿಗೆ ಪಯ್ಯನ್ನೂರು 'ನಗರಂ' ನೋಡಿ)

ಎನ್ನುವ ಆಚರಣೆ ನಡೆಯುತ್ತದೆ. ಉತ್ಸವ ಸಮಯದಲ್ಲಿ ಮಾಡಾಯಿ ಕ್ಷೇತ್ರದಿಂದ ತೆಂಕುಭಾಗದ 'ದಾರಿಕನ್ ಕೋಟೆ' ಎನ್ನುವಲ್ಲಿಗೆ ದೇವಿಯ ಉತ್ಸವ ಮೂರ್ತಿಯನ್ನು ತರಲಾಗುತ್ತದೆ. ದಾರುಕಾಸುರನ ಸಂಹಾರದ ಅನಂತರ ದೇವಿಯು ಅಸ್ತವ್ಯಸ್ತವಾದ ತನ್ನ ವೇಷದೊಂದಿಗೆ ಇಲ್ಲಿ ವಿಶ್ರಮಿಸಿದಳೆಂದೂ, ತನ್ನ ವಸ್ತ್ರವನ್ನು ಬದಲಾಯಿಸುವ ಸಮಯದಲ್ಲಿ ಅಡ್ಡಲಾಗಿ ಬಟ್ಟೆಯನ್ನು ಹಿಡಿಯುವ ಹಕ್ಕನ್ನು ಅಡ್‌ತಿಲ ಕ್ಷೇತ್ರದ 'ನಗರಂ' ನ ಶಾಲಿಯಾರಿಗೆ ನೀಡಿದಳೆಂದೂ ಐತಿಹ್ಯವಿದೆ.

ಇಲ್ಲಿ ಮೀನಮಾಸದ 'ಕಾರ್ತಿಕ' ದಿಂದ 'ಮಖ' ನಕ್ಷತ್ರದವರೆಗೆ ನಡೆಯುವ ಏಳೆಂಟು ದಿನಗಳ ಉತ್ಸವದೊಂದಿಗೆ 'ಪೂರಕ್ಕಳಿ' ನಡೆಯುತ್ತದೆ. ದಾರುಕವಧೆಯ ಸಂದರ್ಭದಲ್ಲಿ ಕುಪಿತಳಾದ ದೇವಿಯನ್ನು ಶಾಂತಗೊಳಿಸಲು ಹಾಡುವ ಸ್ತುತಿಗೀತೆಯೇ 'ಪೂರಕ್ಕಳಿ' ಎಂದು ಹೇಳಲಾಗುತ್ತದೆ. ಇದನ್ನು ಮಾಡಾಯಿ ಕ್ಷೇತ್ರದಲ್ಲಿ ಆಡುವ ಹಕ್ಕನ್ನು ಶಾಲಿಯರಿಗೆ ನೀಡಲಾಗಿದೆ. ಹಿಂದೆ ಮಾಡಾಯಿ ಕ್ಷೇತ್ರದಿಂದ ಪೂರಕ್ಕಳಿ ಆಡುವ ಶಾಲಿಯರಿಗೆ ೨೫ ಸೇರು ಭತ್ತ ಕೊಡುತ್ತಿದ್ದರು. ಈಗ ೨೦೦೦ ರೂಪಾಯಿಗಳನ್ನು ನೀಡಲಾಗುತ್ತಿದೆ.

ಈ 'ನಗರಂ' ನವರು ಹಾಡುವ ಪೂರಕ್ಕಳಿಯ ಹಾಡಿನಲ್ಲಿ ದೇವಿಯನ್ನು ಸ್ತುತಿಸುವ ಗೀತೆಗಳೊಂದಿಗೆ, ದೇವಾಲಯದ ಐತಿಹ್ಯವೂ, ಕೋಲಸ್ವರೂಪದ ರಾಜರನ್ನು ಸ್ಮರಿಸುವ ಸಾಲುಗಳೂ ಇವೆ. ಪೂರಕ್ಕಳಿಯ ಸಾಲುಗಳು ಬಾಯಿಯಿಂದ ಬಾಯಿಗೆ ಹರಿದು ಬರುವುದರಿಂದ ಸಾಲುಗಳು ವ್ಯತ್ಯಯಗೊಳ್ಳುವುದು ಸಾಮಾನ್ಯ.

ಈ 'ನಗರಂ' ನ ಆಚಾರವರ್ಗದಲ್ಲಿ ಮೂತೆಚೆಟ್ಟಿಯಾರ್ ಮತ್ತು ಕಾರ್ನವರು ಪ್ರಮುಖ ಪಾತ್ರವಹಿಸುತ್ತಾರೆ. ಕೆಲವು ಆಚಾರ ಸ್ಥಾನಗಳು ತೆರವಾಗಿವೆ. ಕ್ಷೇತ್ರ ಪರಿಸರವಾದ 'ತೆರು' ವಿನಲ್ಲಿ ಸುಮಾರು ೪೦ ರಷ್ಟು ಸಮಾಜ ಬಾಂಧವರ ಮನೆಗಳು ಕಂಡುಬರುತ್ತವೆ. ನೇಕಾರಿಕೆ ಇಲ್ಲಿಯೂ ಶಿಥಿಲಗೊಳ್ಳುತ್ತಿದೆ.

## ೩. ಕುಂಞಮಂಗಲಂ ನಗರಂ

ಈ 'ನಗರಂ' ಗೆ 'ಚೆಮ್ಮಟ್ಟಿಲ ನಗರಂ' ಎಂದು ಪರ್ಯಾಯ ನಾಮವೂ ಇದೆ. ಇದು ಅಡ್‌ತಿಲ ತೆರುವಿಗೆ ಸಮೀಪದಲ್ಲಿದೆ. ಇಲ್ಲಿ ಮೂರು ಭಗವತಿ ಕ್ಷೇತ್ರಗಳಿವೆ. ಎರಡು 'ವೀರಚಾಮುಂಡೇಶ್ವರೀ ಕ್ಷೇತ್ರ' ಮತ್ತು 'ಒಂದು ಕುರುಂಬಾ ಭಗವತಿ ಕ್ಷೇತ್ರ'. 'ಕಳಿಯಾಟ್ಟ' ವು ಇಲ್ಲಿನ ವಿಶೇಷ ಉತ್ಸವ. ಒಂದನೇ 'ವೀರಚಾಮುಂಡೇಶ್ವರೀ ಕ್ಷೇತ್ರ' ದಲ್ಲಿ ಮೇಷಮಾಸದ ಏಳನೇ ದಿನ ಹತ್ತಿರದ ಶಿವ ಕ್ಷೇತ್ರದಿಂದ ಜ್ಯೋತಿಯನ್ನು ತಂದು ದೀಪ ಉರಿಸುವುದರೊಂದಿಗೆ ಉತ್ಸವವು ಆರಂಭವಾಗುತ್ತದೆ. ಚೂಳಿಯಾರ್ ಭಗವತಿ, ವಿಷ್ಣುಮೂರ್ತಿ, ಭಗವತಿ ಈ ಮೊದಲಾದ ದೈವಗಳನ್ನು ಕಟ್ಟಿ ಆಡಿಸಲಾಗುತ್ತದೆ. ಎರಡನೇ ವೀರಚಾಮುಂಡೇಶ್ವರೀ ಕ್ಷೇತ್ರದಲ್ಲಿ ಮಾಡಾಯಿ ಕ್ಷೇತ್ರದಿಂದ ಜ್ಯೋತಿಯನ್ನು ಉರಿಸಿ ವೈಭವದಿಂದ ತರಲಾಗುತ್ತದೆ. ತೆರುವಿನವರೆಲ್ಲರೂ ಇದರಲ್ಲಿ ಭಾಗವಹಿಸುತ್ತಾರೆ. ಕ್ಷೇತ್ರ ಪರಿಸರಕ್ಕೆ ಜ್ಯೋತಿಯು ಬಂದಾಗ ತೆರುವಿನವರೆಲ್ಲರೂ ಅದನ್ನು ವೈಭವದಿಂದ ಸ್ವಾಗತಿಸಿ ಬರಮಾಡಿಕೊಳ್ಳುತ್ತಾರೆ. ಅನಂತರ ಆ ಜ್ಯೋತಿಯಿಂದ ಈ 'ನಗರಂ'ನ ಕ್ಷೇತ್ರದ ದೀಪವನ್ನು

ಹಚ್ಚುವುದರೊಂದಿಗೆ ಉತ್ಸವವು ಆರಂಭಗೊಳ್ಳುತ್ತದೆ. ಮೆರವಣಿಗೆಯಲ್ಲಿ ಜ್ಯೋತಿಯನ್ನು ತರುವ ಸಮಯದಲ್ಲಿ ದಾರಿಯಲ್ಲಿ ದೀಪವು ನಂದಿ ಹೋದರೆ ಮರಳಿ ಕ್ಷೇತ್ರಕ್ಕೆ ಹೋಗಿ ಉರಿಸಿ ತರಲಾಗುತ್ತದೆ.

ಇಲ್ಲಿನ 'ನಗರಂ'ನ ಸದಸ್ಯರಿಗೂ ಮಾಡಾಯಿ ಕ್ಷೇತ್ರದಲ್ಲಿ ಪೂರಕ್ಕಳಿ ಆಡುವ ಹಕ್ಕು ರಾಜರಿಂದಲೇ ಕೊಡಲ್ಪಟ್ಟಿದೆ ಎನ್ನಲಾಗಿದೆ. ಆದರೆ ಈ 'ನಗರಂ' ನಲ್ಲಿ ಈಗ ಯಾರೂ 'ಪೂರಕ್ಕಳಿ' ಯನ್ನು ಆಡುವ ಪದ್ಧತಿಯಿಲ್ಲ. ತೆಕ್ಕುಂಬಾಟ್ ಎನ್ನುವಲ್ಲಿನ 'ವೀರಚಾಮುಂಡೇಶ್ವರಿ ಕ್ಷೇತ್ರ' ದಲ್ಲಿ ಇವರು ಪೂರಕ್ಕಳಿಯನ್ನು ಈ ಹಿಂದೆ ಆಡುತ್ತಿದ್ದರೆಂದೂ, ಅದಕ್ಕೆ ಪ್ರತಿಫಲವಾಗಿ ೧೫೦ ಸೇರು ಭತ್ತವು ಇವರಿಗೆ ಸಿಗುತ್ತಿತ್ತೆಂದೂ ಅಭಿಪ್ರಾಯವಿದೆ. ಇತ್ತೀಚೆಗೆ ಅಲ್ಲಿಯೂ ಪೂರಕ್ಕಳಿ ಇಲ್ಲ. ಪೂರಕ್ಕಳಿ ಆಡುವಂತಹ ಗುಂಪೇ 'ಚೆಮ್ಮಟ್ಟಿಲ ನಗರಂ' ನಲ್ಲಿ ಈಗ ಇಲ್ಲ.

ಸುಮಾರು ೬೦ ಮನೆಗಳಿರುವ ಶಾಲಿಯಾ 'ತೆರು' ಈ ನಗರದ ಆಡಳಿತದ ಸುಪರ್ದಿಯಲ್ಲಿದೆ. ನೇಕಾರಿಕೆ ಇಲ್ಲಿನ ಪ್ರಮುಖ ವೃತ್ತಿಯಾಗಿ ಇನ್ನೂ ಉಳಿದಿದೆ. ಇತ್ತೀಚೆಗೆ ಇಲ್ಲಿಯೂ ಆಚಾರ ವರ್ಗದವರ ಸ್ಥಾನವು ತೆರವಾಗುತ್ತಿದೆ. ಓರ್ವ ಮಡೆಯ ಮಾತ್ರ ಇಲ್ಲಿ ಆಚಾರವರ್ಗದ ಪ್ರತಿನಿಧಿಯಾಗಿ ಉಳಿದಿದ್ದಾನೆ. ಸುಮಾರು ೩೦೦ ರಷ್ಟು ಸದಸ್ಯರಿಂದ ಕೂಡಿದ ನಗರವಿದು.

## ೪. ಪಯ್ಯನ್ನೂರು ನಗರ

ಪಯ್ಯನ್ನೂರು ಪೇಟೆಯಿಂದ ಎರಡು ಕಿ. ಮಿ ದೂರದಲ್ಲಿ ಈ 'ನಗರ' ವಿದೆ. ಇಲ್ಲಿ ಶಾಲಿಯಾ ಸಮುದಾಯಕ್ಕೆ ಸೇರಿದ ಅಷ್ಟಮಿಚ್ಚಾಲ್ ಭಗವತೀ ಕ್ಷೇತ್ರವಿದೆ. ಸುಮಾರು ೫೦೦ ಕ್ಕಿಂತಲೂ ಹೆಚ್ಚು ಮನೆಗಳು ಈ ನಗರದ ವ್ಯಾಪ್ತಿಯಲ್ಲಿದೆ. ೧೦೦೦ ಕ್ಕಿಂತಲೂ ಹೆಚ್ಚು ಸದಸ್ಯರು ಈ ನಗರದಲ್ಲಿ ಸೇರಿಕೊಂಡಿದ್ದಾರೆ. ಈ 'ನಗರಂ' ನಲ್ಲಿ ಮೂತ್ತೆಚೆಟ್ಟಿಯಾರ್‌ರನ್ನು 'ಪುತ್ತನ್ ಕುಡಿ' ಎಂದೂ ಇಳಯ ಚೆಟ್ಟಿಯಾರ್‌ರನ್ನು 'ಮುರಂಡೆನ್' ಎಂದೂ ಕರೆಯುತ್ತಾರೆ. ಇವರೀರ್ವರಿಗೂ ಪ್ರತ್ಯೇಕವಾದ ತರವಾಡು ಮನೆಗಳು ಕ್ಷೇತ್ರದ ಬಳಿಯಲ್ಲೇ ಇದೆ. ೫ ಕಾರ್ನವರೂ, ೪ ಕೋಮರರೂ ಇದ್ದಾರೆ. ಇಲ್ಲಿನ ಕ್ಷೇತ್ರದ ಒಂದೇ ಪೀಠದಲ್ಲಿ ಎರಡು ಭಗವತಿಯರ ವಿಗ್ರಹಗಳನ್ನು ಕಾಣಬಹುದು. ವೀರಭದ್ರಸ್ವಾಮಿ, ಕ್ಷೇತ್ರಪಾಲನೇಶ್ವರ, ಶಸಿದೇವರು, ಚೀರುಂಬಾ ಭಗವತಿ ಇಲ್ಲಿನ ಉಪದೈವಗಳು. ಮಾಡಾಯಿ ಕ್ಷೇತ್ರದಿಂದ ಬಂದ ದೇವಿಯೇ ಪಯ್ಯನ್ನೂರಿನಲ್ಲೂ ನೆಲೆನಿಂತಿದ್ದಾಳೆ ಎಂಬ ಅಭಿಪ್ರಾಯವಿದೆ. ಇದರ ಹಿಂದೆ ಐತಿಹ್ಯವೊಂದು ಹೀಗಿದೆ:- "ಚಿರಕ್ಕಲ್ ರಾಜರ ಕಾಲದಲ್ಲಿ, ಆ ರಾಜವಂಶದ ರಾಜನೊಬ್ಬನು ಮಾಡಾಯಿಕ್ಕಡವು ಭಗವತೀ ಕ್ಷೇತ್ರವನ್ನು ದರ್ಶಿಸಿ ಹಿಂತಿರುಗಿ ಬರುವಾಗ ಹೊಳೆಯನ್ನು ದಾಟಲು ದೋಣಿಗಾಗಿ ಬಹಳ ಹೊತ್ತು ಕಾಯಬೇಕಾಗಿ ಬಂತು. ಹೀಗಿರಲು ಆತನ ಬಳಿಗೆ ಸುಂದರಿಯಾದ ಕನ್ಯೆಯೊಬ್ಬಳು ಬಂದು, ನನಗೂ ಹೊಳೆಯನ್ನು ದಾಟಲಿಕ್ಕಿದೆ" ಎಂದಳು. ರಾಜ "ದೋಣಿ ಇನ್ನೂ ಬರುವುದು ಕಾಣುತ್ತಿಲ್ಲವಲ್ಲಾ" ಎಂದಾಗ, ಆ ಕನ್ಯೆಯು ಅರಸನಲ್ಲಿ "ತೊಂದರೆಯಿಲ್ಲ ನೀವು ನಿಮ್ಮ ಉತ್ತರೀಯವನ್ನು ನೀರಿಗೆ ಇಡಿ" ಎಂದಳು. ರಾಜ ಅವಳ ಮಾತಿಗೆ ಎದುರಾಡದೆ ಅಂತೇ ಗೈದ.

ಕೂಡಲೇ ಹೊಳೆ ಎರಡು ವಿಭಾಗವಾಯಿತು. ಅವರು ನಡೆದು ಆಚೆ ದಡ ಸೇರಿದರು. ತುಂಬಾ ದೂರ ನಡೆದಾಗ ಕನ್ಯೆಯು "ನನಗೆ ತುಂಬಾ ಬಾಯಾರಿಕೆಯಾಗುತ್ತಿದೆ" ಎಂದಳು. ಅವರು ಗೋವುಗಳನ್ನು ಸಾಕುವ ಮಣಿಯಾಣಿ (ಯಾದವ ವಂಶದವನು) ಯೊಬ್ಬನ ಮನೆಗೆ ಹೋಗಿ ಹಾಲು ಕೇಳಲು ಅವನು, "ನಾನೀಗ ಹಾಲು ಕರೆದಾಯಿತಷ್ಟೇ ಹಾಲಿಲ್ಲ.. " ಎನ್ನಲು ಕನ್ಯೆಯು "ತೊಂದರೆಯಿಲ್ಲ, ಇನ್ನೊಂದು ಬಾರಿ ಹಾಲು ಕರೆದು ನೋಡು" ಎಂದಳು. ಆತ ಬಿದಿರನ ಕೊಳವೆಯಲ್ಲಿ ಹಾಲನ್ನು ಕರೆದಾಗ ಬಹಳಷ್ಟು ಹಾಲು ದೊರಕಿತು. ಅದನ್ನು ಕುಡಿದು ಬಿದಿರಿನ ಕೊಳವೆಯನ್ನು ಆಕೆ ಕವುಚಿ ಹಾಕಿದಳು. ಮುಂದೆ ಆ ಸ್ಥಳದಲ್ಲಿ ಬಿದಿರಿನ ದೊಡ್ಡ ಹಿಂಡೇ ಬೆಳೆಯಿತು. (ಅಲ್ಲೇ ಇರುವ ಬಿದಿರಿನ ಹಿಂಡೊಂದನ್ನು ಸ್ಥಳೀಯರು ತೋರಿಸುತ್ತಾರೆ). ಅಲ್ಲಿಂದ ಮುಂದೆ ಅವರು ನೇರವಾಗಿ ಶಾಲಿಯಾ ಸಮುದಾಯದ ತೆರುವಿಗೆ ಬಂದು ಅಲ್ಲಿದ್ದ ಇಳೆಯ ಚೆಟ್ಯಾರ್‌ರ ಕೈಯಿಂದ ಒಂದು ಕಪ್ಪುನೂಲನ್ನು ಪಡೆದುಕೊಂಡಳು. ಜತೆಗಿರುವ ರಾಜ ನೇರವಾಗಿ ಪಯ್ಯನ್ನೂರು ಕ್ಷೇತ್ರದೆಡೆಗೆ ಬಂದು, ಕ್ಷೇತ್ರದ ಹೊಸ್ತಿಲು ದಾಟುವಾಗ ಹಿಂತಿರುಗಿ ನೋಡಿದನು. ತನ್ನನ್ನು ಅನುಸರಿಸಿಕೊಂಡು ತನ್ನ ಹಿಂದೆಯೇ ಬರುತ್ತಿರುವ ಹುಡುಗಿಯನ್ನು ಕಂಡು, "ನೀನು ಅಲ್ಲೇ ನಿಲ್ಲು. ಕ್ಷೇತ್ರದೊಳಗೆ ಪ್ರವೇಶಿಸಬೇಡ. ನೀನೋರ್ವ ಶಾಲಿಯಾ ಹೆಣ್ಣು" ಎಂದು ತಡೆದನು. ಆಕೆ ಅಲ್ಲೇ ನಿಂತು ಪೆರುಮಾಳ್‌ನಲ್ಲಿ ತನಗೊಂದು ನೆಲೆ ಬೇಕು ಎಂದು ಕೇಳಿಕೊಂಡಳು. ಆಕೆ ಸಾಕ್ಷಾತ್ ಭಗವತಿಯೆಂದು ಅರಿತ ಪೆರುಮಾಳ್ ತನ್ನ ಬಲಭಾಗದಲ್ಲಿ ಆಕೆಗೆ ಸ್ಥಾನವನ್ನು ನೀಡಿ, ಉಂಬಳಿಯಾಗಿ ಬಹಳಷ್ಟು ಭೂಮಿಯನ್ನು ಒದಗಿಸಿದನು. ಕ್ಷೇತ್ರ ಪ್ರವೇಶಕ್ಕೆ ಅನುಮತಿಯನ್ನು ಕೆಳವರ್ಗದವರಿಗೆ ನೀಡುವುದಕ್ಕಿಂತ ಮುನ್ನ ಪಯ್ಯನ್ನೂರು ಕ್ಷೇತ್ರದಲ್ಲಿ ಶಾಲಿಯಾರಿಗೆ ಒಳಗೆ ಪ್ರವೇಶವಿರಲಿಲ್ಲ. ಇಂತಹದೇ ಇನ್ನೊಂದು ಐತಿಹ್ಯದಲ್ಲಿ ಶಾಲಿಯಾರಿಗೆ ಕೀಜೂರು ಶಾಸ್ತ ದೇವಾಲಯದ ಒಳಗೆ ಪ್ರವೇಶವು ನಿಷಿದ್ಧವಾದ ಬಗ್ಗೆ ಕಥೆಯೊಂದು ಪ್ರಚಲಿತವಾಗಿದೆ.

ಈ ಭಗವತೀ ಕ್ಷೇತ್ರದ ಸಮೀಪದಲ್ಲೇ ಸುಬ್ರಹ್ಮಣ್ಯಸ್ವಾಮಿ ದೇವಾಲಯವಿದೆ. ಆ ದೇವಾಲಯಕ್ಕೆ ಬೇಕಾದ ಪವಿತ್ರ ವಸ್ತ್ರಗಳನ್ನು 'ಪಯ್ಯನ್ನೂರು ನಗರಂ' ನಿಂದಲೇ ಕೊಡಬೇಕು ಎಂಬ ನಿಯಮವಿದೆ.

ಅಷ್ಟಮಿಚ್ಚಾಲ್ ಭಗವತೀ ಕ್ಷೇತ್ರದ ವಿಶೇಷವಾದ ಉತ್ಸವವು 'ಮೀನಮೃತೆಜಿನ್ನಳ್ತ್' ಈ ಉತ್ಸವವು ಮೀನ ಮಾಸದಾರಂಭದ ಏಳು ದಿನಗಳಲ್ಲಿ ನಡೆಯುತ್ತದೆ. ಐದನೆ ದಿನ ತೆರುವಿನ ಆಬಾಲವೃದ್ಧರು 'ಕವಾಯಿ ಹೊಳೆ' ಗೆ ಮೀನು ಹಿಡಿಯಲು ಹೋಗುತ್ತಾರೆ. ಅಲ್ಲಿ ಮೀನು ಹಿಡಿಯಲು ಹೋಗುವ ಸಂದರ್ಭದಲ್ಲಿ 'ಬೆತ್ತದಿಂದ ಹೊಡೆದರೂ, ಹೊಡೆತ ತಿಂದರೂ ಕುಪಿತರಾಗುವುದಿಲ್ಲ' ಎಂದು ಪ್ರತಿಜ್ಞೆ ತೆಗೆದುಕೊಳ್ಳಬೇಕು. ಬಹುಶಃ ಹಿಂದೆ ಮೀನನ್ನು ಬೆತ್ತದಿಂದ ಹೊಡೆದು ಕೊಂದು ತರುವಂತಹ ಪದ್ಧತಿ ಇದ್ದಿರಬೇಕು. ಆದರೆ ಈಗ ಬಲೆ ಬೀಸಿ ಮೀನು ಹಿಡಿಯಲಾಗುತ್ತದೆ. ಈ ರೀತಿ ಹಿಡಿದ ಮೀನನ್ನು ಇಪ್ಪತ್ತೊಂದು ಕೋಜಿ (ಮಾಲೆ? ಹಿಂದೆ ಮೀನನ್ನು ಮರದ ತೊಗಟೆಯ ನಾರಿನಲ್ಲಿ ಕೋದು ಮಾರಾಟ ಮಾಡುತ್ತಿದ್ದರು. ಅದನ್ನು ಕಾಸರಗೋಡು ಕಡೆಯಲ್ಲಿ 'ಕೋಪ'

ಎಂದು ಹೇಳುತ್ತಾರೆ) ಗಳನ್ನಾಗಿ ಮಾಡಿ ದೇವಾಲಯಕ್ಕೆ ತರಲಾಗುತ್ತದೆ. ಈ ರೀತಿ ಮೀನು ಹಿಡಿದು ಬರುವವರನ್ನು ವೈಭವದಿಂದ ದೇವಾಲಯಕ್ಕೆ ಬರಮಾಡಿಕೊಳ್ಳುತ್ತಾರೆ. ತಂದ ೨೧ ಮೀನಿನ ಮಾಲೆಗಳನ್ನು ದೇವಾಲಯದ ಆಚಾರವರ್ಗದವರ ಕೈಗೆ ನೀಡುತ್ತಾರೆ. ಉಳಿದ ಮೀನುಗಳನ್ನು ಪ್ರಸಾದ ರೂಪವಾಗಿ ಹಂಚಲಾಗುತ್ತದೆ.

ಅಷ್ಟಮಿಚ್ಚಾಲ್ ಭಗವತಿಯು 'ಜಲದೇವತೆಯಾದ ದುರ್ಗೆ' ಎಂಬ ನಂಬಿಕೆಯಿದೆ. ಹಿಂದೆ 'ವಳಂಜಿಯರ್' (ದೋಣಿಯಲ್ಲಿ ವ್ಯಾಪಾರ ನಡೆಸುವವರು) ಎಂದು ಕರೆಯಲ್ಪಡುವ ಶಾಲಿಯರು ಜಲಮಾರ್ಗವಾಗಿ ವ್ಯಾಪಾರ ನಡೆಸುತ್ತಿದ್ದರೆಂದೂ, ಆಗ ತಮಗ್ಯಾವುದೇ ತೊಂದರೆಗಳು ಉಂಟಾಗದಂತೆ ಜಲದೇವತೆಯನ್ನು ಈ ರೀತಿಯಲ್ಲಿ ಪ್ರೀತಿಪಡಿಸುವ ಪದ್ಧತಿಯು ಆರಂಭವಾಗಿರಬೇಕೆಂದೂ ಅಭಿಪ್ರಾಯವಿದೆ. ಈ ಪದ್ಧತಿಯು ಇತರ ನಗರಂಗಳಾದ 'ಮಾಂಗಾಟ್' ನಲ್ಲೂ, 'ಅಡ್‌ತಿಲ' ದಲ್ಲೂ ನಡೆಯುತ್ತದೆ. 'ಅಡ್‌ತಿಲನಗರಂ' ನವರು ಮಾಡಾಯಿ ಕ್ಷೇತ್ರದಲ್ಲಿ ಇದನ್ನು ನಡೆಸುತ್ತಾರೆ. ಅಲ್ಲಿನ 'ಮೂತ್ತ ಚೆಟ್ಟಿಯಾರ್' ಇದರ ನೇತೃತ್ವ ವಹಿಸುತ್ತಾರೆ.

ಈ ಕ್ಷೇತ್ರದ ಎಲ್ಲಾ ಕಾರ್ಯಗಳೂ ಶಾಲಿಯರಿಂದಲೇ ನಡೆಯುತ್ತದೆ. ದೇವರನ್ನು ಹೊತ್ತು ಬಲಿಪ್ರದಕ್ಷಿಣೆ ಬರುವುದರಿಂದ ಆರಂಭಗೊಂಡು, ವಾದ್ಯವನ್ನು ನುಡಿಸುವವರೂ ಶಾಲಿಯರೇ. ಕಲಶೋತ್ಸವವು ಇಲ್ಲಿನ ಪ್ರಧಾನ ಉತ್ಸವ. ಏಳು ದಿನದ ಈ ಉತ್ಸವಕ್ಕೆ ಮಾಡಾಯಿಯ ದೇವೀ ಕ್ಷೇತ್ರದಿಂದ ಜ್ಯೋತಿಯನ್ನು ಮೆರವಣಿಗೆಯಲ್ಲಿ ತರಲಾಗುತ್ತದೆ. ಸ್ಥಾನದ ಕೋಮರಂ ಮಾಡಾಯಿ ಕ್ಷೇತ್ರದಿಂದ ಉರಿಸಿದ ದೀಪವನ್ನು ಪಡೆದುಕೊಂಡು 'ಸ್ಥಾನಂ' ನ ಕಡೆಗೆ ಓಡಿ ಬರುವಾಗ, ಆತನೊಂದಿಗೆ ಪಂಚೆಯ ಮೇಲೆ ಪಂಚೆಯನ್ನುಟ್ಟುಕೊಂಡು ಚೆಟ್ಟಿಯಾರ್‌ಗಳೂ, ಜಾತಿ ಬಾಂಧವರೂ ಓಡುತ್ತಾರೆ. ಕೋಮರರು ದೀಪವನ್ನು ಮಡೆಯನ ಕೈಗೆ ಹಸ್ತಾಂತರಿಸಿದಾಗ ಮಡೆಯರು ಅದರಿಂದ 'ತಾನಂ' ನ ದೀಪವನ್ನು ಉರಿಸುತ್ತಾರೆ. ಅನಂತರ ಕಲಶೋತ್ಸವ ಆರಂಭಗೊಳ್ಳುತ್ತದೆ. ಈ ಸಂದರ್ಭದಲ್ಲಿ ಅಡಿಕೆಯ ಹಿಂಗಾರ (ಪಿಂಗಾರ; ಹೂವು) ಗಳಿಂದ ಅಲಂಕೃತವಾದ ಕಲಶಗಳನ್ನು ಹಿಡಿದು ಭಕ್ತರೆಲ್ಲರೂ ಗುಡಿಗೆ ಪ್ರದಕ್ಷಿಣೆ ಬರುತ್ತಾರೆ. ಹಾಗೇ ಒಲೆಯಲ್ಲಿ ಕುದಿಯುತ್ತಿರುವ ಹಾಲಮೃತವನ್ನು ತಲೆಯಲ್ಲಿ ಹೊತ್ತುಕೊಂಡು ಪ್ರದಕ್ಷಿಣೆ ಬರುವ ಸಂಪ್ರದಾಯವೂ ಇದೆ. ಈ ರೀತಿ ಹೊತ್ತವರಿಗೆ ಬಿಸಿ ತಟ್ಟದೇ ಇರುವುದು ಒಂದು ಅದ್ಭುತ ಪವಾಡವಾಗಿ ಪರಿಗಣಿಸಲ್ಪಡುತ್ತದೆ.

ಮಾಡಾಯಿ ಕ್ಷೇತ್ರದಿಂದ ಇಲ್ಲಿಗೆ ಬಂದು ದೇವಿ ನೆಲೆಸಿದ್ದಾಳೆ ಎನ್ನಲಾದ ಒಂದು ಕೋಣೆಯೂ ಈ ಕ್ಷೇತ್ರದಲ್ಲಿ ಇದೆ. ಈ ಕೋಣೆಯನ್ನು ಉತ್ಸವ ಕಾಲದಲ್ಲಿ ಮಾತ್ರ ತೆರೆಯಲಾಗುತ್ತದೆ. ಆ ಅವಕಾಶಕ್ಕಾಗಿ ಸಹಸ್ರಾರು ಮಂದಿ ಭಕ್ತರು ಕಾಯುತ್ತಾರೆ.

ಪಯ್ಯನ್ನೂರು ನಗರವು ಅಸ್ತಿತ್ವಗೊಂಡು ಸುಮಾರು ೨೦೦ ವರ್ಷಗಳು ಆಗಿರಬಹುದಷ್ಟೆ. ಆದುದರಿಂದಲೇ ಇದು ಹದಿನಾಲ್ಕು ನಗರಗಳ ಯಾದಿಯಲ್ಲಿಲ್ಲ.

## ೫ ಮತ್ತು ೬ : ವೆಳ್ಳೂರು ಪಟಿಯೆ (ಹಳತು) ನಗರಂ ಮತ್ತು ಪುದಿಯೆ (ಹೊಸತು) ನಗರಂ

ಪಯ್ಯನ್ನೂರು ಹಾಗೂ ಕರಿವೆಳ್ಳೂರಿನ ಮಧ್ಯೆ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ ವೆಳ್ಳೂರು 'ನಗರಂ' ಇದೆ. ಒಂದೇ 'ನಗರಂ' ಎರಡಾಗಿ ವಿಭಜಿತವಾಗಿದೆ. ಮೊದಲೇ ಇದ್ದ 'ನಗರ' ವು ವೆಳ್ಳೂರು ಪಟಿಯೆ (ಹಳೆ) ಎಂದೂ, ನೂತನವಾಗಿ ನಿರ್ಮಾಣವಾದ ನಗರವೂ ವೆಳ್ಳೂರು 'ಪುದಿಯೆ' ಎಂದೂ ಗುರುತಿಸಲ್ಪಡುತ್ತದೆ. ಇಲ್ಲಿ ನಗರವೊಂದು ಎರಡು ವಿಭಾಗವಾದುದರ ಹಿನ್ನಲೆಯ ಕತೆಯು ಹೀಗಿದೆ:-

"ಸುಮಾರು ನಾನೂರು ವರ್ಷಗಳ ಹಿಂದೆ ಈ 'ನಗರಂ'ನಲ್ಲಿ ಒಂದೇ ಮನೆಯ ಇಬ್ಬರು 'ಚೆಟ್ಟಿಯಾರ್'ಗಳು ಇದ್ದರು. ಅವರಲ್ಲಿ ಒಬ್ಬಾತ ಸಾತ್ತ್ವಿಕನಾಗಿದ್ದರೆ, ಇನ್ನೊಬ್ಬಾತ ಅಹಂಕಾರಿಯಾಗಿದ್ದ. ಅವಕಾಶ ಸಿಕ್ಕಿದಾಗಲೆಲ್ಲಾ ಆತ ಸಾತ್ತ್ವಿಕ ವ್ಯಕ್ತಿಯನ್ನು ಅವಮಾನಿಸುತ್ತಲೇ ಇದ್ದ. ಒಂದು ಬಾರಿ ಪೂರಂ ಉತ್ಸವ ನಡೆಯುತ್ತಿರುವ ಸಂದರ್ಭದಲ್ಲಿ ಸಾತ್ತ್ವಿಕ ಚೆಟ್ಟಿಯಾರ್ 'ಪೂರಂ' ಹಾಡುಗಳನ್ನು ಹಾಡುತ್ತಿರಲು ಉಚ್ಛಾರಣೆ ಸರಿಯಾಗಿಲ್ಲವೆಂದು ಆಕ್ಷೇಪವೆತ್ತಿ ಆತನನ್ನು ಹೀನಾಯವಾದ ಮಾತುಗಳಿಂದ ಅಪಮಾನ ಮಾಡಿದನು. ಮನಸ್ಸಿನಲ್ಲಿ ಬಹಳಷ್ಟು ನೊಂದ ಚೆಟ್ಟಿಯಾರ್ ದೇವಿಯಲ್ಲಿ ಮನನೊಂದು ಪ್ರಾರ್ಥಿಸಿ, ದೇವಿಯ ಮುಂದೆ ಉರಿಯುವ ದೀಪದಿಂದ ಒಂದು ಬತ್ತಿಯನ್ನು ತೆಗೆದುಕೊಂಡು ಉತ್ತರಕ್ಕೆ ಹೊರಟು "ನನ್ನೊಂದಿಗೆ ಇಷ್ಟವಿದ್ದು ಬರುವವರು ಬನ್ನಿ" ಎಂದು ಹೇಳಿದಾಗ ಕೆಲವರು ಆ ಚೆಟ್ಟಿಯಾರನ ಹಿಂದೆ ಬಂದರು. ಚೆಟ್ಟಿಯಾರ್ ಸ್ವಲ್ಪ ದೂರ ಹೋದಾಗ ಮಣ್ಣಿನ ಸಣ್ಣ ದಿನ್ನೆಯೊಂದು ಕಂಡಿತು. ಅಲ್ಲಿಯೇ ಬತ್ತಿಯನ್ನಿಡಬೇಕೆಂದು ಆತನಗನ್ನಿಸಿತು. ಬತ್ತಿಯನ್ನಿಡಲು ಆತನಿಗೆ ಅಲ್ಲೇನೂ ಕಾಣದಿರುವಾಗ ಅಲ್ಲೇ ಇದ್ದ ಸೌತೆಕಾಯಿಯೊಂದನ್ನು ಎರಡು ಭಾಗ ಮಾಡಿ ಒಳಗಿನ ತಿರುಳು ತೆಗೆದು ಎಣ್ಣೆ ಹೊಯ್ದು ಅದರಲ್ಲಿ ಬತ್ತಿಯನ್ನು ಇರಿಸಿದನು. ಚೆಟ್ಟಿಯಾರನ ಜೊತೆಗೆ ಬಂದವರು ಅಲ್ಲೇ ಪೂರಕ್ಕಳಿ ಪೂರ್ತಿಗೊಳಿಸಿದರು. ತೆಂಗಿನ ಮಡಲಿನಿಂದ ಗುಡಿಯೊಂದನ್ನು ನಿರ್ಮಾಣ ಮಾಡಿದರು. ವರ್ಷಂಪ್ರತಿ ಅಲ್ಲೇ ಆರಾಧನೆಯನ್ನೂ ಪ್ರಾರಂಭಿಸಿದರು. ಹೀಗೆ ಹೊಸ ತೆರು ಸೃಷ್ಟಿಯಾಯಿತು." ಹೊಸ ತೆರುವಿಗೆ ಹೋದ ಚೆಟ್ಯಾರಿಗೂ ಜತೆಯವರಿಗೂ ತಮ್ಮೊಂದಿಗೆ ದೇವಿಯು ಬಂದಿರುವ ವಿಷಯವು ತಿಳಿದಿರಲಿಲ್ಲ. ಆದುದರಿಂದ ಅವರು ಮೂವಾಳಂಕುಳಿ ಚಾಮುಂಡಿ, ಚೂಳಿಯಾರ್ ಭಗವತಿ, ವಿಷ್ಣುಮೂರ್ತಿ, ಪಡವೀರನ್ ಎಂಬೀ ದೈವಗಳನ್ನು ಪ್ರತಿಷ್ಠಿಸಿ ಆರಾಧಿಸತೊಡಗಿದರು. ಸ್ವಲ್ಪ ಕಾಲ ಕಳೆದು ಜ್ಯೋತಿಷಿಗಳಿಂದ ಪ್ರಶ್ನೆ ಇಡಿಸಿ ಕೇಳಿದಾಗ ಶ್ರೀ ಪೋರ್ಕಲಿ ಭಗವತಿ ತಮ್ಮೊಂದಿಗೆ ತಮ್ಮ ರಕ್ಷಣೆಗಾಗಿ ಬಂದಿರುವಳೆಂದೂ, ಅವಳನ್ನು ಮರೆತಿರುವುದರಿಂದ ಆಕೆ ನೊಂದಿರುವಳೆಂದೂ ತಿಳಿಯಿತು. ಕ್ರಮೇಣ ದೇವಾಲಯವೊಂದು ನಿರ್ಮಾಣವಾಗಿ ಭಗವತಿಯ ಆರಾಧನೆಯು ಆರಂಭವಾಯಿತು ಎನ್ನಲಾಗಿದೆ. ಎರಡೂ ಕ್ಷೇತ್ರಗಳಲ್ಲೂ ಆರಾಧಿಸುವ ಉಪದೈವಗಳೆಲ್ಲಾ ಒಂದೇ. ಕುಂಭಮಾಸದಲ್ಲಿ ಎರಡೂ ಕ್ಷೇತ್ರಗಳಲ್ಲೂ ಉತ್ಸವ ನಡೆಯುತ್ತದೆ. ವೆಳ್ಳೂರು ಪುದಿಯೆ ತೆರುವಿನ ಪ್ರಧಾನ ದೇವತೆ

ಶ್ರೀ ಚಾಮುಂಡೇಶ್ವರಿ. ಪಟಿಯೆ ತೆರುವಿನ ಪ್ರಧಾನ ದೇವತೆ ಪೋರ್ಕಲಿ ಭಗವತಿ.

ಇಲ್ಲಿನ ವಿಶೇಷ ಉತ್ಸವವು ಪೂರೋತ್ಸವ. ಮೀನಮಾಸದ ಹದಿನಾಲ್ಕನೇ ದಿನದಿಂದ ಪೂರಂನ ಏಳು ದಿನಗಳಲ್ಲಿ ಸಂಜೆ ಹೊತ್ತು ದೇವಾಲಯದಲ್ಲಿ ದೀಪ ಹಚ್ಚುವ ವಿಷಯವನ್ನು ತೆರುವಿನವರೆಗೆ ತಿಳಿಸಲು 'ಕೇಳಿ ಕೊಟ್ಟು' ನಡೆಸುತ್ತಾರೆ. (ಹಿಂದಿನ ಕಾಲದಲ್ಲಿ ತುಳುನಾಡಿನ ಹಳ್ಳಿಗಳಲ್ಲಿ ಯಕ್ಷಗಾನವಿದೆ ಎನ್ನುವುದನ್ನು ಊರವರಿಗೆ ತಿಳಿಸಲು 'ಕೇಳಿಕೊಟ್ಟು' ನಡೆಸುತ್ತಿದ್ದರು. 'ಕೇಳಿಕೊಟ್ಟು' ಎಂದರೆ 'ಚೆಂಡೆಯನ್ನು ಜೋರಾಗಿ ಬಡಿದು ಸುದ್ದಿಯನ್ನು ಕೊಡುವುದು' ಎಂದರ್ಥ.) ಇದನ್ನು 'ವಿಳಕ್ಕರಿಯಿಕ್ಕಲ್' ('ವಿಳಕ್ಕ್' ಎಂದರೆ ಉತ್ಸವ. 'ಉತ್ಸವವನ್ನು ತಿಳಿಯ ಪಡಿಸುವುದು' ಎಂದು ಇದರ ಅರ್ಥ. ಶಾಲಿಯಾ ಸಮುದಾಯದವರು ಈಗಲೂ ಕ್ಷೇತ್ರದ ಉತ್ಸವವನ್ನು 'ವಿಳಕ್ಕ್' ಎಂದೇ ಹೇಳುತ್ತಾರೆ.) ಅಷ್ಟರಲ್ಲಿ ಸ್ಥಾನಿಕರು ದೇವತಾ ಕಾರ್ಯಗಳನ್ನು ನಡೆಸಲು ಕ್ಷೇತ್ರಕ್ಕೆ ಬರುತ್ತಾರೆ. ಅನಂತರ ದೀಪವನ್ನು ಹೊತ್ತಿಸಿ ಚಪ್ಪರದಲ್ಲಿ ಇಡಲಾಗುತ್ತದೆ. ಈ ದೀಪವನ್ನು ದೇವಿಯ ಮುಂಭಾಗದಲ್ಲಿರುವ ದೀಪದಿಂದ ಉರಿಸಲಾಗುತ್ತದೆ. ಪುರೋತ್ಸವ ಕಳೆದ ಮೇಲೆ ಆ ದೀಪವನ್ನು ಎಲ್ಲರ ಒಪ್ಪಿಗೆಯನ್ನು ಕೇಳಿದ ಮೇಲೆ ಹಿಂದಿರುಗಿ ಕೊಂಡುಹೋಗಲಾಗುತ್ತದೆ. ಈ ದೀಪವು ಹಲವು ಅಂತಸ್ತುಗಳಿಂದ ಕೂಡಿಕೊಂಡಿರುವುದು ಇನ್ನೊಂದು ವಿಶೇಷ.

ಎರಡೂ 'ನಗರಂ'ಗಳಲ್ಲಿ ಪರಸ್ಪರ ಅಭಿಪ್ರಾಯ ವ್ಯತ್ಯಾಸವು ಇಂದೂ ಇದೆ. ಜಾತ್ರೆಯು ಸ್ಪರ್ಧಾತ್ಮಕವಾಗಿಯೇ ನಡೆಯುತ್ತದೆ. ಕೆಲವೊಮ್ಮೆ 'ನಗರಂ' ಗಳು 'ಪಂಚಾಯತಿಕೆ' ಗಳಿಂದ ಒಂದಾದರೂ ಪುನಃ ವಿವಾದಗಳೆದ್ದು ಒಡೆದು ಹೋಗುತ್ತವೆ. ಉತ್ಸವಾರಂಭವಾದ ಮೇಲೆ ಎರಡೂ ತೆರುಗಳಲ್ಲಿ ವಾದ್ಯಗಳ ವಾದನ ಸ್ಪರ್ಧೆಯೇ ನಡೆಯುತ್ತದೆ. ಎರಡೂ ಕಡೆ ಒಂದೇ ಸಮಯದಲ್ಲಿ ಉತ್ಸವ ನಡೆಯುವಾಗ ಒಂದು ರೀತಿಯ ಬಿಗಿ ವಾತಾವರಣವು ಅಲ್ಲಿ ನಿರ್ಮಾಣವಾಗುತ್ತದೆ. ಎರಡೂ ನಗರಂಗಳ ಮೆರವಣಿಗೆಗಳು ಕೆಲವೊಮ್ಮೆ ಎದುರುಬದುರಾಗಿ ಸಂಧಿಸುವುದೂ ಇದೆ. ಆಗ ಘರ್ಷಣೆಯಾಗುವುದೂ ಇದೆ.

ಪೂರಕ್ಕಳಿಯ ಸಂದರ್ಭದಲ್ಲಿ ಪುದಿಯ ತೆರುವಿನವರು 'ಪೂರಂ' ಆಡಲು ಹೋಗುವುದಕ್ಕಿಂತ ಮುನ್ನ"ಎರಡು ಪಣಂ" (೮ ಆಣೆ) ಹಣವನ್ನು ಅಪರಾಧದ ಮೊತ್ತವೆಂದು ಕ್ಷೇತ್ರಕ್ಕೆ ನೀಡಿಯೇ ಹೋಗುತ್ತಿದ್ದರು. ಆದರೆ ಕ್ರಮೇಣ ಅದೂ ಪರಿಹಾಸ್ಯಕ್ಕೆ ಕಾರಣವಾದಾಗ ಅದನ್ನು ನಿಲ್ಲಿಸಲಾಯಿತು ಎನ್ನಲಾಗುತ್ತದೆ.

ಇತ್ತೀಚೆಗೆ ಈ 'ನಗರಂ' ಗಳಲ್ಲೂ ಪೂರಕ್ಕಳಿ ತನ್ನ ಪ್ರಾಧಾನ್ಯತೆಯನ್ನು ಕಳೆದುಕೊಳ್ಳುತ್ತದೆ. ಹಿಂದೆ ಈ ಪ್ರದೇಶದ ಇತರ ಸಮುದಾಯದವರ ಕ್ಷೇತ್ರಗಳಲ್ಲೂ ಶಾಲಿಯಾ ಸಮುದಾಯದವರು 'ಪೂರಕ್ಕಳಿ'ಯನ್ನು ಆಡುತ್ತಿದ್ದರು. ಈಗ ಅದು ಇಲ್ಲ. ಈಗ ಶಾಲಿಯಾ 'ತೆರುವಿನ ಕ್ಷೇತ್ರ'ದಲ್ಲಿ ಮಾತ್ರ ಕೇವಲ ಸಂಪ್ರದಾಯಕ್ಕಾಗಿ ಆಡಲಾಗುತ್ತದೆ. ಕಾಮದಹನದ ಕಥೆಯನ್ನು ಇಲ್ಲಿ ಪೂರಕ್ಕಳಿಗೆ ಹೆಚ್ಚಾಗಿ ಬಳಸಲಾಗುತ್ತದೆ.

ಇಲ್ಲಿ 'ತಾನಂ'ನ ಪೂಜಾದಿಕರ್ಮಗಳನ್ನು ನಡೆಸುವ ಮಡೆಯನನ್ನು 'ಅಂದಿತಿರಿಯನ್' (ಸಂಜೆ ದೀಪ ಉರಿಸುವವನು) ಎಂದು ಹೇಳುತ್ತಾರೆ. ಅವನಿಗೆ ಸೂತಕವಿರುವಾಗ ಮಾತ್ರವೇ ಬ್ರಾಹ್ಮಣರನ್ನು ಪೂಜಾದಿ ಕ್ರಿಯೆಗಳಿಗೆ ನೇಮಿಸಲಾಗುತ್ತದೆ. ಎರಡೂ ತೆರುಗಳವರಿಗೆ 'ಕಳಿಯಾಟ'ವನ್ನು ನಡೆಸಲು ದಕ್ಷಿಣ ಗುಡಿ ಮತ್ತು ಉತ್ತರ ಗುಡಿಯೆಂದು ಎರಡು ಗುಡಿಗಳಿವೆ.

'ವೆಳ್ಳೂರು ಪಟಿಯೆ' 'ನಗರಂ'ನ ಅಧಿಪತ್ಯದಲ್ಲಿ ಸುಮಾರು ನೂರರಷ್ಟು ಮನೆಗಳು ಇವೆ. ಎರಡೂ 'ನಗರಂ'ಗಳಲ್ಲಿ ನೂರಕ್ಕೂ ಮೇಲ್ಪಟ್ಟು ಸದಸ್ಯರಿದ್ದಾರೆ. ಇಬ್ಬರು ಮಡೆಯರು (ಅರ್ಚಕರು) ಇದ್ದು ಎರಡು ಕಡೆ ಪೂಜೆ ಪ್ರತ್ಯೇಕವಾಗಿ ನಡೆಯುತ್ತದೆ.

ಇಲ್ಲಿನ ತೆರುವಿನಲ್ಲಿ ಅಲ್ಪಮಟ್ಟಿಗೆ ನೇಕಾರಿಕೆಯು ಮುಂದುವರಿಯುತ್ತಿದೆ.

## ೭. ಕರಿವೆಳ್ಳೂರು ನಗರಂ

ಪಯ್ಯನ್ನೂರಿನಿಂದ ೧೨ ಕಿ.ಮೀ. ಉತ್ತರಕ್ಕೆ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿಯೇ ಕರಿವೆಳ್ಳೂರು 'ನಗರ'ವಿದೆ. ಇಲ್ಲಿನ ಕ್ಷೇತ್ರವನ್ನು ಮಾಡಪಳ್ಳಿ ಸೋಮೇಶ್ವರೀ ಕ್ಷೇತ್ರವೆಂದು ಹೇಳುತ್ತಾರೆ. ಅತ್ಯಂತ ಜನಸಂಖ್ಯೆಯಿರುವ ತೆರುವೂ ಇದರ ಸುಪರ್ದಿಯಲ್ಲಿದೆ. ನೇಕಾರಿಕೆಯೂ ಉತ್ತಮ ರೀತಿಯಲ್ಲಿ ನಡೆಯುತ್ತಿದೆ. ನೇಕಾರರ ಸಹಕಾರೀ ಸಂಘವೊಂದು ಇಲ್ಲಿ ಅಸ್ತಿತ್ವದಲ್ಲಿದೆ.

ಈ 'ನಗರಂ'ನಲ್ಲಿರುವ ಕ್ಷೇತ್ರವು ಅಲ್ಲೇ ಹತ್ತಿರದ 'ಕೊಂಬನ್ ತೆರು'ಎನ್ನುವ ಪ್ರದೇಶದಲ್ಲಿತ್ತು ಎನ್ನಲಾಗಿದೆ. ಅಲ್ಲಿಂದ ಈ ಸ್ಥಳಕ್ಕೆ ಅದು ಸ್ಥಳಾಂತರಗೊಂಡಿರುವ ಬಗ್ಗೆ ಐತಿಹ್ಯವೊಂದು ಹೀಗೆನ್ನುತ್ತದೆ:- ಮೊದಲು ಶಾಲಿಯಾರ ಭಗವತೀ ಕ್ಷೇತ್ರವಿದ್ದ ಪ್ರದೇಶದಲ್ಲಿ ಒಂದು ಶಿವಕ್ಷೇತ್ರ ಹಾಗೂ ವಾಣಿಯಾ ಸಮುದಾಯದ ಮುಚ್ಚಿಲೋಟು ಭಗವತೀ ಕ್ಷೇತ್ರವಿತ್ತು. ಶಾಲಿಯಾರು ಈ ಮೂರು ಕ್ಷೇತ್ರಗಳಿಗೂ ಹೋಗುತ್ತಿದ್ದರಂತೆ. ಮುಚ್ಚಿಲೋಟು ಭಗವತೀ ಕ್ಷೇತ್ರದಲ್ಲಿ ಪ್ರಸಾದವಾಗಿ ಅರಶಿನದ ಹುಡಿಯನ್ನು ಬಾಚಿ ಬಾಚಿ ಕೊಡುತ್ತಿದ್ದರಂತೆ. ಹೀಗೆ ಸಿಕ್ಕಿದ ಅರಶಿನದ ಹುಡಿಯನ್ನು ಕೆಲವು ಶಾಲಿಯಾರು ಮೀನಿನ ಸಾರಿಗೆ ಬಳಸಿದರಂತೆ. ಇದರ ಫಲವಾಗಿ ಕೆಲವರಿಗೆ ಸಿಡುಬುರೋಗ ಪ್ರಾಪ್ತವಾಯಿತು. ದೈವೀ ಕೋಪಕ್ಕೆ ಒಳಗಾಗಿದ್ದೇವೆ ಎಂದರಿತ ಶಾಲಿಯಾರು ಭಯದಿಂದ ಅಲ್ಲಿಂದ ಪಲಾಯನ ಮಾಡಿ, ಈಗ ಶಾಲಿಯಾ ಸಮುದಾಯದವರು ವಾಸಿಸುತ್ತಿರುವ ಪ್ರದೇಶಕ್ಕೆ ಬಂದು, ಇಲ್ಲಿಯೇ ಒಂದು 'ನಗರಂ' ಸೃಷ್ಟಿಸಿ, ಕ್ಷೇತ್ರ ನಿರ್ಮಾಣ ಮಾಡಿಕೊಂಡರು. ಕ್ರಮೇಣ 'ಕೊಂಬನ್ ತೆರು'ವಿನಲ್ಲಿರುವ ಶಾಲಿಯಾ ಕ್ಷೇತ್ರವು ಕೇಳುವವರಿಲ್ಲವಾಗಿ ಅನಾಥವಾಗಿ ಶಿಥಿಲಾವಸ್ಥೆಗೆ ಹೋಯಿತು. ಈಗ ಬರಿಯ ಅಡಿಪಾಯವಿದೆ. ಒಂದು ಕಾಲದಲ್ಲಿ ಶಾಲಿಯಾರು ಈ ಪ್ರದೇಶದಲ್ಲಿ ನೆಲೆಸಿದ್ದರು ಎನ್ನುವುದಕ್ಕೆ ಸಾಕ್ಷಿಯಾಗಿ ಅಲ್ಲಿ ಕೆಲವು ಪ್ರದೇಶಗಳ ಹೆಸರುಗಳು ನೇಕಾರಿಕೆಗೆ ಸಂಬಂಧಪಟ್ಟವುಗಳಾಗಿ ಸಾಕ್ಷಿ ನುಡಿಯುತ್ತದೆ. (ಉದಾ: ಪಾವಾಟ್ಟುಂಪುರ; ಬೀದಾಟ್ಟುಂಪುರ) ಇಂದೂ ಈ ಪ್ರದೇಶವು ಅಶುದ್ಧವಾಗದ ಹಾಗೆ ರಕ್ಷಿಸಿಕೊಂಡು ಬರಲಾಗುತ್ತದೆ. ಅಶುದ್ಧವಾದರೆ, ಯಾವುದಾದರೂ ರೋಗವು ಪ್ರಾಪ್ತವಾಗುತ್ತದೆ ಎಂದು ಬಲವಾಗಿ ನಂಬಲಾಗಿದೆ. ಶಿಥಿಲಗೊಂಡ ಕ್ಷೇತ್ರದೊಂದಿಗೆ ಇಂದೂ ಈ ಕ್ಷೇತ್ರದವರಿಗೆ ಸಂಬಂಧವು

ಉಳಿದುಕೊಂಡಿದೆ. ಕ್ಷೇತ್ರವು ನಾಮಾವಶೇಷವಾದಾಗ, ಅಲ್ಲಿದ್ದ ಆರಾಧನಾ ದೇವತೆಯಾದ ಚುಜಲಿ ಭಗವತಿಯನ್ನು ಆವಾಹಿಸಿ, ಕರಿವೆಳ್ಳೂರು ಕ್ಷೇತ್ರದಲ್ಲಿ ಪ್ರತಿಷ್ಠಾಪಿಸಲಾಯಿತು. ಆದರೂ ಪೂರೋತ್ಸವದ ಸಂದರ್ಭದಲ್ಲಿ ಎರಡು ದಿನ ಕೊಂಬನ್ ತೆರುವಿಯಲ್ಲಿಯೂ ಉತ್ಸವ ನಡೆಯುತ್ತದೆ. ಹಳೆಯ ಕ್ಷೇತ್ರವಿದ್ದ ಅಡಿಪಾಯದಲ್ಲಿ ಹೂ ಹಾಕಿ ಪೂಜಿಸುವುದೂ, ರಾತ್ರಿ ಭಗವತಿಯ ಪವಿತ್ರ ಆಯುಧಗಳನ್ನು ಇರಿಸಿ ಪೂಜಿಸುವುದೂ ಬಲಿಪ್ರದಕ್ಷಿಣೆ ಬರುವುದೂ ಇಂದೂ ನಡೆದಿದೆ. ಸಮುದಾಯದ ದೈವೀಕ ಶ್ರದ್ಧೆಗೆ ಇದು ಸಾಕ್ಷಿಯಾಗಿದೆ.

ನೂರಾರು ವರ್ಷಗಳ ಹೊಂದೆ ನಿರ್ಮಾಣವಾದ ಕರಿವೆಳ್ಳೂರು ತೆರುವಿನಲ್ಲಿ 'ಸೋಮೇಶ್ವರೀ ಕ್ಷೇತ್ರ'ದೊಂದಿಗೆ ಕುದಿರಕ್ಕಾಳಿಯಮ್ಮನ 'ಕುದಿರವಟ್ಟಂ ಮುಂಡ್ಯ ಕ್ಷೇತ್ರ' ಇದೆ. ಮುಂಡ್ಯ ಕ್ಷೇತ್ರವು ಸೋಮೇಶ್ವರೀ ಕ್ಷೇತ್ರದ ಉಪಕ್ಷೇತ್ರವಾಗಿದೆ. ಇಲ್ಲಿ ದೈವಗಳನ್ನು ಕಟ್ಟಿ ಆಡಿಸಲಾಗುತ್ತದೆ. ಮೂವಾಳಂಕುಜಿ ಚಾಮುಂಡಿ, ಕುಂಡೋರ ಚಾಮುಂಡಿ, ವಿಷ್ಣುಮೂರ್ತಿ, ಚೂಳಿಯಾರ್ ಭಗವತಿ, ಪಡವೀರನ್ ಎಂಬೀ ದೈವಗಳನ್ನು ಇಲ್ಲಿ ಆಡಿಸಲಾಗುತ್ತದೆ.

ಇಲ್ಲಿನ ಸೋಮೇಶ್ವರೀ ಕ್ಷೇತ್ರದ ನಿರ್ಮಾಣದ ಹಿಂದೆಯೂ ಒಂದು ಐತಿಹ್ಯವಿದೆ. ಹಿಂದೆ ಕರಿವೆಳ್ಳೂರು 'ನಗರಂ'ನ ಆಚಾರವರ್ಗದವರು ಅಲ್ಲಿಂದ ಅಲ್ಪ ದೂರವಿರುವ ಕಂಡೋತ್ತಿಡಂ ಸೋಮೇಶ್ವರೀ ಕ್ಷೇತ್ರಕ್ಕೆ ದೇವೀ ದರ್ಶನಕ್ಕಾಗಿ ಹೋಗಬೇಕಿತ್ತು. ಆ ಸಂದರ್ಭದಲ್ಲಿ ಆಚಾರವರ್ಗದವರು ಒಡಿಯುವ ಪ್ರತ್ಯೇಕವಾದ ತಾಳೆಕೊಡೆಗಳು ಇದ್ದವು. ಹೀಗಿರಲು ಒಂದು ಬಾರಿ ಕರಿವೆಳ್ಳೂರು 'ನಗರಂ 'ನ ಮೂತ್ತಚೆಟ್ಟ್ (ಇಲ್ಲಿ 'ಚಿಟ್ಟಿಯಾರಚ'ನನ್ನು 'ಚೆಟ್' ಎಂದು ಕರೆಯಲಾಗುತ್ತದೆ.) ಸೋಮೇಶ್ವರೀ ಕ್ಷೇತ್ರಕ್ಕೆ ಕೊಂಡುಹೋದ ತಾಳೆಗರಿಯ ಕೊಡೆಯನ್ನು ಮರಳಿತಂದು ಹೊರಚಾವಡಿಯಲ್ಲಿ ಇಟ್ಟರಂತೆ. ಸ್ವಲ್ಪ ಹೊತ್ತಿನಲ್ಲಿ ಕೊಡೆಯು ತಾನಾಗಿಯೇ ಅಲುಗಾಡಲು ಆರಂಭವಾಯಿತಂತೆ. ವಿಷಯವನ್ನು ಆ ಪ್ರದೇಶದ ರಾಜನಾದ ಚಿರಕ್ಕಲ್ ರಾಜನಿಗೆ ತಿಳಿಸಲಾಯಿತು. ಆತ ಜ್ಯೋತಿಷಿಗಳಲ್ಲಿ ಕೇಳಿದಾಗ ತಾಳೆಕೊಡೆಯೊಂದಿಗೆ ದೇವಿಯ ಆಗಮನವಾದ ವಿಷಯವು ತಿಳಿದುಬಂತು. ಹಾಗೇ ರಾಜನ ಸಮ್ಮತಿಯಂತೆ ಅಲ್ಲಿ ಸೋಮೇಶ್ವರೀ ಕ್ಷೇತ್ರ ನಿರ್ಮಾಣವಾಯಿತು'ಎಂದು ಐತಿಹ್ಯ ಹೇಳುತ್ತದೆ. ಇಲ್ಲಿ ಚೆಟ್ಟ್ಯಾರ್ಚನನ್ನು 'ಚೆಟ್ಟ್' ಎಂದು ಕರೆಯುತ್ತಾರೆ. ಚಿರಕ್ಕಲ್ ರಾಜನಿಂದ ಈ ಪದವಿ ಅಂಗೀಕೃತವಾಗುತ್ತದೆ. ಇಲ್ಲಿಯ 'ನಗರಂ'ನ ಪ್ರಧಾನ ಸ್ಥಾನಿಕರಾಗಿ 'ಚಿಟ್ಟ್‌ನ್ಮಾರ್'(ಚೆಟ್ಟಿಯಾರ್‌ಗಳು) ಇದ್ದರೆ 'ಸ್ಥಾನಿಕರು ಇಲ್ಲಿ ಇರಬೇಕು'ಎನ್ನುವ ನಿಯಮವಿದೆ. ಅವರಿಗೆ ಆಚಾರವಿಧಿಗಳನ್ನು ಬೋಧಿಸಿ ಕಾರಣವನ್ನಾಗಿಸುವವರು ಚೆಟ್ಟ್ಯಾರ್‌ಗಳು. ಸ್ಥಾನಿಕರಲ್ಲಿಯೇ ಪೂರಕ್ಕಳಿಯನ್ನು ಆಡುವಂತಹ ವಿದಗ್ಧರೂ ಇದ್ದಾರೆ ಎನ್ನುವುದು ಪ್ರಶಂಸನೀಯ.

ಈ ಕ್ಷೇತ್ರದಲ್ಲಿ ಆಚರಿಸಲ್ಪಡುವ ಆಚರಣೆಯಲ್ಲಿ ಕರ್ಕಾಟಕ ೧೮ ರಂದು 'ಮಾರಿ ಅಟ್ಟುವ' ಸಂಪ್ರದಾಯವು ವಿಶಿಷ್ಟವಾದುದು.(ವಿವರಣೆಗಾಗಿ ಅಧ್ಯಾಯ ೬ ನ್ನು ನೋಡಿ) ಇದನ್ನು ಕರಿವೆಳ್ಳೂರಿನ ಪೇಚ್ಚಾಡ್ ತರವಾಡಿನವರು ದಾನವಾಗಿ ನೀಡಿದ ಸ್ಥಳದಲ್ಲಿ ನಡೆಸುತ್ತಾರೆ. ಇಲ್ಲಿ ಭೂತ, ಪ್ರೇತ,

ಪಿಶಾಚಿಗಳು ವಾಸಿಸುತ್ತವೆ ಎಂದು ಆ ಪ್ರದೇಶವನ್ನು ಪ್ರತ್ಯೇಕವಾಗಿಯೇ ಇರಿಸಿದ್ದಾರೆ.

ಕರಿವೆಳ್ಳೂರು ನಗರದಲ್ಲಿ 'ಸದಸ್ಯತನ'ವು ಎಲ್ಲರಿಗೂ ಕಡ್ಡಾಯ. ಸ್ತ್ರೀ ಪುರುಷರೆಲ್ಲರೂ ಇಲ್ಲಿ ಸದಸ್ಯರಾಗಬೇಕು. ಸದಸ್ಯರಲ್ಲದವರು ತೀರಿಕೊಂಡರೆ ಅವರ ಶವಗಳನ್ನು ದೇವಾಲಯದ ಸ್ಮಶಾನದಲ್ಲಿ ಸುಡಲು ಅನುಮತಿಯಿಲ್ಲ. ಅವರನ್ನು ಹೂಳಲು ಪ್ರತ್ಯೇಕವಾದ ಸ್ಥಳವಿದೆ.

ಈ ಕ್ಷೇತ್ರದ ದೇವಿ ಸಂತಾನಫಲದಾಯಕಳು ಎಂದು ಪ್ರಸಿದ್ಧಿ. ಅವಳ ಅನುಗ್ರಹದಿಂದಲೇ 'ಪಾಲಿಯೇರಿ' ಎನ್ನುವ ಮನೆತನಕ್ಕೆ ಸಂತಾನಭಾಗ್ಯ ಉಂಟಾಯಿತು ಎಂದು ಹೇಳಲಾಗಿದೆ. ಇಲ್ಲಿನ ದೇವಿಗೆ 'ಪೊರಕ್ಕಳಿ' ಯಲ್ಲಿ ಬಹಳ ಪ್ರೀತಿಯೆಂದು ಪ್ರತೀತಿಯಿದೆ. ಪೂರಂ ದಿನಗಳಲ್ಲಿ ಋತುಮತಿಯಾಗದ ಹುಡುಗಿಯರು ಕ್ಷೇತ್ರದಲ್ಲೇ ತಂಗಿ ಏಳು ದಿನವೂ ಹೂವುಹಾಕಿ ಕಾಮನನ್ನು ಪೂಜಿಸಬೇಕು. ಇದು ಇಂದಿನವರೆಗೂ ನಡೆದು ಬಂದಿದೆ. ಇಲ್ಲಿ ಎಲ್ಲಾ ಕಡೆಯಲ್ಲೂ ಪೂರಕ್ಕಳಿಯನ್ನು ಶಾಲಿಯರೇ ಆಡುತ್ತಾರೆ.

## ೮. ಪಿಲಿಕ್ಕೋಡು ನಗರಂ

ಈ ನಗರವು ಒಂದು ಗ್ರಾಮಾಂತರ ಪ್ರದೇಶದಲ್ಲಿದೆ. ಚೆರುವತ್ತೂರಿನಿಂದ ದಕ್ಷಿಣಕ್ಕೂ ಪಯ್ಯನ್ನೂರಿನಿಂದ ಉತ್ತರಕ್ಕೂ ಮಧ್ಯದಲ್ಲಿದೆ. ವೃಶ್ಚಿಕಮಾಸದ ೨ನೇ ಶನಿವಾರ 'ನಿಜಲ್' ವಿರಿಕ್ಕಲ್‌ಗಾಗಿ ದಕ್ಷಿಣದ ಕಡೆಯಿಂದ ಬರುವ 'ಅಚ್ಚಮ್ಮಾರ'ರಿಗೆ ಇದು ವಿಶ್ರಾಂತಿ ತಾಣ. ಮೇಲೆ ಹೇಳಿದ ನಗರಗಳು (ಪಟ್ಟುವ, ಅಡತಿಲ, ಕುಞಮಂಗಲಂ, ವೆಳ್ಳೂರು, ಕರಿವೆಳ್ಳೂರು, ಪಯ್ಯನ್ನೂರು ನಗರಗಳು ಹಳೆಯ ತುಳುನಾಡಿನಲ್ಲಿದ್ದರೂ, ಈಗ ಕಣ್ಣೂರು ಜಿಲ್ಲೆಯಲ್ಲಿವೆ) ಪಿಲಿಕ್ಕೋಡು ನಗರಂ ನಿಂದ ಕಾಸರಗೋಡು ಜಿಲ್ಲೆಯ ನಗರಂಗಳು ಪ್ರಾರಂಭವಾಗುತ್ತದೆ.

ಇಲ್ಲಿ ಎದುರುಬದುರಾಗಿರುವ 'ಸೋಮೇಶ್ವರೀ' ಹಾಗೂ 'ಮೂವಾಟಿಂಕುಜಿ ಚಾಮುಂಡಿ' ಕ್ಷೇತ್ರಗಳಿವೆ. ಸೋಮೇಶ್ವರೀ ದೇವಿಗೇ ಇಲ್ಲಿ ಪ್ರಾಧಾನ್ಯತೆ. ಪಿಲಿಕ್ಕೋಡಿನ 'ರೆಯರಮಂಗಲಂ ಕ್ಷೇತ್ರವೇ' ಸೋಮೇಶ್ವರೀ ದೇವಿಯ ಮೂಲವೆಂದು ಕಲ್ಪನೆಯಿದೆ. ರೆಯರಮಂಗಲಂ ಕ್ಷೇತ್ರದೊಂದಿಗೆ ಪಿಲಿಕ್ಕೋಡ್ ತೆರುವಿನ ಶಾಲಿಯಾರಿಗೆ ವಿಶೇಷ ಸಂಬಂಧವಿದೆ. ರೆಯರಮಂಗಲಂ ಕ್ಷೇತ್ರದ ದೇವಿ'ಕಾಳಿ'. ಬ್ರಾಹ್ಮಣನೊಬ್ಬನಿಂದ ಸ್ಥಾಪಿತವಾದ ರೆಯರಮಂಗಲಂ ಕ್ಷೇತ್ರದಲ್ಲಿ ಅಂದಿನ ಅರಸರ ಆದೇಶದಂತೆ 'ಶಾಲಿಯಾ ಪೊರಾಟ್' ಹಾಗೂ 'ಪೂರಕ್ಕಳಿ 'ಯನ್ನು ಈ ಕ್ಷೇತ್ರದಲ್ಲಿ ರೂಢಿಗೆ ತರಲಾಯಿತು ಎಂದು ಹೇಳಲಾಗುತ್ತದೆ.

ಇಲ್ಲಿನ 'ಸೋಮೇಶ್ವರೀ ದೇವಿ'ಯ ಬಗ್ಗೆ ಕೆಲವು ಐತಿಹ್ಯಗಳಿವೆ. ಒಂದು ಐತಿಹ್ಯದಲ್ಲಿ, 'ಸೋಮೇಶ್ವರನ್' ಎನ್ನುವ ಋಷಿಯು ಮಹಾಲಕ್ಷ್ಮಿಯನ್ನು ಕುರಿತು ತಪವನ್ನಾಚರಿಸಿ ಪ್ರತ್ಯಕ್ಷಳಾದ ದೇವಿಯೇ 'ಸೋಮೇಶ್ವರೀ' ಎಂದು ಹೇಳಲಾಗಿದೆ. ಈ ದೇವಿಯನ್ನು ಇತರ ಸಮುದಾಯದವರೂ ಆರಾಧಿಸುತ್ತಾರೆ. ಇನ್ನೊಂದು ಐತಿಹ್ಯದಲ್ಲಿ ಹೀಗೆ ಹೇಳಲಾಗುತ್ತದೆ:- ಪಿಲಿಕ್ಕೋಡ್ ತೆರುವಿನಲ್ಲಿ ಮೊದಲು ಸೋಮೇಶ್ವರೀಯ ಕ್ಷೇತ್ರವಿರಲಿಲ್ಲ. ಚಾಮುಂಡೇಶ್ವರಿಯ ಕ್ಷೇತ್ರ ಮಾತ್ರವಿತ್ತು.

ಕರಿವೆಳ್ಳೂರಿನಲ್ಲಿ ಜಾತ್ರೆ ನಡೆಯುವಾಗ ಪಿಲಿಕ್ಕೋಡಿನವರು ಅಲ್ಲಿಗೆ ಹೋಗುತ್ತಿದ್ದರು. ಒಂದು ಬಾರಿ ಪಿಲಿಕ್ಕೋಡು ತೆರುವಿನವರು ಅಲ್ಲಿಗೆ ಹೋಗುವಾಗ, ಅಲ್ಲಿ ಉತ್ಸವವು ಮುಗಿದಿತ್ತು. ಇದು ವಿವಾದಕ್ಕೆ ಕಾರಣವಾಗಿ ಕೋಪಿಸಿಕೊಂಡು ದೇವಿಯಲ್ಲಿ ಪ್ರಾರ್ಥಿಸಿ, ದೇವಿಯ ಎದುರಿರಿಸಿದ ದೀಪದಿಂದ ಉರಿಯುವ ಬತ್ತಿಯೊಂದನ್ನು ತೆಗೆದು ಅದನ್ನು ಉರಿಸಿ ಹಿಡಿದುಕೊಂಡು ತಮ್ಮೂರಿಗೆ ಬಂದರು. ಜತೆಗೆ ತಂದ ಉರಿಸಿದ ಬತ್ತಿಯನ್ನು ದಾರಿಯಲ್ಲಿ ಬಿಟ್ಟು ಅವರು ಮನೆಗೆ ಬಂದರು. ಮರುದಿನವೂ ಇವರು ದಾರಿಯಲ್ಲಿ ಬಿಟ್ಟುಹೋದ ಬತ್ತಿಯು ಹಾಗೇ ಉರಿಯುತ್ತಿತ್ತೆಂದೂ; ಜ್ಯೋತಿಷಿಗಳಲ್ಲಿ ಪ್ರಶ್ನೆಯಿಟ್ಟು ಕೇಳಿದಾಗ, ಅವರೊಂದಿಗೆ ದೇವಿಯು ಜ್ಯೋತಿಯ ರೂಪದಲ್ಲಿ ಬಂದಿರುವ ವಿಚಾರ ತಿಳಿಯಿತೆಂದೂ ಹೇಳಲಾಗುತ್ತದೆ.

ಇಲ್ಲಿ ಪೂರಕ್ಕಳಿ ಸಂಘವೊಂದು ಇದೆ. ರೆಯರಮಂಗಲಂ ಕ್ಷೇತ್ರದಲ್ಲಿ ನಡೆಯುವ ಪೂರೋತ್ಸವಕ್ಕೆ ಪೂರಕ್ಕಳಿಯನ್ನಾಡುವ ಹಕ್ಕು ಈ ನಗರದ ಸದಸ್ಯರಿಗೆ ಮಾತ್ರವಿದೆ. ಈ ಕ್ಷೇತ್ರದಲ್ಲಿ ಗುಳಿಗನ್, ಮೂವಾಳಂಕುಳಿಚಾಮುಂಡಿ, ಚೂಳಿಯಾರ್ ಭಗವತಿ, ಪಡವೀರನ್, ವಿಷ್ಣುಮೂರ್ತಿ ಮತ್ತು ವೆಳ್ಳಾಟಂ ಎನ್ನುವ ದೈವಗಳ ಆರಾಧನೆಯಿದೆ. ಪ್ರಧಾನ ದೈವವು ಸೋಮೇಶ್ವರಿಯಾಗಿದೆ.

## ೯. ನೀಲೇಶ್ವರಂ ನಗರಂ

ಈ 'ನಗರಂ'ನ ಆಡಳಿತದಲ್ಲಿ ಎರಡು ಕ್ಷೇತ್ರಗಳಿವೆ. ಒಂದು 'ಅಞೂಟ್ಟಂಬಲಂ' (ಐನೂರರ ದೇವಾಲಯ) ಇನ್ನೊಂದು 'ವೀರರ್‌ಕಾವ್' (ವೀರರ ಗುಡಿ) ,'ಅಞೂಟ್ಟಂಬಲಂ'ನಲ್ಲಿ 'ಶ್ರೀ ಪೋರ್ಕಲಿ ಭಗವತಿ' ಮತ್ತು 'ಆರ್ಯಕ್ಕರ ಭಗವತಿ'ಯರ ಪ್ರತಿಷ್ಠೆಯಿದೆ. ವೀರರಕಾವ್‌ನಲ್ಲಿ ಮೂರು ಕ್ಷೇತ್ರಗಳಿವೆ. ಪಾಡಾರ್‌ಕುಳಂಗರ ಭಗವತಿ, ಪಡವೀರನ್, ಗುಳಿಗನ್, ಮೂವಾಳಂಕುಳಿ ಚಾಮುಂಡಿ, ವಿಷ್ಣುಮೂರ್ತಿ, ಚೂಲಿಯಾರ್ ಭಗವತಿ ಮುಂತಾದ ದೈವಗಳನ್ನು ಕಟ್ಟಿ ಆಡಿಸಲಾಗುತ್ತದೆ. ಇಲ್ಲಿ 'ಕಳಿಯಾಟ್ಟಂ' ಆದ ಮೇಲೆಯೆ ಆ ಪ್ರದೇಶದ ಇತರ ಸಮುದಾಯದವರ ದೈವಾಲಯಗಳಲ್ಲಿ ಕಳಿಯಾಟ್ಟಂ ನಡೆಯುವುದು ಹಿಂದಿನಿಂದಲೇ ಬಂದ ಸಂಪ್ರದಾಯ.

ಕೋಲತ್ತಿರಿ ರಾಜವಂಶದ ಒಂದು ಶಾಖೆಯೇ ನೀಲೇಶ್ವರ ರಾಜವಂಶ. ಬೇರೆ ಬೇರೆ ಸಮುದಾಯದವರ ಕ್ಷೇತ್ರಗಳು ಈ ರಾಜವಂಶದ ಕೈಕೆಳಗೆ ಅಸ್ತಿತ್ವಕ್ಕೆ ಬಂದಿವೆ. ಈ ಸಮುದಾಯಗಳ ಮಧ್ಯೆ ನಿಕಟವಾದ ಸೌಹಾರ್ದತೆಯಿದೆ. ಇಲ್ಲಿನ ಶಾಲಿಯಾ ಸಮುದಾಯದವರು ನೀಲೇಶ್ವರಂ ರಾಜನ ಸೈನಿಕರಾಗಿದ್ದರಂತೆ. ತಮ್ಮ ಆರಾಧ್ಯದೈವವಾದ ಮೂವಾಳಂಕುಳಿ ಚಾಮುಂಡಿಯೊಂದಿಗೆ ಹಿಂದೆ ಇವರು ಯುದ್ಧರಂಗದಲ್ಲಿ ಯುದ್ಧದಲ್ಲಿ ಭಾಗವಹಿಸಿದ್ದರು ಎಂಬ ಐತಿಹ್ಯವೇ 'ಪೊರಾಟ್' ಎನ್ನುವ ಕಲಾರೂಪದ ಹಿಂದಿರುವ ಐತಿಹ್ಯವಾಗಿದೆ. ಆದುದರಿಂದ ಇಲ್ಲಿ ಪೊರಾಟ್ ತನ್ನ ಹಳೆಯ ವೈಭವದೊಂದಿಗೆ ನಡೆಯುತ್ತದೆ. ಪೊರಾಟ್ ವೇಷ ಧರಿಸುವವರು ಕ್ಷೇತ್ರದಿಂದ ಎಣ್ಣೆಯನ್ನು

ಪಡೆದುಕೊಂಡು ಸ್ನಾನವನ್ನು ಮುಗಿಸಿ ಬಂದಾಗ ಅವರನ್ನು ಸ್ಥಾನಿಕರು ಮೆರವಣಿಗೆಯ ಮೂಲಕವಾಗಿ ವೀರರ್‌ಕಾವಿಗೆ ಕರೆತರುತ್ತಾರೆ. ಅಲ್ಲಿ ವೇಷವನ್ನು ಧರಿಸಲಾಗುತ್ತದೆ. ಕೆಂಪು ಬಟ್ಟೆಯನ್ನು ಉಟ್ಟು ತಲೆಯಲ್ಲಿ ಗಂಟು ಧರಿಸಿಕೊಂಡ ವೇಷದಲ್ಲಿ ಪೂರಾಟ್ ಕಲೆಗಾರರಿರುತ್ತಾರೆ. ಇಲ್ಲಿ ಪೂರಾಟಿಗೆ ಸಂಬಂಧಿಸಿದಂತೆ 'ಛದ್ಮವೇಷಗಳ ಸ್ಪರ್ಧೆ'ಯೂ ಇತ್ತೀಚೆಗೆ ನಡೆಯುತ್ತಿದೆ.

ಈ ಕ್ಷೇತ್ರದಲ್ಲಿ ಪೋರ್ಕಲಿ ಭಗವತಿ, ಆರ್ಯಕ್ಕರ ಭಗವತಿ, ಶೂಲಿಯಾರ್ ಭಗವತಿ, ಪಾಡಾರಕುಳಂಗರ ಭಗವತಿ, ವಿಷ್ಣುಮೂರ್ತಿ, ಮೂವಾಳಂಕುಳಿ ಚಾಮುಂಡಿ, ಗುಳಿಗನ್, ಪಂಜುರ್ಲಿ ಮುಂತಾದ ದೈವಗಳಿವೆ. ತುಲಾಮಾಸದ ೧೧ ಮತ್ತು ೧೨ ನೆಯ ದಿನ ಕಳಿಯಾಟ್ಟವು ನಡೆಯುತ್ತದೆ. ತುಲಾಮಾಸದ ೧೨ ರಂದು ಮುಂಜಾನೆ 'ಪಡವೀರನ್'ನನ್ನು ಕಟ್ಟುವುದರೊಂದಿಗೆ ದೈವಗಳ ಉತ್ಸವವು ಆರಂಭವಾಗಿ ಸಂಜೆ 'ಮೂವಾಳಂಕುಳಿ ಚಾಮುಂಡಿ'ಯೊಂದಿಗೆ ಕಳಿಯಾಟ್ಟವು ಕೊನೆಗೊಳ್ಳುತ್ತದೆ.

ಇಲ್ಲಿನ 'ನಗರ ವ್ಯವಸ್ಥೆಯು' ಸುವ್ಯವಸ್ಥಿತವಾದ ರೀತಿಯಿಂದ ಕೂಡಿದೆ. 'ರೇಶ್ಮೆವಲ್ಲಿ' ಮತ್ತು 'ರಾಮಾಯಣ ಕೊತ್ತು ಬಳಿ'ಯನ್ನು ಧರಿಸಿದ ಚೆಟ್ಟಿಯಾರ್‌ಗಳು, ೪ ಕಾರ್ನವರು, ೨ ಮಡೆಯರು ಇಲ್ಲಿದ್ದಾರೆ. ಸುಮಾರು ಐದು ಸಾವಿರಕ್ಕಿಂತಲೂ ಮೇಲ್ಪಟ್ಟು ಸದಸ್ಯರಿದ್ದಾರೆ. ಈ 'ನಗರಂ'ನ ತೆರುವಿನಲ್ಲಿ ಐನೂರಕ್ಕಿಂತಲೂ ಮೇಲ್ಪಟ್ಟು ಮನೆಗಳಿವೆ. ಒಂದು ನೇಕಾರರ ವಸತಿ ಸಮುಚ್ಚಯವೂ(colony)ಇದೆ.

## ೧೦. ಕಾಞಂಗಾಡ್ ನಗರಂ

ಈ ನಗರಂ ಕಾಞಂಗಾಡ್ ಪಟ್ಟಣದಿಂದ ಮೂರು ಕಿ. ಮೀ. ದಕ್ಷಿಣದಲ್ಲಿದೆ. ಇಲ್ಲಿನ ಶಾಲಿಯಾ ತೆರುವನ್ನು 'ಕೀಳಾಚ್ಚೇರಿ ತೆರು' ಎಂದು ಕರೆಯುತ್ತಾರೆ. ಇಲ್ಲಿನ ಕ್ಷೇತ್ರವು ಬ್ರಾಹ್ಮಣನ ಕೈಕೆಳಗೆ ಇದ್ದ ವಿಷ್ಣುದೇವಾಲಯವಾಗಿತ್ತೆಂದೂ, ಆ ಬ್ರಾಹ್ಮಣನು ಅಲ್ಲಿಂದ ಹೊರಟು ಹೋಗುವ ವೇಳೆಯಲ್ಲಿ ಇದನ್ನು ಶಾಲಿಯಾ ಸಮುದಾಯದ ಮೂತ್ತ ಚೆಟ್ಟಿಯಾರರೊಬ್ಬರ ಕುಟುಂಬಕ್ಕೆ ನೀಡಿದನೆಂದೂ ಐತಿಹ್ಯವಿದೆ. ಮುಂದೆ ಶಾಲಿಯಾ ಸಮುದಾಯ ಅದನ್ನು ದೇವೀ ಕ್ಷೇತ್ರವನ್ನಾಗಿ ಪರಿವರ್ತಿಸಿದರೆಂದೂ ಹೇಳಲಾಗುತ್ತದೆ.

ವಿಷು ಉತ್ಸವ, ನಿರ, ಪುತ್ತರಿ, ಕಳಿಯಾಟ ಈ ಮೊದಲಾದವನ್ನು ಕ್ಷೇತ್ರದಲ್ಲಿ ನಡೆಸುತ್ತಾರೆ. ಪಡವೀರನ್, ವಿಷ್ಣುಮೂರ್ತಿ, ಚೂಳಿಯಾರ್ ಭಗವತಿ, ಮೂವಾಳಂಕುಳಿಚಾಮುಂಡಿ, ಗುಳಿಗನ್ ಎಂಬೀ ದೈವಗಳನ್ನು ಕೋಲಕಟ್ಟಿ ಇಲ್ಲಿ ಆಡಿಸಲಾಗುತ್ತದೆ. ಪ್ರತಿಷ್ಠಾದೇವಿಯಾದ 'ಅರಯಿಲ್ ಭಗವತಿ'ಯನ್ನು ಕೋಲಕಟ್ಟಿ ಆಡಿಸುವ ಸಂಪ್ರಧಾಯವಿಲ್ಲ. ಪೆರುಂಕಳಿಯಾಟಕ್ಕೆ ಮಾತ್ರ ಈ ದೈವವನ್ನು ಕಟ್ಟಿ ಆಡಿಸಬಹುದು ಎಂದು ಹೇಳಲಾಗುತ್ತದೆ. ಅದು ಇಂದಿನವರೆಗೆ ನಡೆದ ಚರಿತ್ರೆಯಿಲ್ಲ.

'ಶಾಲಿಯಾಪೂರಾಟ್' ಇಲ್ಲಿ ವೈಭವಪೂರ್ಣವಾಗಿ ನಡೆಯುತ್ತದೆ. ನೂರಾರು ವೇಷಗಳು ಇಲ್ಲಿ ಪ್ರದರ್ಶಿಸಲ್ಪಡುತ್ತವೆ. ಇದರಲ್ಲಿ ಅಟ್ಟಕ್ಕಣಂ ಪೊಡಿ ಎಂಬ ವೇಷವು ಪ್ರಧಾನವಾದುದು. ಈ

ವೇಷವನ್ನು ಕಟ್ಟಬೇಕಿದ್ದರೆ ಕಲಾವಿದನು ವ್ರತನಿಷ್ಠನಾಗಿರಬೇಕು. ಕ್ಷೇತ್ರದಲ್ಲಿ ೭ ದಿನವೂ ಪೂರೋತ್ಸವ ನಡೆಯುತ್ತದೆ. ಕೀಜೂರಯ್ಯನ್ (ಶಾಸ್ತಾವು) ಕುದಿರಕ್ಕಾಳಿ, ಅರಯಿಲ್‌ಭಗವತಿ ದೈವಗಳನ್ನೂ, ಹಲವಾರು ದೇವಿ–ದೇವತೆಗಳನ್ನೂ ಪೂರಕ್ಕಳಿಪಾಟನಲ್ಲಿ ಸ್ತುತಿಸುತ್ತಾರೆ.

ಒಂಬತ್ತು ಮಂದಿ ಆಚಾರವರ್ಗವು ಈ 'ನಗರಂ'ನಲ್ಲಿತ್ತು. ಆದರೆ ಈಗ ಅವರ ಸಂಖ್ಯೆ ಕಡಿಮೆಯಾಗಿದೆ. ಚೆಟ್ಟಿಯಾರ್ ಹಾಗೂ ಕಾರ್ನವರು ಕ್ಷೇತ್ರ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಾರೆ. ದೇವಾಲಯದ ಗರ್ಭಗುಡಿಯೊಳಗೆ ಅವರಿಗೆ ಮಾತ್ರ ಪ್ರವೇಶವಿದೆ. ಸುಮಾರು ೨೦೦ರಷ್ಟು ಮನೆಗಳೂ ಸಾವಿರದಷ್ಟು ಜನಸಂಖ್ಯೆಯೂ ಇಲ್ಲಿನ ಶಾಲಿಯಾ ತೆರುವಿನಲ್ಲಿದೆ.

### ೧೧. ಅದಿಯಾಲ್ ನಗರಂ

ಕಾಞಂಗಾಡಿನಿಂದ ೩ ಕಿ.ಮೀ ಒಳಗೆ ವೆಳ್ಳಿಕ್ಕೋತ್ ಎನ್ನುವ ಗ್ರಾಮೀಣ ಪರಿಸರದಲ್ಲಿ ಈ 'ನಗರಂ' ಇದೆ. ಈಗ ಈ ಪರಿಸರವನ್ನು 'ವೆಳ್ಳಿಕ್ಕೋಡ್ ತೆರು' ಎಂದೇ ಹೇಳುತ್ತಾರೆ. ಈ 'ನಗರಂ'ಗೆ ೩೦೦ ವರ್ಷದ ಇತಿಹಾಸವಿದೆ. ಸುಮಾರು ೭೦ ರಷ್ಟು ಮನೆಗಳು ಇವೆ. ೩೫೦ ರಷ್ಟು ಜನಸಂಖ್ಯೆ ಇದೆ. ಅತ್ಯಂತ ಕಡಿಮೆ ಸದಸ್ಯರಿರುವ 'ನಗರ' ವಿದು. ಈ ತೆರುವಿನ ಕ್ಷೇತ್ರದಲ್ಲಿ ಚೂಳಿಯಾರ್ ಭಗವತಿ, ಮೂವಾಳಂಕುಜಿ ಚಾಮುಂಡಿ, ಕೊಟ್ಟಿಲಂಗಾಡ್ ಭಗವತಿ, ಎಂಬ ಮೂರು ಭಗವತಿಗಳ ಗುಡಿಗಳಿವೆ. ಈ 'ನಗರಂ'ಗೆ ನಾಯರ್ ಕುಟುಂಬದ ಹಿರಿಯ ಮನೆತನವಾದ 'ಮಡಿಯನ್ ಕೋವಿಳಗಂ' (ಅರಮನೆ)ಯೊಂದಿಗೆ ಗಾಢವಾದ ಸಂಬಂಧವಿದೆ. "ಮೂವಾಳಂಕುಜಿ ಚಾಮುಂಡಿ"ಯು 'ಮಡಿಯನ್ ಕೋವಿಳಗಂ'ನ ನಾಯನ್ಮಾರರಿಗಾಗಿ ಯುದ್ಧವೊಂದರಲ್ಲಿ ಭಾಗಿಯಾಗಿ ಹೋರಾಡಿದಳೆಂದೂ ಆ ಸೈನ್ಯದ ನಾಯಕತ್ವವನ್ನು ವಹಿಸುವಂತೆ ದೇವಿಯು 'ಚೂಳಿಯಾರ್ ಭಗವತಿ'ಮತ್ತು 'ಪಡವೀರನ್'ರಿಗೆ ಹೇಳಲು ಅವರೂ ಯುದ್ಧಕ್ಕೆ ಹೊರಟು ಮುಂದೆ ಯುದ್ಧದಲ್ಲಿ ಜಯವು ಲಭಿಸಿದ ಮೇಲೆ ಈ ದೈವಗಳು ಇಲ್ಲೇ ನೆಲೆನಿಂತರೆಂದೂ ಐತಿಹ್ಯವಿದೆ. ತಮಗೆ ಸಹಾಯ ಮಾಡಿದ ದೇವಿಗೆ ನಾಯನ್ಮಾರರು ೧೮ ಮುಡಿಯ ಭೂಮಿಯನ್ನು ದಾನವಾಗಿ ನೀಡಿದರೆಂದೂ ಹೇಳಲಾಗುತ್ತದೆ.

ಇಲ್ಲಿ ಪಡವೀರನ್, ವಿಷ್ಣುಮೂರ್ತಿ, ಗುಳಿಗ, ಕುಂಡಾರ್ ಭಗವತಿ ಮುಂತಾದ ಉಪದೈವಗಳಿವೆ. ಇಲ್ಲಿನ ನಗರಂ ನಲ್ಲಿ ಮೂತೆಚೆಟ್ಟಿಯಾರ್, ಇಳಯ ಚೆಟ್ಟಿಯಾರ್, ಕೋಮರ, ಮಡೆಯ ಹಾಗೂ ಮೂರು ಕಾರ್ನವರು ಇದ್ದಾರೆ.

### ೧೨. ತಳಿಪ್ಪರಂಬ ನಗರಂ

ಈ 'ನಗರಂ'ನಲ್ಲಿರುವ ಕ್ಷೇತ್ರವನ್ನು 'ಪುಕ್ಕೋತ್ತು ನಡ' ಅಥವಾ 'ಕೊಟ್ಟಾರಂ' ಎಂದೂ ಹೇಳುತ್ತಾರೆ. ಈ ತೆರುವಿನಲ್ಲಿ ೩೦೦ ರ ವರೆಗೆ ಮನೆಗಳಿವೆ. ೧೦೦೦ ಜನಸಂಖ್ಯೆಯಿದೆ.

ಬ್ರಾಹ್ಮಣನೋರ್ವನಿಂದ ದಾನವಾಗಿ ಕೊಡಲ್ಪಟ್ಟ ದೇವಾಲಯವಿದೆಯೆಂದು ಹೇಳಲಾಗಿದೆ. ವಿಪುಲವಾಗಿ ಭೂಮಿಯೂ ಅದರೊಂದಿಗೆ ಲಭಿಸಿತ್ತು. ಸುಮಾರು ಐದು ಎಕರೆಗಳಷ್ಟು ಭೂಮಿ 'ನಗರಂ'ನ ಕೈಕೆಳಗೆ ಇದೆ. ಕ್ರಮೇಣ ಇಲ್ಲಿ ಶಾಲಿಯಾ ತೆರು ಬೆಳೆದುಬಂತು. ಇಲ್ಲಿ ಶಾಲಿಯಾರಲ್ಲದೆ ಇತರ ಸಮುದಾಯದವರೂ ದೇವೀ ದರ್ಶನಕ್ಕೆ ಬರುತ್ತಾರೆ. 'ಕೋಲಸ್ವರೂಪತ್ತಿಲ್‌ತಾಯ್, ಶ್ರೀ ಕುರುಂಬಾ ಭಗವತಿ, ವನದುರ್ಗ, ಚುಜಿಲಿ ಭಗವತಿ, ಸೋಮೇಶ್ವರಿ' ಎಂಬೀ ಐದು ದೇವಿಯರನ್ನು ಇಲ್ಲಿ ಪ್ರತಿಷ್ಠಿಸಲಾಗಿದೆ. ದಂಡನ್, ಘಂಟಾಕರ್ಣನ್, ವೇಟ್ಟಕ್ಕೊರುಮಗನ್, ನಾಗರಾಜಾವ್ ಎಂಬೀ ದೈವಗಳೂ ಇವೆ. ಇಲ್ಲಿ ನಾಲ್ಕು ಉಪಕ್ಷೇತ್ರಗಳಿವೆ, ೧. ಮಾನೇಂಗಾವ್, ೨. ಕಾವತ್ತು ಶಿವಕ್ಷೇತ್ರಂ, ೩. ಮುಂಡುಂಗಾವ್, ೪. ಅರಯಿಲ್ ಕುಳಂಗರ. ವರ್ಷಂಪ್ರತಿ ದೈವಗಳನ್ನು ಕಟ್ಟಿ ಆಡಿಸುವ 'ಕಳಿಯಾಟ' ಮಹೋತ್ಸವವಿದೆ. ಮಾನೇಂಗಾವ್ ಉಪಕ್ಷೇತ್ರದಲ್ಲಿ 'ಕೊಟ್ಟಾರಂ' ನ ದೈವಗಳನ್ನು ಕಟ್ಟಿ ಆಡಿಸಲಾಗುತ್ತದೆ. ಕಳಿಯಾಟವಲ್ಲದೆ ಪೂರಂ, ಕಾರ್ತೀಕ, ಶಿವರಾತ್ರಿ ಉತ್ಸವಗಳನ್ನು ಈ 'ನಗರಂ' ನವರು ವೈಭವೋಪೇತವಾಗಿ ನಡೆಸುತ್ತಾರೆ. ಶಾಲಿಯಾ ತೆರುಗಳಲ್ಲಿ ವಾಸಿಸುವ ಶಾಲಿಯಾರ ಸೌಹಾರ್ದ ಜೀವನವನ್ನು ಈ ತೆರು ಸಂಪೂರ್ಣವಾಗಿ ಪ್ರತಿನಿಧಿಸುತ್ತದೆ. ಮೀನಮಾಸದ ಮೃಗಶಿರ ನಕ್ಷತ್ರದಿಂದ ಉತ್ತರಾ ನಕ್ಷತ್ರದವರೆಗೆ ಇಲ್ಲಿ ಪೂರೋತ್ಸವ ನಡೆಯುತ್ತದೆ. 'ನಗರಂ'ನ ಆಚಾರವರ್ಗದವರು ಕ್ಷೇತ್ರದ ಆಯುಧಗಳನ್ನು ಎತ್ತಿಕೊಂಡು ಉತ್ಸವ ಕಾಲದಲ್ಲಿ ಮನೆಮನೆಗೆ ಹತ್ತಿ ಇಳಿಯುವ ವಿಶಿಷ್ಟ ಪದ್ಧತಿ ಇದೆ. ಪ್ರತಿಯೊಂದು ಮನೆಯೊಂದಿಗೆ ಕ್ಷೇತ್ರಕ್ಕೂ ಆಚಾರವರ್ಗಕ್ಕೂ ಇರುವ ಸಂಬಂಧವನ್ನು ಇದು ಸಂಕೇತಿಸುತ್ತದೆ. ಉತ್ಸವ ಕಾಲದಲ್ಲಿ ಕ್ಷೇತ್ರಕ್ಕೆ ಕಾಣಿಕೆಯಾಗಿ ವಸ್ತುಗಳನ್ನು ಹೂವುಗಳನ್ನು ಉದಾರವಾಗಿ ಕೊಡಲಾಗುತ್ತದೆ.

ಕೋಲತ್ತು ನಾಡಿನಲ್ಲಿ ಭಗವತಿ ಕ್ಷೇತ್ರಗಳಲ್ಲಿ ಮಾತ್ರ ನಡೆಯುವ ಪೂರಕ್ಕಳಿ ಅದರದೆ ಆದ ವೈಶಿಷ್ಟ್ಯತೆಯೊಂದಿಗೆ ನಿಯಮಬದ್ಧವಾಗಿ ಇಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ಮರದ ಕುದುರೆಯ ಮೆರವಣಿಗೆಯೂ ನಡೆಯುತ್ತದೆ. ತಾಮ್ರದ ತಗಡಿನಿಂದ ಮುಚ್ಚಲ್ಪಟ್ಟ ಕುದುರೆಗಳ ಗೊಂಬೆಗಳು ಕ್ಷೇತ್ರದಲ್ಲಿವೆ. ಪೂರಂ ಕಾಲದಲ್ಲಿ ಹಿಡಿಯುವ ತಾಳೆಯ ಕೊಡೆಗಳನ್ನು 'ಕಣಿಸನ್' ಜಾತಿಯವರೇ ಕೊಡಬೇಕು ಎಂಬ ನಿಯಮವಿದೆ. ಹಿಂದಿನ ಕಾಲದಲ್ಲಿ 'ಪೂರಂ' ಉತ್ಸವದೊಂದಿಗೆ 'ಶಾಲಿಯಾ ಪೊರಾಟ್' ಕೂಡಾ ನಡೆಯುತ್ತಿತ್ತು. ಆದರೆ, ಈಗ ಅದು ಇಲ್ಲ. ಕೆಲವೊಮ್ಮೆ 'ಪಡೆಯೋಟ್ಟಂ' ನಡೆಯುತ್ತದೆ. ವಿವಿಧ ವೇಷಗಳೊಂದಿಗೆ ಶಾಲಿಯರು 'ಮಾನೇಂಗಾವ್' ಕ್ಷೇತ್ರದವರೆಗೆ ಓಡುತ್ತಾರೆ.

ತಳಿಪ್ಪರಂಬದ ರಾಜರಾಜೇಶ್ವರೀ ದೇವಾಲಯ ಹಾಗೂ ತೃಚ್ಚಂಬರ ಶ್ರೀ ಕೃಷ್ಣ ಕ್ಷೇತ್ರದೊಂದಿಗೆ ಶಾಲಿಯಾರ ಪೂಕ್ಕೋತು ಕ್ಷೇತ್ರಕ್ಕೆ ಸಂಬಂಧವಿದೆ. ರಾಜರಾಜೇಶ್ವರೀ ದೇವಾಲಯದಲ್ಲಿ ೧೨ ಕ್ಕಿಂತ ಹೆಚ್ಚು ಆನೆಗಳು ಇದ್ದರೆ ಅವನ್ನು ಪೂಕ್ಕೋತ್ತು ಕ್ಷೇತ್ರಕ್ಕೆ ನೀಡಬೇಕೆಂದೂ ನಿಯಮವಿದೆ. ಆದರೆ ೧೨ ಕ್ಕಿಂತ ಹೆಚ್ಚು ಆನೆಗಳು ರಾಜರಾಜೇಶ್ವರೀ ದೇವಾಲಯದಲ್ಲಿದ್ದ ಚರಿತ್ರೆಯಿಲ್ಲ. ಅಲ್ಲಿನ

ಆನೆಗಳಿಗೆ ಪೂಕ್ಕೋತ್ತು 'ನಗರಂ' ನ ಕೊಟ್ಟಾರಂ ಕ್ಷೇತ್ರದವರೇ ಹೆಸರನ್ನಿಡುತ್ತಾರೆ. 'ಪೂಕ್ಕೋತ್ತು ಕೊಟ್ಟಾರಂ' ನ ಉಪಕ್ಷೇತ್ರಗಳಲ್ಲಿ 'ಕಳಿಯಾಟ್ಟಂ' ನಡೆಸುವ ಜವಾಬ್ದಾರಿಯು ಅವರದೇ. ಅದಕ್ಕೆ ಬೇಕಾದ ಆಯುಧಗಳನ್ನು ಪೂಕ್ಕೋತ್ತು ಕ್ಷೇತ್ರದಲ್ಲಿಯೇ ಇರಿಸಲಾಗುತ್ತದೆ.

ತೃಚ್ಛಂಬರಂ ಶ್ರೀ ಕೃಷ್ಣ ದೇವಾಲಯದ ನೃತ್ಯ ಕಾರ್ಯಕ್ರಮವು ಈ ದೇವಾಲಯದ ಮುಂದೆಯೇ ನಡೆಯುತ್ತದೆ. ಇದರ ಹಿಂದೆಯೂ ಒಂದು ಐತಿಹ್ಯವಿದೆ. "ಪೂಕ್ಕೋತ್ತು ಕ್ಷೇತ್ರದ ಸಮೀಪ ಕೃಷ್ಣ ಭಕ್ತನಾದ ಬ್ರಾಹ್ಮಣ (ನಂಬೂದಿರಿ) ನೋರ್ವನಿದ್ದ. ದಿನಂಪ್ರತಿ ಆತನು ತೃಚ್ಛಂಬರದ ಶ್ರೀ ಕೃಷ್ಣ ದೇವಾಲಯಕ್ಕೆ ಹೋಗಿ ದೇವರಿಗೆ ನಮಸ್ಕರಿಸುತ್ತಿದ್ದ. ಆತನು ತೀರಾ ಅಶಕ್ತನಾದ ಕಾಲದಲ್ಲಿ. ದೇವಾಲಯಕ್ಕೆ ಹೋಗಲಾರದ ಅತ್ತಾಗ, ಶ್ರೀ ಕೃಷ್ಣನೇ ಅವನ ಮುಂದೆ ಬಂದು ನೃತ್ಯವಾಡಿ ಸಂತೃಪ್ತಿಗೊಳಿಸುತ್ತಿದ್ದ" ನಂತೆ. ಅಂದಿನ ಶ್ರೀ ಕೃಷ್ಣನ ನೃತ್ಯವನ್ನು ನೆನಪಿಸಲು ಇಂದೂ ವರ್ಷಕ್ಕೊಮ್ಮೆ ೧೪ ದಿನ (ಮಾರ್ಚ್ ೬ ರಿಂದ ೨೦ ರ ವರೆಗೆ) ಪೂಕ್ಕೋತ್ತು ಕ್ಷೇತ್ರದಲ್ಲಿ ನೃತ್ಯ ಕಾರ್ಯಕ್ರಮ ನಡೆಯುತ್ತದೆ. 'ಪೂಕ್ಕೋತ್ತು ನಗರಂ' ನವರು ತೃಚ್ಛಂಬರದ ಕೃಷ್ಣ ವಿಗ್ರಹದ ಮುಂದೆ ಚಿನ್ನದ ನಾಣ್ಯವನ್ನಿಟ್ಟು ವಂದಿಸುವ ಪದ್ಧತಿಯು ಬಹಳ ಹಿಂದಿನಿಂದಲೂ ನಡೆದು ಬಂದಿದೆ. ಇತ್ತೀಚೆಗೆ ಚಿನ್ನದ ನಾಣ್ಯದ ಬದಲು ಅಷ್ಟೇ ಮೊತ್ತದ ಹಣವನ್ನಿಡಲಾಗುತ್ತದೆ. ಅದಕ್ಕೆ ಪ್ರತಿಫಲವಾಗಿ ತೃಚ್ಛಂಬಲಂ ಕ್ಷೇತ್ರದಿಂದ ಪೂಕ್ಕೋತ್ತು ಕೊಟ್ಟಾರಂ ಕ್ಷೇತ್ರಕ್ಕೆ ಅಕ್ಕಿಯನ್ನು ನೀಡಲಾಗುತ್ತದೆ.

ತಳಿಪ್ಪರಂಬದಲ್ಲಿ ಶಾಲಿಯರು ಅವರದೇ ಆದ ಸಾಂಸ್ಕೃತಿಕ ಪಾರಂಪರ್ಯವನ್ನು ಪರಿಶುದ್ಧತೆಯನ್ನು ಕಾಪಾಡಿಕೊಂಡು ಬಂದಿದ್ದಾರೆ.

## ೧೩. ಉದುಮ (ಪಶ್ಚಿಮ) ನಗರಂ

ಇದು ಕೀಜೂರು ತೆರುವಿನಿಂದ ದಕ್ಷಿಣಕ್ಕೆ 'ಉದುಮ' ಎಂಬಲ್ಲಿದೆ. ಇದನ್ನು 'ಒದೊವತ್ ನಗರಂ' ಎಂದೂ ಹೇಳುತ್ತಾರೆ. ಉದುಮದಲ್ಲಿ ಎರಡು ನಗರಗಳಿರುವುದರಿಂದ ಒಂದನ್ನು 'ಪಶ್ಚಿಮ' ವೆಂದೂ ಇನ್ನೊಂದನ್ನು 'ಪೂರ್ವ' ವೆಂದೂ ಹೇಳುತ್ತಾರೆ. ಇದರಲ್ಲಿ 'ಪಶ್ಚಿಮ' ದ (ಪಡಿಞಾರ್) ನಗರಕ್ಕೂ ತೆರುವಿಗೂ ವಿಶೇಷ ಪ್ರಾಧಾನ್ಯತೆ ಇದೆ. ಅದು ಮೊದಲೇ ಇದ್ದ ನಗರವಾಗಿದೆ. ಸುಮಾರು ೬೦ ರಷ್ಟು ಶಾಲಿಯಾರ ಮನೆಗಳಿರುವ ತೆರುವಿದು. ನೂರಕ್ಕಿಂತಲೂ ಮೇಲ್ಪಟ್ಟು ಸದಸ್ಯರಿದ್ದಾರೆ. ಕೆಲವು ಆಚಾರ ವರ್ಗದವರೂ ಇದ್ದಾರೆ.

ಈ 'ನಗರಂ' ನಲ್ಲಿ ಚೂಳಿಯಾರ್ ಭಗವತೀ ಕ್ಷೇತ್ರವಿದೆ. ಅಲ್ಪ ದೂರದಲ್ಲಿರುವ ವಿಷ್ಣುವಿನ ದೇವಾಲಯದ ಉಪಕ್ಷೇತ್ರವಾಗಿ ಇದನ್ನು ಪರಿಗಣಿಸಲಾಗುತ್ತದೆ. ಚೂಳಿಯಾರ್ ಭಗವತಿಯ ಪ್ರೀತ್ಯರ್ಥವಾಗಿ ೭ ದಿನಗಳ ಪೂರೋತ್ಸವವು ಮೀನ ಮಾಸದಲ್ಲಿ ನಡೆಯುತ್ತದೆ. ಪೂರಂಕಳಿ ತಿಳಿದವರೂ ತಿಳಿಯದವರೂ 'ಪೂರಂ' ಆಡುತ್ತಾರೆ. ಈ ಕ್ಷೇತ್ರದ ನಿರ್ಮಾಣದ ಹಿಂದೆಯೂ ಒಂದು ಐತಿಹ್ಯವಿದೆ. "ಹಿಂದಿನ ಕಾಲದಲ್ಲಿ 'ತೆರು'ವಿನ ಶಾಲಿಯರು 'ಕೋತಾರಂಬತ್' ಎನ್ನುವ

ಪ್ರದೇಶದ ಚೂಳಿಯಾರ್ ಭಗವತೀ ಕ್ಷೇತ್ರಕ್ಕೆ ಹೋಗಿ ಪೂರಕ್ಕಳಿ ಆಡುತ್ತಿದ್ದರು. ಒಂದು ಬಾರಿ ಪೂರಕ್ಕಳಿ ಆಡಲು ಅಲ್ಲಿ ಹೋದವರು ಅಲ್ಲಿಂದ ಒಂದು ತಾಳೆ ಗರಿಯ ಕೊಡೆಯನ್ನೂ, ಒಂದು ದೀಪವನ್ನೂ ತಂದು ತಮ್ಮ ಮನೆಯೊಳಗೆ ಇರಿಸಿದರಂತೆ. ಮನೆಯೊಳಗಿದ್ದ ಮುದುಕಿಯೊಬ್ಬಳು 'ತಾಳೆ ಕೊಡೆ' ಯು ತಾನೇ ಅದುರುವುದನ್ನೂ, ದೀಪವು ತನ್ನಷ್ಟಕ್ಕೇ ಉರಿಯುವುದನ್ನೂ ಕಂಡು ಉಳಿದವರಿಗೆ ವಿಷಯ ತಿಳಿಸಲು, ಅವರು "ರಾಶಿ ಪ್ರಶ್ನೆ" ಯನ್ನಿಟ್ಟು ನೋಡಿದಾಗ ದೇವಿ 'ತಾಳೆಯ ಕೊಡೆ' ಯೊಂದಿಗೆ ಬಂದಿರುವ ವಿಷಯವು ತಿಳಿಯಿತು. ದೇವಿಯ ಆರಾಧನೆ ನಡೆಯಲೇ ಬೇಕೆಂದಾಗ ಸ್ವಲ್ಪ ಕಾಲ ಆ ಮನೆಯಲ್ಲೇ ಆರಾಧನೆ ನಡೆದು ಅನಂತರ ಕ್ಷೇತ್ರವನ್ನು ನಿರ್ಮಿಸಲಾಯಿತು." ಇಂದಿಗೂ ಉದುಮ ತೆರುವಿನವರು 'ಕೂತ್ತಾರಂಬತ್ತ್ ಕ್ಷೇತ್ರ' ಕ್ಕೆ ಹೋಗಿ ಪೂರಕ್ಕಳಿ ಆಡುವ ಸಂಪ್ರದಾಯವಿದೆ.

'ಕೀಚೂರು' ನಗರಂ ಚೇರಲ್ ಸಂದರ್ಭದಲ್ಲಿ ಇತ್ಯರ್ಥವಾಗದೇ ಉಳಿದ ವಿವಾದಗಳು ಇಲ್ಲಿ ತೀವ್ರವಾಗಿ ಪ್ರಶ್ನಿಸಲ್ಪಟ್ಟು ತೀರ್ಮಾನಕ್ಕೆ ಬರಲಾಗುತ್ತಿತ್ತು ಎನ್ನಲಾಗಿದೆ.

## ೧೪. ಉದುಮ (ಪೂರ್ವ) ನಗರಂ

ಇದನ್ನು 'ವೆಳ್ಳಿಕ್ಕುನ್ನು ನಗರಂ' ಎಂದೂ ಹೇಳುತ್ತಾರೆ. 'ಉದುಮ ಪಶ್ಚಿಮ ನಗರಂ' ನ ನೇರ ಪೂರ್ವಕ್ಕೆ ಈ ನಗರಂ ಇದೆ. ಇಲ್ಲಿನ ಪ್ರಧಾನ ದೇವಿ "ಶ್ರೀ ಭಗವತಿ". ಇಲ್ಲಿಯೂ ಸುಮಾರು ೮೦ ಶಾಲಿಯಾರ ಮನೆಗಳಿರುವ ತೆರುವಿದೆ. ಈ 'ನಗರಂ' ನ ಸೃಷ್ಟಿಯ ಹಿಂದೆಯೂ ಕಾರಣ ಒಂದು ಇದೆ. ಮೊದಲು ಉದುಮದ ಶಾಲಿಯಾರೆಲ್ಲಾ 'ಒದೊವತ್ ನಗರಂ' ಗೆ ಸೇರಿದವರಾಗಿದ್ದರು. ಶಾಲಿಯಾರ 'ನಗರಂ' ಗಳಲ್ಲಿ ಕ್ಷೇತ್ರಕ್ಕೆ ಬಂದ ಸ್ಥಾನಿಕರಿಗೂ, ಸದಸ್ಯರಿಗೂ 'ಅಂಶಂ' ಕೊಡುವ ಪದ್ಧತಿ ಇದೆ. ('ಅಂಶಂ' ಎಂದರೆ ಗೌರವ ಸೂಚಕವಾಗಿ ನೀಡುವ ಐದು ವೀಳ್ಯದೆಲೆ ಹಾಗೂ ಅಡಿಕೆ.) ಇದು 'ನಗರಂ' ನಲ್ಲಿ ತನಗೂ ಪಾಲಿದೆ ಎನ್ನುವುದನ್ನು ಸೂಚಿಸುತ್ತದೆ. 'ನಗರಂ' ನಿಂದ ಅಂಶವು ಸಿಗದೇ ಇದ್ದರೆ 'ಸಾಮಾಜಿಕ ಅವಗಣನೆ' ಎಂದು ಆ ಕಾಲದಲ್ಲಿ ಪರಿಗಣಿಸಲಾಗುತ್ತಿತ್ತು. ಹೀಗಿರಲು ಒಂದು ಬಾರಿ 'ಉದುಮ ಪಡಿಞಾರ್ ನಗರಂ' ಕ್ಷೇತ್ರದಲ್ಲಿ (ಒದೊವತ್ ನಗರ) ಅಂಶವನ್ನು ಹಂಚುವಾಗ ಕಡಿಮೆ ಬಂದು, ಕೆಲವು ಸದಸ್ಯರಿಗೆ ಅಂಶವು ಸಿಗಲಿಲ್ಲ. ಅಸಮಾಧಾನಗೊಂಡ ಅವರು ಅಲ್ಲಿಂದ ಸ್ವಲ್ಪ ದೂರದಲ್ಲಿ ಬೇರೆಯೇ 'ನಗರಂ' ಸೃಷ್ಟಿಸಿ ಕ್ಷೇತ್ರ ಒಂದನ್ನು ನಿರ್ಮಿಸಿ, ತೆರುವನ್ನು ಕಟ್ಟಿಕೊಂಡರು. ಇದು ಮುಂದೆ ಉದುಮ 'ಕಿಟಕ್ಕೇ (ಪೂರ್ವದ) ತೆರು' ಎಂದೇ ಗುರುತಿಸಲ್ಪಟ್ಟಿತು. ಪಡಿಞಾರ ತೆರುವಿನ ಕ್ಷೇತ್ರದಲ್ಲಿರುವ ಎಲ್ಲಾ ದೈವಗಳೂ ಇಲ್ಲಿಯೂ ಇವೆ. ಈ ಎರಡೂ ಕ್ಷೇತ್ರಗಳಲ್ಲಿ ಭಗವತಿ, ಪಡವೀರನ್, ಚಾಮುಂಡಿ, ವಿಷ್ಣುಮೂರ್ತಿ, ಗುಳಿಗ ದೈವಗಳಿವೆ. ಆಚಾರವರ್ಗದಲ್ಲಿ ಇಬ್ಬರು ಮಡೆಯರಿದ್ದು ಪೂಜೆಗಳನ್ನು ನಡೆಸುತ್ತಾರೆ.

## ೧೫. ಮಾಂಜಾಡ್ ನಗರಂ

ಕಣ್ಣಾಕ್ಕೇರಿ ಪಟ್ಟಣದಿಂದ ಒಂದು ಕಿ. ಮೀ ದೂರದಲ್ಲಿ ಈ 'ನಗರಂ' ಇದೆ. ಇಲ್ಲಿ

ಆರಂಭದಲ್ಲಿ ೫೦ ಮನೆಗಳಿದ್ದವು ಎಂದು ದೈವವನ್ನು ಕಟ್ಟುವವರು ಹೇಳುತ್ತಾರೆ. ಇಲ್ಲಿನ ಪ್ರಧಾನ ದೇವತೆ ಎರಿಂಞ್‌ಕಲ್ ಭಗವತಿ. ಇಲ್ಲಿನ ಕ್ಷೇತ್ರವನ್ನು 'ಎರಿಞ್‌ಕಲ್ ಭಗವತೀ ಕ್ಷೇತ್ರಂ' ಎಂದು ಕರೆಯುತ್ತಾರೆ. ಬಹಳ ಎತ್ತರವಾಗಿ ಬೆಳೆದ ೭೫೦ ವರ್ಷದ ಪ್ರಾಚೀನತೆ ಇದೆ ಎನ್ನಲಾದ ಇಲಂಞ್ (ರೆಂಜೆಯ ಮರ?) ಮರ ಒಂದು ದೇವಾಲಯದ ಒಳಗಡೆಯೇ ಇದೆ. ಮರವನ್ನಾವರಿಸಿಕೊಂಡೇ ಕ್ಷೇತ್ರವಿದೆ. ಆ ಮರದಿಂದಲೇ ಈ ಹೆಸರು ದೇವಾಲಯಕ್ಕೆ ಬಂದಿತು ಎನ್ನಲಾಗಿದೆ. ಈ ಮರದ ಬುಡದಲ್ಲಿಯೇ ಇಲ್ಲಿನ ದೇವಿಯನ್ನು ಮೊದಲು ಪ್ರತಿಷ್ಠಾಪಿಸಲಾಗಿತ್ತು ಎನ್ನುವ ವಿಷಯವನ್ನು ಒಳಗೊಂಡ ಐತಿಹ್ಯ ಹೀಗನ್ನುತ್ತದೆ. "ಒಂದು ಬಾರಿ ಆರ್ಯನಾಡಿನಿಂದ ಕೋಲತ್ತಿರಿ ರಾಜನ ಬಳಿಗೆ (ಪೂರ್ವ ಕರಾವಳಿಯಾಗಿರಬೇಕು) ಹಡಗಿನಲ್ಲಿ ಬಂದ ವಿಗ್ರಹಗಳಲ್ಲಿ ಒಂದು ದೇವೀ ವಿಗ್ರಹವನ್ನು ತನಗೆ ಕೂಡಲೇ ಬೇಕು ಎಂದು ರಾಜನ ಕಾರ್ಯಸ್ಥನಾದ ನಾಯರ್ ಒಬ್ಬನು ವಾದಿಸಿದನು. ರಾಜನಿಗೆ ಕೊಡದೆ ನಿರ್ವಾಹವಿರಲಿಲ್ಲ. ಆತ ಅದನ್ನು ಕೊಂಡುಹೋದ ಮೇಲೆ ಉಳಿದ ವಿಗ್ರಹಗಳನ್ನು ಇರಿಸಿದ ಕೊಠಡಿಯ ಪ್ರಕಾಶವು ಮಂದವಾಯಿತು. ಕತ್ತಲೆ ಹರಡಿತು. ಪ್ರಕಾಶದಾಯಿನಿಯಾದ ಆ ವಿಗ್ರಹವನ್ನು ಕೊಂಡೊಯ್ದವನನ್ನು ಹುಡುಕಿ ತರಲು ರಾಜನು ಆಜ್ಞಾಪಿಸಿದನು. ತನ್ನನ್ನು ಹಿಡಿದು ವಿಗ್ರಹವನ್ನು ಕಸಿದುಕೊಳ್ಳುವರೆಂದು ಅರಿತ ಕಾರ್ಯಸ್ಥನು ವಿಗ್ರಹದೊಂದಿಗೆ ಓಡಿ ರಕ್ಷಣೆ ಪಡೆಯಲು 'ಮಡಿ ಕುಳಂಗರ'ಎನ್ನುವ ಬಟ್ಟೆಯನ್ನು ಒಗೆಯುವ ಕೊಳದ ಬಳಿಗೆ ಬಂದು ಅಲ್ಲೇ ರಾಶಿಹಾಕಿದ ಬಟ್ಟೆಯ ಮಧ್ಯೆ ಅದನ್ನು ಅಡಗಿಸಿ ತಾನೂ ಅಡಗಿ ಕುಳಿತ. ಎಲ್ಲರೂ ಹೋದ ಮೇಲೆ ಅದನ್ನು ಅಲ್ಲೇ ಇದ್ದ ಇಲಂಞ್ ಮರದ ಬುಡದಲ್ಲಿ ಇರಿಸಿದ. ಅನಂತರ ಅಲ್ಲಿಯೇ ಅದನ್ನು ಪ್ರತಿಷ್ಠಾಪಿಸಲಾಯಿತು. ಆ ಮರದ ಬುಡದಲ್ಲಿ ಸ್ವಯಂಭೂ (ತನ್ನಷ್ಟಕ್ಕೇ ಹುಟ್ಟಿದ) ಶಿವಲಿಂಗವೊಂದು ಇತ್ತಂತೆ. ಹೀಗೆ ಅದು ಶಿವಶಕ್ತಿಯರ ಕೇಂದ್ರವಾಯಿತು." ಅಲ್ಲಿಯೇ ಮುಂದೆ ದೀಪ ಹಚ್ಚಿಡಲು ಆರಂಭಿಸಿದರು. ಕ್ರಮೇಣ ಆ ಮರವನ್ನು ಸೇರಿಸಿಯೇ ದೇವಾಲಯ ನಿರ್ಮಾಣವಾಯಿತು. ಈಗ ವಿಗ್ರಹವು ಗರ್ಭಗುಡಿಯಲ್ಲಿದೆ. ಮರಕ್ಕೆ ಆನಿಸಿ ಎರಡು ಆಯುಧಗಳನ್ನು ಇರಿಸಲಾಗಿದೆ. ಆ ಆಯುಧಗಳಿಗೆ ಇಂದೂ ಪೂಜೆ ಸಲ್ಲುತ್ತಿದೆ. ಅವುಗಳನ್ನೇ ಶ್ರೀ ಪೋರ್ಕಲಿ ಭಗವತಿ ಮತ್ತು ಶ್ರೀ ಚುಟಲಿ ಭಗವತಿ ಎಂದು ಹೇಳುತ್ತಾರೆ.

ಆರು ದಿನದ 'ತಿರ' ಎನ್ನುವುದು ಇಲ್ಲಿನ ವಿಶೇಷ ಉತ್ಸವ. ಇದಕ್ಕೆ ಜ್ಯೋತಿಷಿಗಳಲ್ಲಿ ಕೇಳಿ ಪ್ರಶಸ್ತ ದಿನಗಳನ್ನು ನಿಶ್ಚಯಿಸಲಾಗುತ್ತದೆ. ಈ ದಿನಗಳಲ್ಲಿ ಅರಯಿಲ್ ಭಗವತಿ, ಚುಟಲಿ ಭಗವತಿ, ರುಧಿರಕ್ಕಾಳಿ, ಕ್ಷೇತ್ರಪಾಲನ್, ಶ್ರೀ ಪೋರ್ಕಲಿ ಭಗವತಿ, ಮೊದಲಾದ ಪ್ರಧಾನ ದೇವತೆಗಳನ್ನೂ, ಪುಲ್ಲೂರು ಪಾಲನ್, ಪುಲಿಕ್ಕಂಡನ್, ಊರಪಟಶಿ, ವೇಟ್ಟಕ್ಕೊರುಮಗನ್ ಮುಂತಾದ ಉಪದೈವಗಳನ್ನೂ ಕಟ್ಟಲಾಗುತ್ತದೆ. ಅರಂಭದಲ್ಲಿ ಪ್ರಧಾನ ದೈವಗಳನ್ನೂ, ಅನಂತರ ಉಪದೈವಗಳನ್ನೂ ಕಟ್ಟುತ್ತಾರೆ. ಇಲ್ಲಿಯೂ ಪ್ರಧಾನ ದೇವತೆ ಭಗವತಿಯೇ.

ಈ ಕ್ಷೇತ್ರದಲ್ಲಿ ಶಾಲಿಯಾರಲ್ಲದೆ ಇತರ ಸಮುದಾಯದವರು ಉತ್ಸವದ ಸಂದರ್ಭಗಳಲ್ಲಿ ಪ್ರತ್ಯೇಕ ಜವಾಬ್ದಾರಿಗಳನ್ನು ಹೊತ್ತುಕೊಳ್ಳುವರು. ಅವರನ್ನು ಪ್ರತ್ಯೇಕ ಸ್ಥಾನನಾಮಗಳಿಂದ ಗುರುತಿಸುವುದೂ ಇಲ್ಲಿನ ವೈಶಿಷ್ಟ್ಯ. ಜ್ಯೋತಿಷ್ಯವನ್ನು ಹೇಳುವವನು 'ಸ್ವರೂಪಕ್ಕಣಿಯಾನ್'; ಕಲಶವನ್ನು ತರುವ ತೀಯರು 'ತಂಡಯಾನ್'; ಸ್ಥಾನಕ್ಕೆ ಮಡಿಬಟ್ಟೆಯನ್ನು ತರುವವರು 'ವಣ್ಣತ್ತಾನ್'; ಕ್ಷೇತ್ರದ ಆಯುಧಗಳನ್ನು ಹರಿತಗೊಳಿಸುವವನು 'ಪೆರುಂಕೊಲ್ಲನ್'. ಇವರೊಂದಿಗೆ ತೆಯ್ಯಂ ಕಟ್ಟುವ ಮಡಿವಾಳರೂ (ವಣ್ಣಾರ್) ಇದ್ದಾರೆ. ಅವರನ್ನು 'ಪೆರುವಣ್ಣಾನ್' ಎನ್ನುವ ಸ್ಥಾನನಾಮದಿಂದ ಗುರುತಿಸುತ್ತಾರೆ. ತೆಯ್ಯ (ದೈವ) ಕಟ್ಟುವ ಮಲಯ ಜಾತಿಯವರನ್ನು 'ಪೆರು ಮಲಯನ್' ಎಂದು ಹೇಳುತ್ತಾರೆ. ಉತ್ಸವದ ಕಾಲದಲ್ಲಿ ಇವರಾರಿಗೂ ಪ್ರತ್ಯೇಕ ಆಮಂತ್ರಣದ ಅಗತ್ಯವಿಲ್ಲ. ಅವರಾಗಿಯೇ ಬರುತ್ತಾರೆ. ಸಮುದಾಯಗಳ ಒಳಗಿನ ಇಂತಹ ಸೌಹಾರ್ದತೆ ಬೇರೆಲ್ಲೂ ಕಾಣಲು ಸಾಧ್ಯವಿಲ್ಲ. ಉತ್ಸವ ಕಾಲದಲ್ಲಿ ಪರಸ್ಪರ ಸಹಕಾರ ಅಗತ್ಯವಿರುವುದರಿಂದ ಈ ರೀತಿಯ ಸೌಹಾರ್ದತೆ ಬೆಳೆಯುತ್ತದೆ. ಪೂರಕ್ಕಳಿಯಂತಹ ನೃತ್ಯಗಳನ್ನು ಒಂದು ಸಮುದಾಯವು ಇನ್ನೊಂದು ಸಮುದಾಯಕ್ಕೆ ಸೇರಿದ ಕ್ಷೇತ್ರಗಳಲ್ಲಿ ನಡೆಸುವುದೂ ಈ ಸೌಹಾರ್ದತೆಯ ಪ್ರೀತಿಯ ಹಿನ್ನೆಲೆಯಿಂದಾಗಿಯೇ ಎನ್ನಬಹುದು. ಉತ್ಸವದ ದಿನಗಳಲ್ಲಿ ತೀಯಾ ಸಮುದಾಯದವರು 'ತಟ್ಟು' ಹಾಗೂ 'ಕಲಶ' ಗಳನ್ನು ಹಿಡಿದುಕೊಂಡು ಕ್ಷೇತ್ರಕ್ಕೆ ಬರುವ ಪದ್ಧತಿಯಿತ್ತು. ಕ್ರಮೇಣ ಇವರು ಈ ಪದ್ಧತಿಯನ್ನು ಆಚರಿಸಲು ಹಿಂಜರಿದ ಕಾರಣದಿಂದ ಇಂದೀಗ ಅದು ಇಲ್ಲ. (ಬಹಳ ಹಿಂದಿನ ಕಾಲದಿಂದಲೇ ಒಂದು ಸಮುದಾಯದ ಕ್ಷೇತ್ರದಲ್ಲಿ ಉತ್ಸವಾದಿಗಳ ಸಂದರ್ಭದಲ್ಲಿ ಇನ್ನೊಂದು ಸಮುದಾಯದವರು ಕೆಲವು ವಿಶೇಷವಾದ ಆಚರಣೆಗಳನ್ನು ನಡೆಸಿಕೊಂಡು ಬರುವುದು ಇದೆ. ಆದರೆ, ಇತ್ತೀಚೆಗೆ ಕೆಲವನ್ನು ಆಚರಿಸುವುದರಿಂದ 'ತಮ್ಮ ಜಾತಿಯ ಗೌರವಕ್ಕೆ ಕುಂದು' ಎಂದು ಭಾವಿಸಿ ಹಿಂಜರಿಯುವುದು ಅಲ್ಲಲ್ಲಿ ಕಂಡುಬರುತ್ತಿದೆ. ದೇವತಾಕಾರ್ಯಗಳಲ್ಲೂ ಕೆಲವು ಕೀಳು, ಕೆಲವು ಮೇಲು ಎಂಬ ಭಾವನೆಯೇ ಇದಕ್ಕೆ ಕಾರಣವಾಗಿದೆ.

ಇಲ್ಲಿ 'ತೆಯ್ಯಂ'ಗಳನ್ನು ಕಟ್ಟುವುದರ ಜೊತೆಗೆ ಕೆಲವೊಂದು ಜಾನಪದ ಕಲೆಗಳನ್ನೂ ಪ್ರದರ್ಶಿಸಲಾಗುತ್ತದೆ. ಅದರಲ್ಲಿ ಪೂರಕ್ಕಳಿ ಪಡಯೋಟ್ಟಂ', 'ಮಲಯಕ್ಕಳಿ' ಮತ್ತು ವಣ್ಣಾನ್ ಸಮುದಾಯದವರ 'ಕೂತ್' ಸೇರಿಕೊಳ್ಳುತ್ತದೆ. ಪೂರಕ್ಕಳಿಯನ್ನು ವಿಷು ಉತ್ಸವದ ವೇಳೆ ಆಡುವುದು ಇಲ್ಲಿನ ವೈಶಿಷ್ಟ್ಯ. ಮಲಯಕ್ಕಳಿ ಹುಡುಗಿಯರ ಆಟ. ಇದನ್ನು 'ಕುಮ್ಮಿಯಡಿ ಎಂದೂ ಹೇಳುತ್ತಾರೆ. ಉತ್ಸವದ ಕೊನೆಯ ದಿನ 'ಪೊಮ್ಮು' ಎನ್ನುವ ಜಾನಪದ ಕಲೆಯೊಂದು ಪ್ರದರ್ಶಿಸಲ್ಪಡುತ್ತದೆ.

ಈ ಕ್ಷೇತ್ರದಲ್ಲಿ ಎರಡು ವರ್ಷಕ್ಕೊಮ್ಮೆ "ದಿಗ್ಗಲಿ" ಎನ್ನುವುದನ್ನು ಆಚರಿಸುತ್ತಾರೆ. ಯುವಕರು ಮಾತ್ರ ಭಾಗವಹಿಸುವ ಆಚರಣೆ ಇದು. ಯುವಕರು ಆ ದಿನ ತ್ರಿಶೂಲಗಳನ್ನೆತ್ತಿಕೊಂಡು ವಾದ್ಯಘೋಷದೊಡಿಗೆ ಮೆರವಣಿಗೆಯಲ್ಲಿ ದೇವಾಲಯಕ್ಕೆ ಪ್ರದಕ್ಷಿಣೆ ಬರುತ್ತಾರೆ. ಇದರಿಂದ ದುರ್ದೇವತೆಗಳು ಪ್ರಸನ್ನಗೊಳ್ಳುತ್ತಾರೆ ಎಂಬ ನಂಬಿಕೆಯಿದೆ.

## ೧೬ ಕೀಚೂರು ತೆರು

ಕೀಚೂರು ತೆರುವಿನ ಬಗ್ಗೆ ಹಲವಾರು ಐತಿಹ್ಯಗಳಿವೆ. ಅದರಲ್ಲಿ ಒಂದು ಐತಿಹ್ಯ ಹೀಗನ್ನುತ್ತದೆ:- ಚಿರಕ್ಕಲ್ ರಾಜನ ಅರಮನೆಯ ನಾಯಿಯನ್ನು ಕೊಂದ ಕಾರಣದಿಂದ ಅಲ್ಲಿಂದ ಓಡಿಬಂದ ಶಾಲಿಯರು ಆಶ್ರಯವನ್ನು ಪಡೆದುಕೊಂಡುದು ಚಂದ್ರಗಿರಿಯ ಚಂದ್ರಾಂಗದ ಎಂಬ ರಾಜನ ಬಳಿಯಲ್ಲಿ. 'ಚಂದ್ರಾಂಗದ' ಎಂಬ ರಾಜನಿಂದಲೇ ಆ ಊರಿಗೆ ಚಂದ್ರಗಿರಿ ಎಂದು ಹೆಸರಾಯಿತು. ಆ ರಾಜನ ಕುಲ ದೇವತೆಯು 'ಕುದಿರಕ್ಕಾಳಿಯಮ್ಮ.' 'ಶಾಸ್ತಾರ' ಮತ್ತು 'ಕುದಿರಕ್ಕಾಳಿ' ಇವರಿಬ್ಬರೂ ಈಶ್ವರನ ಮಕ್ಕಳು ಶಾಲಿಯರೊಂದಿಗೆ ಇಲ್ಲಿಗೆ ಬಂದ ಶಾಸ್ತಾರನಿಗೂ, ಕುದಿರಕ್ಕಾಳಿಯಮ್ಮನಿಗೂ ಇದೇ ಚಂದ್ರಗಿರಿ ಪ್ರದೇಶದಲ್ಲಿ ತಮ್ಮಲ್ಲಿ ಯಾರು ಮೇಲು? ಎಂಬ ಪೈಪೋಟಿಯುಂಟಾಯಿತು. ಈಶ್ವರನ ಸಮಕ್ಷಮದಲ್ಲಿ ಅವರ ಮಧ್ಯೆ ಈಗ 'ಕಲರಿಅಂಬಲಂ' ಎಂದು ಕರೆಯಲ್ಪಡುವ ಶಾಲಿಯಾ ದೇವಾಲಯವಿರುವ ಪ್ರದೇಶದಲ್ಲೇ ಯುದ್ಧ ನಡೆಯಿತು. ಕೊನೆಗೆ ಈಶ್ವರನು ಕುದಿರಕ್ಕಾಳಿಯಮ್ಮನೇ ಶ್ರೇಷ್ಠಳೆಂದು ನ್ಯಾಯ ತೀರ್ಮಾನವನ್ನು ನೀಡಿ, ಯುದ್ಧ ನಡೆದ ಪ್ರದೇಶದಲ್ಲಿ ಅವಳು ಸ್ಥಿರವಾಗಿ ನೆಲಸುವಂತೆ ಅನುಗ್ರಹಿಸಿದ. 'ಶಾಸ್ತಾರ' ಅಲ್ಲೇ ಹತ್ತಿರ ಮತ್ತೊಂದೆಡೆ ನೆಲಸಿದ. ಹೀಗೆ ದೇವಿ ಆರಾಧಕರಾದ ಶಾಲಿಯರ ಆರಾಧನಾ ಕ್ಷೇತ್ರವು 'ಕಳರಿಅಂಬಲಂ' ಆಯಿತು. ತಮ್ಮನ್ನು ಕಾಪಾಡಿಕೊಂಡು ಬಂದ ಶಾಸ್ತಾವು ಅವರ ಆರಾಧ್ಯ ದೈವವಾದ. (ದಕ್ಷಿಣದಿಂದ ಶಾಲಿಯಾ ಸಮುದಾಯದವರೊಂದಿಗೆ ನಾಯಕನೊಬ್ಬನಿದ್ದಿರಬೇಕು. ಹೊರಗಿನಿಂದ ಬಂದ ಅವರನ್ನು ಅಷ್ಟು ಸುಲಭದಲ್ಲಿ ಸ್ಥಳೀಯರು ಸ್ವೀಕರಿಸಲಾರರು. ಸಣ್ಣಮಟ್ಟಿನ ಯುದ್ಧವೊಂದು ಸ್ಥಳೀಯ ವೀರ ಸ್ತ್ರೀಯೊಂದಿಗೆ ಶಾಲಿಯಾ ನಾಯಕನಿಗೆ ಸಂಭವಿಸಿರಬೇಕು. ಕೊನೆಗೆ ಅವನ ಸಾಮರ್ಥ್ಯವರಿತ ಆಕೆ ಹಾಗೂ ಅಲ್ಲಿನ ರಾಜ ಅವರಿಗೆ ನೆಲೆಗೊಳ್ಳಲು ಅವಕಾಶವನ್ನು ಕಲ್ಪಿಸಿರಬಹುದು)

ಇನ್ನೊಂದು ಐತಿಹ್ಯ ಇದೇ ವಿಷಯವನ್ನು ಸ್ವಲ್ಪ ಭಿನ್ನವಾಗಿ ಹೇಳುತ್ತದೆ :- ಚಿರಕ್ಕಲ್ ರಾಜನ ಬಳಿಯಿಂದ ಭಯಪಟ್ಟು ಶಾಸ್ತಾವನ್ನು ನೆನೆಯುತ್ತಾ ಬಂದ ಶಾಲಿಯರ ಜತೆಗೆ ಒಂದು ನಾಯಿಯಿತ್ತೆಂದೂ, ಆ ನಾಯಿ ಕೀಚೂರಿನ ಶಾಸ್ತಾವೇಶ್ವರ ದೇವಾಲಯಕ್ಕೆ ಇವರು ತಲಪಿದಾಗ ಮಾಯವಾಯಿತೆಂದೂ, ಆದುದರಿಂದ ಶಾಸ್ತಾವೇ ನಾಯಿಯ ರೂಪದಿಂದ ತಮ್ಮನ್ನು ರಕ್ಷಿಸಿ ಇಲ್ಲಿಯವರೆಗೆ ಕರೆತಂದದೆಂದೂ ಶಾಲಿಯರು ಅಭಿಪ್ರಾಯ ಪಡುತ್ತಾರೆ.

ಮಗದೊಂದು ಐತಿಹ್ಯವು ಚಿರಕ್ಕಲ್‌ನಿಂದ ಬಂದ ಶಾಲಿಯರೊಂದಿಗೆ ತೇಜಸ್ವಿಯಾದ ಓರ್ವ ಪುರುಷನಿದ್ದನೆಂದೂ, ಅವನನ್ನು ಕಂಡ ಚಂದ್ರಾಗದ ರಾಜನು ತನ್ನ ಸಿಂಹಾಸನವನ್ನೇ ಆತನಿಗೆ ಬಿಟ್ಟು ಕೊಟ್ಟನೆಂದೂ ಹೇಳುತ್ತಾರೆ. ಕೀಚೂರು ದೇವಾಲಯವೇ ಆತನ ಅರಮನೆಯಾಗಿತ್ತು ಎನ್ನಲಾಗಿದೆ. ಈ ಐತಿಹ್ಯಕ್ಕೆ ಒತ್ತು ಕೊಡುವಂತೆ ಇಲ್ಲಿ ಶಾಸ್ತಾರನನ್ನು ಸಿಂಹಾಸನದ ಮೇಲೆ ಪ್ರತಿಷ್ಠಾಪಿಸಲಾಗಿದೆ.

ಈ ದೇವಾಲಯದ ಆಡಳಿತವನ್ನು ನಾಯರ್‌ವರ್ಗದವರು ನಡೆಸುತ್ತಾರೆ. ೧೪ ನಗರಗಳಿಂದ ವರ್ಷವೂ ವೃಶ್ಚಿಕ ಮಾಸದ ೨ನೇ ಶನಿವಾರ ಶಾಲಿಯಾ ತೆರುಗಳ ಮುಖ್ಯ ಸ್ಥಾನಿಕ (ಚೆಟ್ಟಿಯಾರ್)ರು ಇಲ್ಲಿಗಾಗಮಿಸುತ್ತಾರೆ. 'ಚಿಟಲ್‌ಪಿರಿಕ್ಕಲ್' ಆಚರಣೆ ನಡೆಯುತ್ತದೆ. ಯಾವುದೇ ತೆರುವಿನ ವಿವಾದವೂ

ಇಲ್ಲಿಯೇ ತೀರ್ಮಾನಕ್ಕೆ ಬರುತ್ತದೆ.

ಕೀಜೂರು ತೆರುವಿನ ಶಾಲಿಯಾ ಕ್ಷೇತ್ರ ಕಳರಿಯಂಬಲಂ. ಶಾಸ್ತಾರನ ದೇವಾಲಯದ ಪಕ್ಕದಲ್ಲಿಯೇ ಈ ಕ್ಷೇತ್ರವಿದೆ. ಶೂಲ್ಯಾರ್ ಭಗವತಿ, ಮೂವಾಳಿಂಕುಳಿ ಚಾಮುಂಡಿ, ವಿಷ್ಣುಮೂರ್ತಿ, ಪಡವೀರನ್ ಗುಳಿಗ ಮುಂತಾದ ದೈವಗಳಿವೆ. ಆಚಾರವರ್ಗದಲ್ಲಿ ಮೂತ್ತಚೆಟ್ಟಿಯಾರ್ ಾರ್ನವ ಮೊದಲಾದವರಿದ್ದಾರೆ. ಸುಮಾರು ೩೦೦ ರಷ್ಟು ಸದಸ್ಯರಿದ್ದಾರೆ.

'ಕಳರಿಯಂಬಲಂ'ನಲ್ಲಿ ಕಳಿಯಾಟ ಉತ್ಸವವು ಪ್ರಸಿದ್ಧವಾದುದು. ವರ್ಷಕ್ಕೊಮ್ಮೆ ಇದು ನಡೆಯುತ್ತದೆ. ಇದು ನಡೆಯಬೇಕಿದ್ದರೆ ಶಾಸ್ತಾವಿನ ದೇವಾಲಯದಲ್ಲಿ 'ಕೆಟ್ಟುವೆಕ್ಕಲ್' ಎಂಬ ಕ್ರಮವಿದೆ. 'ಗಂಟು ಇಡುವುದು' ಎಂದಿದರ ಅರ್ಥ ಹತ್ತು ಅಡಿಕೆ ಹಾಗೂ ಒಂದು ಕಟ್ಟು ವೀಳ್ಯದೆಲೆಯನ್ನು ಇಟ್ಟು ಒಪ್ಪಿಗೆಯನ್ನು ಪಡೆಯುವುದನ್ನು ಹೀಗೆ ಹೇಳುತ್ತಾರೆ. ಧನುರ್ಮಾಸದ ೨೫ ರಿಂದ ಮೂರು ದಿನ ಕಳಿಯಾಟ್ಟಂ ನಡೆಯುತ್ತದೆ.

## ೧೭. ಕುಂಡಂಕುಯಿ ಅಥವಾ ಬೆರಿಕುಳಂ ನಗರಂ

ಕಾಸರಗೋಡು ಜಿಲ್ಲೆಯ ಪೂರ್ವಕ್ಕೆ ಇರುವ 'ನಗರಂ'ನಲ್ಲಿ ಇದೂ ಒಂದು. ಅತ್ಯಂತ ಗ್ರಾಮೀಣ ಪ್ರದೇಶಗಳಲ್ಲಿ ಒಂದು. ಈ ಪ್ರದೇಶವು ಕೋಡೋತ್ತು ಮನೆತನದ ನಾಯರ್ ಕುಟುಂಬದ ಮೇಲುಸ್ತುವಾರಿಕೆಯಲ್ಲಿತ್ತೆಂದೂ , ಈ 'ನಗರಂ ಮತ್ತು ತೆರು' ಅವರ ಅಧೀನದಲ್ಲಿತ್ತು ಎಂದೂ ಹೇಳುತ್ತಾರೆ. ಇಂದೂ ಇಲ್ಲಿನ ಕ್ಷೇತ್ರದಲ್ಲಿ ಆ ಮನೆತನದ ನಾಯರ್‌ಗಳಿಗೆ ವಿಶೇಷ ಸ್ಥಾನವಿದೆ. ಇಲ್ಲಿ ಚೂಲಿಯಾರ್ ಭಗವತಿ ಪ್ರಧಾನ ದೈವವಾಗಿದ್ದಾಳೆ. ಪಡವೀರನ್, ಮೂವಾಳಿಂಕುಳಿ ಚಾಮುಂಡಿ, ವಿಷ್ಣುಮೂರ್ತಿ, ಗುಳಿಗನ್ ಮುಂತಾದ ಉಪದೈವಗಳಿವೆ.

ಇದು ಉದುಮ ತೆರುವಿನ ಉಪತೆರುವಾಗಿರುವ ಸಾಧ್ಯತೆ ಇದೆ. ಉದುಮದಿಂದ ಬಂದವರೇ ಇಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಕೊಳತ್ತೂರು, ಕುಂಡಂಗುಯಿ, ಬೇಡಗಂ, ಕುಟ್ಟಿಕ್ಕೋಲ್, ಬಂದಡ್ಕ, ಬೇಳೂರು ಈ ಮೊದಲಾದ ಗ್ರಾಮೀಣ ಪ್ರದೇಶಗಳು ಈ 'ನಗರಂ' ನ ವ್ಯಾಪ್ತಿಗೆ ಬರುತ್ತದೆ. ಇಲ್ಲಿ 'ತೆರು' ಎಂದು ಇಲ್ಲ. ದೂರ ದೂರದಲ್ಲಿ ಶಾಲಿಯಾ ಸಮುದಾಯದವರ ಕೆಲವು ಮನೆಗಳಿವೆಯಷ್ಟೆ. ವಸ್ತ್ರವ್ಯಾಪಾರ ಕ್ಕಾಗಿ ಪೂರ್ವದ ಕಡೆಗೆ ಹೋದವರು ಅಲ್ಲಲ್ಲಿ ನೆಲೆಯಾಗಿರಬಹುದು.

ಪ್ರತೀ ತಿಂಗಳು ಕ್ಷೇತ್ರದಲ್ಲಿ ಸಂಕ್ರಮಣದ ಉತ್ಸವವು ನಡೆಯುತ್ತದೆ. ವರ್ಷಂಪ್ರತಿ ೭ ದಿನ ರಾತ್ರಿ ಪೂರಕ್ಕಳಿ ನಡೆಯುತ್ತದೆ. 'ಕಳಿಯಾಟ್ಟಂ'ನ ಸಂದರ್ಭದಲ್ಲಿ ಎಲ್ಲಾ ದೈವಗಳನ್ನೂ ಕಟ್ಟಿ ಆಡಿಸಲಾಗುತ್ತದೆ.

ಇಲ್ಲಿನ 'ನಗರಂ'ನಲ್ಲಿ ಎಲ್ಲಾ ಆಚಾರವರ್ಗದವರೂ ಇದ್ದಾರೆ. 'ನಗರಂ'ಗೆ ಪುರುಷರು ಮಾತ್ರವಲ್ಲದೆ ಸ್ತ್ರೀಯರೂ ಸದಸ್ಯತನದ ಶುಲ್ಕವನ್ನು ನೀಡಬೇಕು ಎಂಬ ಸಂಪ್ರದಾಯವಿದೆ.

## ೧೮. ಕಾಡಗಂ ನಗರಂ

ಚಂದ್ರಗಿರಿ (ಪಯಸ್ವಿನಿ) ಹೊಳೆಯ ಉತ್ತರದ 'ಶಾಲಿಯಾ ನಗರಂ' ಗಳ ಸಾಲಿನಲ್ಲಿ, ಕಾಸರಗೋಡಿನ ಪೂರ್ವಕ್ಕೆ ೨೫ ಕಿ.ಮೀ ದೂರದಲ್ಲಿ ಈ ನಗರಂ ಮತ್ತು ಕ್ಷೇತ್ರವಿದೆ. 'ಮುಳ್ಳೇರಿಯಾ' ಪೇಟೆಯಿಂದ ಬಡಗು ದಿಕ್ಕಿನಲ್ಲಿರುವ ಈ 'ನಗರಂ'ನಲ್ಲಿ ಸುಮಾರು ನೂರರಷ್ಟು ಮನೆಗಳು ಸೇರುತ್ತವೆ. ಮನೆಗಳು ದೂರ ದೂರದಲ್ಲಿವೆ. 'ತೆರು' ಇಲ್ಲಿ ಇಲ್ಲವೆಂದೇ ಹೇಳಬಹುದು. ಇಲ್ಲಿ 'ಚಿರುಂಬಾ ಭಗವತಿ' ಆರಾಧ್ಯ ದೈವವಾಗಿದ್ದಾಳೆ. ಪಿಲಿಚಾಮುಂಡಿ, ಎಳಯ ಭಗವತಿ, ಮೂವಾಳಂಕುಳಿ ಚಾಮುಂಡಿ, ವಿಷ್ಣುಮೂರ್ತಿ, ಗುಳಿಗ ಮುಂತಾದ ಉಪದೈವಗಳಿವೆ. ಒಟ್ಟು ನಾಲ್ಕು ಕ್ಷೇತ್ರಗಳಿರುವ ಕ್ಷೇತ್ರ ಸಮುಚ್ಚಯವಿದು.

ಈ ಕ್ಷೇತ್ರವು ಹಿಂದೆ ಇಕ್ಕೇರಿಯ ನಾಯಕರು ಕಟ್ಟಿಸಿದ 'ಪ್ರೊಯಿಲ್' ಎಂಬ ಕೋಟೆಯ ಒಳಗೆ ಇತ್ತು ಎಂದೂ, ಅಲ್ಲಿಂದ ಹೊರಟ ಶಾಲಿಯಾರ ಒಂದು ಭಾಗವು ದೈವಗಳೊಂದಿಗೆ ಪೂರ್ವಕ್ಕೆ ಬಂದು 'ಕಾರಡ್ಕ' ಅಥವಾ 'ಕಾಡಗಂ' ಎನ್ನುವ ಈ ಪರಿಸರದಲ್ಲಿ ನೆಲೆನಿಂತರೆಂದೂ ಹೇಳಲಾಗುತ್ತದೆ. ಇನ್ನೊಂದು ಭಾಗವು ಕಾಸರಗೋಡಿನ 'ತಳಂಗರೆ' ಎನ್ನುವಲ್ಲಿ ನೆಲೆನಿಂತರೆಂದೂ ಹೇಳಲಾಗುತ್ತದೆ. ಎರಡು ಕಡೆಯಲ್ಲೂ ಆರಾಧನ ದೈವಗಳು ಹೆಚ್ಚು ಕಡಿಮೆ ಸಮಾನವಾಗಿವೆ.

ಈ 'ನಗರಂ' ನಲ್ಲಿ ಎಲ್ಲಾ ಆಚಾರವರ್ಗದವರೂ ಆಯಾಯ ಸ್ಥಾನದಲ್ಲಿದ್ದಾರೆ. ನೇಯ್ಗೆ ಇಲ್ಲಿನ ಪ್ರಮುಖ ಕಸುಬಾಗಿತ್ತು. ಈಗಲೂ ಅಲ್ಪಮಟ್ಟಿಗೆ ಅದು ಮುಂದುವರಿಯುತ್ತದೆ. ಇಲ್ಲಿಂದ ಅಲ್ಪದೂರದ 'ಪೆರ್ಲ' ಎನ್ನುವಲ್ಲಿ ನೇಕಾರರ ಸಹಕಾರೀ ಸಂಘವೊಂದು ಅಸ್ತಿತ್ವದಲ್ಲಿದೆ. 'ನಾರಂತಟ್ಟ' ಎನ್ನುವಲ್ಲಿನ ನಾಯರ್ ತರವಾಡಿನವರು ಈ ಕ್ಷೇತ್ರದ ಮೇಲುಸ್ತುವಾರಿಕೆಯನ್ನು ನೋಡಿಕೊಳ್ಳುತ್ತಾರೆ. ಪ್ರತಿನಿತ್ಯವೂ ಸಂಜೆ ದೀಪವನ್ನು ಉರಿಸಲಾಗುತ್ತದೆ. ಸಂಕ್ರಮಣದ ದಿನ 'ಆರಿತ್ರಾವಲ್' (ದೈವದ ಮುಂದೆ ಅಕ್ಕಿಯನ್ನು ಹರಡುವುದು) ಎನ್ನುವ ವಿಶೇಷ ಪದ್ಧತಿಯಿದೆ. ನಿರಮಾಲ, ಚೆಪ್ಪಿಳಕ್ಕ್ ಈ ಮೊದಲಾದವು ಹರಕೆಯ ಪೂಜೆಗಳು. ನಡಾವಳಿ, ಕಳಿಯಾಟ್ಟಂ, ಪೂರೋತ್ಸವ, ನಿರ, ಪುತ್ತರಿ, ಶಿವರಾತ್ರಿ ಮತ್ತು ವಿಷು ಪ್ರಧಾನ ಉತ್ಸವಗಳು.

ವರ್ಷಂಪ್ರತಿ 'ಕಳಿಯಾಟ್ಟಂ' ನಡೆಯುತ್ತದೆ. ಮಕರಮಾಸದ ಹದಿನಾರರಿಂದ ಹತ್ತೊಂಬತ್ತರವರೆಗೆ ಇದನ್ನು ನಡೆಸಲಾಗುತ್ತದೆ. ಕ್ಷೇತ್ರದ ಹೊರ ಆವರಣದಲ್ಲಿ ಚಪ್ಪರವನ್ನು ಹಾಕಿ 'ಕಳಿಯಾಟ್ಟಂ' ನಡೆಸುತ್ತಾರೆ. 'ಚೀರುಂಬಾ ಭಗವತಿ'ಯನ್ನುಳಿದು ಉಳಿದೆಲ್ಲಾ ದೈವಗಳನ್ನು ಕಟ್ಟಿ ಆಡಿಸುತ್ತಾರೆ. ಚೀರುಂಬಾ ಭಗವತಿ ದೇವಿಯ ಉತ್ಸವ ಮೂರ್ತಿಯನ್ನು ಹೊತ್ತು ಮೆರವಣಿಗೆಯಲ್ಲಿ ಅಲ್ಲೇ ಹತ್ತಿರದ ಮುಂಡೋಳ್ ಶ್ರೀ ದುರ್ಗಾಪರಮೇಶ್ವರೀ ದೇವಾಲಯಕ್ಕೆ ಹೋಗಿ ದೇವಿಯ ದರ್ಶನವನ್ನು ಮಾಡಿ ಮರಳಿ ಬರಲಾಗುತ್ತದೆ.

ಸಿಂಹಮಾಸದ ಶುಭಮುಹೂರ್ತವೊಂದರಲ್ಲಿ ಕ್ಷೇತ್ರವನ್ನು ಸಮೃದ್ಧತೆಯಿಂದ ತುಂಬಿಸುವ ಸೂಚಕವಾಗಿ 'ನಿರ' ಮತ್ತು 'ಪುತ್ತರಿ' ಉತ್ಸವವನ್ನು ಆಚರಿಸಲಾಗುತ್ತದೆ. 'ಪುತ್ತರಿ' ಉತ್ಸವಕ್ಕೆ

ಮುಂಡೋಳ್ ದುರ್ಗಾಪರಮೇಶ್ವರೀ ಕ್ಷೇತ್ರದಿಂದ ಸಣ್ಣ ಮೊತ್ತವೊಂದು ಪಾರಿತೋಷಕವಾಗಿ ಲಭಿಸುತ್ತದೆ. ಅದಕ್ಕೆ ಬದಲಾಗಿ ಈ 'ನಗರಂ' ನ ಚೀರುಂಬಾ ಭಗವತಿ ಕ್ಷೇತ್ರದಿಂದ ಮುಂಡೋಳ್ ಕ್ಷೇತ್ರದ ದೇವಿಗೆ ಹೊದಿಸಲು ನಾಲ್ಕು ಮೊಳ ರೇಶ್ಮೆಬಟ್ಟೆ ಹಾಗೂ ನವರಾತ್ರಿ ಉತ್ಸವಕ್ಕೆ ಎಣ್ಣೆಯನ್ನು ನೀಡಲಾಗುತ್ತದೆ. ಈ ಸಂಪ್ರದಾಯದ ಹಿಂದೆ ಒಂದು ಐತಿಹ್ಯವಿದೆ. "ಹಲವು ವರ್ಷಗಳ ಹಿಂದೆ ಮುಂಡೋಳ್ ಕ್ಷೇತ್ರವನ್ನು ಗುಡಿಸಿ, ಸಾರಿಸಿ, ಶುದ್ಧಗೊಳಿಸುವ ಕಾಯಕವನ್ನು ಶಾಲಿಯಾ ಸಮುದಾಯದವರು ನಡೆಸಿಕೊಂಡು ಬರುತ್ತಿದ್ದರು. ಒಂದು ಬಾರಿ ಕ್ಷೇತ್ರದ ಆಡಳಿತ ವರ್ಗದವರಲ್ಲಿ ವೇತನದ ವಿಷಯದಲ್ಲಿ ಶಾಲಿಯರು ತಗಾದೆ ತೆಗೆದರು. ಇದು ಚರ್ಚೆಯಾಗಿ, ವಿವಾದಕ್ಕೆ ತಿರುಗಿ, ಶಾಲಿಯಾರು ಆ ಕೆಲಸಕ್ಕೆ ಬಾರದೇ ಇರಲು ತೀರ್ಮಾನಿಸಿದರು. ಕೊನೆಗೆ ಮುಂಡೋಳ್ ಕ್ಷೇತ್ರದ ತಂತ್ರಿಗಳೂ, ಭಗವತಿ ಕ್ಷೇತ್ರದ ಆಚಾರವರ್ಗದವರೂ ಸೇರಿ, ಕ್ಷೇತ್ರ ಹಾಗೂ ದೇವಾಲಯಗಳ ನಡುವಿನ ಸಂಬಂಧ ಎಂದಿನಂತೆ ಮುಂದುವರೆಯಬೇಕು ಎಂದು ಒಪ್ಪಂದದಲ್ಲಿ ತೀರ್ಮಾನಿಸಿ, ಅದಕ್ಕನುಗುಣವಾಗಿ ಈ ಪದ್ಧತಿ ರೂಢಿಗೆ ಬಂತು" ಎನ್ನಲಾಗಿದೆ.

ಮೀನಮಾಸದಲ್ಲಿ ಏಳು ದಿನಗಳ ಕಾಲ ಇಲ್ಲಿ ಪೂರೋತ್ಸವ ಮತ್ತು ಪೂರಕ್ಕಳಿ ನಡೆಯುತ್ತದೆ. ಚಂದ್ರಗಿರಿ ಹೊಳೆಯ ಉತ್ತರದ 'ನಗರಂ' ಗಳಲ್ಲಿ ಪೂರೋತ್ಸವ ಮತ್ತು ಪೂರಕ್ಕಳಿ ಕೇವಲ ಇಲ್ಲಿ ಮಾತ್ರ ನಡೆಯುತ್ತದೆ.

ಕುಂಭ ಮಾಸದಲ್ಲಿ ಶಿವರಾತ್ರಿ ಉತ್ಸವವು ಜರಗುತ್ತದೆ. ಇಲ್ಲಿ ಆ ದಿನವೂ ಪೂರಕ್ಕಳಿ ಆಡುವುದಿದೆ. ಕರ್ಕಾಟಕ ೧೭ ಕ್ಕೆ ರಾತ್ರೆ 'ಮುತ್ರೆ' ಅಥವಾ ಮುತ್ತಿರ. ಆ ದಿನ ಕ್ಷುದ್ರ ದೇವತೆಗಳ ಉಚ್ಚಾಟನೆ ಮಾಡಲಾಗುತ್ತದೆ. ಕ್ಷೇತ್ರದ ಉತ್ತರ ದಿಕ್ಕಿನ ಬಾಗಿಲಿನ ಬಳಿಯಲ್ಲಿರುವ ಬಲಿಕಲ್ಲಿಗೆ ಕೋಳಿಯನ್ನು ಕೋಮರರು ಆವೇಶದಿಂದ ಕೊಯ್ದು ರಕ್ತವನ್ನು ಸುರಿಸಿ ದಿಕ್ಪಾಲಕರಿಗೂ, ಭೂತಗಣಗಳಿಗೂ ಸಮರ್ಪಿಸುವುದು ಇಲ್ಲಿನ 'ಮುತ್ರೆ' ಯ ಸಂಪ್ರದಾಯ.

ನಾಗಕಲ್ಲಿಗೆ ನಾಗತಂಬಿಲವನ್ನೂ ಇಲ್ಲಿ ನಡೆಸುತ್ತಾರೆ.

## ೧೯. ಕಾಸರಗೋಡು ನಗರಂ

ಕಾಸರಗೋಡು ಪ್ರದೇಶವು ತುಳು, ಕನ್ನಡ, ಮಲಯಾಳ ಮಿಶ್ರಿತ ಸಂಸ್ಕೃತಿಯ ಪ್ರದೇಶ. ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿದ್ದ ಕಾಲದಲ್ಲಿ ತುಳು ಮತ್ತು ಕನ್ನಡ ಇಲ್ಲಿಯ ಪ್ರಭಾವಿ ಭಾಷೆಯಾಗಿದ್ದರೆ, ಈಗ ಮಲಯಾಳವು ಆ ಸ್ಥಾನವನ್ನು ಆಕ್ರಮಿಸಿದೆ.

ಕಾಸರಗೋಡು ಪ್ರದೇಶಕ್ಕೆ ಚಂದ್ರಗಿರಿ ಹೊಳೆಯನ್ನು ದಾಟಿ ಬಂದಂತಹ 'ಶಾಲಿಯಾರು' ಮೊದಲು ನೆಲೆಯೂರಿದ್ದು 'ಪೊಯಿಲ್' (ಪೊಳಲಿ) ಎನ್ನುವಲ್ಲಿ, ಎಂಬುದನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ಇಕ್ಕೇರಿ ನಾಯಕರು ನಿರ್ಮಿಸಿದ ಕೋಟೆಯ ಪರಿಸರದಲ್ಲಿ ತಮ್ಮ ದೈವಗಳೊಂದಿಗೆ ಇವರು ನೆಲೆ ನಿಂತರು. ಇದೇ ಪ್ರದೇಶದಲ್ಲಿ ಇತರ ಸಮುದಾಯದವರೂ ವಾಸವಾಗಿದ್ದರೆಂದು

ಊಹಿಸಲಾಗಿದೆ. 'ಚಾಲಿಯರ್‌ವಳಪ್ಪ್' ಎಂದು ಕರೆಯಲ್ಪಡುವ ಪ್ರದೇಶವು ಈಗಲೂ ಅಲ್ಲಿ ಇದೆ. ಇಕ್ಕೇರಿ ರಾಜ ವಂಶವು ಶಿಥಿಲಗೊಂಡಾಗ ಅಲ್ಲಿಂದ ವಿಭಾಗಳಾಗಿ ಚದುರಿ ಕಾಸರಗೋಡಿನ ಕಡೆಗೆ ಬಂದವರು ಕಾಸರಗೋಡಿನ ಪೇಟೆಯ ದಕ್ಷಿಣಧಲ್ಲಿ 'ತಳಂಗರೆ' ಎನ್ನುವಲ್ಲಿ ನೆಲೆನಿಂತರು. ಬಹಳಷ್ಟು ಮನೆಗಳು ಕ್ರಮೇಣ ಅಲ್ಲಿ ರೂಪುತಾಳಿ ಒಂದು ತೆರುವಾಯಿತು. ಈ ಶಾಲಿಯಾ ತೆರುವನ್ನು 'ತೆರುವತ್ತು' ಎಂದು ಕರೆಯುವುದೇ ರೂಢಿಗೆ ಬಂತು. ೪೦೦ ವರ್ಷಗಳ ಹಿಂದೆ ಇದು ಅಸ್ತಿತ್ವಕ್ಕೆ ಬಂತು ಎಂದು ಹೇಳಲಾಗುವುದಿದ್ದರೂ ಲಿಖಿತ ಪುರಾವೆಗಳು ಇಲ್ಲ.

ಮೂತ್ತೆ ಭಗವತಿ, ಇಳಯ ಭಗವತಿ, ಘಂಟಾಕರ್ಣನ್, ಪುಲಿಚಾಮುಂಡಿ ಇಲ್ಲಿನ ದೈವಗಳು. ಮೂತ್ತ ಭಗವತಿ ಪ್ರಧಾನ ದೈವ. ಚಂದ್ರಗಿರಿಯ ದಕ್ಷಿಣದ ಕ್ಷೇತ್ರಗಳಲ್ಲಿ ಪ್ರಧಾನ ದೈವವಾಗಿ ಬೇರೆ ಬೇರೆ ಭಗವತಿಯರು ಇದ್ದರೆ, ಚಂದ್ರಗಿರಿಯ ಉತ್ತರದ ಎಲ್ಲಾ ಕ್ಷೇತ್ರಗಳಲ್ಲೂ ಚೀರುಂಬಾ ಭಗವತಿಯೇ ಪ್ರಧಾನ ದೈವವಾಗಿದ್ದಾಳೆ. ದೈವಾರಾಧನೆ ಮತ್ತು ಆಚರಣೆಗಳಲ್ಲೂ ಅಲ್ಪ ವ್ಯತ್ಯಾಸವು ಇದೆ. ಇಲ್ಲಿನ ಕ್ಷೇತ್ರಗಳಲ್ಲಿ ಪೂರಕ್ಕಳಿ ಆಡುವ ಪರಿಪಾಠವಿಲ್ಲ. ('ಕಾಡಗಂ' ನಲ್ಲಿ ಮಾತ್ರ 'ಪೂರಕ್ಕಳಿ' ಇದೆ.) ಮೂಲ ದೈವಗಳೊಂದಿಗೆ ಕೆಲವು ತುಳುದೈವಗಳೂ ಸೇರಿಕೊಂಡಿವೆ.

ಚೀರುಂಬಾ ಭಗವತಿಯನ್ನು 'ಮೂತ್ತೆ ಭಗವತಿ' ಎನ್ನುತ್ತಾರೆ. ಇಲ್ಲಿನ ಮೂರು ಪುಟ್ಟ ಗುಡಿಗಳಲ್ಲಿ ಮಧ್ಯದ ಗುಡಿಯಲ್ಲಿ ಚೀರುಂಬಾ ಭಗವತಿ ಇದ್ದರೆ, ಭಗವತಿಯ ಬಲ ಭಾಗದಲ್ಲಿ ಇಳಯ ಭಗವತಿಯೂ, ಎಡ ಭಾಗದಲ್ಲಿ ಪಿಲಿಚಾಮುಂಡಿಯೂ ಪ್ರತಿಷ್ಠಾಪಿಸಲ್ಪಟ್ಟಿದೆ. ಕ್ಷೇತ್ರದ ಆವರಣದ ಹೊರಗೆ ವಿಷ್ಣುಮೂರ್ತಿಯ ಗುಡಿಯಿದೆ. ಅಲ್ಲೇ ಸ್ವಲ್ಪ ದೂರದಲ್ಲಿ ಬಬ್ಬರ್ಯ ದೈವದ ಕಟ್ಟೆ ಹಾಗೂ ಗುಳಿಗನ ಕಟ್ಟೆ ಇದೆ.

ಸಂಕ್ರಮಣ ಪೂಜೆ, ಚೊವ್ವವಿಳಕ್ಕ್, ವಿಷುವಿಳಕ್ಕ್, ನವರಾತ್ರಿ, ಪುತ್ತರಿ ಇಲ್ಲಿನ ವಿಶೇಷ ದಿನಗಳು. ಹಿಂದೆ ಮತ ಸೌಹಾರ್ದತೆಯನ್ನು ಸೂಚಿಸುವಂತೆ ಮುಸ್ಲೀಮರೂ ಕ್ಷೇತ್ರಕ್ಕೆ ಆಗಮಿಸಿ 'ಚೊವ್ವವಿಳಕ್ಕ್' ನಂತಹ ಪೂಜೆಯನ್ನು ಸಲ್ಲಿಸಿದ್ದಿದೆ. ನಡಾವಳಿಯು ಇಲ್ಲಿನ ದೊಡ್ಡ ಉತ್ಸವ. ಹೆಚ್ಚಾಗಿ ಐದು ವರ್ಷಗಳಿಗೊಮ್ಮೆ ಇದನ್ನು ನಡೆಸುತ್ತಾರೆ. 'ಭಗವತಿ' ಯನ್ನುಳಿದು ಉಳಿದ ದೈವಗಳನ್ನು ಕಟ್ಟಿ ಆಡಿಸಲಾಗುತ್ತದೆ. ಉತ್ಸವದ ವೆಚ್ಚವನ್ನು ವಿಶೇಷ ವಂತಿಕೆಗಳ ಸಂಗ್ರಹದ ಮೂಲಕ ಭರಿಸುತ್ತಾರೆ.

ಇಲ್ಲಿ ಭಗವತಿಗೆ ಸಂಬಂಧಿಸಿದ ಹಾಗೇ 'ಪಟ್ಟೋಲೆ' ಯೊಂದಿದೆ. ಆದರಲ್ಲಿ ಕಾಸರಗೋಡನ್ನು 'ಕಾಞರೋ' ಎಂದು ಉಲ್ಲೇಖಿಸಲಾಗಿದೆ. ಪಟ್ಟೋಲೆ ವಿರಚಿತವಾದ ಕಾಲದಲ್ಲಿ 'ಕಾಸರಗೋಡು ನಗರ' ವು 'ಪ್ರೊಯಿಲ್' ಆಗಿರಬೇಕೆಂದು ಊಹಿಸಲಾಗಿದೆ. ಚರಿತ್ರೆಯ ಪುಟಗಳಲ್ಲಿ ೧೭೬೩ ರಲ್ಲಿ ಹೈದರಾಲಿ ಮತ್ತು ಅವನ ಮಗ ಟಿಪ್ಪು ಬಿದನೂರನ್ನು ಆಕ್ರಮಿಸಿ, ಕೆಳದಿಯ ನಾಯಕರ ಆಳ್ವಿಕೆಯನ್ನು ಕೊನೆಗೊಳಿಸಿ, ದಕ್ಷಿಣ ಕನ್ನಡವನ್ನು ಮೈಸೂರು ರಾಜ್ಯದೊಂದಿಗೆ ಸೇರಿಸಿದರೆಂದೂ, ೧೭೬೫ ರಲ್ಲಿ ಹೈದರಾಲಿಯ ಸೇನೆಯು ಇನ್ನೂ ದಕ್ಷಿಣಕ್ಕೆ ಬಂದು 'ನೀಲೇಶ್ವರಂ' ವರೆಗಿನ ಪ್ರದೇಶಗಳನ್ನುವಶಪಡಿಸಿದನೆಂದೂ, ಅನಂತರ ಅವನ ಮಗನಾದ ಟಿಪ್ಪುವು ಈ ಪ್ರದೇಶಗಳಲ್ಲಿ ತನ್ನ

ಆಳ್ವಿಕೆಯನ್ನು ಬಲಪಡಿಸಿದನೆಂದೂ ಹೇಳಲಾಗಿದೆ. (ಕಾಸರಗೋಡು ಚರಿತ್ರವುಂ ಸಮೂಹವುಂ ಪುಟ ೩೧೩.) ಹೈದರಾಲಿ ಮತ್ತು ಟಿಪ್ಪುವಿನ ಈ ಆಕ್ರಮಣಗಳಿಂದ 'ಪೊಯಿಲ್' ಕೋಟೆಯು ಶಿಥಿಲವಾಗಿರಬಹುದು. ಬೇರೆ ದಾರಿಯಿಲ್ಲದೆ ಅಲ್ಲಿ ವಾಸವಾಗಿದ್ದ ಸಮುದಾಯಗಳು ಆ ಪ್ರದೇಶವನ್ನು ಬಿಟ್ಟು ಬೇರೆಡೆ ನೆಲೆಯೂರಲು ಹೋಗಿರಬಹುದು.

ಆರಂಭದಲ್ಲಿ ಈ ಕ್ಷೇತ್ರವು ಸಣ್ಣ ಹುಲ್ಲಿನ ಛಾವಣಿಯ ಕ್ಷೇತ್ರವಾಗಿತ್ತು. ಕ್ರಮೇಣ ಜೀರ್ಣೋದ್ಧಾರ ಹೊಂದಿ ಇಂದು ದೊಡ್ಡದಾಗಿ ಬಹಳಷ್ಟು ಉತ್ತಮ ಸ್ಥಿತಿಯಲ್ಲಿದೆ. ಕ್ಷೇತ್ರದ ಆಡಳಿತವನ್ನು ನಡೆಸುವ 'ನಗರಂ' ನಲ್ಲಿ ಮೂತ್ತ ಚೆಟ್ಟ್ಯಾರ್, ಎಳೆಯ ಚೆಟ್ಟ್ಯಾರ್ ಹಾಗೂ ನಾಲ್ವರು ಕಾರ್ನವರು ಪ್ರಮುಖರಾಗಿದ್ದಾರೆ. ಈ ಅಧಿಕಾರ ಸ್ಥಾನವು ಆರು ಕುಟುಂಬಗಳಿಗೆ ಮೀಸಲಾಗಿದೆ. ಇತ್ತೀಚೆಗೆ ಇದನ್ನು ಸ್ವೀಕರಿಸಲು ಯಾರೂ ಮುಂದೆ ಬರುವುದಿಲ್ಲವಾದ ಕಾರಣದಿಂದ ಕೆಲವು ಸ್ಥಾನಗಳು ತೆರವಾಗಿವೆ. 'ನಗರಂ' ನ ಸದಸ್ಯರಿಂದ ಚುನಾಯಿತರಾದ 'ಆಡಳಿತ ಸಮಿತಿ' ಯೊಂದು ಕ್ಷೇತ್ರ ಕಾರ್ಯಗಳನ್ನು ನಿರ್ವಹಿಸಿಕೊಂಡು ಬರುತ್ತಿದೆ.

ಹಿಂದೆ ಸಂಕ್ರಾಂತಿಯ ದಿನ ಮತ್ತು ಸಂಕ್ರಾಂತಿ ಕಳೆದ ಮೊದಲ ಮಂಗಳವಾರ ಮಾತ್ರ ಕ್ಷೇತ್ರದಲ್ಲಿ ಪೂಜೆ ನಡೆಸುವುದು ಇಲ್ಲಿನ ಸಂಪ್ರದಾಯವಾಗಿತ್ತು. ಆದರೆ ೧೯೮೫ ರಲ್ಲಿ ನಡೆದ ಪೂರ್ಣ ಪ್ರತಿಷ್ಠೆಯ ನಂತರ ನಿತ್ಯವೂ ಬೆಳಗ್ಗೆ ಮತ್ತು ಸಂಜೆ ಪೂಜೆ ನಡೆಯುತ್ತದೆ.

## ೨೦. ಕುಂಬಳೆ ನಗರ

ಕಾಸರಗೋಡಿನಿಂದ ಉತ್ತರಕ್ಕೆ ೧೫ ಕಿ. ಮೀ. ದೂರದಲ್ಲಿ ಕುಂಬಳೆಯಿದೆ. ಸಮುದ್ರ ತೀರದಲ್ಲಿದ್ದ 'ಕುಂಬಳೆ ನಗರ' ವು ಈಗ ಅಲ್ಲಿಂದ ಪೂರ್ವಕ್ಕೆ 'ನಾರಾಯಣಮಂಗಲಂ' ಎನ್ನುವ ಪ್ರದೇಶಕ್ಕೆ ಸ್ಥಳಾಂತರಗೊಂಡಿದೆ. ೧೯೪೪ ರ ಜಾಗತಿಕ ಯುದ್ಧದ ಸಂದರ್ಭದಲ್ಲಿ ಮಿಲಿಟರಿ ಶಿಬಿರವು ಕ್ಷೇತ್ರದ ಬಳಿಯಲ್ಲಿ ನೆಲೆಸಲು ಬಂದಾಗ, ನಾಯಿಕಾಪಿಗೆ ಈ ಸ್ಥಾನವು ಪಲ್ಲಟವಾಯಿತೆಂದು ಸ್ಥಳೀಯರಲ್ಲಿ ಕೆಲವರು ಅಭಿಪ್ರಾಯ ಪಟ್ಟರೆ, ಸುಮಾರು ೧೩೦ ವರ್ಷಗಳಿಗೆ ಮೊದಲು ಕುಂಬಳೆಯ ಗೋಪಾಲಕೃಷ್ಣ ದೇವಾಲಯದ ಸಮೀಪ ಈ ಸ್ಥಾನವಿತ್ತೆಂದು, ಬ್ರಿಟಿಷರ ಆಡಳಿತದ ಕಾಲದಲ್ಲಿ ಮದರಾಸು ಮಂಗಳೂರು ರೈಲು (ಉಗಿಬಂಡಿ) ಪ್ರಾರಂಭಕ್ಕಾಗಿ ರೈಲು ಮಾರ್ಗ ಬರಬೇಕಾಯಿತೆಂದೂ, ಈ ಸ್ಥಳವು ರೈಲು ಮಾರ್ಗಕ್ಕಾಗಿ ಬಳಸಿದುದರಿಂದ ಇಲ್ಲಿಂದ ಸ್ಥಾನವು ಸ್ಥಳಾಂತರವಾಯಿತೆಂದೂ ಇನ್ನು ಕೆಲವರು ಅಭಿಪ್ರಾಯ ಪಡುತ್ತಾರೆ. ಕ್ಷೇತ್ರವನ್ನು ಪರಿಶೀಲಿಸುವಾಗ ಸುಮಾರು ೧೦೦ ವರ್ಷಗಳಿಗಿಂತಲೂ ಹಿಂದೆ ಈ ಕ್ಷೇತ್ರವು ನಿರ್ಮಾಣವಾದಹಾಗೆ ಇದೆ. ಆದುದರಿಂದ ಎರಡನೆಯ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದು ಎಂದನ್ನಿಸುತ್ತದೆ.

ಇಲ್ಲಿ ಚೀರುಂಬಾ ಭಗವತಿ ಪ್ರಧಾನ ದೈವವಾಗಿದ್ದಾಳೆ. ಇಳಯ ಭಗವತಿ, ಪಿಲಿಚಾಮುಂಡಿ, ವಿಷ್ಣುಮೂರ್ತಿ, ಗುಳಿಗ, ಬಬ್ಬರ್ಯ, ಕಂದಕರ್ಣ ಮುಂತಾದ ಉಪದೈವಗಳಿವೆ. ಪ್ರತೀ ತಿಂಗಳು ಸಂಕ್ರಮಣ ಪೂಜೆ, ಪುತ್ತರಿ (ಕನ್ಯಾ ತಿಂಗಳಲ್ಲಿ), ಕರ್ಕಾಟಕ ೧೬ (ಮುತ್ತೆ) ಹಾಗೂ ಐದು ವರ್ಷಗಳಿಗೊಮ್ಮೆ

'ನಡಾವಳಿ' ಇಲ್ಲಿನ ವಿಶೇಷ ಉತ್ಸವಗಳು. 'ನಗರಂ' ನ ಮೇಲ್ನೋಟದಲ್ಲಿ ೧೫೦ ಮನೆಗಳೂ, ಐನೂರಕ್ಕಿಂತಲೂ ಹೆಚ್ಚು ಸದಸ್ಯರು ಇದ್ದಾರೆ. ಚೆಟ್ಟಿಯಾರ್, ಕೋಮರ, ಕಾರ್ನವ, ಮಡೆಯರ ಸ್ಥಾನಗಳಲ್ಲಿ ಕೆಲವು ತೆರವಾಗಿವೆ. ಪ್ರತಿ ಮನೆಯಲ್ಲೂ ಕಾಣಿಕೆಯ ಡಬ್ಬಿಯನ್ನಿಟ್ಟು ಕ್ಷೇತ್ರಕ್ಕೆ ನಿಧಿಯನ್ನು ಸಂಗ್ರಹಿಸುವ ಪದ್ಧತಿ ರೂಢಿಯಲ್ಲಿದೆ. ಕ್ಷೇತ್ರದ ಒಳಗೆ ಮೂರು ಗುಡಿಗಳಿವೆ ಮಧ್ಯದಲ್ಲಿ ಚೀರುಂಬಾ (ಮೂತೆ) ಭಗವತಿ, ಭಗವತಿಯ ಬಲಭಾಗದಲ್ಲಿ ಎಳಯ ಭಗವತಿ, ಎಡದಲ್ಲಿ ಚಾಮುಂಡಿ ಸಾನ್ನಿಧ್ಯವಿದೆ. ವಿಶಾಲವಾದ ಗೋಪುರದ ಹೊರಭಾಗದಲ್ಲಿ ಪಶ್ಚಿಮಾಭಿಮುಖವಾಗಿ ವಿಷ್ಣುಮೂರ್ತಿಯ ಸಾನ್ನಿಧ್ಯವಿದೆ. ವಿಷ್ಣುಮೂರ್ತಿಯ ಗುಡಿಯ ಎದುರು ಬಬ್ಬರ್ಯನ ಸಾನ್ನಿಧ್ಯವೂ ಇದೆ. ಪೂರ್ವಾಭಿಮುಖವಾಗಿ ಗುಳಿಗನ ಸಾನ್ನಿಧ್ಯವೂ ನಾಗನ ಕಟ್ಟೆಯೂ ಇದೆ. ಇಲ್ಲಿನ ಗುಳಿಗನಿಗೆ 'ಕಾರಣಿಕ' ಜಾಸ್ತಿಯೆಂದೂ, ಆತ ಇಲ್ಲಿಯ ಸದಸ್ಯರ ರಕ್ಷಕನೆಂದೂ ಪ್ರತೀತಿ ಇದೆ. ಹಿಂದಿನ ಕಾಲದ ಮೂತೆ ಚೆಟ್ಟಿಯಾರ್‌ರೊಬ್ಬರಿಗೆ ಗುಳಿಗನೊಂದಿಗೆ ನಿಕಟ ಸಂಪರ್ಕವಿದ್ದ ಕಥೆಯಿದೆ.

ಪ್ರತಿ ವರ್ಷ ಮೇಷ ಸಂಕ್ರಮಣದ ದಿನ ಇಲ್ಲಿ ಮಹಾಸಭೆ ಜರಗುತ್ತದೆ. ಹೊಸ ಆಡಳಿತ ಸಮಿತಿ ರೂಪುಗೊಳ್ಳುತ್ತದೆ. ಆ ದಿನ ಸಾಯಂಕಾಲ ಗುಳಿಗನ ಕೋಲ, ರಾತ್ರೆ ಭಜನೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದು ಮರುದಿನ ವಿಷು ಉತ್ಸವವು ಬಹಳ ಸಂಭ್ರಮದಿಂದ ನಡೆಯುತ್ತದೆ.

## ೨೧. ಮಂಜೇಶ್ವರ ನಗರಂ

ಚಂದ್ರಗಿರಿ ಹೊಳೆಯ ದಕ್ಷಿಣದ ನಾಲ್ಕು ನಗರಂಗಳಲ್ಲಿ ಮೂರನೆಯದು ಮಂಜೇಶ್ವರ ನಗರಂ. ಕೇರಳದ ಉತ್ತರದ ಗಡಿಯಾದ ಮಂಜೇಶ್ವರದ 'ಉದ್ಯಾವರ' ಎನ್ನುವಲ್ಲಿ ಇದ್ದ ಇದು ಈಗ ಸ್ಥಾನಾಂತರಗೊಂಡು ಅಲ್ಲಿಂದ ಕೊಂಚ ದಕ್ಷಿಣ ಭಾಗದಲ್ಲಿರುವ ಮಂಗಲ್ಪಾಡಿಯೆನ್ನುವಲ್ಲಿದೆ. ಉದ್ಯಾವರದಲ್ಲಿ ಹಿಂದೆ ಸ್ಥಾನವಿದ್ದ ಚಿಹ್ನೆಗಳು ಈಗಲೂ ಇವೆ. ಕ್ಷೇತ್ರವಿರುವ ಪರಿಸರಕ್ಕೆ 'ಚೆರುಗೋಳಿ' ಎಂದು ಹೆಸರು. ಈ 'ನಗರಂ' ಗೆ ಸೇರಿದ ಶಾಲಿಯಾ ಸಮುದಾಯದವರ ಹೆಚ್ಚಿನ ಮನೆಗಳೂ ಅಲ್ಲಿಂದ ಪೂರ್ವದ ಊರುಗಳಾದ ಜೋಡುಕಲ್ಲು, ದೇರಂಬಳ, ಬೇಕೂರು, ಪೇರೂರು, ಪೂಕ್ಕಳಂ, ಕೋಳಾರು, ಚೇವಾರು, ಚಿಪ್ಪಾರು, ಮಂಟಂಪಾಡಿ, ಬಾಡೂರು, ಅಟ್ಟೆಗೋಳಿ, ಪಡ್ರೆ ಮೊದಲಾದ ಕಡೆಗಳಲ್ಲಿತ್ತು. ಆದರೆ ಈಗ ಮಂಗಲ್ಪಾಡಿಯಿಂದ ಪೂರ್ವಕ್ಕೆ ಸುಮಾರು ಐದಾರು ಕಿಲೋಮೀಟರು ದೂರದಲ್ಲಿರುವ ಜೋಡುಕಲ್ಲು ಮತ್ತು ದೇರಂಬಳವನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಶಾಲಿಯಾರ ಮನೆಗಳೇ ಇಲ್ಲವಾಗಿವೆ. ಆದರೆ ಆ ಊರುಗಳಲ್ಲಿ ಒಂದು ಕಾಲದಲ್ಲಿ ಅವರು ವಾಸಿಸುತ್ತಿದ್ದರು ಎನ್ನುವುದಕ್ಕೆ ಆಧಾರವಾಗಿ, ಮಂಗಳೂರು, ಕುಂಬಳೆ, ಕಾಸರಗೋಡು ಪರಿಸರಗಳಲ್ಲಿ ವಾಸಿಸುವ ಶಾಲಿಯರಲ್ಲಿ ಕೆಲವರಿಗೆ ಕುಟುಂಬದ ಹೆಸರಿನ ಹಾಗೇ ಈ ಊರುಗಳ ಹೆಸರುಗಳು ಅಂಟಿಕೊಂಡಿದೆ.

ಮಂಜೇಶ್ವರದ ಉದ್ಯಾವರದಿಂದ ಮಂಗಲ್ಪಾಡಿಯ ಚೆರುಗೋಳಿಗೆ ಕ್ಷೇತ್ರವು ಏಕೆ ಸ್ಥಾನಾಂತರವಾಯಿತು ಎನ್ನುವುದಕ್ಕೆ ಯಾವ ಕಾರಣಗಳೂ ದೊರಕುವುದಿಲ್ಲ. ಅಲ್ಲಿನ ಕುಟುಂಬಸ್ಥರು

ಮಂಗಲ್ಪಾಡಿಯ ಕಡೆಗೆ ಬಂದಾಗ ಅವರೊಂದಿಗೆ ದೇವಿಯೂ ಬಂದಳೆಂದು ಹೇಳಲಾಗುತ್ತದೆ. ಉದ್ಯಾವರದಲ್ಲಿ ಈಗಲೂ ಶಾಲಿಯಾ ಸಮುದಾಯಕ್ಕೆ ಸೇರಿದ ಕೆಲವು ಮನೆಗಳಿವೆ. ಇಲ್ಲಿನ ಶಾಲಿಯಾರಿಗೂ ಉದ್ಯಾವರದ ಅರಸು ಮುಂಡತ್ತಾಯ (ಮಂಜೇಷ್ಕಾರ್?) ದೈವಸ್ಥಾನಕ್ಕೂ ನಿಕಟ ಸಂಬಂಧವಿದೆ ಎಂಬುದನ್ನು 'ಆ ದೈವದ ದರ್ಶನ ಪಾತ್ರಿಯೊಬ್ಬ ಶಾಲಿಯಾ ಸಮುದಾಯದವನೇ ಆಗಬೇಕು' ಎನ್ನುವುದು ಸೂಚಿಸುತ್ತದೆ.

ಮಂಗಲ್ಪಾಡಿಗೆ ಬಂದ ಶಾಲಿಯಾ ಸಮುದಾಯವು ತನ್ನೊಂದಿಗೆ ತಂದ ದೈವಗಳೊಂದಿಗೆ ತಾನು ನೆಲೆನಿಂತ ಸ್ಥಳದ ದೈವವಾದ ಮಳರಾಯಿ (ಮಲಸಾವರಿ, ಮಳರಾಯ) ದೈವವನ್ನು ಆರಾಧಿಸತೊಡಗಿತು. ಇಲ್ಲಿನ ಆಚಾರವರ್ಗದವರಿಗೆ ಮಂಜೇಶ್ವರದ ಬಂಗಾಡಿ ಅರಸರು ಅಧಿಕಾರದ ಚಿಹ್ನೆಗಳನ್ನು ನೀಡುತ್ತಾರೆ. ಇಲ್ಲಿನ ತೆರುವನ್ನು 'ಮಂಗಲ್ಪಾಡಿ ತೆರು' ಎಂದು ಕರೆಯುತ್ತಾರೆ.

ಇಲ್ಲಿ ಪ್ರಧಾನ ದೈವವಾಗಿ ಚೀರುಂಬಾ ಭಗವತಿಯೇ ಇದ್ದಾಳೆ. ಎಳೆಯ ಭಗವತಿ, ಶ್ರೀ ಮಲರಾಯಿ, ವಿಷ್ಣುಮೂರ್ತಿ, ಗುಳಿಗ ದೈವ ಹಾಗೂ ನಾಗನನ್ನು ಇಲ್ಲಿ ಆರಾಧಿಸಲಾಗುತ್ತದೆ. ಸುಮಾರು ೬೦ ವರ್ಷಗಳಿಂದ ಇಲ್ಲಿ 'ಶ್ರೀ ಸತ್ಯನಾರಾಯಣ ಭಜನಾ ಸಂಘ'ವೊಂದಿದ್ದು ಪ್ರತೀ ಶನಿವಾರ ಭಜನೆ ನಡೆಯುತ್ತದೆ. ವರ್ಷಂಪ್ರತಿ ನವರಾತ್ರಿಯ ಸಂದರ್ಭದಲ್ಲಿ ಮೊದಲನೇ ಶನಿವಾರ ವಿಶೇಷ ಭಜನೆ ನಡೆಯುತ್ತದೆ. ಈ 'ನಗರಂ' ಮೂತ್ತೆ ಚೆಟ್ಟಿಯಾರ್, ಕಾರ್ನವ, ಮಡೆಯ ಹಾಗೂ ಸುಮಾರು ೩೦೦ ಸದಸ್ಯರನ್ನು ಒಳಗೊಂಡಿದೆ. ಹಿಂದಿನ ಕಾಲದಲ್ಲಿ ಚಂದ್ರಗಿರಿಯ ದಕ್ಷಿಣ ಕ್ಷೇತ್ರಗಳಲ್ಲಿ ಕ್ಷೇತ್ರದ ಕಾರ್ನವರೇ ದೇವರನ್ನು ಹೊತ್ತು ಬಲಿ ಪ್ರದಕ್ಷಿಣೆ ಬರುತ್ತಿದ್ದರು. ಇತ್ತೀಚೆಗೆ ಹಲವು ವರ್ಷಗಳಿಂದ ಅಂತಹವರು ಕ್ಷೇತ್ರಗಳಲ್ಲಿ ಅಪರೂಪವಾಗುತ್ತಿದ್ದಾರೆ. ಹೆಚ್ಚಿನ ಕಡೆಗಳಲ್ಲಿ ಬ್ರಾಹ್ಮಣ ಅಡಿಗಳೇ ದೇವರ 'ಬಲಿ ಉತ್ಸವ' ನಡೆಸುತ್ತಾರೆ. ಆದರೆ ಉತ್ಸವದ ಸಂದರ್ಭದಲ್ಲಿ ದೇವರನ್ನು ಹೊತ್ತು ಬಲಿ ಪ್ರದಕ್ಷಿಣೆಯನ್ನು ಮಾಡುವ ಕಾರ್ನವರು ಈಗಲೂ ಇದ್ದಾರೆ ಎನ್ನುವುದು ಉಲ್ಲೇಖನೀಯ.

## ೨೨. ಪಣಂಬೂರು ನಗರ

ದಕ್ಷಿಣ ಕನ್ನಡದಲ್ಲಿರುವ ಏಕೈಕ ಶಾಲಿಯಾ ನಗರವಿದು. ಪ್ರಾಚೀನ ತುಳುನಾಡು ಅಸ್ತಿತ್ವದಲ್ಲಿರುವಾಗ ರೂಪುಗೊಂಡ 'ನಗರ' ಎನ್ನಬಹುದು. 'ಪಟ್ಟುವಂ' ನಿಂದ ಆರಂಭವಾಗುವ ನಗರಂಗಳಲ್ಲಿ ಕೊನೆಯದು ಪಣಂಬೂರು ನಗರ. ಇದು ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ವೈಶಿಷ್ಟ್ಯಪೂರ್ಣವಾದ ನಗರ. ಪಟ್ಟುವದಿಂದ ಮಂಜೇಶ್ವರದ ವರೆಗೆ ಶಾಲಿಯರು ಮಲಯಾಳ ಭಾಷೆಯನ್ನಾಡುತ್ತಿದ್ದರೆ, ಇಲ್ಲಿ ತುಳು ಮತ್ತು ಕನ್ನಡ ಮಾತನಾಡುವವರೇ ಹೆಚ್ಚಾಗಿದ್ದಾರೆ. ಯು. ಬಾಲಕೃಷ್ಣ ಎಂಬವರು ಹೀಗನ್ನುತ್ತಾರೆ, "ಪಣಂಬೂರಿನಲ್ಲಿ ಬಂದು ನೆಲಸಿದ ನಮ್ಮ ಪೂರ್ವಿಕರಿಗೆ ಸ್ವಾವಲಂಬನೆ ಇಲ್ಲದಿದ್ದುದರಿಂದ ಜೈನರ ಆಶ್ರಯವನ್ನು ಪಡೆದು ಅವರ ಭೂಮಿಯಲ್ಲಿ ಅಡಿಯಾಳಾಗಿ ನೆಲೆಸಿದರು. ಇದರಿಂದಲಾಗಿ ತಮ್ಮ ಕುಲದೈವ ಮತ್ತು ಮಾತೃಭಾಷೆಗಳನ್ನು ರಕ್ಷಿಸಿಕೊಂಡು ಹೋಗಲು ಆತ್ಮಸ್ಥೈರ್ಯ ಮತ್ತು ಅವಕಾಶಗಳು ಅವರಿಗೆ ಇಲ್ಲದೇ ಹೋಗಿರಬಹುದು. ಅಲ್ಲದೇ ತುಳು ನಾಡಿನಲ್ಲಿ ನಮ್ಮ ದೈವ ಮತ್ತು ಭಾಷೆಗೆ

ತಿರಸ್ಕಾರವಿದ್ದುದರಿಂದ, ತುಳು ಜನರೊಂದಿಗೆ ಹೊಂದಿಕೊಳ್ಳುವ ಮನೋಭಾವದಿಂದ ತುಳುವನ್ನು ಮಾತೃಭಾಷೆಯನ್ನಾಗಿ ಸ್ವೀಕರಿಸಿ, ಸ್ಥಳೀಯ ದೈವವನ್ನೇ ನಮ್ಮವರು ಆರಾಧಿಸತೊಡಗಿದರು." (ಸಂಕ್ರಾಂತಿ-೨, ದೇವಾಂಗ ಸಮಾಜ, ಮಂಗಳೂರು)

ಈ ನಗರಂ ಮೊದಲು ಮಂಗಳೂರಿನ ಪಣಂಬೂರಿನಲ್ಲಿತ್ತು. ಕ್ಷೇತ್ರವಿರುವ ಪರಿಸರಕ್ಕೆ 'ಕುಕ್ಕಾಡಿ' ಎಂಬ ಹೆಸರಿತ್ತು. ನವಮಂಗಳೂರು ಬಂದರು ನಿರ್ಮಾಣವಾಗುವ ಕಾಲದಲ್ಲಿ ಬಂದರಿಗಾಗಿ 'ನಗರಂ'ನ ಕ್ಷೇತ್ರ ಪರಿಸರವನ್ನು ಶಾಲಿಯಾ ಸಮುದಾಯದವರು ನೀಡಬೇಕಾಗಿ ಬಂದ ಕಾರಣ, ಸರಕಾರದಿಂದ ನೀಡಲ್ಪಟ್ಟ ಪರಿಹಾರ ಧನದಿಂದ ಮಂಗಳೂರಿನ 'ಅಶೋಕ ನಗರ' ಎಂಬಲ್ಲಿ ನೂತನ ಕ್ಷೇತ್ರವನ್ನು ನಿರ್ಮಾಣಮಾಡ ಬೇಕಾಯಿತು. ಪಣಂಬೂರಿನಲ್ಲಿ ಆರಾಧಿಸುತ್ತಿದ್ದ ಅರಸು ಮುಂಡತ್ತಾಯ ಹಾಗೂ ಧೂಮಾವತಿ ದೈವಗಳನ್ನೇ ಇಲ್ಲಿಯೂ ಪ್ರತಿಷ್ಠಾಪಿಸಿ ಆರಾಧಿಸುವುದರೊಂದಿಗೆ, ಸಮುದಾಯದ ಪ್ರಮುಖ ದೈವವಾದ ಚೀರುಂಬಾ ಭಗವತಿ ಹಾಗೂ ಇಳಯ ಭಗವತಿಯರನ್ನು ಪ್ರತಿಷ್ಠಾಪಿಸಲಾಗಿದೆ. ಮುಂಡತ್ತಾಯ ಹಾಗೂ ಧೂಮಾವತಿಯರ ಗುಡಿಗಳು ಪ್ರತ್ಯೇಕವಾಗಿವೆ. ಈ ದೈವಗಳನ್ನು ಬಹಳ ಹಿಂದಿನಿಂದಲೇ ಇಲ್ಲಿನ ಶಾಲಿಯಾರು ಆರಾಧಿಸುತ್ತಾರೆ. ಇದರ ಹಿಂದೆ ಬಲವಾದ ಕಾರಣವೂ ಇದೆ.

ಪಣಂಬೂರಿಗೆ ಬಂದ ಶಾಲಿಯಾ ಕುಟುಂಬಗಳು ಜೈನ ವಂಶೀಯರಾದ ಬಲ್ಲಾಳ ಮನೆತನದವರ ಆಶ್ರಯವನ್ನು ಪಡೆದುಕೊಂಡು, 'ಜನಾನಂದ ಬೀಡು' ಎಂಬ ಬಲ್ಲಾಳರ ಮನೆಯ ಪಕ್ಕದಲ್ಲಿಯೇ ವಾಸ್ತವ್ಯವನ್ನು ಹೂಡಿದರು. ೨೫೦ ವರ್ಷಗಳ ಹಿಂದೆ ಜೈನ ಮನೆತನದವರು ಈ ಪ್ರದೇಶವನ್ನು ಬಿಟ್ಟು ಹೋಗುವಾಗ ತಮ್ಮ ಆರಾಧ್ಯ ದೈವವಾದ, ಅರಸುಮುಂಡತ್ತಾಯ ಹಾಗೂ ಧೂಮಾವತಿ ದೈವಗಳನ್ನೂ, ದೈವಗಳೀಗೆ ಸೇರಿದ ಭೂಮಿಯನ್ನೂ ತಮ್ಮ ಕೈಕೆಳಗಿದ್ದುಕೊಂಡು, ತಮ್ಮ ಹಾಗೆಯೇ ಆ ದೈವಗಳನ್ನು ಆರಾಧಿಸುತ್ತಿದ್ದ ಶಾಲಿಯಾ ಸಮುದಾಯಕ್ಕೆ ನೀಡಿದರು ಎಂದು ಹೇಳಲಾಗಿದೆ. ಇದಕ್ಕೆ ಸಂಬಂಧಿಸಿದ ಕೆಲವು ದಾಖಲೆಗಳು ಇವೆ. ಪಣಂಬೂರು ನಗರವು ಶಾಲಿಯಾರ ಕೊನೆಯ ನಗರವಾದುದರ ಹಿನ್ನೆಲೆಯಲ್ಲಿ ಐತಿಹ್ಯವೊಂದು ಹೀಗನ್ನುತ್ತದೆ. 'ಪಟ್ಟುವಂ'ನಿಂದ ಹೊರಟ ಶಾಲಿಯಾರ ಪ್ರಧಾನ ದೈವವಾದ ಭಗವತಿಯು ಉತ್ತರಕ್ಕೆ ಬರುತ್ತಾ ಕಾಸರಗೋಡನ್ನು ದಾಟಿ ಮಂಗಳೂರಿಗೆ ಬಂದಾಗ ಅಲ್ಲಿ ತುಳು ಪ್ರಾಬಲತೆಯನ್ನು ಕಂಡು" 'ಅಪ್ಪ' ನನ್ನು 'ಅಮ್ಮ' ಎಂದೂ, 'ಅಮ್ಮ'ನನ್ನು 'ಅಪ್ಪ'ಎಂದು ಕರೆಯುವ ಊರಿನಲ್ಲಿ ನಾನು ನಿಲ್ಲುವುದಿಲ್ಲ "ಎಂದು ಮರಳಿ ಹೋದಳು ಎಂದು ಹೇಳುತ್ತಾರೆ. ಆದುದರಿಂದಲೇ ಅಲ್ಲಿ ಭಗವತಿಯ ಆರಾಧನೆ ರೂಢಿಗೆ ಬರಲಿಲ್ಲವೆಂದೂ, ತುಳುವರ ದೈವಗಳೇ ಆರಾಧಿಸಲ್ಪಟ್ಟವೆಂದೂ ಅಭಿಪ್ರಾಯವಿದೆ. ಇಲ್ಲಿ ಶಾಲಿಯಾರ ನಾಲ್ಕು ಕುಟುಂಬಗಳಿಗೆ ವಿಶೇಷವಾದ ಸ್ಥಾನವಿರುವುದು, ಈ ನಾಲ್ಕು ಕುಟುಂಬಗಳು ಆರಂಭದಲ್ಲಿ ಇಲ್ಲಿಗೆ ಬಂದವರು ಎನ್ನುವುದನ್ನು ದೃಢಪಡಿಸುತ್ತದೆ.

ಇಲ್ಲಿನ ಕ್ಷೇತ್ರದಲ್ಲಿ ಇತರ ತುಳು ದೈವಗಳಾದ ಮೈಸಂದಾಯ, ಬಂಟ, ಪಂಜುರ್ಲಿ ದೈವಗಳು ಪರಿವಾರ ದೈವಗಳಾಗಿ ಆರಾಧಿಸಲ್ಪಡುತ್ತವೆ. ಹಿಂದೆ ಸುಗ್ಗಿ (ಮೀನ ಮಾಸ) ತಿಂಗಳ ೨೦ ಹಾಗೂ ೨೧ ರಂದು ದೈವಗಳಿಗೆ ಎರಡು ದಿನಗಳ ನೇಮ, ನಡಾವಳಿ ಬಹಳ ವೈಭವದಿಂದ ನಡೆಯುತ್ತಿತ್ತು.

ಮೊದಲನೆಯ ದಿನದ ಅರಸು ಮುಂಡತ್ತಾಯನ ಬಂಡಿ ಉತ್ಸವವು ಬಹಳ ಆಕರ್ಷಣೀಯವಾಗಿತ್ತು ಎನ್ನಲಾಗಿದೆ. ಕುದುರೆಯ ಬಂಡಿಯಲ್ಲಿ ದೈವವು ಕ್ಷೇತ್ರದ ಪಡುದಿಕ್ಕಿನಲ್ಲಿ ಸುಮಾರು ಒಂದು ಫರ್ಲಾಂಗು ದೂರದ ರಾಜರಸ್ತೆಯಲ್ಲಿ ಸಾಗಿ ನಂದನೇಶ್ವರನಿಗೆ ಕಾಣಿಕೆಯನ್ನು ಸಮರ್ಪಿಸಿ ಹಿಂತಿರುಗುತ್ತಿತ್ತು. ಮರುದಿನ ಧೂಮಾವತಿ ದೈವದ ನೇಮ.

ಪಣಂಬೂರು ಮಾಗಣೆಯ ಗ್ರಾಮದೇವತೆಯಾದ ನಂದನೇಶ್ವರನ ಕ್ಷೇತ್ರಕ್ಕೂ ಮುಂಡತ್ತಾಯ ದೈವದ ಕ್ಷೇತ್ರಕ್ಕೂ ನಿಕಟವಾದ ಸಂಬಂಧವಿತ್ತು. ನಂದನೇಶ್ವರ ದೇವಾಲಯದ ಉತ್ಸವಕ್ಕಾಗಿ ಧ್ವಜಾರೋಹಣವಾದ ದಿನ ಮುಂಡತ್ತಾಯ ಕ್ಷೇತ್ರದಲ್ಲಿ ಪಂಚಕಜ್ಜಾಯ ಹೋಮ ನಡೆಯುತ್ತಿತ್ತು. ಪಣಂಬೂರಿನ ಕ್ಷೇತ್ರವು ವಿಶಾಲವಾದ ಸ್ಥಳದಲ್ಲಿದ್ದು, ಸುತ್ತ ಪಾಗಾರವಿತ್ತು. ಪೂರ್ವಾಭಿಮುಖವಾಗಿ ಗುಡಿಯಿತ್ತು. ಗುಡಿಯ ಎದುರುಗಡೆ ದಕ್ಷಿಣೋತ್ತರಕ್ಕೆ ಪೌಳಿಯಿದ್ದು ಪೌಳಿಯ ದಕ್ಷಿಣ ಭಾಗದಲ್ಲಿ ಧೂಮಾವತಿ ಗುಡಿ, ಉತ್ತರದ ಕೊನೆಯಲ್ಲಿ ಅರಸು ಮುಡತ್ತಾಯನ ಬಂಡಿಯಿಡುವ ವ್ಯವಸ್ಥೆಯಿತ್ತು. ಉತ್ತರ ಭಾಗದಲ್ಲಿ ಪೂರ್ವ ಪಶ್ಚಿಮಕ್ಕೆ ದಕ್ಷಿಣಾಭಿಮುಖವಾಗಿ ಇನ್ನೊಂದು ಪೌಳಿಯಿತ್ತು. ಇದು ವಿಶೇಷವಾಗಿ ಉತ್ಸವ ಸಂದರ್ಭದಲ್ಲಿ ಬ್ರಹ್ಮಸಭೆಗೆ ಮೀಸಲಿಡಲ್ಪಟ್ಟಿತ್ತು.

೧೯೬೯ ರವರೆಗೆ ಮೂಲ ಕುಕ್ಕಾಡಿಯಲ್ಲಿ ನೇಮಗಳೂ ಜಾತ್ರೆಗಳೂ ನಡೆಯುತ್ತಿದ್ದವು. ಬಂದರಿಗೆ ಸ್ಥಳವು ಹಸ್ತಾಂತರವಾದ ಮೇಲೆ ಕೆಲವು ಕಾಲ ಅಶೋಕನಗರದಲ್ಲಿ ಹೊಸ ಕ್ಷೇತ್ರ ನಿರ್ಮಾಣವಾಗುವವರೆಗೆ ಯಾವ ಪೂಜೆ ಪುರಸ್ಕಾರಗಳೂ ನಡೆಯಲಿಲ್ಲ. ಪಣಂಬೂರು 'ನಗರಂ' ನ ಸದಸ್ಯರು ಕೆಲವರು ಮಂಗಲ್ಪಾಡಿಯಲ್ಲೂ, ಕೆಲವರು ಕುಂಬಳೆಯಲ್ಲೂ ಸೇರಿಕೊಂಡರು. ೧೯೭೮ ರಲ್ಲಿ ಕ್ಷೇತ್ರ ನಿರ್ಮಾಣವು ಪರಿಪೂರ್ಣಗೊಂಡು ಈಗ ಪೂಜೆ, ನೇಮಾದಿಗಳು ನಡೆಯುತ್ತಿವೆ. ತುಳುನಾಡಿನ ಸಂಪ್ರದಾಯದಂತೆ ಇಲ್ಲಿ ಕ್ಷೇತ್ರದ ಆಡಳಿತವನ್ನು ನೋಡಿಕೊಳ್ಳಲು ಮುಕ್ತೇಸರರು ಇದ್ದಾರೆ, 'ಶಾಲಿಯಾ' ರ ಮಲಯಾಳಂ ಸಂಪ್ರದಾಯದಂತೆ ಚೆಟ್ಟಿಯಾರ್‌ಗಳೂ ಕಾರ್ನವರೂ ಇದ್ದಾರೆ. ದಕ್ಷಿಣ ಕನ್ನಡದಲ್ಲಿರುವುದರಿಂದ ಎಲ್ಲಾ ರೀತಿಯಲ್ಲೂ ಮಿಶ್ರ ಸಂಸ್ಕೃತಿಯೇ ಎದ್ದು ಕಾಣುತ್ತಿದೆ. ಇಲ್ಲಿ ಆರಾಧಿಸಲ್ಪಡುವ ಧೂಮಾವತಿಯನ್ನೇ ಕೆಲವರು 'ಭಗವತಿ' ಯೆಂದೂ ಹೇಳುತ್ತಾರೆ.

## ವಿಶೇಷ ವಿಚಾರಗಳು

ಪಟ್ಟುವಂಸಿಂದ ಪಣಂಬೂರುವರೆಗೆ ವ್ಯಾಪಿಸಿದ ಶಾಲಿಯಾರ 'ನಗರಂ' ಗಳನ್ನೂ ತೆರುಗಳನ್ನೂ ಕುರಿತು ಸ್ಥೂಲವಾದ ಅಧ್ಯಯನವನ್ನು ನಡೆಸುವಾಗ ಕುತೂಹಲಕಾರಿಯಾದ ಈ ಕೆಳಗಿನ ಕೆಲವು ಅಂಶಗಳು ಕಂಡು ಬಂದವು.

೧) ತೆರುಗಳಲ್ಲಿರುವ 'ನಗರಂ' ಗಳು ಒಂದು ರೀತಿಯಲ್ಲಿ ಆಡಳಿತ ಮಂಡಳಿಗಳ (Governing Council) ಹಾಗೇ ಕಾರ್ಯವನ್ನು ನಿರ್ವಹಿಸುತ್ತವೆ. ಸಮುದಾಯದೊಳಗೆ ಏಕಸೂತ್ರತೆಯನ್ನು ತರುವಲ್ಲಿ ಪ್ರಮುಖ ಪಾತ್ರವಹಿಸಿರುತ್ತವೆ.

೨) ತೊನ್ನೂಟ್ಟಾರ್ ನಗರಂ ಪಿನ್ನೆ 'ಪಟ್ಟುವಂ ತೊಟ್ಟ್ ಪಣಂಬೂರುವರೆ ಪತ್ತುಂ ನಾಲುಂ ಪದಿನಾಲ್ ನಗರಂ' ಎನ್ನುವ ನುಡಿಗಟ್ಟು ಶಾಲಿಯಾರು ವಲಸೆ ಬಂದುದನ್ನು ಬಹಳ ಅರ್ಥಪೂರ್ಣವಾಗಿ ಸಂಕೇತಿಸುತ್ತದೆ. ಮೂಲತಃ ಒಂದಾಗಿದ್ದ ಶಾಲಿಯಾ ಸಮಾಜ ೯೬ ನಗರಂಗಳಾಗಿದ್ದುಕೊಂಡು ಎಡಂಗ ಮತ್ತು ಬಲಂಗಗಳಾಗಿ ಅನಂತರವೇ ಒಡೆದಿರಬೇಕು. ಅದರಲ್ಲೂ 'ಪತ್ತುಂ ನಾಲುಂ' ಎಂದು ಎಡಂಗ ಶಾಲಿಯಾ ಸಮುದಾಯದ ನಗರಂಗಳನ್ನು ಪ್ರತ್ಯೇಕವಾಗಿ ಸೂಚಿಸುವುದು, ಮೊದಲು ಹತ್ತು ಇದ್ದುದು ಅನಂತರ ನಾಲ್ಕನ್ನು ಸೇರಿಸಿ ಹದಿನಾಲ್ಕಾಯಿತು ಎಂಬುದನ್ನು ಸ್ಪಷ್ಟಪಡಿಸುವುದರೊಂದಿಗೆ ಚಂದ್ರಗಿರಿ ಹೊಳೆಯ ಉತ್ತರ ಭಾಗದ 'ನಗರಂ' ಗಳು ಅನಂತರದ ಸೇರ್ಪಡೆ ಎಂದೂ ಶ್ರುತಪಡಿಸುತ್ತದೆ.

೩) ಶಾಲಿಯಾ 'ನಗರಂ' ನಲ್ಲಿರುವವರು ಇತರ ಸ್ಥಳೀಯ ಕ್ಷೇತ್ರಗಳೊಂದಿಗೆ ಸೌಹಾರ್ದ ಸಂಬಂಧವನ್ನೂ ಬೆಳೆಸಿಕೊಂಡಿದ್ದಾರೆ ಎನ್ನುವುದು, ಸ್ಥಳೀಯ ಕ್ಷೇತ್ರಗಳಿಂದ ತಂದ ಜ್ಯೋತಿಯನ್ನು ಉರಿಸಿದ ಮೇಲೆ ಉತ್ಸವವನ್ನು ನಡೆಸುವುದು, ಇತರ ಕ್ಷೇತ್ರಗಳಲ್ಲಿ ಶಾಲಿಯಾರು ಪೂರಕ್ಕಳಿಯನ್ನು ಆಡುವುದು, ಸ್ಥಳೀಯ ದೈವಗಳನ್ನು ತಮ್ಮ ಸ್ಥಾನಂಗಳಲ್ಲಿ ಸೇರಿಸಿಕೊಳ್ಳುವುದು ಈ ಮೊದಲಾದವುಗಳಿಂದ ಸ್ಪಷ್ಟವಾಗುತ್ತದೆ.

೪) ಶಾಲಿಯಾರು ಜಲಮಾರ್ಗವಾಗಿ ವ್ಯಾಪಾರ ನಡೆಸುತ್ತಿದ್ದರು ಎಂಬುದು, ಕೆಲವು ಶಾಲಿಯಾ ಕ್ಷೇತ್ರಗಳಲ್ಲಿ ಜಲದೇವತೆಯ ಪ್ರೀತ್ಯರ್ಥವಾಗಿ ನಡೆಸುವ 'ಮೀನಮೃತೆಊನ್ನಳ್ಳತ್ತ್' ಸ್ಪಷ್ಟಪಡಿಸುತ್ತದೆ.

೫) ಸುಮಾರು ೨೦೦–೨೫೦ ವರ್ಷಗಳ ಪ್ರಾಚೀನತೆ ಇರುವ ಪಯ್ಯನ್ನೂರು ನಗರವು ಹದಿನಾಲ್ಕು ನಗರಗಳ ಯಾದಿಯಲ್ಲಿ ಇಲ್ಲದೇ ಇರುವುದು ಶಾಲಿಯರು ಅದಕ್ಕಿಂತ ಹಿಂದೆಯೇ ಉತ್ತರದ ಕಡೆಗೆ ಬಂದಿರುವುದನ್ನು ಹೇಳುತ್ತದೆ.

೬) ತಾಳೆಕೊಡೆಗಳನ್ನೇರಿ ಅಥವಾ ಉರಿಯುವ ಬತ್ತಿಯಲ್ಲಿ, ಅಲ್ಲದಿದ್ದರೆ ಸ್ತ್ರೀಯರ ರೂಪದಲ್ಲಿ ದೇವಿಯರು ಶಾಲಿಯರೊಂದಿಗೆ ಬಂದು ಸ್ಥಾನದಲ್ಲಿ ನೆಲೆಗೊಳ್ಳುವ ಐತಿಹ್ಯಗಳು ಅದ್ಭುತ ಜಾನಪದ ಕಥೆಗಳಾಗಿ ಕಂಡುಬರುತ್ತವೆ.

೭) ಶಕ್ತಿ ಸ್ವರೂಪಿಣಿಯಾದ ದೇವಿ ಇವರ ಕೆಲವು ಕ್ಷೇತ್ರಗಳಲ್ಲಿ ಸೌಮ್ಯಳಾಗಿಯೂ ಇನ್ನು ಕೆಲವೆಡೆ ಉಗ್ರಸ್ವರೂಪಿಣಿಯಾಗಿಯೂ ನೆಲೆಗೊಂಡಿರುವಳು.

೮) ಚಂದ್ರಗಿರಿಯಿಂದ ಉತ್ತರಕ್ಕೆ ಚೀರುಂಬಾ ಭಗವತಿ ಪ್ರಧಾನ ದೈವವಾಗಿದ್ದರೆ ದಕ್ಷಿಣಕ್ಕೆ ಈ ತೆರನಾಗಿ ನಿರ್ದಿಷ್ಟ ಹೆಸರಿನ ಭಗವತಿಯೇ ಆರಾಧನೆಗೊಳ್ಳುತ್ತಿಲ್ಲ.

೯) ಆರಾಧನೆಗಳಲ್ಲೂ, ಆಚರಣೆಗಳಲ್ಲೂ ಉತ್ತರಕ್ಕೂ ದಕ್ಷಿಣಕ್ಕೂ ಸಾಮ್ಯತೆಗಿಂತ ವೈದೃಶ್ಯಗಳೇ ಹೆಚ್ಚಾಗಿವೆ.

೧೦) ದಕ್ಷಿಣದಲ್ಲಿ ಪೂರಕ್ಕಳಿ ಮತ್ತು ಕಳಿಯಾಟ್ಟಂ ಪ್ರಧಾನವಾಗಿದ್ದರೆ; ಉತ್ತರದಲ್ಲಿ ನಡಾವಳಿ, ನೇಮ, ವಿಷು ಉತ್ಸವಗಳು ಪ್ರಧಾನವಾಗಿವೆ.

೧೧) ಆಚಾರವರ್ಗವು ಪಟ್ಟುವಂನಿಂದ ಪಣಂಬೂರುವರೆಗೆ ಸಮಾನವಾಗಿದೆ. ಆದರೆ

ಸ್ಥಾನನಾಮಗಳಲ್ಲಿ ವ್ಯತ್ಯಾಸವಿದೆ. 'ಪ್ರಾದೇಶಿಕತೆ' ಇದರಲ್ಲಿ ಎದ್ದು ಕಾಣುತ್ತದೆ.

೧೨) ಶಾಲಿಯಾ ಸಮುದಾಯವು ಮೂಲತಃ 'ಪಿತೃಪ್ರಧಾನ ವ್ಯವಸ್ಥೆ' ಗೆ ಸೇರಿದವರು; ಆದರೆ ಪ್ರಾದೇಶಿಕತೆಯ ಕಾರಣದಿಂದ 'ಮಾತೃಪ್ರಧಾನ ವ್ಯವಸ್ಥೆ'ಯನ್ನು ಆಚರಿಸುತ್ತಾರಷ್ಟೆ ಎನ್ನುವುದು ತಿಳಿದು ಬರುತ್ತದೆ. ಬಲಂಗ ಶಾಲಿಯಾರಲ್ಲಿ ಪಿತೃಪ್ರಧಾನ ವ್ಯವಸ್ಥೆಯೇ ರೂಢಿಯಲ್ಲಿದೆ.

೧೩) ಇವರ ಆಚಾರ-ವಿಚಾರ, ರೀತಿ-ನೀತಿ-ಪದ್ಧತಿಗಳು ತುಳುನಾಡಿನ ಇತರ ಸಮುದಾಯಗಳಿಗಿಂತ ಭಿನ್ನವಾಗಿವೆ. ಸಂಪರ್ಕದಿಂದಾಗಿ ಮಾತ್ರ ಕೆಲವೊಂದು ಸಾಮ್ಯತೆಗಳನ್ನು ಕಾಣಬಹುದಷ್ಟೆ.

೧೪)ಎಡಂಗ ಶಾಲಿಯರು ಮೂಲ ಸ್ಥಳವು 'ಪಟ್ಟುವಂ' ನಲ್ಲಿದೆ.

೧೫) ಇವರು ಪೂರ್ವ ಕರಾವಳಿಯಿಂದ ಬಂದು, ಕೇರಳದಲ್ಲಿ ನೆಲೆಸಿದ ರೇಶ್ಮೆಬಟ್ಟೆಯನ್ನು ನೇಯುವ ನೇಕಾರರು. ರೇಶ್ಮೆಯ ಅಭಾವವು ಇವರನ್ನು ಹತ್ತಿಬಟ್ಟೆ ನೇಯುವಂತೆ ಮಾಡಿತು.

ತೆರುಗಳನ್ನೂ ನಗರಗಳನ್ನೂ ಕುರಿತು ಇನ್ನೂ ಸೂಕ್ಷ್ಮವಾಗಿ ಅಧ್ಯಯನ ನಡೆಸಿದರೆ, ಇನ್ನಷ್ಟು ಅಂಶಗಳು ಬೆಳಕಿಗೆ ಬರಬಹುದು.



ಶ್ರೀ ಕುರುಂಬಾ ಭಗವತೀ ಕ್ಷೇತ್ರಂ
ಪಟ್ಟಂ ತೆರು



ಶ್ರೀ ಮಡಪಳ್ಳಿ ಸೋಮೇಶ್ವರೀ ಕ್ಷೇತ್ರಂ
ಕರಿವೆಳ್ಳೂರು ತೆರು



ಶ್ರೀ ಸೋಮೇಶ್ವರೀ ಕ್ಷೇತ್ರಂ
[illegible] ತೆರು



ಶ್ರೀ ವೇಟುಕುರುಮಗನ್ ಕ್ಷೇತ್ರಂ
ಕುಞಮಂಗಲಂ ತೆರು

ಶ್ರೀ ಭಗವತೀ ಕ್ಷೇತ್ರಂ
ಅಡ್‌ತಿಲ ತೆರು





ಶ್ರೀ ಅಷ್ಟಮಿಚ್ಚಾಲ್ ಭಗವತೀ ಕ್ಷೇತ್ರಂ
ಪಟ್ಟಪ್ಪೊರು ತೆರು



ಶ್ರೀ ಪೊರ್ಕಲಿ ಭಗವತೀ ಕ್ಷೇತ್ರಂ
ವೆಳ್ಳೂರು (ಹಳೇತೆರು)



ಶ್ರೀ ಚಾಮುಂಡೇಶ್ವರಿ ಕ್ಷೇತ್ರಂ
ವೆಳ್ಳೂರು (ಹೊಸತೆರು)



ಶ್ರೀ ಚೂಲಿಯಾರ್ ಭಗವತೀ ಕ್ಷೇತ್ರಂ
ಅದಿಯಾಳ್ ತೆರು



ಶ್ರೀ ಚೂಲಿಯಾರ್ ಭಗವತೀ ಕ್ಷೇತ್ರಂ
ಉದ್ಮ (ಪಡ್ ಇಾರ್) ತೆರು



ಶ್ರೀ ಚೂಲಿಯಾರ್ ಭಗವತೀ ಕ್ಷೇತ್ರಂ
ವೆಳ್ಳಿಕುನ್ನು ತೆರು



ಶ್ರೀ ಕಳರಿ ಅಂಬಲಂ ಕ್ಷೇತ್ರಂ
ಕೀಯೂರು ತೆರು



ಶ್ರೀ ಚೂಲಿಯಾರ್ ಭಗವತೀ ಕ್ಷೇತ್ರಂ
ಕುಂಡಂಕುಯಿ (ಬೆರಿಕುಳಂ) ತೆರು



ಶ್ರೀ ಚೀರುಂಬಾ ಭಗವತೀ ಕ್ಷೇತ್ರಂ
ಚೆಂದನಡ್ಕ-ಕಾಡಗಂ ತೆರು



ಶ್ರೀ ಭಗವತೀ ಕ್ಷೇತ್ರಂ
ತೆರುವತ್ತು, ಕಾಸರಗೋಡು



ಶ್ರೀ ಚೀರುಂಬಾ ಭಗವತೀ ಕ್ಷೇತ್ರಂ
ನಾರಾಯಣ ಮಂಗಲಂ, ಕುಂಬ್ಳೆ



ಶ್ರೀ ಚೀರುಂಬಾ ಭಗವತೀ ಕ್ಷೇತ್ರಂ
ಮಂಜೇಶ್ವರ ನಗರ



ಚಂದ್ರಗಿರಿ ಅರಸರ ಕಾಲದ
ಶ್ರೀ ಶಾಸ್ತಾವು ಕ್ಷೇತ್ರ (ಕೀಯೂರು)
ಕಲ್ನಾಡ್-ಚಂದ್ರಗಿರಿ

# ಅಧ್ಯಾಯ – ೪

## ಸಾಮಾಜಿಕ ಜೀವನ

೧) ಪಂಗಡಗಳು: ಎಡಂಗ – ಬಲಂಗ

೨) ಇಲ್ಲಂ ಹಾಗೂ ತರವಾಡುಗಳು

೩) ಅಳಿಯಕಟ್ಟು ಮತ್ತು ಮಕ್ಕಳ ಕಟ್ಟು

೪) ಹಬ್ಬಗಳು

# ಅಧ್ಯಾಯ ೪

## ೧. ಪಂಗಡಗಳು - ಎಡಂಗ ಮತ್ತು ಬಲಂಗ

ಈ ಪ್ರದೇಶದ ಸಮುದಾಯದಲ್ಲಿ ಪ್ರಮುಖವಾಗಿ ನಾಲ್ಕು ಪಂಗಡಗಳು ಕಂಡು ಬರುತ್ತವೆ.

೧. ಎಡಂಗ

೨. ಬಲಂಗ

೩. ಶುದ್ಧಂ ಮಾರಿಯವರ್

೪. ಮರ್ಯಾದಿಕ್ಕಾರನ್, ಪೊದುವಾನ್ಮಾರ್ ಅಥವಾ ತೆಳಿಯುಕ್ಕನ್ನವರ್

ಈ ನಾಲ್ಕು ಪಂಗಡಗಳಲ್ಲಿ ಬಹಳ ಸ್ಪಷ್ಟವಾಗಿ ಎದ್ದು ಕಾಣುವ ಪಂಗಡಗಳು ಎಡಂಗ ಮತ್ತು ಬಲಂಗ ಪಂಗಡಗಳು.

ಜಾತಿ ವ್ಯವಸ್ಥೆ ಹಾಗೂ ಜಾತ್ಯಾಧಾರಿತವಾಗಿ ಸಮಾಜದಲ್ಲಿ ಶ್ರೇಣೀಕರಣ ನಡೆದಂತಹ ಕಾಲಘಟ್ಟದಲ್ಲಿ ಒಂದೇ ವರ್ಗಗಳ ಮಧ್ಯೆ ಮೇಲು-ಕೀಳು ಎನ್ನುವ ಭಾವವು ಉದಿಸಿ ತೀವ್ರ ರೂಪವನ್ನು ತಾಳಿದುದರ ಹಿನ್ನೆಲೆಯಲ್ಲಿ 'ಎಡಂಗೈ ಮತ್ತು ಬಲಂಗೈ' ಎನ್ನುವ ವಿಭಾಗಗಳು ಹುಟ್ಟಿಕೊಂಡವು. ತಮಿಳುನಾಡು, ಕರ್ನಾಟಕ ಮತ್ತು ಆಂಧ್ರದ ಕೆಲವು ಜನವಿಭಾಗದಲ್ಲಿ ಈ ಪ್ರಭೇದವು ಬಹು ಮುಖ್ಯವಾಗಿ ಕಂಡು ಬರುತ್ತದೆ. ನೇಕಾರ ಸಮುದಾಯವೂ ಇದಕ್ಕೆ ಹೊರತಲ್ಲ. ದೇವಾಂಗ ಮತ್ತು ಪದ್ಮಶಾಲಿ ಎನ್ನುವ ಬಹುಮುಖ್ಯ ನೇಕಾರ ವರ್ಗಗಳು ಮೂಲದಲ್ಲಿ ಒಂದೇ ಆಗಿದ್ದು, ಕ್ರಮೇಣ ಅವರಲ್ಲೇ ಉಂಟಾದ ವಿವಾದಗಳಿಂದಾಗಿ ಎಡಂಗೈ ಮತ್ತು ಬಲಂಗೈ ಎನ್ನುವ ವಿಭಾಗಗಳು ಹುಟ್ಟಿಕೊಂಡವು. ಅದರಲ್ಲಿ ದೇವಾಂಗರು ಎಡಂಗೈಯವರೆಂದೂ ಪದ್ಮಶಾಲಿಗಳು ಬಲಂಗೈಯವರೆಂದೂ ಗುರುತಿಸಲ್ಪಡುತ್ತಾರೆ. ಕ್ರಿ.ಶ. ೧೧ನೇ ಶತಮಾನದಲ್ಲಿ ಪೂರ್ವ ಕರಾವಳೀ ತೀರದ ಪ್ರದೇಶದಲ್ಲಿ ಈ ರೀತಿ ಎರಡು ಪಂಗಡಗಳು ವಿವಾದ ಪೂರ್ವಕವಾಗಿ ಬ್ರಾಹ್ಮಣೇತರ ವರ್ಗದಲ್ಲಿ ಹುಟ್ಟಿಕೊಂಡವು. ಈ 'ಪಂಗಡ ಭೇದ' ಕೇರಳದ ಉಳಿದ ಯಾವ ಸಮುದಾಯದಲ್ಲೂ ಕಾಣುವುದಿಲ್ಲ. ಶಾಲಿಯಾ ಸಮುದಾಯದಲ್ಲಿ ಮಾತ್ರ ಕಂಡು ಬರುತ್ತದೆ. ಆದುದರಿಂದ ಶಾಲಿಯರು ತಮಿಳುನಾಡಿನಿಂದ ಬಂದವರು ಎಂಬುದನ್ನು ಊಹಿಸಲು ಇದು ಸಹಾಯಕವಾಗುತ್ತದೆ. ಅಲ್ಲಿ ಎಡಂಗೈ ಬಲಂಗೈ ಎಂದಿರುವುದನ್ನು ಇಲ್ಲಿ 'ಎಡಂಗ ಮತ್ತು ಬಲಂಗ' ಎಂದು ಗುರುತಿಸಲಾಗುತ್ತವೆ.

ಕೇರಳದ ಶಾಲಿಯರಲ್ಲಿ ಇರುವ ಎಡಂಗ-ಬಲಂಗ ವಿಭಾಗಗಳ ಬಗ್ಗೆ ಗುಂಡರ್ಟ್ ಹೀಗನ್ನುತ್ತಾನೆ.- "ಮಲಬಾರಿನ ಪಟ್ಟುವ ತೆರುವಿನ ಉತ್ತರ ಭಾಗದಲ್ಲಿರುವವರು ಎಡಂಗ ವಂಶದವರೂ, ದಕ್ಷಿಣ ಭಾಗದಲ್ಲಿರುವವರು ಬಲಂಗ ವಂಶದವರು ಎಂದು ಕರೆಯಲ್ಪಡುತ್ತಾರೆ. ಇವರು ಪರಸ್ಪರ ವಿವಾಹ ಸಂಬಂಧಗಳನ್ನು ಇತರ ಸಂಬಂಧಗಳನ್ನು ಬೆಳೆಸುವುದಿಲ್ಲ. ಇದನ್ನು ಮೀರಿದವರು ಸಮುದಾಯದಲ್ಲಿ 'ಭ್ರಷ್ಟರು' ಎಂದು ಗುರುತಿಸಲ್ಪಡುತ್ತಾರೆ. ಬಲಂಗೈ ವಿಭಾಗವು ಗಣಪತಿಯನ್ನೂ, ಎಡಂಗೈ ವಿಭಾಗದವರು ಭಗವತಿಯನ್ನು,

ಆರಾಧಿಸುತ್ತಾರೆ. ಗಣಪತಿ ದೇವಾಲಯಗಳಲ್ಲಿ ಪೂಜಾದಿ ಕ್ರಿಯೆಗಳು ನಡೆಯುತ್ತವೆ. ಆದರೆ, ಎಡಂಗದವರು ದೇವೀ ಆರಾಧಕರಾಗಿದ್ದಾರೆ. ಆದುದರಿಂದ 'ತೈಯ್ಯಂ' ಗಳನ್ನೂ ದೇವಿಗೆ ಪ್ರಿಯವಾದ ಪೂರಕ್ಕಳಿಯನ್ನೂ ನಡೆಸುತ್ತಾರೆ."

ಎಡ್ಗರ್ ಥರ್ಸ್ಟನ್ ಎಡಂಗೈ ಮತ್ತು ಬಲಂಗೈ ವಿಭಾಗಗಳ ಬಗ್ಗೆ ಹೀಗನ್ನುತ್ತಾರೆ. "ಪದ್ಮಶಾಲಿಯರು ಬಲಂಗೈ ವಿಭಾಗವೆಂದೂ, ದೇವಾಂಗರು ಎಡಂಗೈ ವಿಭಾಗವೆಂದೂ ಹೇಳುತ್ತಾರೆ. ನಿಕಟ ಸಂಬಂಧವಿರಿಸಿಕೊಂಡ ಅವರ ಮಧ್ಯೆ ಉಂಟಾದ ಒಂದು ವಿವಾದವು ಬೆಳೆದು ಪರಸ್ಪರ ಘರ್ಷಣೆಯಾಗಿ ಆರಾಧಿಸುತ್ತಿದ್ದ ಚೌಡೇಶ್ವರೀ ದೇವಿಯನ್ನು ಛೇದಿಸಿ ದೇವಿಯ ತಲೆಯ ಭಾಗವನ್ನು ದೇವಾಂಗರಿಗೆ ಬಿಟ್ಟುಕೊಟ್ಟು, ದೇಹದೊಂದಿಗೆ ಪದ್ಮಶಾಲಿಯರು ಹೊರಟುಹೋದರು." (Edger Thurston : 1909 : Vol II ) ದೇವಾಂಗರೂ ಪದ್ಮಶಾಲೀಯರೂ ಒಂದೇ ಕಡೆ ಯಾವತ್ತೂ ಜೀವಿಸುವುದಿಲ್ಲ ಎಂದು ಥರ್ಸ್ಟನ್ ಹೇಳುತ್ತಾರೆ. ದೇವಾಂಗರು ಲಿಂಗಾಯತರಾದ ಮೇಲೆ ಅವರು ಬೇರ್ಪಟ್ಟರು ಎಂದು ಸಿ.ಹಯವದನ ರಾವ್‌ರವರೂ ಅಭಿಪ್ರಾಯ ಪಡುತ್ತಾರೆ.

ಕೇರಳದಲ್ಲಿ ಪ್ರಚಲಿತವಿರುವ ಶಲ್ಯ ಪುರಾಣದ ಪ್ರಕಾರ, "ಶಲ್ಯ ಋಷಿಯ ಸಂತಾನದವರು ಶಾಲಿಯರು. ಮಕ್ಕಳಿಲ್ಲದ ಆತ ಈಶ್ವರನನ್ನು ಧ್ಯಾನಿಸಲು ಪ್ರತ್ಯಕ್ಷವಾದ ಈಶ್ವರನ ಬಲಗೈಯಲ್ಲಿ ಪುರುಷನೂ, ಎಡಗೈಯಲ್ಲಿ ಸ್ತ್ರೀಯೂ ಇದ್ದರು. ಹಾಗೆ ಈಶ್ವರನ ಬಲಬದಿಯಲ್ಲಿ ಪುರುಷನಾದ ಗಣಪತಿಯನ್ನು ಆರಾಧಿಸುವವರು ಬಲಂಗರಾದರು. ಎಡಭಾಗದ ದೇವಿಯನ್ನು ಆರಾಧಿಸುವವರು ಎಡಂಗರಾದರು. ಅವರಿಗೆ ಪೂಜಾವಿಧಿಗಳನ್ನು ಈಶ್ವರನೇ ಕಲಿಸಿಕೊಟ್ಟನು. ಗುರುವಾಗಿ ಬಲಗೈ ವಿಭಾಗದವರಿಗೆ ಮಾರ್ಕಂಡೇಯನನ್ನು ನಿಯಮಿಸಿದ. ಎಡಂಗೈ ವಿಭಾಗದವರು ದೇವಿಯನ್ನು ಆರಾದಿಸಬೇಕೆಂದೂ ವಿಧಿಸಿದ. ಬಲಂಗರು 'ಉಪವಾಸದಲ್ಲಿದ್ದಾದರೂ ಗಣಪತಿಯನ್ನು ಪೋಷಿಸುತ್ತೇವೆ' ಎಂದು ಈಶ್ವರನಿಗೆ ವಚನವನ್ನಿತ್ತರು.' ಇಂದೂ ಕೂಡಾ ಉಪವಾಸವಿದ್ದೇ ಗಣಪತೀ ಕ್ಷೇತ್ರದಲ್ಲಿ ಬಲಂಗರು ಪೂಜೆ ಸಲ್ಲಿಸುತ್ತಾರೆ. ಶಾಲಿಯಾ ಸಮುದಾಯದವರೇ ಉಪವಾಸವನ್ನು ಕೈಗೊಳ್ಳುತ್ತಾರೆ. ಪೂಜೆ ಕಳೆದ ಮೇಲೆಯೇ ಅವರು ಆಹಾರ ಸ್ವೀಕರಿಸುತ್ತಾರೆ. ಇದನ್ನು ಪುಷ್ಟೀಕರಿಸುವ ಐತಿಹ್ಯವೊಂದು ಹೀಗನ್ನುತ್ತದೆ. "ಶಾಲಿಯರೆಲ್ಲರೂ ಒಂದೇ ವರ್ಗಕ್ಕೆ ಸೇರಿದವರಾಗಿದ್ದರು. ದೇವೀ ಆರಾಧಕರಾದ ಅವರು ಒಂದು ಬಾರಿ 'ಹೊಟ್ಟೆಬಾಕ' ಎನ್ನುವ ಕಾರಣದಿಂದ ಎಲ್ಲರಿಂದಲೂ ತಿರಸ್ಕೃತನಾಗಿ ಬೀದಿಯಲ್ಲಿ ಬಿಸುಟು ಹೋದ ಗಣಪತಿಯನ್ನು ಕಂಡರು. ಅವನ ಬಗ್ಗೆ ಕನಿಕರ ಪಟ್ಟುಕೊಂಡ ಒಂದು ವರ್ಗ ಶಾಲಿಯರು ಕೂಡಲೇತಾವು ಉಪವಾಸವಿದ್ದರೂ ಗಣಪತಿಯನ್ನು ಸಾಕುತ್ತೇವೆ ಎಂದು ಮಾತುಕೊಟ್ಟು, ಅವರ ಕ್ಷೇತ್ರಗಳಲ್ಲಿ ಗಣಪತಿಯನ್ನು ಪ್ರತಿಷ್ಠಾಪಿಸಿದರು."

ಭೂಮಿಯಲ್ಲಿ ಜೀವಿಗಳು, ಸೃಷ್ಟಿಯಾಗುವ ಕಾಲದಲ್ಲಿ ಈಶ್ವರನ ಕರದಿಂದ ಹುಟ್ಟಿದವರು 'ಬಲಂಗೈ ವಿಭಾಗದ ಶಾಲಿಯರು' ಎಂದು ಹೇಳುವ ಐತಿಹ್ಯವೊಂದು ಕೇರಳದ ಕೂತುಪರಂಬದಿಂದ ೨೦ ಕಿ.ಮೀ. ದೂರವಿರುವ 'ಕಾಞಿರೋಟ್ ತೆರು' ವಿನಲ್ಲಿ ಪ್ರಚಲಿತವಿದೆ. ಆ ತೆರುವಿನ ಉತ್ಪತ್ತಿ ಹಾಗೂ ಬಲಂಗ ಶಾಲಿಯರ ಉತ್ಪತ್ತಿಯ ಬಗ್ಗೆ ಅಲ್ಲಿ ಒಂದು ಹಾಡಿನ ಮೂಲಕ ಹೇಳಲಾಗುತ್ತದೆ. ಅದು ಹೀಗಿದೆ :-

ನರರಾದಿ ಜಂತುಜಗದುಳವಾಯ ಕಾಲಮೊರು
ಜಗದೀಶನುಂ ಮುನಿಯುಮೊರುನಾಳ್
ನಡಮಾಡಿ ನೃತ್ತಮದಿಲ್ ವಿಲಸುಂ ಕರತ್ತಿಲೆಳುವಾಯ್
ವಲಂಗ ಜನಮುಳವಾಯ್

"ನರಾದಿ ಜಂತುಗಳು ಭೂಮಿಯಲ್ಲಿ ಉದಯವಾಗುವ ಕಾಲದಲ್ಲಿ ಜಗದೀಶನೂ ಮುನಿಯೂ ಸೇರಿಕೊಂಡು ನರ್ತನವನ್ನು ಮಾಡಿದಾಗ ಈಶ್ವರನಕರದಿಂದ ವಲಂಗೈ ಜನರು ಹುಟ್ಟಿದರು. ಅವರ ಬಗೆಗೆ ಗಣಪತಿಗೆ ವಿಶೇಷವಾಗಿ ಪ್ರೀಯಿತ್ತು. ಅವನು ಅವರಿಗಾಗಿ ಕಾಞಿರೋಡ್ ತೆರುವನ್ನು ಸೃಷ್ಟಿಸಿದನು." ಇದನ್ನು ಉಲ್ಲೇಖಿಸುತ್ತ ಡಾ.ಕೃಷ್ಣನ್ ಪಾಕ್ಯಂರವರು ಹೀಗನ್ನುತ್ತಾರೆ. "ಆಂಧ್ರದ 'ವಾತಾಪಿ'ಯ ಗಣಪತಿಯ ಭಕ್ತರಾದ ಅವರು ಆಂಧ್ರದಿಂದ ಬರುವಾಗ ತಮ್ಮೊಂದಿಗೆ ಗಣಪತಿಯನ್ನು ತಂದಿರುವ ಸಾಧ್ಯತೆಯಿದೆ. ಹೀಗೆ ಗಣಪತಿಯನ್ನು ತಂದವರು ಗಣಪತಿಯ ಆರಾಧಕರಾದರು" (ಡಾ. ಕೃಷ್ಣನ್ ಪಾಕ್ಯಂ : ಪದ್ಮಶಾಲಿಯಾ)

ಬಲಂಗರು ಗಣಪತಿಯ ಆರಾಧಕರಾದರೂ ಭಗವತಿ ಅಥವಾ ದೇವೀ ಆರಾಧನೆಯನ್ನೂ ಕೆಲವು ಕಡೆ ನಡೆಸುತ್ತಾರೆ. ಕೊಡುಂಗಲ್ಲೂರು ಭಗವತಿಯು ಇವರ ಆರಾಧ್ಯ ದೈವವಾಗಿದ್ದಾಳೆ. ಬಲಂಗರ 'ಕೂಡಾಳಿ' ಎನ್ನುವ 'ತೆರುವಿ'ನಿಂದ ವರ್ಷಕ್ಕೊಮ್ಮೆ ಯಾರಾದರೊಬ್ಬರು ಕೊಡುಂಗಲ್ಲೂರು ಕ್ಷೇತ್ರಕ್ಕೆ ಹೋಗುವ ಪರಿಪಾಠವನ್ನಿಟ್ಟುಕೊಂಡಿದ್ದಾರೆ. ಆ ದೇವಾಲಯಕ್ಕೆ ವರ್ಷವೂ ತಲಪಿಸಬೇಕಾದ ವಸ್ತುಗಳನ್ನು ಇವರು ತಲಪಿಸಲೇಬೇಕು." ಎಂಬ ನಿಯಮವಿದೆ. 'ವಾಮನ ಪುದಿಯ ತೆರು' ಎನ್ನುವಲ್ಲಿ ಸೋಮೇಶ್ವರಿಯ ಆರಾಧನೆಯಿದೆ. 'ಎರುವಶ್ಯೇರಿ ತೆರು'ವಿನಲ್ಲಿ ಗಣಪತಿಯೊಂದಿಗೆ ಚೂಳಿಯಾರ್ ಭಗವತಿ, ಮೂವಾಟಿಂಕುಟೀ ಭಗವತಿ ಮೊದಲಾದ ಎಂಟು ಭಗವತಿಗಳ ಆರಾಧನೆಗಳಿವೆ.

"ಕಲ್ಲಿಕೋಟೆಯ ಸಾಮೂದಿರಿಯ ಕಾಲದಲ್ಲಿ ಸಮುದ್ರದ ತೀರದ ಬಂದರು ಪ್ರದೇಶದಲ್ಲಿ ವಸ್ತುಗಳಲ್ಲಿ ಹಡಗಿನಲ್ಲಿ ಸಾಗಿಸುವವರನ್ನು "ಚಿಟ್ಟವಿಂಕಿ" ಎಂದು ಕರೆಯುತ್ತಿದ್ದರು. ಇವರು 'ಚಿಟ್ಟವಲಂಗ' ಎನ್ನುವ ಹೆಸರಿನಿಂದ ಗುರುತಿಸಲ್ಪಡುವ ಶಾಲಿಯರು" ಎಂದು ಸಾಮೂದಿರಿ ಚರಿತ್ರೆಯಲ್ಲಿ ಡಾ.ಎಂ.ಎಸ್. ನಂಬೂದಿರಿ ಅಭಿಪ್ರಾಯ ಪಡುತ್ತಾರೆ. ಪಟ್ಟುವಂನಿಂದ ಪಣಂಬೂರುವರೆಗೆ ದೇವೀ ಆರಾಧಕರಾದ ಎಡಂಗೈ ವಿಭಾಗದವರು ದೇವೀ ಕ್ಷೇತ್ರಗಳನ್ನು ಸ್ಥಾಪಿಸಿ ಆರಾಧನೆಯನ್ನು ನಡಸುತ್ತಿದ್ದರೆ, ಕಡಲಾಯಿಯಿಂದ ದಕ್ಷಿಣಕ್ಕೆ ಗಣಪತಿ ಕ್ಷೇತ್ರಗಳನ್ನು ಸ್ಥಾಪಿಸಿ ಬಲಂಗರು ಆರಾಧಿಸುತ್ತಾರೆ. ಮಣಿಯೂರಿನಲ್ಲಿ ದೇವಿಯನ್ನೂ, ಗಣಪತಿಯನ್ನೂ ಸಮಾನವಾಗಿ ಪೂಜಿಸುತ್ತಾರೆ. ಎರಡೂ ಕ್ಷೇತ್ರಗಳೂ ಅಕ್ಕ-ಪಕ್ಕದಲ್ಲಿದೆ. ಎಡಂಗ-ಬಲಂಗ ಎನ್ನುವ ಭೇದವಿಲ್ಲದೆ ಇಲ್ಲಿ ಪೂಜೆ ನಡೆಯುತ್ತದೆ. 'ಕುಞಿಕುಳಂಗರ' ತೆರುವಿನಲ್ಲೂ ದೇವೀ ಆರಾಧನೆ ಇದೆ.

'ವಡಗರ ತೆರು'ವಿನಲ್ಲಿ ಎಡಂಗ-ಬಲಂಗ ಎನ್ನುವ ಪ್ರಭೇದವು ಬಹಳ ತೀವ್ರವಾಗಿತ್ತು ಎನ್ನಲಾಗಿದೆ. ಹಿಂದೆ ಈ ಪ್ರದೇಶದಲ್ಲಿ ಎಡಂಗರೇ ಅಧಿಕವಾಗಿದ್ದು ದೇವೀ ಆರಾಧನೆಯನ್ನು ನಡೆಸುತ್ತಿದ್ದರೆಂದೂ, ಕ್ರಮೇಣ ಬಲಂಗರು ಪ್ರಬಲರಾಗಿ ಎಡಂಗರು ಬೇರೆ ಕಡೆ ಹೋದರೆಂದೂ ಹೇಳಲಾಗುತ್ತದೆ.

ಎಡಂಗರ ಆರಾಧನಾ ಕೇಂದ್ರ 'ತಾನಂ' ಆದರೆ, ಬಲಂಗರ ಆರಾಧನಾ ಕೇಂದ್ರವನ್ನು ಮಂಟಪಂ ಎನ್ನುತ್ತಾರೆ. ಆರಾಧಕವರ್ಗವನ್ನೊಳಗೊಂಡ ನಗರ ವ್ಯವಸ್ಥೆಯಲ್ಲಿ ಎರಡು ವಿಭಾಗಕ್ಕೂ ಸಾಮ್ಯತೆ ಇದೆ. ಬಲಂಗರಲ್ಲೂ ಮೂತ್ತಚೆಟ್ಯಾರ್ ಇಳಯ ಚೆಟ್ಯಾರ್, ಕಾರ್ನವರ್, ಕೋಮರನ್‌ಗಳೆನ್ನುವ ಆರಾಧಕ ವರ್ಗದವರಿದ್ದಾರೆ. ಮಡೆಯನ್‌ನನ್ನು 'ತಂತ್ರಿ' ಎಂದು ಕರೆಯುತ್ತಾರೆ.

ಎಡಂಗರಿಗೆ ಇರುವಂತೆ ಬಲಂಗರಿಗೆ ಇಲ್ಲಂ (ಗೋತ್ರ) ಇಲ್ಲ. ವಿವಾಹ ಸಂಬಂಧವೇರ್ಪಡುವ ಕಾಲದಲ್ಲಿ ರಕ್ತಸಂಬಂಧವಲ್ಲ ಎಂಬುದನ್ನು ಖಾತ್ರಿಪಡಿಸಿಯೇ ವಿವಾಹವಾಗುತ್ತದೆ. 'ಮಾವನ ಮಗ' ಮತ್ತು ಮಾವನ ಮಗಳ'ನ್ನು ಮದುವೆಯಾಗುವ ಸಂಪ್ರದಾಯವಿದೆ. 'ಇಲ್ಲಂ'ಗಳು ಇಲ್ಲದಿರುವುದರಿಂದ ಇವರಿಗೆ 'ತರವಾಡು' ಮನೆಗಳು ಇಲ್ಲ. ಪಿತೃಪ್ರಧಾನ ವ್ಯವಸ್ಥೆಯನ್ನೇ ಅಂಗೀಕರಿಸಿದ್ದಾರೆ. ತಂದೆಯ ಆಸ್ತಿಯಲ್ಲಿ ಹೆಣ್ಣುಮಗಳಿಗೂ ಸಮಾನಾವಕಾಶವಿದೆ.

ಉಳಿದಂತೆ ಆಚರಣೆ, ಸಂಪ್ರದಾಯ, ಆರಾಧನಾ ವಿಧಾನ ಎಲ್ಲವೂ ಒಂದೇ 'ಅಸುರ ಕ್ರಿಯೆ' ಗಳನ್ನು ನಡೆಸುವ ಪದ್ಧತಿ ಇಲ್ಲ. ಎಡಂಗ ಶಾಲಿಯರು ದೇವಿಗೆ, ತಮ್ಮ ಕ್ಷೇತ್ರದ ಪ್ರಮುಖ ಆರಾಧನಾ ಮೂರ್ತಿಗೆ 'ಅಸುರ ಕ್ರಿಯೆ'ಯನ್ನು ನಡೆಸುವ ಸಂಪ್ರದಾಯವಿಲ್ಲ ತಾನೇ? ಎಡಂಗರಿಗೆ ತುಳುನಾಡಿನ ಸಂಪರ್ಕವಾದುದರಿಂದ ದೈವಗಳನ್ನು 'ಅಸುರಕ್ರಿಯೆ'ಯ ಮೂಲಕ ಆರಾಧಿಸುವ ಪದ್ಧತಿ ಬಂದಿರಬಹುದು. ಮೂಲತಃ ಶಾಲಿಯಾ ಸಮುದಾಯ ಪೂಜಾದಿ ದೇವ ಕ್ರಿಯೆಗಳ ಆರಾಧನಾ ಪದ್ಧತಿಯನ್ನು ರೂಢಿಸಿಕೊಂಡವರು ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

ಮೊದಲು ಕೇರಳದ 'ಪಟ್ಟುವಂ'ನಿಂದ ದಕ್ಷಿಣಕ್ಕೆ ಇದ್ದಂತಹ ಬಲಂಗ ಶಾಲಿಯರು ಕ್ರಮೇಣ ಇತ್ತಕಡೆ ವಲಸೆಬಂದು, ಎಡಂಗರೊಂದಿಗೆ ಸೇರಿ ಕೊಂಡಿದ್ದಾರೆ. ಎಡಂಗರ ದೇವೀ ಆರಾಧನಾ ಕೇಂದ್ರಗಳನ್ನೂ ಸಂದರ್ಶಿಸುತ್ತಿದ್ದಾರೆ. ಇತ್ತೀಚೆಗೆ ವಿವಾಹ ಸಂಬಂಧಗಳನ್ನೂ ಬೆಳೆಸಿಕೊಳ್ಳುತ್ತಿದ್ದಾರೆ.

**ಬಲಂಗ ಸಮುದಾಯದ ಆಚಾರ ವರ್ಗದ ಸ್ಥಾನಾರೋಹಣ :**

ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಎಡಂಗ ಶಾಲಿಯಾ ಸಮುದಾಯಕ್ಕೆ ಕೀಜೂರು ಕೇಂದ್ರ ಸ್ಥಾನವಾಗಿರುವಂತೆ, ಬಲಂಗ ವಿಭಾಗದ ಶಾಲಿಯರಿಗೆ ಕೋಲತ್ತುನಾಡು ರಾಜ್ಯದ ವ್ಯಾಪ್ತಿಯಲ್ಲಿ 'ಕಡಲಾಯಿ' ತೆರು ಕೇಂದ್ರ ಸ್ಥಾನವಾಗಿದೆ. ಇಲ್ಲಿಯ ಮೂತ್ತ ಚೆಟ್ಯಾರಿಗೆ ಪ್ರಥಮ ಸ್ಥಾನ ಸಲ್ಲುತ್ತದೆ. ಉಳಿದ ತೆರುಗಳ ವಿವಾದಗಳು ಇಲ್ಲಿ ಪರಿಹರಿಸಲ್ಪಡುತ್ತವೆ. ಇಲ್ಲಿನ 'ನಗರ ವ್ಯವಸ್ಥೆ'ಯಲ್ಲಿ ಒಂದೋ ಎರಡೋ ಮೂತ್ತ ಚೆಟ್ಯಾರ್‌ಗಳು, ೧೧ ಊರಾಳನರು (ಆಚಾರವರ್ಗ) ಹಾಗೂ ೧೨೦ 'ಕೂಡಿಪತಿ' (ಕಾರ್ಯಕಾರೀ ಸಮಿತಿಯ ಸದಸ್ಯರು)ಗಳು ಇರುವರು. ಮೂತ್ತಚೆಟ್ಯಾರ್ ಆಗಿ ಸ್ಥಾನ ಗ್ರಹಣ ಮಾಡಲು ಚಿರಕ್ಕಲ್ ರಾಜನ ಅನುಮತಿಯನ್ನು ಮೊದಲೇ ಪಡೆದು ಕೊಳ್ಳಬೇಕು. ಉಳಿದ ೧೭ ತೆರುಗಳಿಗೂ ಚೆಟ್ಟಿಯಾರ್‌ರ ಸ್ಥಾನಾರೋಹಣದ ವಿಷಯವನ್ನು ತಿಳಿಸಿ ಆಮಂತ್ರಿಸಬೇಕು. ವಸ್ತ್ರದಾನ, ಅನ್ನದಾನ, ದಕ್ಷಿಣೆಯನ್ನು ನೀಡಬೇಕು. ಮೂತ್ತಚೆಟ್ಯಾರ್ ಆಗಿ

ಸ್ಥಾನಾರೋಹಣವಾದ ಮೇಲೆ ಅರಮನೆಗೆ ತೆರಳಿ ರಾಜನಿಗೆ ೧೦೧ ರೂಪಾಯಿ, ೫ ಕಟ್ಟು ವೀಳ್ಯದೆಲೆ ಎರಡು ಮುಂಡು ಸಮರ್ಪಿಸಬೇಕು. ರಾಜನು ಅದನ್ನು ಸ್ವೀಕರಿಸಿ, ಚೆಟ್ಟಾರ್ ಸ್ಥಾನವನ್ನು ಅಂಗೀಕರಿಸಿ, ಕೋಲತ್ತನಾಡು ತೆರುಗಳ, ಕ್ಷೇತ್ರಗಳ ಸರ್ವಾಧಿಕಾರವನ್ನು ನೀಡಿ, ನಾಲ್ಕು ಮಂತ್ರಿಗಳಾಗಿ ಇತರ ಆಚಾರವರ್ಗದವರನ್ನು ನಿಯಮಿಸಿ ಕೊಡುತ್ತಾನೆ. ಎಡಕ್ಕಾಡ್, ಉದಯ ಮಂಗಲ, ಅಲುಕ್ಕೋಡ್, ಚಿರಕ್ಕಲ್ ಪುದಿಯ ತೆರು, ಕೂಡಾಳಿ ಎಂಬೀ ತೆರುಗಳ ಸ್ಥಾನಿಕರು ಮಂತ್ರಿಗಳಾಗುವ ಅರ್ಹತೆ ಪಡೆದು ಕೊಳ್ಳುತ್ತಾರೆ.

ಸ್ಥಾನಾರೋಹಣ ಮಾಡುವ ವ್ಯಕ್ತಿ ಬಲಭಾಗಕ್ಕೆ ಮುಂಡನ್ನು ತಿರುಗಿಸಿ ಉಡಬೇಕು. ಇದು ಇವರು ಬಲಗೈಯವರು ಎನ್ನುವುದನ್ನು ಸೂಚಿಸಲು. ಇವರನ್ನು 'ವಲಂಗೈಪಟ್ಟರ್' ಎಂದೂ ಕರೆಯುತ್ತಾರೆ. ಸ್ಥಾನರೋಹಣಕ್ಕಿಂತ ಮುನ್ನ "ಗಣಪತಿಯಾರೀಶ್ವರಂಡೆ ನಿಟಿಲ್ ಕಟಿಗತ್ತ್ ಕುರಿಕ್ಕುನ್ನು" (ಭಗವಂತನಾದ ಗಣಪತಿಯ ನೆರಳನ್ನು ಕ್ಷೇತ್ರದಲ್ಲಿ ಗುರುತಿಸುತ್ತೇವೆ.) ಎಂದು ಮೂರು ಬಾರಿ ಹೇಳಬೇಕು. ಕ್ಷೇತ್ರದ ಆಚಾರವರ್ಗಕ್ಕೂ, ಕೋಮರರಿಗೂ ಕುಳಿತುಕೊಳ್ಳಲು ಹುಲ್ಲಿನ ಹಸೆಯನ್ನು ಹಾಸಬೇಕು. ಬಿಳಿಯ ಹಾಗೂ ಕಪ್ಪು ಬಟ್ಟೆಯನ್ನು ಹಾಕಿಕೊಂಡ ಹೊಸತಾಗಿ ಆಚಾರವನ್ನು ಸ್ವೀಕರಿಸುವ ವ್ಯಕ್ತಿಯು ಅದನ್ನು ಮುಟ್ಟಿ ನಮಸ್ಕರಿಸಬೇಕು. 'ಪಾರ್ವತೀ ಪರಮೇಶ್ವರರು ಅಲ್ಲಿ ಕುಳಿತಿರುವರೆಂದೂ, ತಾನು ಅವರಿಗೆ ನಮಸ್ಕರಿಸುತ್ತಿರುವೆನೆಂದೂ ಆಗ ಆತ ಮನಸ್ಸಿನಲ್ಲಿಯೇ ಭಾವಿಸುತ್ತಾನೆ.'

ಇಲ್ಲಿ "ನಿಟಿಲ್ ಕುರಿಕ್ಕುಗ" ಎನ್ನುವ ಮಾತು ಮತ್ತು 'ಕಪ್ಪು ಬಿಳಿ ಬಟ್ಟೆಯನ್ನು ಉಡುವುದು' ಎಡಂಗ ಶಾಲಿಯರ 'ನಿಟಿಲ್ ವಿರಿಕ್ಕಲ್'ನ್ನು ನೆನಪಿಸುತ್ತದೆ. 'ನಿಟಿಲ್ ವಿರಿಕ್ಕಲ್'ನಲ್ಲಿ ಎಡಂಗರು ಕಪ್ಪು ಬಿಳಿ ಬಟ್ಟೆಯನ್ನು ಹಾಸುವುದರೊಂದಿಗೆ ಇದು ಸಾದೃಶ್ಯವನ್ನೂ ಪಡೆದುಕೊಳ್ಳುತ್ತದೆ. (ವಿವರಣೆ ೩ನೇ ಅಧ್ಯಾಯದಲ್ಲಿದೆ.) ಮೂಲದಲ್ಲಿ ಇವರು ಒಂದೇ ಆಗಿದ್ದರು ಎನ್ನುವುದನ್ನು ಇದು ಬೆಳಕಿಗೆ ತರುತ್ತದೆ. ಎಡಂಗ ಶಾಲಿಯರು ಪೂರಕ್ಕಳಿ ಆಡುವ ಸಂದರ್ಭದಲ್ಲಿ ಬಿಳಿ ಮುಂಡಿನ ಮೇಲೆ ಕಪ್ಪು ಶಾಲನ್ನು ಸುತ್ತಿಕೊಳ್ಳುವುದನ್ನು ಕಾಣಬಹುದು. (ಗಮನಿಸಿ: 'ಜಾನಪದ'ದಲ್ಲಿನ ಪೂರಕ್ಕಳಿಯ ಚಿತ್ರವನ್ನು ನೋಡಿ.)

**ಗಣಪತಿಗೆ ಎಡೆ ಇಡುವುದು :** ಸ್ಥಾನಾರೋಹಣವಾಗುವ ದಿನ ಸ್ಥಾನಿಕನು ತನ್ನ ಮನೆಯಲ್ಲಿ ಒಂದು ತುದಿ ಬಾಳೆಯೆಲೆಯಲ್ಲಿ ೫ ಬಾಳೆ ಹಣ್ಣು ೧೮ ½ ಕಟ್ಟು ವೀಳ್ಯದೆಲೆಯನ್ನು ಒಂದೇ ಕಟ್ಟು ಮಾಡಿ ಇಡಬೇಕು. (ಇದು ೧೮ ತೆರುಗಳಿಂದ ಬಂದವರು ನಾವೆಲ್ಲ ಒಂದೇ ಎಂಬುದನ್ನು ಸಂಕೇತಿಸುತ್ತದೆ.) ಗೋಮಯ ಮಾಡಿದ ಮೊರದಲ್ಲಿ ೪ ಕಟ್ಟು ವೀಳ್ಯದೆಲೆ ಹಾಗೂ ೪ ಚಿನ್ನದ ಬಣ್ಣದ ಹಣ್ಣಡಕೆ ಎರಡು ವಿಧದ ಧಾನ್ಯಗಳನಿಟ್ಟು ಇನ್ನೊಂದು ಎಲೆಯಿಂದ ಮುಚ್ಚಬೇಕು. (ಇದೆಲ್ಲವೂ ಗಣಪತಿಗೆ ಇರುವ ಕಾಣಿಕೆ) ಇದನ್ನು ಆನೆ ಮೇಲೆ ಕೊಂಡೊಯ್ಯುವಂತೆ ಮೊರದ ಎರಡೂ ಕಡೆ ಹಿಡಿದುಕೊಂಡು ಹೋಗಬೇಕು. ಹದಿನೆಂಟೂವರೆ ಕಟ್ಟು ವೀಳ್ಯದೆಲೆಯನ್ನಿಡುವಾಗಲೂ ಅಲ್ಲಿ ನೆರೆದವರ ಅನುಮತಿಯನ್ನು ಕೇಳಲಾಗುತ್ತದೆ. ಅನಂತರ ಆಚಾರವನ್ನು ಸ್ವೀಕರಿಸಲಿರುವವನು ಇದನ್ನೆಲ್ಲವನ್ನೂ ತಲೆಯಲ್ಲಿ ಹೊತ್ತುಕೊಂಡು, ಮೆರವಣಿಗೆಯಲ್ಲಿ ಕ್ಷೇತ್ರಕ್ಕೆ ಬರುತ್ತಾನೆ. ಅವನ ಮನೆಯವರೂ, ಇತರರೂ ಅವನೊಂದಿಗಿರುತ್ತಾರೆ.

ಕ್ಷೇತ್ರದ ಬಾಗಿಲಿಗೆ ತಲಪಿದಾಗ ಕ್ಷೇತ್ರದ ಸ್ಥಾನಿಕನು, "ಎಲ್ಲರೂ ಕೇಳಿ, ಇಲ್ಲಿರುವ, ನೆರಯಲ್ಲಿರುವ, ಆಮಂತ್ರಿಸಿರುವ ಎಲ್ಲಾ ಆಚಾರ ವರ್ಗದವರಿಗೂ ಒಪ್ಪಿಗೆ ತಾನೇ? ಆಚಾರವನ್ನು ಸ್ವೀಕರಿಸಿದವನನ್ನು ಕ್ಷೇತ್ರಕ್ಕೆ ಬರಮಾಡಿ ಕೊಳ್ಳುತ್ತೇವೆ." ಎಂದು ಮೂರು ಬಾರಿ ಹೇಳುತ್ತಾನೆ. ಅನಂತರ ಸ್ಥಾನಾರೋಹಣ ಮಾಡುವವನು ದೇವಾಲಯದ ಒಳಗೆ ಬರುತ್ತಾನೆ. ಮೊರದಲ್ಲಿ ಅದನ್ನೆಲ್ಲಾ ನೈವೇದ್ಯವಾಗಿ ಗಣಪತಿಗೆ ಇಟ್ಟವನೇ ಈಗ ಅವನ ತಲೆಯಿಂದ ಅದನ್ನು ಇಳಿಸಿ ದೇವರ ಮುಂದೆ ಇಡುತ್ತಾನೆ. ದೇವಾಲಯಕ್ಕೆ ಸಲ್ಲಿಸಬೇಕಾದ ಹಣವನ್ನು ಸ್ಥಾನಾರೋಹಣ ಮಾಡುವವನು ನೀಡುತ್ತಾನೆ. ಅನಂತರ ಅಲ್ಲಿರುವ ಆಚಾರ ವರ್ಗದವರಿಗೆ ಮೇಲು ವಸ್ತ್ರ (ಉತ್ತರೀಯ)ವನ್ನು ನೀಡುತ್ತಾನೆ. ದೀಪದ ಮುಂದೆ ಇಟ್ಟ ಮೊರದಿಂದ ೨ ಕಟ್ಟು ವೀಳ್ಯದೆಲೆಯನ್ನು ಆಚಾರವರ್ಗದವರ ಕೈಗೆ ಸ್ಥಾನಿಕನು ನೀಡುತ್ತಾನೆ. ಅವರು ಆ ವೀಳ್ಯದೆಲೆಯನ್ನು ಸ್ಥಾನರೋಹಣ ಮಾಡುವವನ ಮಡಿಲಿಗೆ ಹಾಕಿ, ಅಕ್ಷತೆ ಕಾಳಿನೊಂದಿಗೆ ನೂತನ ಸ್ಥಾನಕವನ್ನು ಹರಸುತ್ತಾರೆ. ಅನಂತರ ಮೂರು ಬಾರಿ ಅವನ ಸ್ಥಾನವನ್ನು ಆದೇಶಿಸುತ್ತಾರೆ. ಅವನ ಕೈಹಿಡಿದು ಕೂರಿಸಿ ಮೇಲು ವಸ್ತ್ರವನ್ನು ನೀಡುತ್ತಾರೆ. ಅನಂತರ ಆಮಂತ್ರಣವನ್ನು ನೀಡಿ ಬರಮಾಡಿಕೊಂಡ ತೆರುಗಳ ಸ್ಥಾನಿಕರಿಗೆ ಪ್ರತಿಯೋರ್ವರಿಗೂ ೨ ಕಟ್ಟು ವೀಳ್ಯದೆಲೆ ಮತ್ತು ೧೦ ಅಡಕೆಯಂತೆ ತಾಂಬೂಲ ನೀಡಬೇಕು. ಪ್ರತೀ ತೆರುವಿನವರಿಗೆ ½ ಕಟ್ಟು ವೀಳ್ಯದೆಲೆಯನ್ನೂ ಎರಡು ಅಡಿಕೆಯನ್ನೂ ನೀಡಬೇಕು. ಅನಂತರ ಎಲ್ಲರೂ ಸೇರಿ ಗಣಪತಿಗೆ ನಮಸ್ಕರಿಸುತ್ತಾರೆ. ಎಡಂಗ ಶಾಲಿಯರಂತೇ ತಾಂಬೂಲ ನೀಡುವಿಕೆಗೆ ಪ್ರಾಧಾನ್ಯತೆಯನ್ನು ಬಲಂಗರೂ ನೀಡಿದ್ದಾರೆ.

ಬಲಂಗ ಶಾಲಿಯರಲ್ಲಿರುದ್ದ ತ್ರಿಕ್ಕೂಟ ಎನ್ನುವ ಕಲಾರೂಪಕ್ಕೂ ಪೋರಾಟಂ ಕಲಾ ರೂಪಕ್ಕೂ ಸಾಮ್ಯತೆಯಿದೆ. ಪೋರಾಟನಲ್ಲಿ ವಿವಿಧ ವೇಷಗಳನ್ನು ಧರಿಸಿ ಜನರ ಮುಂದೆ ಕಲಾ ಪ್ರದರ್ಶನ ನಡೆದರೆ ; ಇದರಲ್ಲಿಯೂ ವೇಷಗಳನ್ನು ಧರಿಸಿ ಪ್ರದರ್ಶನ ನಡೆಯುತ್ತದೆ. ಆದರೆ ಇದರಲ್ಲಿ ನೃತ್ಯ, ಸಂಗೀತ ಮತ್ತು ವಾದ್ಯ ಎಲ್ಲವೂ ಇದೆ. ಆದುದರಿಂದಲೇ ಇದಕ್ಕೆ 'ತ್ರಿಕ್ಕೂಟ', (ಮೂರೂ ಸೇರಿದ್ದು) ಎನ್ನುವ ಹೆಸರು ಬಂದಿದೆ.

ಗರ್ಭಿಣಿಗೆ ೨ನೇ ತಿಂಗಳಲ್ಲಿ 'ಪುಳಿಕುಡಿ' ಎನ್ನುವ ಆಚಾರವನ್ನು ಇವರೂ ನಡೆಸುತ್ತಾರೆ. ಆ ದಿನ ಕ್ಷೇತ್ರದಲ್ಲಿ ವಿಶೇಷ ಪೂಜೆ ಹಾಗೂ ಗರ್ಭಿಣಿಯ ಪತಿಗೃಹದಲ್ಲಿ ವಿಶೇಷ ಭೋಜನಕೂಟ ನಡೆಯುತ್ತದೆ. 'ಸೀಮಂತ' ದ ದಿನ ಎಷ್ಟೇ ಬಡವನಾದರೂ ವಿಶೇಷ ಭೋಜನವನ್ನು ನೀಡಲೇಬೇಕಿತ್ತು. ಯಾವುದೇ ಕಾರಣಕ್ಕೂ ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ತೆರುವೊಂದರಲ್ಲಿ ಒಂದು ಕುಟುಂಬವು ಈ ಪದ್ಧತಿಯನ್ನು ಅನುಸರಿಸಿಲ್ಲ ಎನ್ನುವ ಕಾರಣದಿಂದ 'ಜಾತಿಭ್ರಷ್ಟರು' ಎಂದು ಜಾತಿಯಿಂದ ಹೊರಗೆ ಹಾಕಲಾಗಿತ್ತು. (ಎಡಂಗ ಶಾಲಿಯರಲ್ಲೂ ಪದ್ಧತಿ ಮೀರಿದವರಿಗೆ ಈ ಶಿಕ್ಷೆ ನೀಡಿದ ವಿವರವಿದೆ).

ಬಲಂಗ ಶಾಲಿಯರಲ್ಲಿ 'ಪುಳಿಕುಡಿ' ಯಂತೆ ಇನ್ನೊಂದು ಆಚರಣೆಯನ್ನು ಗರ್ಭಿಣಿಗೆ ನಡೆಸುತ್ತಿದ್ದರು. 'ಪುಳಿಕುಡಿ' ಕಳೆದ ಮೇಲೆ ಗರ್ಭಿಣಿ ತನ್ನ ತವರಿಗೆ ಹೋಗುವುದಕ್ಕಿಂತ ಮುನ್ನ ತೆರೆದ ಎದೆಯೊಂದಿಗೆ ದೇವರ ಮುಂದೆ ನಿಲ್ಲಬೇಕಿತ್ತು. ಆಗ ಕೋಮರನು ಬಂದು ಅವಳ ಎದೆಯ ಮೇಲೆ ದೇವರ ಪ್ರಸಾದವನ್ನು ಹಚ್ಚುತ್ತಿದ್ದನು. ಕ್ರಮೇಣ ಸ್ತ್ರೀಯರು ಇದನ್ನು ವಿರೋಧಿಸುವುದರಿಂದ ಇಂದೀಗ ಈ ಪದ್ಧತಿಯು ರೂಢಿಯಲ್ಲಿಲ್ಲ.

ಬಲಂಗ ಶಾಲಿಯಾ ಸಮುದಾಯವು ಸಾಮಾನ್ಯವಾಗಿ ಪಿತೃ ಮೂಲೀಯ ವ್ಯವಸ್ಥೆಯನ್ನು ಅನುಸರಿಸುತ್ತಿದ್ದರೂ ಕೆಲವು ಕಡೆ ಮಾತೃಮೂಲೀಯ ವ್ಯವಸ್ಥೆಯನ್ನು ಅನುಸರಿಸುತ್ತಾರೆ.

ಕೇರಳದ ಮಾಡಾಯಿ, ವಳಪ್ಪಟ್ಟಣಂ, ತಳಿಪ್ಪರಂಬ, ಚಿರಕ್ಕಲ್, ಕಣ್ಣೂರು ಈ ಮೊದಲಾದ ಪ್ರದೇಶಗಳಲ್ಲಿ 'ಬಲಂಗ' ಶಾಲಿಯರೇ ಜೀವಿಸುತ್ತಾರೆ. ಆದರೆ ಇತ್ತೀಚೆಗೆ ಈ ಭಿನ್ನತೆಯು ಮಾಯವಾಗಿ ಎರಡೂ ಪಂಗಡಗಳು ಒಂದಾಗುತ್ತಿವೆ. ಪರಸ್ಪರ ಕೊಡು-ಕೊಳ್ಳುವಿಕೆಗಳು ನಡೆಯುತ್ತಿವೆ.

ಇದೆಲ್ಲವನ್ನೂ ಅವಲೋಕಿಸಿದಾಗ ಕೇರಳಕ್ಕೆ ಬಂದ ಶಾಲಿಯಾ ಸಮುದಾಯವು ಒಂದೇ ಆಗಿದ್ದು, ಕ್ರಮೇಣ ಇವರು ತಮ್ಮಲ್ಲೇ ಉಂಟಾದ ಯಾವುದೋ ವಿವಾದದಿಂದ ಎರಡು ಭಾಗಗಳಾಗಿ ವಿಭಜನೆಯಾಗಿರುವ ಸಾಧ್ಯತೆಯಿದೆ ಅನ್ನಿಸುತ್ತದೆ. ತಮಿಳುನಾಡಿನ ಕಡೆಯಿಂದ ಬಂದಿರುವುದರಿಂದ ಅಲ್ಲಿ ನಡೆದ ಎಡಂಗೈ ಬಲಂಗೈ ವಿವಾದಗಳ ಪ್ರಭಾವವು ಇವರಲ್ಲಿ ಇಂತಹ ವಿಭಜನೆಗೆ ಕಾರಣವಾಗಿರಬಹುದು. ಒಂದೇ ಕುಟುಂಬವು ಎರಡು ದೈವಗಳನ್ನು ಆರಾಧಿಸುವಂತೆ ಇವರೂ ಒಂದೇ ಕುಟುಂಬದವರಾಗಿದ್ದು ಕೆಲವರು ದೇವಿಯನ್ನೂ ಕೆಲವರು ಗಣಪತಿಯನ್ನೂ ಆರಾಧಿಸುತ್ತಿದ್ದರು. ಕ್ರಮೇಣ ಇವರ ನಡುವಿನ ವಿಭಜನಾ ರೇಖೆ ಸ್ಪಷ್ಟವಾಗುತ್ತಾ ಇವರು ಪ್ರತ್ಯೇಕ ಪ್ರತ್ಯೇಕವಾಗಿಯೇ ಉಳಿದರು. ಇತ್ತೀಚೆಗೆ ಪುನಃ ಒಂದಾಗುತ್ತಿರುವುದು ಸಂತಸದ ವಿಚಾರ.

**ಶುದ್ಧಂ ಮಾರಿಯವರ್ :** 'ಇವರನ್ನು ಶುದ್ಧ ಬದಲಾದವರು' ಅನ್ನುತ್ತಾರೆ. ಎಡಂಗ ಶಾಲಿಯೂ ಸಮುದಾಯಕ ಒಳಗೇ ಇರುವ ಇನ್ನೊಂದು ಗುಂಪು ಇದು. ಯಾವುದೋ ಕಾಲದಲ್ಲಿ ಯಾವುದೋ ಕಾರಣಕ್ಕೆ ಸಮಾಜದಿಂದ ದೂರಕ್ಕಿಡಲ್ಪಟ್ಟ ಕುಟುಂಬಗಳ ಸಂತತಿ ಇವರಾಗಿರಬಹುದು ಎಂದು ಊಹಿಸಲಾಗುತ್ತದೆ. ಇವರ ಆಚಾರ, ವಿಚಾರಗಳೆಲ್ಲವೂ ಎಡಂಗ ಶಾಲಿಯರಂತೇ ಇದೆ.

**ತಳಿಕ್ಕುನ್ನವರ್ ಅಥವಾ ಮರ್ಯಾಧಿಕಾರ್ :** ಇವರು ಶುದ್ಧ ಮಾಡುವವರು. ಎಡಂಗ ಸಮಾಜದ ಒಳಗೇ ಇದ್ದು ಶುದ್ಧ ಮಾಡುವುದಕ್ಕಾಗಿ ಮೀಸಲಾಗಿಟ್ಟ ಇನ್ನೊಂದು ಪಂಗಡ. ಇವರ ಮುಖ್ಯ ಕೆಲಸ ಸಮಾಜಕ್ಕೆ ಮೈಲಿಗೆಯಾದಾಗ ಶುದ್ಧ ಗೊಳಿಸುವುದು. ಇವರು ತಂದ ನೀರನ್ನು ಚಿಮುಕಿಸಿದರೆ (ತಳಿಕ್ಕುಗ) ಎಲ್ಲವೂ ಶುದ್ಧವಾಯಿತು ಎಂದು ಲೆಕ್ಕ. ಅಂತಹ ವಿಶೇಷ ಮರ್ಯಾದೆಯು ಆ ಕುಟುಂಬಕ್ಕೆ ಸಲ್ಲುತ್ತದೆ. ಇವರನ್ನು ದಕ್ಷಿಣದಲ್ಲಿ 'ಪೊದುವಾಸ್ಸಾರ್' ಎಂದು ಕರೆಯುತ್ತಾರೆ.

ಮೇಲೆ ಹೇಳಿದ ಶಾಲಿಯರ ನಾಲ್ಕು ಪಂಗಡಗಳಲ್ಲಿ ಒಂದು ಕಾಲದಲ್ಲಿ ಅವರೊಳಗೇ ಶ್ರೇಣೀಕರಣದಲ್ಲಿ ನಾನು ಮೇಲು ತಾನು ಮೇಲು ಎಂಬ ವಿವಾದಗಳು ನಡೆಯುತ್ತಾ ಇದ್ದವು. ಕಾಸರಗೋಡಿನ ಭಾಗದಲ್ಲಿ ಎಡಂಗ ಶಾಲಿಯರೇ ಅತಿಯಾಗಿರುವುದರಿಂದ ದಕ್ಷಿಣದಿಂದ ಬಂದ ಬಲಂಗರಿಗೆ ಇಲ್ಲಿ ಸ್ಥಾನವಿರಲಿಲ್ಲ. ಅವರ ಎಂಜಲು ತಟ್ಟೆಯನ್ನು ಇವರು ತೊಳೆಯುತ್ತಲೂ ಇರಲಿಲ್ಲ. ಹಾಗೇ ಇಲ್ಲಿನವರು ಅಲ್ಲಿ ಹೋದರೆ, ಇವರ ಎಂಜಲು ತಟ್ಟೆಯನ್ನು ಅವರು ತೊಳೆಯುವ ಸಂಪ್ರದಾಯವಿರಲಿಲ್ಲ.

## ೨. ಇಲ್ಲಂ (ಗೋತ್ರ) ಹಾಗೂ ತರವಾಡುಗಳು

**ಇಲ್ಲಂ ಅಥವಾ ಗೋತ್ರ :** 'ಇಲ್ಲ್' ಎಂದರೆ ಮನೆ ಎಂದರ್ಥ. ತುಳುವಿನಲ್ಲಿ ಮನೆಯನ್ನು 'ಇಲ್ಲ್' ಎನ್ನುತ್ತಾರೆ. ಕೊಡಗಿನಲ್ಲೂ 'ಇಲ್ಲ್' ಎನ್ನುವ ಪದ ಪ್ರಯೋಗವಿದೆ. ಅದರಿಂದಲೇ 'ಇಲ್ಲಂ' ಎಂಬ ಪದವು ಸೃಷ್ಟಿಯಾಗಿರಬೇಕು. ಒಂದೇ ಮನೆಗೆ ಸೇರಿದವರು ಎಂಬ ಅರ್ಥದಲ್ಲಿ ಈ ಪದ ಬಳಕೆಯಾಗಿದೆ. ತುಳುವಿನಲ್ಲಿ ಗೋತ್ರಗಳನ್ನು "ಬರಿ" ಎನ್ನುತ್ತಾರೆ. "ಬರಿ" ಎಂದರೆ 'ಬದಿ' (Side) ಅಥವಾ ದಿಕ್ಕು ಎಂದರ್ಥ. ಒಂದೇ ಬದಿಗೆ (ಗುಂಪಿಗೆ) ಸೇರಿದವರು ಎನ್ನುವ ಅರ್ಥದಲ್ಲಿ ಈ ಪದ ಬಳಕೆಯಾಗಿದೆ. ಊರಿನ ಒಂದೇ 'ಬದಿ' (ದಿಕ್ಕು) ಯಲ್ಲಿದ್ದ ಕುಟುಂಬವೊಂದು ತಲೆ ತಲಾಂತರದವರೆಗೆ ಒಡೆಯುತ್ತಲೇ ಹೋಗಿ, ಆ ಕುಟುಂಬಕ್ಕೆ ಸೇರಿದವರು ಹಲವೆಡೆ ಹಂಚಿಹೋಗುತ್ತಾರೆ. ಆಗ ಆ ಕುಟುಂಬವನ್ನು ಆ ಮನೆಯಿರುವ ಆ ಮನೆಯಿರುವ 'ಬದಿ' (ದಿಕ್ಕು)ಯ ಅಥವಾ ಊರಿನ ಹೆಸರಿನಿಂದ ಕರೆಯುತ್ತಾರೆ. ಹೀಗೆ 'ಇಲ್ಲಂ' ಅಥವಾ 'ಬರಿ'ಗೆ ಹೆಸರು ಹುಟ್ಟುತ್ತದೆ. ಆಗ ಮೂಲ ಕುಟುಂಬದ ಮನೆಯನ್ನು 'ತರವಾಡ್' ಎಂದು ಕರೆಯುತ್ತಾರೆ. 'ತರವಾಡ್' ಎಂದರೆ ಕುಟುಂಬದ ಮನೆ ಎಂದರ್ಥ.

ಪ್ರಾಚೀನ ಕಾಲದಲ್ಲಿ ಪ್ರತೀ ಊರುಗಳಲ್ಲೂ ಮನೆಗಳು ಬಿಡಿಬಿಡಿಯಾಗಿದ್ದವು. ಊರಿನ ಒಂದೊಂದು ಮೂಲೆಯಲ್ಲಿ ಇರುವ ಮನೆಯವರನ್ನು ಆ ಬದಿಯಲ್ಲಿರುವವರು ಎಂದು ಗುರುತಿಸಿ "ಬರಿ" ಎಂದು ತುಳುವರು ಹೇಳಿದರೆ 'ಬದಿ'ಯ ಮನೆಯ ಕುಟುಂಬದವರೆಲ್ಲರೂ 'ಒಂದೇ ಬದಿಯ ಮನೆಯವರು' ಎಂದರೆ 'ಒಂದೇ ಬರಿ' ಎಂದು ಕರೆಯಲ್ಪಟ್ಟರು. ಕೆಲವೆಡೆ 'ಬರಿ' ಎನ್ನುವುದನ್ನು 'ಬಳಿ' ಎಂದೂ ಹೇಳುತ್ತಾರೆ. ಇದನ್ನೇ ಮಲಯಾಳಂನಲ್ಲಿ 'ವಳಿ' ಅಥವಾ 'ವರಿ' ಎಂದೂ ಹೇಳುತ್ತಾರೆ. ಇದು ಬಹುಶಃ ತಳಿ (ವಂಶ, ಕುಲ) ಎನ್ನುವ ಪದದಿಂದ ಬಂದಿರಬಹುದು.

ಮಲಯಾಳದಲ್ಲಿ 'ಇಲ್ಲಂ' ಎನ್ನುವ ಪದವು ನಂಬೂದಿರಿ ಬ್ರಾಹ್ಮಣರ ಪಿತೃಪ್ರಧಾನ ವಂಶದಿಂದ ಬಂದುದು. (ನಂಬೂದಿರಿಗಳ ಮನೆಗಳನ್ನು 'ಇಲ್ಲಂ' ಎಂದು ಕರೆಯುತ್ತಾರೆ.) ಅದರಿಂದಲೇ ಒಂದು 'ಇಲ್ಲಂ'ಗೆ ಸೇರಿದವರು ಆಯಾ 'ಇಲ್ಲಂ' ನವರಾಗುತ್ತಿದ್ದರು. ತಮಿಳು, ತೆಲುಗು, ಮಲಯಾಳ, ತುಳು ಈ ಎಲ್ಲಾ ದ್ರಾವಿಡ ಭಾಷೆಗಳಲ್ಲೂ 'ಇಲ್ಲ್' ಅಥವಾ 'ಇಲ್ಲಮ್' ಎಂದು ಹೇಳಿದರೆ 'ಮನೆ' ಎಂದೇ ಅರ್ಥ. ಪ್ರಾಚೀನ ಕಾಲದ ಅವಿಭಕ್ತ ಕುಟುಂಬಗಳಲ್ಲಿ ಒಂದು ಮನೆಯವರೇ ಒಂದು ಕುಟುಂಬದವರಾಗಿರುತ್ತಿದ್ದರು. ಕ್ರಮೇಣ ಆ ಮನೆಯವರು ಬೇರೆಡೆ ಹೋದರೂ ಆ ಮನೆಯ ಸಂಬಂಧವನ್ನು ಅವರು ಕಳಚಿಕೊಳ್ಳುವ ಹಾಗಿರಲಿಲ್ಲ. ಅವರು ಎಲ್ಲಿದ್ದರೂ ಆ 'ಇಲ್ಲಂ'ಗೆ ಸೇರಿದವರಾಗುತ್ತಿದ್ದರು. ಹೀಗೆ 'ಇಲ್ಲಂ' ಮೊದಲು ಮನೆಯಿಂದ ಪ್ರಾರಂಭವಾಗಿ ಕ್ರಮೇಣ ಒಂದು ಸಮೂಹಕ್ಕೆ ಅನ್ವಯಿಸಲ್ಪಟ್ಟಿತು. ಈ ಸಂದರ್ಭದಲ್ಲಿ 'ತಂದೆ' ಅಥವಾ 'ತಾಯಿ' 'ಇಲ್ಲಂ'ನ ಮೂಲವ್ಯಕ್ತಿಗಳಾಗಿ ಪ್ರಾಧಾನ್ಯತೆಯನ್ನು ಪಡೆದು ಕೊಂಡರು. ಮಕ್ಕಳು ಇಬ್ಬರ ರಕ್ತವನ್ನು ಹಂಚಿಕೊಂಡು ಹುಟ್ಟಿದರೂ, ಕುಟುಂಬದ ಮೂಲವ್ಯಕ್ತಿಯಾಗಿ ತಾಯಿಗೆ ಪ್ರಾಧಾನ್ಯತೆ ಇದ್ದರೆ 'ಇಲ್ಲಂ' ಮಾತೃಮೂಲೀಯವಾಗಿ ಹರಿದು ಬರುತ್ತದೆ. ಕುಟುಂಬದ ಮೂಲವ್ಯಕ್ತಿಯಾಗಿ 'ತಂದೆ'ಗೆ ಪ್ರಾಧಾನ್ಯತೆ ಇದ್ದರೆ 'ಪಿತೃಮೂಲೀಯ' ವಾಗಿ ಹರಿದು ಬರುತ್ತದೆ.

'ಇಲ್ಲಂ' ಎನ್ನುವ ಪದವು 'ಗೋತ್ರ' ಎನ್ನುವ ಪದಕ್ಕೆ ಸಂವಾದಿಯಾಗಿ ಬಳಕೆಯಲ್ಲಿದೆ. ಗೋತ್ರ ಎಂದರೆ 'ವಂಶ' ಎಂಬ ಅರ್ಥವೂ ಇದೆ. ವೈದಿಕ ಸಂಸ್ಕೃತಿಯಲ್ಲಿ ಒಂದೊಂದು ಕುಟಂಬಕ್ಕೂ ಋಷಿಗಳೇ ಮೂಲವಾಗಿದ್ದಾರೆ. ಆದುದರಿಂದ ಕುಟುಂಬ ಅಥವಾ 'ಗೋತ್ರ'ದ ಹೆಸರುಗಳು ಅಲ್ಲಿ ಪ್ರಾಚೀನ ಕಾಲದ ಋಷಿಗಳ ಹೆಸರುಗಳಾಗಿವೆ. ಬ್ರಾಹ್ಮಣತ್ವದ ಸಂಕೇತವಾಗಿರುವ ಈ ಋಷಿಗಳ ಹೆಸರುಗಳನ್ನೇ ಕ್ರಮೇಣ ಇತರರೂ ಅನುಸರಿಸತೊಡಗಿದರು. 'ಕ್ಷತ್ರಿಯ, ವೈಶ್ಯ' ವರ್ಗದವರೂ ತಮ್ಮ 'ಗೋತ್ರ' ಗಳಿಗೂ ಋಷಿಗಳ ಹೆಸರನ್ನೇ ಇಟ್ಟುಕೊಂಡರು. 'ಶೂದ್ರ' ವರ್ಗ ತಮ್ಮ ರಕ್ತ ಸಂಬಂಧದ ಗೋತ್ರಗಳನ್ನು ಗುರುತಿಸುವ ರೀತಿ ಇದಕ್ಕಿಂತ ಭಿನ್ನವಾಗಿ ಕಂಡುಬರುತ್ತದೆ. ಹೆಚ್ಚಿನ ಕಡೆಯಲ್ಲಿ ಪ್ರದೇಶದ ಹೆಸರುಗಳೇ ಗೋತ್ರದ ಹೆಸರುಗಳಾಗಿರುವುದೂ ಇದೆ. ಇನ್ನು ಕೆಲವೊಮ್ಮೆ ಯಾವುದೇ ಅರ್ಥವೂ ಇಲ್ಲದ ಹೆಸರುಗಳು ಗೋತ್ರದ ಹೆಸರುಗಳಾಗಿವೆ. 'ಗೋತ್ರ'ಗಳು ಹುಟ್ಟುವಾಗ ಅರ್ಥಪೂರ್ಣವಾಗಿಯೇ ಹೆಸರುಗಳನ್ನು ಪಡೆದುಕೊಂಡಿದ್ದರೂ, ಕ್ರಮೇಣ ಬಾಯಿಯಿಂದ ಬಾಯಿಗೆ ಬರುತ್ತಾ ಆ ಹೆಸರು 'ವಿಕೃತ'ವಾಗಿ ಮೂಲದ ಅರ್ಥವೇ ಮಾಯವಾಗಿರಬಹುದು. ಕೆಲವು ಸಮುದಾಯದವರ ಕೆಲವು 'ಗೋತ್ರ'ಗಳು ಅವರ ವೃತ್ತಿಗನುಗುಣವಾಗಿ ಹೆಸರುಗಳನ್ನು ಪಡೆದುಕೊಳ್ಳುವುದೂ ಕಂಡು ಬರುತ್ತದೆ. ಆದುದರಿಂದ ಕೆಳವರ್ಗದ 'ಗೋತ್ರ'ಗಳ ಹೆಸರಿನ ಮೂಲದ ಹುಡುಕಾಟ ಸ್ವಲ್ಪ ಮಟ್ಟಿಗೆ ಕ್ಲಿಷ್ಟಕರ ಎಂದೇ ಹೇಳಬಹುದು. ತುಳುನಾಡಿನ ಕೆಲವು ಸಮುದಾಯಗಳಲ್ಲಿ ಇತರ ಸಮುದಾಯದ ಹೆಸರು ಗೋತ್ರದ ಹೆಸರಾಗಿರುವುದು ಕಂಡು ಬರುತ್ತದೆ. ಉದಾ. : 'ಸಾಲಿಯಾನ್' ಅಥವಾ 'ಚಾಲ್ಯಣ್ಣ' ಎನ್ನುವ ನೇಕಾರರ ಸಮುದಾಯದ ಹೆಸರಿನ ಗೋತ್ರ ಅಥವಾ 'ಬರಿ' ಇಲ್ಲಿನ ಹೆಚ್ಚಿನ ಸಮುದಾಯದಲ್ಲಿ ಇದೆ. ಹಾಗೇ 'ಕುಕ್ಯಣ್ಣ ಬರಿ' ಎಂಬ ('ಕುಕ್ಕು' ಎಂದರೆ ಮಾವು ಎಂದರ್ಥ) ಮರದ ಹೆಸರಿನ ಆ ಗೋತ್ರವು ಹೆಚ್ಚಿನ ಸಮುದಾಯದಲ್ಲಿ ಕಂಡು ಬರುತ್ತದೆ. ಸಮುದಾಯದೊಳಗಿನ ಪರಸ್ಪರ ಪ್ರಭಾವವೇ ಇದಕ್ಕೆ ಕಾರಣವಾಗಿರಬಹುದು.

ವಂಶದ ಮೂಲ ಪ್ರವಾಹದಿಂದ ಕವಲಾಗಿ ಒಡೆದು ಬೇರ್ಪಟ್ಟು ಬಂದು ಇನ್ನೊಂದೆಡೆ ನೆಲಸಿದ ಸಮುದಾಯವು ತನ್ನ ಮೂಲ ಸಂಸ್ಕೃತಿಯನ್ನು ಮರೆಯುವುದರೊಂದಿಗೆ, ತನ್ನ 'ಗೋತ್ರ'ವನ್ನು ಮರೆತು ಬಿಡುತ್ತದೆ. ನೆಲಸಿದ ಪ್ರದೇಶದಲ್ಲಿ ಕ್ರಮೇಣ ಕುಟುಂಬವು ಬೆಳೆದು ಕುಟುಂಬದವರ ಸಂಖ್ಯೆಯು ಜಾಸ್ತಿಯಾಗಿ ಒಂದೊಂದು ಪ್ರದೇಶಕ್ಕೂ ವಿಭಜಿತವಾಗಿ ಹೋಗಿ ನೆಲಸಿದಾಗ, ಆ ಕುಟುಂಬದವರನ್ನು ಆ ಪ್ರದೇಶಕ್ಕೆ ಇರುವ ಹೆಸರಿನಿಂದ ಗುರುತಿಸಲು ಆರಂಭವಾಯಿತು. ಈ ಒನ್ನೆಲೆಯಿಂದ ಬೇರೆಡೆಯಿಂದ ವಲಸೆ ಬಂದು ಕೇರಳದಲ್ಲಿ ನೆಲಸಿದ ಶಾಲಿಯಾ ಸಮುದಾಯದ ಒಂದು ಭಾಗವು ಈ ರೀತಿಯ ವಿಭಜನೆಗೆ ಪ್ರಾಶಸ್ತ್ಯವನ್ನು ಕೊಡದೆ ತಾವೆಲ್ಲಾ ಒಂದೇ ಸಮುದಾಯದವರು ಎಂದು ಮಾತ್ರ ಗುರುತಿಸಿಕೊಂಡು 'ಗೋತ್ರಂ'ನ್ನು ಸಂಪೂರ್ಣ ಮರೆತೇ ಬಿಟ್ಟರು. ಆದುದರಿಂದಲೇ ಬಲಂಗ ಶಾಲಿಯಾ ಸಮುದಾಯಕ್ಕೆ 'ಇಲ್ಲಂ' ಇಲ್ಲ ಎನ್ನುತ್ತಾರೆ. ರಕ್ತಸಂಬಂಧಿಗಳ ಮಧ್ಯೆ ಮದುವೆಯಾಗಬಾರದು' ಎನ್ನುವ ಕಾರಣಕ್ಕಾಗಿ ಆದಷ್ಟೂ ದೂರದ ಸಂಬಂಧದಲ್ಲಿ ವಿವಾಹವು ನಡೆಯುತ್ತದೆ. (ಉದಾಹರಣೆಗೆ ನಾಲ್ಕೈದು ತಲೆಮಾರಿನ ಹಿಂದಿನ ಕುಟುಂಬದವರೊಂದಿಗೆ) ಆದರೆ ಉತ್ತರ ಕೇರಳದ ಎಡಂಗ ಶಾಲಿಯರು ಇಲ್ಲಿನ ಇತರ ಸಮುದಾಯದವರ ಪ್ರೇರಣೆಯಿಂದ ಅವರಂತೇ ತಮ್ಮಲ್ಲೂ 'ಇಲ್ಲಂ'ನ್ನು ಸೃಷ್ಟಿಸಿಕೊಂಡರು. 'ಮಾತೃಮೂಲೀಯ'ವಾಗಿ 'ಇಲ್ಲಂ'ನ ಹೆಸರುಗಳು ಇವರಲ್ಲಿ ರೂಢಿಗೆ ಬಂತು. ಅಂದರೆ, ತಾಯಿಯ 'ಇಲ್ಲಂ'ನ ಹೆಸರೇ ಮಕ್ಕಳ ಇಲ್ಲಂನದ್ದೂ ಆಗಿರುತ್ತದೆ.ಯು ಅದನ್ನು ಎಷ್ಟು ವಿವರವಾಗಿ

ಪಾಲಿಸುತ್ತಾರೆಂದರೆ, ಎಷ್ಟೋ ತಲೆಮಾರುಗಳು ಕಳೆದುಹೋದರೂ ತಲೆತಲಾಂತರದವರೆಗೆ 'ಹೆಣ್ಣು ಮಕ್ಕಳ' ಕುಟುಂಬದವರಿಗೆ ಅದೇ 'ಇಲ್ಲಂ'ನ ಹೆಸರು ಬರುತ್ತದೆ. ವಿವಾಹದ ಸಮಯದಲ್ಲಿ 'ಪ್ರಸ್ತಾವನೆ'ಯನ್ನು ಮಾಡುವಾಗಲೇ ಮೊದಲು 'ಹುಡುಗ ಮತ್ತು ಹುಡುಗಿ'ಯ 'ಇಲ್ಲಂ'ನ್ನು ಕೇಳುತ್ತಾರೆ. ಹಿಂದಿನ ಕಾಲದಲ್ಲಿ ಒಂದೇ 'ಇಲ್ಲಂ'ನವರು ವಿವಾಹವಾಗುವುದನ್ನು ಅಕ್ಷಮ್ಯ ಅಪರಾಧವೆಂದು ಪರಿಗಣಿಸಲಾಗುತ್ತಿತ್ತು. ಅಂತಹ ವಿವಾಹವನ್ನು ನಡೆಸಿದವರನ್ನು 'ಕ್ಷೇತ್ರದ ನಗರಂ'ನಿಂದಲೇ ಹೊರಗಿಡಲಾಗುತ್ತಿತ್ತು. ಇದಕ್ಕೆ ಅಪವಾದವೋ ಎನ್ನುವಂತೆ ಇತ್ತೀಚೆಗೆ ಕುಟುಂಬ ಸಂಬಂಧವು ತುಂಬಾ ದೂರವಾಯಿತು ಎಂದಾದರೆ, ಬೇರೆ ನಿರ್ವಾಹವೇ ಇಲ್ಲ' ಎಂದಾಗ 'ನಗರಂ'ನ ಅಚ್ಚಮ್ಮಾರರ ಅನುಮತಿಯನ್ನು ಪಡೆದು 'ಇಲ್ಲಂ ಮುರಿಯುವುದೂ' ಇದೆ.

'ಗೋತ್ರ' ಅಥವಾ 'ಇಲ್ಲಂ'ನ ಪರಿಕಲ್ಪನೆ ಬಂದಿರುವುದೇ ರಕ್ತಸಂಬಂಧದಲ್ಲಿ ವಿವಾಹವಾಗಬಾರದು ಎನ್ನುವ ವೈಜ್ಞಾನಿಕ ಕಾರಣಕ್ಕಾಗಿ ಪಾಶ್ಚಾತ್ಯರಲ್ಲೂ ಇದು ರೂಢಿಯಲ್ಲಿದೆ. ರಕ್ತಸಂಬಂಧದಲ್ಲಿ ನಡೆಯುವ ಮದುವೆಯಂತಹ ಸಂಬಂಧವನ್ನು ರೋಮನ್ನರು ಬಹಳ ಹಿಂದೆಯೇ ವಿರೋಧಿಸುತ್ತಿದ್ದರು. ಆದರೆ ಪುರುಷ ಪ್ರಧಾನವಾದ ಈ ಸಮಾಜವು ಹೆಣ್ಣನ್ನು ಮದುವೆ ಮಾಡಿಕೊಟ್ಟ ಮೇಲೆ "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂದು ಪರಿಗಣಿಸುತ್ತದೆ. (ಈ ವಿಷಯದಲ್ಲಿ ಮಾತೃಮೂಲೀಯ ವ್ಯವಸ್ಥೆಯೂ ಹೊರತಾಗುವುದಿಲ್ಲ.) ಇಲ್ಲಿ 'ಕುಲ' ಎನ್ನುವುದನ್ನು 'ಕುಟುಂಬ' ಎಂದು ಅರ್ಥವಿಸಲಾಗುತ್ತದೆ. ವಿವಾಹವಾದ ಮೇಲೆ ತನ್ನ ತವರಿನವರ ಕುಟುಂಬಕ್ಕೆ ಹೆಣ್ಣು ಹೊರಗಿನವಳಾದುದರಿಂದ ಅವಳ ಸೋದರನ ಮಕ್ಕಳೊಂದಿಗೆ ಅವಳ ಮಕ್ಕಳ ವಿವಾಹವನ್ನು ನಡೆಸಬಹುದು. ಇದು ಪಿತೃಮೂಲೀಯ ವ್ಯವಸ್ಥೆಗೂ, ಮಾತೃಮೂಲೀಯ ವ್ಯವಸ್ಥೆಗೂ ಒಪ್ಪಿತವಾದುದು. ಪಿತೃಮೂಲೀಯವಾದರೆ ಅವಳ ಮಕ್ಕಳಿಗೆ ಅವರ ತಂದೆಯ ಗೋತ್ರ ಬರುವುದರಿಂದ ಅವಳ ತವರುಮನೆಯವ ಗೋತ್ರಕ್ಕಿಂತ ಅದು ಭಿನ್ನವಾಗಿರುತ್ತದೆ. ಕೆಲವು ಪಿತೃಮೂಲೀಯ ಸಮುದಾಯದಲ್ಲಿ ಸೋದರ ಮಾವನೇ ಸೊಸೆಯನ್ನು ವಿವಾಹವಾಗುವ ಸಂಪ್ರದಾಯವಿರುವುದು ಇದೇ ಕಾರಣದಿಂದ ಎನ್ನಬಹುದು. ಮಾತೃಮೂಲೀಯವಾದರೆ ಅವಳ ಸೋದರ ಮಾತ್ರ ಆಕೆಯ ಮತ್ತು ಮಕ್ಕಳ ವಂಶದವರಾಗಿರುತ್ತಾನೆ. ಅವನ ಮಕ್ಕಳು ಅವನ ಹೆಂಡತಿಯ 'ಗೋತ್ರದವರು ಎಂದರೆ 'ಅನ್ಯಗೋತ್ರ'ದವರು ಎಂದು ಪರಿಗಣಿಸಲ್ಪಡುತ್ತದೆ. ಸಂಬಂಧದೊಳಗಿನ ಇಂತಹ ವಿವಾಹವು ಒಂದು ರೀತಿಯಲ್ಲಿ ರಕ್ತಸಂಬಂಧವನ್ನು ಉಳಿಸಿಕೊಳ್ಳುವ ಹುನ್ನಾರವೇ ಆಗಿದೆ' ಎನ್ನಬಹುದು. ೧೯೫೫ರ ಹಿಂದೂ ವಿವಾಹ ಕಾಯಿದೆಯನ್ವಯ ತಂದೆಯ ಕಡೆಯಿಂದ ಮತ್ತು ತಾಯಿಯ ಕಡೆಯಿಂದ ಮೂರು ತಲೆಮಾರುಗಳಲ್ಲಿ ವಿವಾಹ ನಿಷೇಧಿಸಲಾಗಿದೆ. (ಭಾರತದ ಗಜೆಟಿಯರ್ : ೧೯೬೮) ಆದರೆ ಈ ಕಾಯಿದೆಯನ್ನು ಪಾಲಿಸುವವರು ವಿರಳವಾಗಿದ್ದಾರೆ.

**ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಶಾಲಿಯಾ ಸಮುದಾಯದಲ್ಲಿರುವ ಇಲ್ಲಂಗಳು ಹೆಸರುಗಳು :-**

ಅಂಜಾರಿ, ಬಡಿಯೂರಿ (ಬಿಡಿಯಾರ್) ಕೊಂಕಣಿ, ತಾರ್‌ರ್‌ಟಿ, ಪೊರಂಡ, ಕೂವಕ್ಕಾಡ್, ಮಾಂಗಿ, ಚೋಯಿಯನಾಂಡಿ, ಕೇಕದತ್ (ಕೇಕದ್), ಪಡಿಞ್ಞಾರ್, ಕೊಟ್ಟಾರಿಲ್ಲಂ, ಕೊಟ್ಟುಂವೀಡುಂ, ನರಪಟ್ಟಿ, ಪುದುಕುಟಿ, ತೊರಪ್ಪನ್ನಾರ್, ಚಂದಾರಿ, ಕುವರ್‌ಟ್ ; ಞಾಂಡಮಾರ್.

ಈ 'ಇಲ್ಲಂ'ಗಳ ಹೆಸರುಗಳಲ್ಲಿ ಹೆಚ್ಚಿನವು ಪ್ರಾದೇಶಿಕ : ಉಳಿದವು ವೃತ್ತಿಗೆ ಹಾಗೂ ಜಾತಿಗೆ ಸಂಬಂಧಿಸಿದವುಗಳಾಗಿವೆ. ಕೇಕದ್ (ಪೂರ್ವ), ಪಡಿಞ್ಞಾರ್ (ಪಶ್ಚಿಮ) ಎಂಬುದು, ದಿಕ್ಕಿಗೆ

ಸಂಬಂಧಿಸಿದವುಗಳಾಗಿವೆ. ಮೊರಂಡ ಎಂದರೆ 'ಕಾಂಡ' ಎಂಬರ್ಥವಿರುವ ಕಾರಣ, ಅದುವೇ ಮೂಲದ ಇಲ್ಲಂ ಎಂದೂ ಅದರಿಂದಲೇ ಉಳಿದವುಗಳು ಹುಟ್ಟಿಕೊಂಡವೆಂದೂ ಅಭಿಪ್ರಾಯಪಡುತ್ತಾರೆ. ಪುದುಕುಡಿ ಅಥವಾ ಪುತ್ತನ್ (ಹೊಸತು) ಕುಡಿ ಎಂದರೆ 'ಹೊಸಕುಡಿ' ನವೀನವಾಗಿ ಹುಟ್ಟಿಕೊಂಡುದು ಎಂಬ ಅಭಿಪ್ರಾಯವಿದೆ. ಮಾಂಗಿ (ಮಾವು) ಎಂಬುದು ತುಳುವಿನ 'ಕುಕ್ಕಾನ್'ಗೆ ಸಮಾನವಾಗಿದೆ.

'ಆರವಕಾಶಿ ಮುಪ್ಪತ್ತಿರೆಂಡ್ ಇಲ್ಲಂ' - ಎಂದು ದೈವದ ನುಡಿಗಟ್ಟೊಂದು ಹೇಳುತ್ತದೆ. ಆದರೆ 'ಮೂವತ್ತೆರಡು ಇಲ್ಲಂ'ಗಳ ಹೆಸರುಗಳು ಲಭ್ಯವಿಲ್ಲ. ಹಾಗೇ ಇನ್ನು ಕೆಲವರು ಶಾಲಿಯಾ ಸಮುದಾಯದಲ್ಲಿ "ಹದಿನಾಲ್ಕು ಇಲ್ಲಂ"ಗಳು ಎಂದೂ ಹೇಳುತ್ತಾರೆ. ಆದರೆ ದೊರೆತಿರುವ ಇಲ್ಲಂಗಳ ಸಂಖ್ಯೆ ಹದಿನೆಂಟು ಇದೆ. ಆದುದರಿಂದ ಪಟ್ಟುವಂನಿಂದ ಪಣಂಬೂರುವರೆಗಿನ 'ಇಲ್ಲಂ'ಗಳ ಸಂಖ್ಯೆಯನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಚಂದ್ರಗಿರಿಯ ದಕ್ಷಿಣದಲ್ಲಿ ಇರುವ 'ಇಲ್ಲಂ'ಗಳ ಹೆಸರುಗಳು ಉತ್ತರದಲ್ಲಿ ಲಭ್ಯವಿಲ್ಲ. ಕೆಲವು 'ಇಲ್ಲಂ'ಗಳ ಹಸರು ತುಳು ಪ್ರಭಾವದಿಂದ ಬದಲಾಗಿದೆ. ಉದಾ : 'ಬಡಿಯಾರಿ'ಯನ್ನು 'ಸಾಲಿಯಾನ್' ಎನ್ನುತ್ತಾರೆ. 'ಚೆಂದಾರಿ, ಕೊಟ್ಟುಂವೀಡುಂ, ಕೇಕೇಇಡತ್ತ್, ನರಪ್ಪಚ್ಚಿ' ಮುಂತಾದ 'ಇಲ್ಲಂ'ಗಳು ಕಾಸರಗೋಡಿನ ಭಾಗದಲ್ಲಿ ಕಂಡುಬರುವುದಿಲ್ಲ.

ಕೆಲವು 'ಇಲ್ಲಂ'ಗಳು ಶ್ರೇಷ್ಟವೆಂದೂ, ಕೆಲವು ಕೀಳು ಎಂದೂ ಪರಿಗಣಿಸಲ್ಪಡುವುದೂ ಇದೆ ಒಂದು 'ಇಲ್ಲಂ'ನವರನ್ನು ಇನ್ನೊಂದು 'ಇಲ್ಲಂ'ನವರನ್ನು ಛೇಡಿಸುವುದೂ ಇದೆ. ಉದಾ : 'ಅಂಜಾರಿಲ್ಲಂ ಅಂಜರಿ ವೆಚ್ಚಾಲ್ ತಿನ್ನ್ ಮುಡಿಕ್ಕುಂ ಕೊಂಜಣಿಲ್ಲಂ (ಅಂಜಾರಿ 'ಇಲ್ಲಂ' ನವರು ಐದು ಅಕ್ಕಿ ಬೇಯಿಸಿದರೆ ಅದನ್ನು ಕೊಂಕಣಿ ಇಲ್ಲಂ ನವರು ತಿಂದು ಮುಗಿಸಿ ಬಿಡುತ್ತಾರೆ.) 'ಅಂಜಾರಿಲ್ಲಂ ಪಂಜಾರ ತಿನ್ನುಂಬೋಳ್ ನೋಕ್ಕಿ ನಿಲ್ಕುಂ ತಾರ್ರ್‌ಟಿ' (ಅಂಜಾರಿಲ್ಲಂ ನವರು ಸಕ್ಕರೆ ತಿನ್ನುವಾಗ 'ತಾರ್ರ್‌ಚಿ ಇಲ್ಲಂ ' ನವರು ನೋಡಿ ನಿಂತರು.) ಚಂದ್ರಗಿರಿಯ ಉತ್ತರಭಾಗದಲ್ಲಿ 'ಕೊಂಕಣೀಇಲ್ಲಂ' ಮತ್ತು 'ಅಂಜಾರಿ ಇಲ್ಲಂ'ನವರ ಸಂಖ್ಯೆ ಅಧಿಕವಿದೆ. ಕೊಂಕಣಿ ಇಲ್ಲಂ ಅತಿಶ್ರೇಷ್ಟ ಎಂದು ಪರಿಗಣಿಸಲ್ಪಟ್ಟಿದೆ. ಆದುದರಿಂದಲೇ 'ಮದುವೆ' ಯಂತಹ ಶುಭಕಾರ್ಯಗಳಲ್ಲಿ 'ಕೊಂಕಣಿ ಇಲ್ಲಂ'ನ ಹೆಂಗಸರಿಗೆ ದೀಪವನ್ನು ಹಾಗೂ 'ತಳಿಗೆ'ಯನ್ನು ಹಿಡಿಯುವ ಹಕ್ಕನ್ನು ನೀಡಲಾಗಿದೆ.

**ತರವಾಡು :** ಕುಟುಂಬದ ಮೂಲದ ಮನೆಗಳನು 'ತರವಾಡು' ಎನ್ನುತ್ತಾರೆ. ಒಂದು 'ಇಲ್ಲಂ'ಗೆ ಒಂದೇ 'ತರವಾಡು' ಎಂದೇನೂ ಇಲ್ಲ. 'ಪಟ್ಟುವಂ'ನಿಂದ ಪಣಂಬೂರುವರೆಗಿನ ಶಾಲಿಯರಲ್ಲಿ ಒಂದೊಂದು ಇಲ್ಲಂಗೂ ಹಲವು ತರವಾಡುಗಳಿವೆ. ಹೆಚ್ಚು ಕುಟುಂಬಿಕರು ಸೇರಿದಾಗ ಕೆಲವು ದೊಡ್ಡ ತರವಾಡುಗಳಾಗುತ್ತವೆ. ಕುಟುಂಬಿಕರ ಸಂಖ್ಯೆ ಕಡಿಮೆಯಾದಾಗ ಸಣ್ಣ ತರವಾಡುಗಳಾಗುತ್ತವೆ. ಆದಷ್ಟೂ ಹಳೆಯ ಕಾಲದ ಹಿರಿಯರು ಇದ್ದಂತಹ ಮನೆಗಳೇ ತರವಾಡುಗಳಾಗುತ್ತವೆ. ಅಲ್ಲಿ ಒಂದು ಮನೆ, ಸ್ವಲ್ಪ ಆಸ್ತಿ ಇರುತ್ತದೆ. ಅದನ್ನು ಯಾರೂ ಪಾಲು ಮಾಡಿಕೊಳ್ಳುವುದಿಲ್ಲ. ಕೆಲವರು ಅಲ್ಲಿ ಇದ್ದು 'ಉಪಭೋಗ' ಮಾಡಿಕೊಳ್ಳುತ್ತಾರಷ್ಟೆ.

'ತರವಾಡು'ಗಳು ಕುಟುಂಬದ ಆರಾಧನಾ ಕೇಂದ್ರಗಳು. ದೈವ ಸಾನ್ನಿಧ್ಯ ವಸ್ತುಗಳಾದ ದೈವದ ಮಣೆ, ಮಂಚ, ಆಯುಧ, ಆಭರಣಗಳಿರುತ್ತವೆ. ಅದರೊಂದಿಗೆ 'ಮುಡಿಪು' ಎನ್ನುವ ತಿರುಪತಿಯ ವೆಂಕಟರಮಣನಿಗೆ ಸಂಬಂಧಪಟ್ಟ ಹಣದ ಗಂಟಿರುವ ಪೆಟ್ಟಿಗೆಯೂ ಇರುತ್ತದೆ. ಕೆಲವೆಡೆ ಮನೆಯ ಒಳಗೆ ಪ್ರತ್ಯೇಕ ಕೋಣೆಯನ್ನು

ದೈವಗಳಿಗಾಗಿ ಮೀಸಲಿಟ್ಟರೆ, ಕೆಲವೆಡೆ ಹೊರಗೆ ಪ್ರತ್ಯೇಕ ಗುಡಿಗಳನ್ನು ನಿರ್ಮಿಸಿರುವುದೂ ಇದೆ. ಇಲ್ಲಿ ವಿಗ್ರಹಗಳನ್ನು ಇರಿಸಿ ಪೂಜೆ ನಡೆಯುವುದಿಲ್ಲ. ನಿತ್ಯ ಪೂಜೆಗಳು ಇಲ್ಲಿ ನಡೆಯದಿದ್ದರೂ ದಿನಾ ದೈವಗಳಿಗೆ ದೀಪವನ್ನು ಹಚ್ಚಿಡುವ ಸಂಪ್ರದಾಯವಿದೆ. 'ಸಂಕ್ರಮಣ'ದ ದಿನಗಳಲ್ಲಿ ವಿಶೇಷ ಅಡಿಗೆ ಮಾಡಿ 'ಒಳಗೆ ಬಡಿಸುವುದು' ಎಂದು ದೈವಗಳಿಗೆ ಬಡಿಸುತ್ತಾರೆ. ಇಂತಹ ದಿನಗಳಲ್ಲಿ ದೈವದ ಸಾಮಾಗ್ರಿಗಳನ್ನು ತೊಳೆದು ಶುದ್ಧಗೊಳಿಸಿ, ದೀಪವಿಟ್ಟು, ಧೂಪವಿಕ್ಕಿ ಪ್ರಾರ್ಥಿಸುತ್ತಾರೆ.

ತರವಾಡು ದೈವಗಳಲ್ಲಿ ಬಹಳ ಪ್ರಮುಖವಾದುದು 'ಕೊರತಿ ದೈವ'. ಕೊರತಿ ಎಂದರೆ 'ಪಾರ್ವತಿ' ಎಂಬ ನಂಬಿಕೆಯಿದೆ. ಶಿವ-ಪಾರ್ವತಿಯರು ಕೊರಗ-ಕೊರತಿಯರಾಗಿ ಅವತಾರವೆತ್ತಿದರೆಂದೂ, ಮಾಂಸಾಹಾರವನ್ನು ಸೇವಿಸಬೇಕು ಎನ್ನುವ ತಮ್ಮಾಸೆಯನ್ನು ಆ ಮೂಲಕವಾಗಿ ತೀರಿಸಿಕೊಂಡರೆಂದೂ, ಆದುದರಿಂದ ಮಾತೃಪ್ರಧಾನ ಕುಟುಂಬದ ಮೂಲದೈವವಾಗಿ 'ಕೊರತಿ'ಯ ಆರಾಧನೆ ತುಳುನಾಡಿನಲ್ಲಿ ಬಂತೆಂದೂ ಹೇಳುತ್ತಾರೆ. ಕೊರತಿಯನ್ನು 'ಅಷ್ಟಭುಜೆ' ಎನ್ನುತ್ತಾರೆ. (ಅರ್ಜುನನ ತಪೋಪರೀಕ್ಷೆಗಾಗಿ ಇಂದ್ರಕೀಲ ಪರ್ವತಕ್ಕೆ ಬೇಡ-ಬೇಡಿತಿಯರಾಗಿ ಶಿವ-ಪಾರ್ವತಿಯರು ಬಂದ ಕಥೆಯೂ ಇದಕ್ಕೆ ಮೂಲವಾಗಿರಬಹುದು. ಶಿವ-ಪಾರ್ವತಿಯರು ಕೆಳವರ್ಗದ ಜನರ ದೈವವಾಗಿ ಈ ರೀತಿ ಅವತಾರವೆತ್ತುವುದು ಸಾಮಾನ್ಯ ವಿಷಯವಾಗಿದೆ. ತುಳುನಾಡಿನ ಕೆಲವೆಡೆ ಕೊರಗಜ್ಜನ ಆರಾಧನೆಯಿದೆ. ಕಳ್ಳು, ಬೀಡ (ತಾಂಬೂಲ)ಗಳನ್ನು ಇಟ್ಟು ಆತನನ್ನು ಪೂಜಿಸುವ ಪದ್ಧತಿಯಿದೆ. ಕೊರಗಜ್ಜನೇ ಶಿವನೆಂಬ ಕಲ್ಪನೆಯೂ ಇದೆ.) ಕೊರತಿ ದೈವದ ಪ್ರತೀಕವಾಗಿ 'ಕೊರತಿ ಹಲಗೆ' ಯನ್ನು ಇರಿಸಿರುತ್ತಾರೆ. ಅದರಲ್ಲಿ ಕೃಷಿಗೆ ಸಂಬಂಧಪಟ್ಟ ವಸ್ತುಗಳಾದ ಹಿಡಿಸೂಡಿ, ಕತ್ತಿ ಮೊದಲಾದ ವಸ್ತುಗಳನ್ನು ಇಟ್ಟಿರುತ್ತಾರೆ. ಕೊರತಿ 'ಕೃಷಿ ಪ್ರಧಾನಳಾದ ದೇವತೆ' ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ ಮಾತ್ರವಲ್ಲ, ಕೊರತಿ ದೈವವನ್ನು ಕಟ್ಟಿದವನು ದೈವದ ನರ್ತನದ ವೇಳೆ ಕೃಷಿ ಮಾಡುವುದನ್ನು ಅಭಿನಯಿಸಿ ತೋರಿಸುತ್ತಾನೆ.

ತರವಾಡು ಮನೆಗಳಲ್ಲಿ'ಗುಳಿಗ'ನಿಗೂ ವಿಶೇಷ ಸ್ಥಾನವಿದೆ. ಗುಳಿಗನ ಸಂಕೇತವಾಗಿ 'ತ್ರಿಶೂಲ'ವನ್ನೂ ಘಂಟಾಮಣಿಯನ್ನೂ ಹಲಗೆಯ ಮೇಲೆ ಇಟ್ಟಿರುತ್ತಾರೆ. ಸಂಕ್ರಮಣದ ದಿನಗಳಲ್ಲಿ ಗುಳಿಗನಿಗೆ 'ಕಲಶ' ವಿಡುವ ಸಂಪ್ರದಾಯವಿದೆ. ಇದು ವೈದಿಕ ಸಂಪ್ರದಾಯದ 'ಕಲಶ' ಕ್ಕಿಂತ ಭಿನ್ನವಾದುದು. ಇಲ್ಲಿ'ಅಸುರಕ್ರಿಯೆ'ಯು ಪ್ರಧಾನವಾಗಿ ಕಳ್ಳನ್ನು (ಸುರೆ, ಶೇಂದಿ) ಬಳಸುತ್ತಾರೆ. ಕಳ್ಳು ಮಾರುವ ಅಂಗಡಿಯಿಂದ ಕಳ್ಳನ್ನು ಮೊದಲು ತಂದಿಡಲಾಗುತ್ತದೆ. ಅನಂತರ ಗುಳಿಗನ ತ್ರಿಶೂಲವನ್ನು ತೆಗೆದು ಶುಚಿಗೊಳಿಸಿ ಇಡಲಾಗುತ್ತದೆ. ಕೇಪುಳದ ಹೂವನ್ನು ತಂದು ತ್ರಿಶೂಲದ ಮೇಲೆಯೂ ಸ್ವಲ್ಪ ಕಳ್ಳಿಗೂ ಹಾಕಲಾಗುತ್ತದೆ. ಅನಂತರ ಸ್ವಲ್ಪ ಕಳ್ಳನ್ನು ಕೊರತಿಯ ಹಲಗೆಯ ಮೇಲೂ ಇಡುತ್ತಾರೆ. ಅನಂತರ ನೆರೆದ ಕುಟುಂಬಿಕರು ಕೈಯಲ್ಲಿ ಅಕ್ಕಿ ಕಾಳನ್ನು ಹಿಡಿದು ಪ್ರಾರ್ಥಿಸುತ್ತಾರೆ. ಅನಂತರ ಅಕ್ಕಿ ಕಾಳನ್ನು ಹಾಕಿ ಬಾಗಿಲು ಹಾಕಲಾಗುತ್ತದೆ. ಸ್ವಲ್ಪ ಹೊತ್ತು ಕಳೆದ ಮೇಲೆ ಬಾಗಿಲು ತೆರೆದು ನೀರು ಪ್ರೋಕ್ಷಿಸಿ ಕಳ್ಳನ್ನು ಪ್ರಸಾದರೂಪವಾಗಿ ಎಲ್ಲರೂ ಸೇವಿಸುತ್ತಾರೆ. ತುಳುನಾಡಿನಲ್ಲಿ ದೈವಗಳಿಗೆ ಮದ್ಯ, ಮಾಂಸಗಳ ತಾಂತ್ರಿಕ ಪೂಜೆ ಬಹಳ ಹಿಂದಿನ ಕಾಲದಿಂದಲೂ ಪ್ರಚುರವಾಗಿತ್ತು.

ವರ್ಷಕ್ಕೊಮ್ಮೆ ತರವಾಡುಗಳಲ್ಲಿ ಕೊರತಿಗೆ ಹಾಗೂ ಸತ್ಯವಿಗೆ ಬಡಿಸುವ ಕ್ರಮವಿದೆ. ಹೆಚ್ಚಾಗಿ ಕರ್ಕಾಟಕ ತಿಂಗಳಲ್ಲಿ ಇದನ್ನು ನಡೆಸುತ್ತಾರೆ. ಕೆಲವೆಡೆ ಬೇರೆ ದಿನಗಳಲ್ಲಿ ನಡೆಯುವುದೂ ಇದೆ. ಆ ದಿನವೇ ಗುಳಿಗನಿಗೂ

ಕೋಳಿಯನ್ನು ಬಲಿ ಕೊಡಲಾಗುತ್ತದೆ. ಮುಂಜಾನೆ ಕುಟುಂಬದವರೆಲ್ಲರೂ ತರವಾಡಿನಲ್ಲಿ ಸೇರುತ್ತಾರೆ. ಕೊರತಿಗೂ ಗುಳಿಗನೂ ಬಲಿ ಕೊಡಬೇಕಾದ ಕೋಳಿಗಳನ್ನು ಸಿದ್ಧಪಡಿಸುತ್ತಾರೆ. ಕೊರತಿಗೆ ಮೊಟ್ಟೆಯಿಡದ ಕನ್ಯಾಕೋಳಿಯನ್ನೂ, ಗುಳಿಗನಿಗೆ ಹುಂಜನನ್ನೂ ತಂದು, ಕೊಕ್ಕು ಮತ್ತು ಕಾಲುಗಳನ್ನು ತೊಳೆದ ಒಂದೆಡೆ ಕಟ್ಟಿ ಹಾಕುತ್ತಾರೆ. ತರವಾಡಿನ ಕುಟುಂಬದ 'ಹಿರಿಯಾಕೆ'ಯೊಬ್ಬರು ಶುದ್ಧದಲ್ಲಿದ್ದು ಕೊರತಿಗೆ ಬಡಿಸಲಿರುವ ಅಡಿಗೆಯ ಜವಾಬ್ದಾರಿಯನ್ನು ಹೊರುತ್ತಾರೆ. ಆಕೆಯನ್ನು 'ಮೂಲ್ಯತ್ತಿ' ಎಂದು ಕರೆಯುತ್ತಾರೆ. ಆಕೆಯೊಂದಿಗೆ ಋತುಮತಿಯಾಗದ ಸಣ್ಣ ಹುಡುಗಿಯನ್ನು ಇಟ್ಟುಕೊಳ್ಳುವುದೂ ಇದೆ. ಮುಸ್ಸಂಜೆಯ ಹೊತ್ತಿನಲ್ಲಿ ಕೊರತಿ ಹಲಗೆಯ ಮುಂದೆ ಮೊಟ್ಟೆ ಇಡದ ಕನ್ಯಾಕೋಳಿಯನ್ನು ಕೊಂದು ಕೊರತಿಗೆ ಬಡಿಸುವ ಅಡಿಗೆಗೆ ತಯಾರು ಮಾಡುತ್ತಾರೆ. ರಾತ್ರಿ ಹೊತ್ತು ಬೆಲಿತ್ತಟ್ಟು (ಬಾಳೆಯ ದಿಂಡು ಹಾಗೂ ಎಳೆಯ ತೆಂಗಿನ ಗರಿಗಳಿಂದ ೫ ಅಥವಾ ೬ ಕೋನವುಳ್ಳ ಸಾಧನ. ಅದರೊಳಗೆ ಕೋಲುಬತ್ತಿಗಳನ್ನು ಇಟ್ಟಿರುತ್ತಾರೆ.) ನಿರ್ಮಾಣ ಮಾಡಿ, ಗುಳಿಗನ ಮುಂದೆ ಅದನ್ನಿಟ್ಟು ಹುಂಜದ ತಲೆಯನ್ನು ಕೊಯ್ದು ಬೆಲಿತ್ತಟ್ಟಿಗೆ ರಕ್ತವನ್ನು ಸುರಿಸುತ್ತಾರೆ. ಅನಂತರ ಅದನ್ನು ಮನೆಯಂಗಳದಿಂದ ದೂರ ಹಿತ್ತಲಲ್ಲಿ ಕೊಂಡು ಹೋಗಿ ಇಡುತ್ತಾರೆ. ಆ ಕೋಳಿಯದ್ದೂ ಪಲ್ಯ ತಯಾರಾಗುತ್ತದೆ. ಕೊರತಿಗೆ ಬಡಿಸುವ ಅಡಿಗೆಯನ್ನು ಹೊರತು ಪಡಿಸಿ, ಉಳಿದ ಅಡಿಗೆಯನ್ನು ಕುಟುಂಬಿಕರು ಮಾಡುತ್ತಾರೆ. 'ಸೌತೆಕಾಯಿಯ ಉಪ್ಪಿನಕಾಯಿ, ಮುಳ್ಳು ಮೀನಿನ ಸಾರು, ಹುಳಿ, ಅಕ್ಕಿಯ ಬೆಲ್ಲ ಹಾಕಿದ ಪಾಯಸ ಆಗಲೇಬೇಕು. ಅನ್ನಕ್ಕೆ ೧೦ ಕುಡ್ತೆ ಅಕ್ಕಿ ಹಾಕಬೇಕು ಎಂಬ ನಿಯಮವಿದೆ. ಇನ್ನು ಮಾಡಿದ ಅಡಿಗೆಯನ್ನು ಬಡಿಸುವ ಕಾರ್ಯ ನಡೆಯುತ್ತದೆ. ದೈವದ ಕೋಣೆಯಲ್ಲಿ ಹದಿನಾರು ತುದಿ ಬಾಳೆಯೆಲೆಗಳನ್ನು ಸತ್ತುಹೋದ ಹಿರಿಯರಿಗಾಗಿ ಇಟ್ಟಿರುತ್ತಾರೆ. (ಕುಟುಂಬದಲ್ಲಿ ಆ ವರ್ಷ ಯಾರಾದರೂ ಸತ್ತಿದ್ದರೆ, ಹದಿನೇಳನೆಯ ಎಲೆಯನ್ನು ಸ್ವಲ್ಪ ದೂರ ಇಟ್ಟಿರುತ್ತಾರೆ. ಹೊರಗೆ ಹಿರಿಯಾಕೆ ಸ್ತ್ರೀ ಆತನನ್ನು ಒಳಗೆ ಕರೆದಾದ ಮೇಲೆ "ನಿಮ್ಮೊಂದಿಗೆ ಆತ / ಆಕೆಯನ್ನು ಸೇರಿಸಿಕೊಳ್ಳಿ" ಎಂದು ಪ್ರಾರ್ಥಿಸಿ, ದೂರವಿಟ್ಟ ಆ ಎಲೆಯನ್ನು ಎಳೆದು ಹದಿನಾರರೊಂದಿಗೆ ಸೇರಿಸುತ್ತಾರೆ). ಕೊರತಿ ಹಲಗೆಯ ಮೇಲೆ ಅಥವಾ ಮುದೆ ಎರಡು ಬಾಳೆಯೆಲೆಗಳನ್ನು ಒಂದರ ಮೇಲೆ ಒಂದರಂತೆ ಇಡಲಾಗುತ್ತದೆ. ಅನಂತರ ಒಂದು ಅಡಿಕೆ, ಐದು ವೀಳ್ಯದೆಲೆ ಗಂಧ, ಭಸ್ಮ ಇತ್ಯಾದಿಗಳನ್ನು ಇಟ್ಟು ಕೊರತಿಗೆ ಪ್ರತ್ಯೇಕ ಬಡಿಸುತ್ತಾರೆ. ಮೀನು, ಕೋಳಿ, ತರಕಾರಿ ಪಾಯಸ (ಅಕ್ಕಿಯದ್ದು)ಗಳನ್ನು ಹದಿನಾರು ಎಲೆಗಳಿಗೆ ಬಡಿಸುತ್ತಾರೆ. ಕಳ್ಳನ್ನೂ ಇಡುತ್ತಾರೆ. ಚೊಂಬಿನಲ್ಲಿ ನೀರು ಇಡುತ್ತಾರೆ. ಆಮೇಲೆ ಎಲ್ಲರೂ ಒಟ್ಟು ಸೇರಿ ಪ್ರಾರ್ಥಿಸಿ, ಅಕ್ಕಿ ಹಾಕಿ ಬಾಗಿಲು ಮುಚ್ಚಿ ಹೊರಬರುತ್ತಾರೆ. ಸ್ವಲ್ಪ ಹೊತ್ತು ಬಿಟ್ಟು ಹಿರಿಯರ ಊಟವಾಯಿತು ಎಂದು ಬಾಗಿಲು ತೆರೆದು ತೆಂಗಿನ ಬುಡಕ್ಕೆ ಸ್ವಲ್ಪ ನೀರು ಚೆಲ್ಲುತ್ತಾರೆ. ಇದು ಹಿರಿಯರು ಕೈ ತೊಳೆಯಲು ಎಂದು ಹೇಳುತ್ತಾರೆ. ಅನಂತರ ಎಲೆಗಳನ್ನು ತೆಗೆದು, ಸೆಗಣಿ ನೀರು ಪ್ರೋಕ್ಷಿಸಿ ಶುದ್ಧ ಗೊಳಿಸಲಾಗುತ್ತದೆ. ಆ ಹದಿನಾರು ಎಲೆಗಳ ಅನ್ನವನ್ನು ಮಕ್ಕಳಿಗೆ ನೀಡುತ್ತಾರೆ.

ಮರುದಿನ ಮುಂಜಾನೆ ಮುಡಿಪು ಬಿಚ್ಚಿ ಕಟ್ಟುವ ಕ್ರಮವಿದೆ. ಕುಟುಂಬಿಕನೊಬ್ಬನು ಮುಂಜಾನೆ ಎದ್ದು ಬಾವಿಯ ನೀರಿನಿಂದ ಸ್ನಾನಮಾಡಿ ಗಂಧ ತೇಯ್ದು ಒದ್ದೆ ಬಟ್ಟೆಯಿಂದಲೇ ಮನೆಯೊಳಗೆ ಬಂದು ಮುಡಿಪನ್ನು ಇರಿಸಲಾದ ನಿರ್ದಿಷ್ಟ ಜಾಗದಿಂದ ತೆಗೆಯುತ್ತಾನೆ. (ಉಳಿದವರು ಯಾರೂ ಅದನ್ನು ಮುಟ್ಟಬಾರದು ಎಂಬ ನಿಯಮವಿದೆ.) ಅನಂತರ ಮುಡಿಪನ್ನು ಬಿಚ್ಚಿ ಇಡುತ್ತಾನೆ. ಕುಟುಂಬಿಕರೆಲ್ಲರೂ ಅದಕ್ಕೆ ಕಾಣಿಕೆ ಹಾಕಿ ಆತನಿಂದ ಗಂಧ ಪ್ರಸಾದವನ್ನು ಸ್ವೀಕರಿಸುತ್ತಾರೆ. ಆ ನಗದಿನೊಂದಿಗೆ ಸ್ವಲ್ಪ ಕಾಳುಮೆಣಸನ್ನು ಹಾಕಿ ಪುನಃ ಮುಡಿಪು ಕಟ್ಟಿ,

ಯಥಾ ಸ್ಥಾನದಲ್ಲಿ ಇರಿಸಲಾಗುತ್ತದೆ. ಯಾರಾದರೂ ತಿರುಪತಿಗೆ ಹೋಗುವುದಿದ್ದರೆ ಅವರ ಕೈಯಲ್ಲಿ ಆ 'ಮುಡಿಪಿ'ನ ಹಣವನ್ನು ಕೊಡುತ್ತಾರೆ. ಹೋಗುವ ಖರ್ಚನ್ನು ಆ ಹಣದಿಂದ ಭರಿಸಬಹುದು. ಆದರೆ ಹಿಂತಿರುಗಿ ಬರುವಾಗ ಸ್ವಂತ ಖರ್ಚಿನಲ್ಲೇ ಬರಬೇಕು.

ಹಲವು ವರ್ಷಗಳಿಗೊಮ್ಮೆ ತರವಾಡುಗಳಲ್ಲಿ ದೈವಗಳನ್ನು ಕಟ್ಟುವ ಸಂಪ್ರದಾಯವೂ ಇದೆ. ಕೊರತಿ, ಕಾಡ್ಯತ್ತಿ, ವಿಷ್ಣುಮೂರ್ತಿ ಇಲ್ಲಿ ಕಟ್ಟಲಾಗುವ ಪ್ರಧಾನ ದೈವಗಳು. ಕೋಪಾಳರು ಕೊರತಿಯನ್ನು ಕಟ್ಟುತ್ತಾರೆ. ಮೊದಲು ಕೊರತಿಯನ್ನು ಕಟ್ಟಲಾಗುತ್ತದೆ. ತೆಂಗಿನ ಎಳೆಯ ಗರಿಯನ್ನು ಸೊಂಟಕ್ಕೆ ಕಟ್ಟಿ ಮಾರು ಮೊಲೆಗಳನ್ನಿಟ್ಟು, ಅಣಿಯನ್ನು ಇಟ್ಟುಕೊಂಡು ಆತ ತಯಾರಾಗುತ್ತಾನೆ. ಕೃಷಿಗೆ ಸಂಬಂಧಿಸಿದ ಉಳುವುದು, ಬಿತ್ತುವುದು, ಕೊಯ್ಯುವುದು, ಬಡಿಯುವುದು, ಗುಡಿಸುವುದು, ಗೇರುವುದು ಈ ಮೊದಲಾದ ಕ್ರಿಯೆಗಳನ್ನು ನರ್ತನದೊಂದಿಗೆ ಆತ ಅಭಿನಯಿಸಿ ತೋರಿಸುತ್ತಾನೆ. ಅನಂತರ ಭತ್ತವನ್ನು ಮೊರದಲ್ಲಿ ಹಾಕಿ ಕುಟುಂಬದ ಹಿರಿಯರಿಗೆ ಕೊಡುತ್ತಾನೆ. ಕೊರತಿಯೊಂದಿಗೆ ಸಹಾಯಕ (ಸೇರಿಗೆ) ದೈವವಾಗಿ 'ಕಾಡ್ಯತ್ತಿ ಅಮ್ಮ'ನನ್ನೂ ಅರಾಧಿಸುವ ಪದ್ಧತಿ ಇದೆ. ಕೊರತಿಯನ್ನು ಕಟ್ಟಿದವನೆ ಇದನ್ನು ಕಟ್ಟುತ್ತಾನೆ. ಆದರೆ ವೇಷದಲ್ಲಿ ಕೊರತಿಯ ಅಬ್ಬರವಿಲ್ಲ. ಮೈಯನ್ನು ಆಗಾಗ ತುರಿಸಿಕೊಳ್ಳುತ್ತಾ ಕೃಷಿಯ ಚಟುವಟಿಕೆಯನ್ನು ಮಾಡುವಂತೆ ಈ ದೈವವು ಅಭಿನಯಿಸುತ್ತದೆ.

ಎಡಂಗ ಶಾಲಿಯಾ ಸಮುದಾಯದ ಅತ್ಯಂತ ದೊಡ್ಡ 'ಇಲ್ಲಂ' ಕೊಂಕಣಿ. ಇದರ ಮೂಲದ ತರವಾಡು ಮನೆ ಕೀಟೂರಿನಲ್ಲಿದೆ. (ಅಲ್ಲಿ ಇತರ ಕೆಲವು 'ಇಲ್ಲಂ' ಗಳ ತರವಾಡುಗಳೂ ಇವೆ.) ಇಲ್ಲಿ ತುಲಾ ಮಾಸದ ಹತ್ತರಂದು ಸತ್ತವರಿಗೆ ಬಡಿಸುವ ಕ್ರಮವಿದೆ. ಇದನ್ನು 'ಕೊರತಿ ಪುತ್ತರಿ ದಿನ' ಎನ್ನುತ್ತಾರೆ. ಆ ದಿನ ದೂರದೂರದ ಊರುಗಳಲ್ಲಿದ್ದ ಕುಟುಂಬಿಕರೆಲ್ಲರೂ ಬಂದು ಸೇರುತ್ತಾರೆ. ಅದನ್ನು ತಾರದವರು ಹಣವನ್ನು ಕೊಡಬೇಕು. ಹಿಂದೆ ರೂ.೫೦/- ಕೊಟ್ಟರೆ ಸಾಕಿತ್ತು. ಈಗ ಅದು ರೂ.೧೫೦/- ಆಗಿದೆ. ಮೂರು ದೈವದ ಕೋಣೆಗಳಿರುವ ಇಲ್ಲಿ ಕೊರತ್ತಿ ಹಲಗೆ ಇರುವ ಕೋಣೆಯಲ್ಲೇ ಕೊರತಿಗೆ ಬಡಿಸುವ ಅಡಿಗೆಯನ್ನು ಮಾಡುವ ಸೌಕರ್ಯವಿದೆ. ಮೂಲ್ಯತ್ತಿ ಒಂದು ಹುಡುಗಿಯನ್ನೂ ಸೇರಿಸಿ ಅಲ್ಲೇ ಅಡಿಗೆ ಮಾಡುತ್ತಾಳೆ. ತುಲಾ ೧೦ರ ಮುಂಜಾನೆ ಗಣಹೋಮವನ್ನು ಮಾಡಿದ ಅನಂತರ ಉಳಿದ ಕಾರ್ಯಗಳು ನಡೆಯುತ್ತದೆ.

ಈ ರೀತಿ ಆಯಾ 'ಇಲ್ಲಂ'ನವರು ತಮ್ಮ 'ಇಲ್ಲಂ'ಗೆ ಸೇರಿದ ಪೂರ್ವಜರ ಆತ್ಮಗಳನ್ನು ಗೌರವದಿಂದ ಮನ್ನಿಸಿ ಅವರನ್ನು ತೃಪ್ತಿಪಡಿಸುತ್ತಾರೆ. ಕುಟುಂಬದೊಳಗೆ ಸೌಹಾರ್ದತೆಯನ್ನು ಉಳಿಸಿಕೊಳ್ಳಲೋಸುಗವೆ ಈ ಎಲ್ಲ ಪದ್ಧತಿಗಳೂ ರೂಢಿಗೆ ಬಂದಿರುವ ಸಾಧ್ಯತೆಯಿದೆ. ಅವಿಭಕ್ತ ಕುಟುಂಬಗಳು ಒಡೆದು ವಿಭಕ್ತ ಕುಟುಂಬಗಳಾಗಿ ಎಲ್ಲೆಲ್ಲೋ ಹೋಗಿ ಬದುಕುವ ಬಂಧುಗಳನ್ನು ಪರಸ್ಪರ ಸೇರಿಸುವಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಎಲ್ಲಿ ದೈವದ ಕಲ್ಪನೆ ಇದೆಯೋ ಅಲ್ಲಿ ಭಯವಿರುತ್ತದೆ. ಆ ಭಯವೇ ಅಲ್ಲಿ ಹೋಗುವಂತೆ ಪ್ರೇರೇಪಿಸುತ್ತದೆ. ಆದುದರಿಂದಲೇ ಪ್ರಾಚೀನರು ಮನುಷ್ಯ ಮನುಷ್ಯರ ಒಳಗಿನ ಸಂಬಂಧಗಳನ್ನು ದೃಢಪಡಿಸಲು ನಿಶ್ಚಿತ ಸ್ಥಳಗಳಲ್ಲಿ ದೈವದ ಕಲ್ಪನೆಯನ್ನು ಮಾಡಿ ಬಂಧು, ಬಾಂಧವರನ್ನು, ಊರವರನ್ನು ಒಂದಾಗಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇಂದು ಈ ಆಚರಣೆಗಳು ಅರ್ಥಹೀನವಾಗಿ ಕಂಡರೂ, ಅವರ ಹಿಂದಿನ ಉದ್ದೇಶವನ್ನು ಗಮನಿಸಿದರೆ, ಅಲ್ಲಿಯೂ ಏನೋ ಅರ್ಥ ಹುದುಗಿರುವುದು ಕಾಣಬಹುದು.



ತರವಾಡಿನ ಮನೆ



ತರವಾಡಿನ ಪ್ರಧಾನ ದೈವವಾದ ಕೊರತಿಯ ಹಲಗೆ



ಕೊರತಿ ದೈವ



ತರವಾಡಿನ ಮೂಲ್ಯಕ್ತಿ



ತರವಾಡಿನ ಮೂಲ್ಯಕ್ತಿ ಕೊರತಿಗೆ ಬಡಿಸುವುದು



ಸತ್ತವರಿಗೆ ಬಡಿಸಿರುವುದು

## ೨ 2. ಅಳಿಯ ಕಟ್ಟು ಮತ್ತು ಮಕ್ಕಳ ಕಟ್ಟು

ಕೇರಳದ ಪೊನ್ನಾನಿ ಪ್ರದೇಶದಲ್ಲಿರುವ ಶಾಲಿಯರು ಹಾಗೂ ಉತ್ತರ ಕೇರಳದ ಶಾಲಿಯರು ಮಾತ್ರ ಮಾತೃಮೂಲೀಯ ವ್ಯವಸ್ಥೆಯನ್ನು ಪಾಲಿಸುತ್ತಾರೆ. ಉಳಿದೆಲ್ಲಾ ಕಡೆಗಳಲ್ಲೂ ಪಿತೃಮೂಲೀಯ ವ್ಯವಸ್ಥೆಯನ್ನು ಅನುಸರಿಸುತ್ತಾರೆ. ಮಾತೃ ಪ್ರಧಾನ ವ್ಯವಸ್ಥೆಯು ತುಳುನಾಡಿನಲ್ಲಿ ಬಹಳ ಹಿಂದೆಯೇ ಪ್ರಚಲಿತವಾದ ಒಂದು ಸಂಪ್ರದಾಯವಾಗಿತ್ತು. ಅದಕ್ಕೆ ಹಿನ್ನೆಲೆಯಾಗಿ ಭೂತಾಳ ಪಾಂಡ್ಯ ರಾಜನ ಕಥೆಯು ದೊರಕುತ್ತದೆ.

ಬಾರ್ಕೂರನ್ನು ಆಳುತ್ತಿದ್ದ ದೇವಪಾಂಡ್ಯನೆಂಬವನು ವ್ಯಾಪಾರಕ್ಕೆ ಹಡಗೊಂದನ್ನ ನಿರ್ಮಿಸಿ ನೀರಿಗಿಳಿಸುವ ಪ್ರಯತ್ನದಲ್ಲಿದ್ದಾಗ ಕುಂಡೋದರನೆಂಬ ಭೂತವು ನರಬಲಿಯನ್ನು ಕೇಳಲು, ಇತರರನ್ನು ಬಲಿಗೊಡಲು ಇಚ್ಛಿಸಿದ ದೇವಪಾಂಡ್ಯನು ತನ್ನ ಏಳು ಮಂದಿ ಮಕ್ಕಳಲ್ಲಿ ಒಬ್ಬನನ್ನು ಬಲಿಕೊಡುವಂತೆ ಹೆಂಡತಿಗೆ ಹೇಳಿದನು. ಆದರೆ ಆಕೆ ಅದನ್ನು ನಿರಾಕರಿಸಿ, ತನ್ನ ಮಕ್ಕಳೊಂದಿಗೆ ತವರಿಗೆ ಹೋದಳು. ಚಿಂತಿತನಾಗಿ ಕುಳಿತ ಅವನ ಬಳಿಗೆ ಅವನ ತಂಗಿ ಸತ್ಯವತಿಯು ಬಂದು, ವಿಷಯ ತಿಳಿದು, ತನ್ನ ಮಗನಾದ 'ಜಯಪಾಂಡ್ಯ' ನನ್ನು ಬಲಿಕೊಡಲು ಸಿದ್ಧಳಾಗುತ್ತಾಳೆ. ಆದರೆ ಆಗ ಕುಂಡೋದರ ಭೂತವು ತನಗೆ ನರಬಲಿ ಬೇಡವೆಂದೂ, ಕುರಿ, ಆಡು ಸಾಕೆಂದೂ ಹೇಳುತ್ತದೆ. ತನ್ನ ಕಷ್ಟಕಾಲದಲ್ಲಿ ಸಹಾಯ ಮಾಡಿದ ಸೋದರಿಯ ಮಗನಾದ ಜಯಪಾಂಡ್ಯನಿಗೆ ದೇವಪಾಂಡ್ಯನು ಪಟ್ಟಕಟ್ಟಿ 'ಭೂತಾಳ ಪಾಂಡ್ಯ' ಎಂದು ಕರೆಯುತ್ತಾನೆ. ಮುಂದೆ ತನ್ನ ರಾಜ್ಯದಲ್ಲೆಲ್ಲಾ 'ಅಳಿಯ ಸಂತಾನ' ಕಟ್ಟನ್ನು ಎಲ್ಲರೂ ಅವಲಂಬಿಸುವಂತೆ ಆಜ್ಞೆ ಹೊರಡಿಸುತ್ತಾನೆ. ತಾನು ಜಾರಿಗೆ ತಂದ ಅಳಿಯ ಕಟ್ಟನ್ನು ತನ್ನ ಸ್ನೇಹಿತನಾದ ಕೇರಳದ ಅರಸ (ಕೊಲತ್ತಿರಿ) ನಿಗೂ ಹೇಳಿ ಅಲ್ಲಿಯೂ 'ಮರುಮಕ್ಕತ್ತಾಯಮ್ ' ಎಂಬ ಹೆಸರಿನಿಂದ ಈ ನಿಯಮ ಪ್ರಚಾರಕ್ಕೆ ಬರುವ ಹಾಗೆ ಮಾಡಿಸಿದನು. (ಸುಬ್ಬಣ್ಣ ರೈ: ೧೯೯೪ ಪು ೧೦೦) ಆದುದರಿಂದಲೇ ಅದನ್ನು 'ಅಳಿಯಕಟ್ಟು' ಎನ್ನುತ್ತಾರೆ. 'ಅಳಿಯ' ಎಂದರೆ ಸೋದರಿಯ ಮಗ 'ಕಟ್ಟು' ಎಂದರೆ ಪದ್ಧತಿ. ಸೋದರಿಯ ಮಗನಿಗೆ ಎಲ್ಲವನ್ನೂ ಕೊಡುವ ಪದ್ಧತಿಯೇ 'ಅಳಿಯ ಕಟ್ಟು' ಕಾಸರಗೋಡಿನ ತಳಂಗರೆಯ ಶಾಸನವು ಈ ಅಳಿಯ ಸಂತಾನ ಪದ್ಧತಿಯ ಎಲ್ಲ ಲಕ್ಷಣಗಳ ಪ್ರಮುಖ ಸಾಕ್ಷಿಯಾಗಿದೆ. ಸ್ತ್ರೀ ಮೂಲ ಕುಟುಂಬ ವ್ಯವಸ್ಥೆ ಅಲ್ಲಿಂದ ಉತ್ತರಕ್ಕೆ ಬಂದುದಾಗಿರಬೇಕೆಂದು ಸೂಚಿಸುತ್ತದೆ. ಸಾಲದುದಕ್ಕೆ ಅಂದಿನಿಂದ ಇಂದಿಗೂ ಪ್ರಮುಖವಾಗಿರುವ ಅಲ್ಲಿನ ಶಕ್ತಿಯ ಆರಾಧನೆ ಇದಕ್ಕೆ ಇಂಬುಗೊಡುತ್ತದೆ.

ಕೇರಳದಲ್ಲಿ ಮಾತೃ ಪ್ರಧಾನ ಪದ್ಧತಿ ಇರುವವರು ನಾಯರ್‌ಗಳು. ಆ ಕಾಲದಲ್ಲಿ ಕೇರಳದ ಪ್ರಬಲ ವರ್ಗವಾಗಿದ್ದ ಅವರ ಆಚರಣೆಗಳನ್ನೂ, ಪದ್ಧತಿಗಳನ್ನೂ ಇತರ ಸಮುದಾಯದವರು ಅನುಸರಿಸಿಕೊಂಡಿರಬಹುದು. ಒಂದೆಡೆ ತುಳುನಾಡಿನ ಪ್ರಭಾವ , ಇನ್ನೊಂದೆಡೆ ನಾಯರ್‌ಗಳ ಪ್ರಭಾವ

ಇವೆರಡೂ ಸೇರಿ ಶಾಲಿಯಾ ಸಮುದಾಯವು 'ಮರುಮಕ್ಕತ್ತಾಯಮ್ ' ಸಂಪ್ರದಾಯವನ್ನು ಅನುಸರಿಸಿಕೊಂಡು ಬಂದಿರುವ ಸಾಧ್ಯತೆಯಿದೆ. ಮರುಮಕ್ಕತ್ತಾಯಮ್ ಪದ್ಧತಿಗೂ ಅಳಿಯ ಕಟ್ಟಿಗೂ ಸಣ್ಣ ವ್ಯತ್ಯಾಸವಿದೆ. ಕೆಲವೊಂದು ವಿಷಯಗಳಲ್ಲಿ ಅವರು ಪಿತೃ ಪ್ರಧಾನ ವ್ಯವಸ್ಥೆಯನ್ನು ಅನುಸರಿಸುತ್ತಿರುವುದರಿಂದ ಇವರು ಮೂಲತಃ ಮಾತೃ ಮೂಲೀಯ ವ್ಯವಸ್ಥೆಯವರಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಕೇರಳದ ಇವರ ಸೋದರ ಸಮುದಾಯವಾದ ಬಲಂಗ ಶಾಲಿಯರಂತೂ ಪಿತೃಮೂಲೀಯ ವ್ಯವಸ್ಥೆಯನ್ನು ಮೊದಲಿನಿಂದಲೂ ಅನುಸರಿಸಿಕೊಂಡು ಬಂದಿದ್ದಾರೆ.

ಪಿತೃಮೂಲೀಯ ವ್ಯವಸ್ಥೆಯಲ್ಲಿ ತಾಯಿಯ ಕುಟುಂಬದವರಿಂದ ಮಕ್ಕಳಿಗೆ ಆಸ್ತಿಯ ಹಕ್ಕು ದೊರೆಯುತ್ತದೆ. ಸೋದರಮಾವನು ಅಲ್ಲಿ ತಂದೆಗಿಂತಲೂ ಮಿಗಿಲಾದ ಸ್ಥಾನದಲ್ಲಿದ್ದು, ತನ್ನೆಲ್ಲಾ ಆಸ್ತಿಗೆ ಆತ ತನ್ನ ಸೋದರಿಯ ಮಕ್ಕಳನ್ನೇ ಒಡೆಯನನ್ನಾಗಿಸುತ್ತಾನೆ. ಆಸ್ತಿಯು ತಾಯಿಯಿಂದ ಹೆಣ್ಣು ಮಕ್ಕಳಿಗೆ ಹೋಗುತ್ತದೆ. ತಂದೆಯ ಆಸ್ತಿಯ ಮೇಲೆ ಆತನ ಸೋದರಿಯ ಮಕ್ಕಳಿಗೆ ಹಕ್ಕು ಬರುತ್ತದೆ.

ಪ್ರಾಚೀನ ಸಮಾಜದಲ್ಲಿ ಪುರುಷ ಹೆಚ್ಚಾಗಿ ಹೊರಗಡೆಯೇ ಇರುತ್ತಿದ್ದನು. ಮಕ್ಕಳಿಗೆ ತಂದೆಗಿಂತ ತಾಯಿಯ ಪರಿಚಯವೇ ಹೆಚ್ಚಾಗಿತ್ತು. ಶಿಥಿಲವಾದ ಕೌಟುಂಬಿಕ ವ್ಯವಸ್ಥೆಯಿದ್ದ ಆ ಕಾಲದಲ್ಲಿ ತಂದೆ ಯಾರು ಎಂಬುದನ್ನು ಮಕ್ಕಳು ತಾಯಿಯ ಮೂಲಕವೇ ತಿಳಿದುಕೊಳ್ಳುತ್ತಿದ್ದರು. ಹೆತ್ತ ತಾಯಿ ಯಾರು ಎನ್ನುವುದನ್ನು ಬಿಡಿಸಿ ಹೇಳಬೇಕಾದ ಅಗತ್ಯವಿರಲಿಲ್ಲ. ಸಂಸಾರದ ಜತೆಗೆ ಪುರುಷನಿಗೆ ವಿಶೇಷ ಸಂಬಂಧವೂ ಇರಲಿಲ್ಲ. 'ಮನೆ ' ಎಂಬ ವ್ಯವಸ್ಥೆ ಬಂದಿರುವುದೇ ಹೆಣ್ಣಿನ ಹಿನ್ನೆಲೆಯಿಂದ ಹೆಣ್ಣಿಗೆ ಹೆರಲಿಕ್ಕೂ, ಮಕ್ಕಳನ್ನು ಸಾಕಲಿಕ್ಕೂ ಒಂದು ಆಶ್ರಯದ ಅಗತ್ಯವಿತ್ತು. ಅದುವೇ ಕ್ರಮೇಣ ಮನೆಯ ರೂಪವನ್ನು ತಾಳಿತು. (ಈಗಲೂ ಮನೆಯ ಬಗ್ಗೆ ಹೆಚ್ಚು ಚಿಂತಿಸುವವರು ಹೆಂಗಸರೇ) ಅಲ್ಲಿ ಪುರುಷ ಒಬ್ಬ ಆಗಂತುಕ ಮಾತ್ರವಾಗಿದ್ದ. ಅವನ ಅಸ್ತಿತ್ವಕ್ಕೆ ಅಷ್ಟೊಂದು ಪ್ರಾಧ್ಯಾನ್ಯತೆ ಇರಲಿಲ್ಲ. ಆದುದರಿಂದ ತಾಯಿಗೆ ಸಂಬಂಧಪಟ್ಟದ್ದು ಮಕ್ಕಳಿಗೆ ಬರಲು ಪ್ರಾರಂಭವಾಗಿ, ಸ್ತ್ರೀಯರಿಗೆ ಪ್ರಾಧಾನ್ಯತೆ ಬಂತು. ಇದುವೇ ಅತ್ಯಂತ ಪ್ರಾಚೀನವಾದ ಪದ್ಧತಿ. ದ್ರಾವಿಡ ಮೂಲ ಜನಾಂಗದಲ್ಲೆಲ್ಲಾ ನಾವು ಕಾಣುವುದು ಇದನ್ನೇ. ಆದರೆ ಕ್ರಮೇಣ ಪುರುಷನು ತನ್ನ ದೈಹಿಕ ಬಲದಿಂದ ಹೆಚ್ಚಿನ ಈ ಹಕ್ಕುಗಳಲ್ಲೂ ಕೆಲವು ನಿಯಂತ್ರಣಗಳನ್ನು ತಂದನು. ಅದುವೇ ಪತಿ-ಪತ್ನಿ-ಮಕ್ಕಳು ಎಂಬ ಕಟ್ಟುನಿಟ್ಟಾದ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು. ಸಮಾಜದಲ್ಲಿ ಪುರುಷನಿಗೆ ಪ್ರಾಧಾನ್ಯತೆ ನೀಡುವ ' ಆರ್ಯನ್ ' ಸಂಸ್ಕೃತಿಯ ಕೊಡುಗೆಯಿದು. ಪುರುಷನೇ ಇಲ್ಲಿ ಪ್ರತಿಯೊಂದರ ನಿಯಂತ್ರಕನಾದ. ಹೆಣ್ಣಿನ ಕೆಲವು ಹಕ್ಕುಗಳನ್ನು ಕಸಿದುಕೊಂಡು ತನ್ನ ಹಕ್ಕುಗಳನ್ನು ಆತ ಪ್ರತಿಷ್ಠಾಪಿಸಿದ, ಹೆಣ್ಣನ್ನು ಕುಟುಂಬದ ಒಳಗೆ ಬಂಧಿಸಿಟ್ಟು, "ಗೃಹಿಣೀ ಗೃಹ ಮುಚ್ಯತೇ" ಎಂದು ಸಾರಿದ. ವಿವಾಹವಾದ ಮೇಲೆ ಅವಳಿಗೆ ತವರಿನ ಸಂಬಂಧವಿಲ್ಲ "ಕೊಟ್ಟ,

ಹೆಣ್ಣು ಕುಲಕ್ಕೆ ಹೊರಗೆ " ಎಂದು ಹೇಳಿದ. ಮದುವೆಯಾದ ಮೇಲೆ ಅವಳು ಸಂಪೂರ್ಣ ಪರತಂತ್ರಳಾದಳು. ಅವಳ ಮಕ್ಕಳ ಮೇಲೆ ಅವಳಿಗೆ ಯಾವ ಹಕ್ಕು ಇಲ್ಲವಾಯಿತು. ಆದುದರಿಂದಲೇ ಪಿತೃಮೂಲೀಯ ವ್ಯವಸ್ಥೆಯಲ್ಲಿ ತಂದೆಯ ಗೋತ್ರವೇ ಮಕ್ಕಳಿಗೆ ಬರುತ್ತದೆ. ಹೆಣ್ಣು ಮಕ್ಕಳಿಗೆ ಮದುವೆಯಾಗುವವರೆಗೆ ತಂದೆಯ ಗೋತ್ರ. ಗಂಡು ಮಕ್ಕಳಿಗೆ ಸಾಯುವವರೆಗೆ ತಂದೆಯ ಗೋತ್ರ.

ಕಾಸರಗೋಡಿನ ಚಂದ್ರಗಿರಿ ನದಿಯ ಉತ್ತರದ ಶಾಲಿಯರ ಸಂಪ್ರದಾಯ ಹಾಗೂ ಸಾಮಾಜಿಕ ವ್ಯವಸ್ಥೆಯ ಮೇಲೆ ತುಳುನಾಡಿನ ಪ್ರಭಾವವೇ ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಅದಕ್ಕಿಂತ ದಕ್ಷಿಣ ಭಾಗದವರು ಸಾಮಾಜಿಕ ಕಟ್ಟಳೆಗಳು ಮಲಬಾರಿನವುಗಳಿಗೆ ಸಮಾನವಾಗಿವೆ. ಪ್ರಾಚೀನ ಕೇರಳದಲ್ಲಿ ಕೆಲವು ಕುಟುಂಬಗಳು ಪಿತೃ ಪ್ರಧಾನ ಕೆಲವು ಮಾತೃ ಪ್ರಧಾನ. ಇದು ತುಳುನಾಡಿನ 'ಅಳಿಯ ಕಟ್ಟ' ನ ಪ್ರಭಾವದಿಂದ ಬಂದುದಲ್ಲ. ಪ್ರಾಚೀನ ಕಾಲದಿಂದಲೇ ರೂಢಿಸಿಕೊಂಡು ಒಂದು ಸಂಪ್ರದಾಯ. ಹಿಂದ ಕೇರಳದ ಕೆಲವು ಸಮುದಾಯಗಳಲ್ಲಿ ಕೌಟುಂಬಿಕ ಜೀವನವು ಎಷ್ಟು ಶಿಥಿಲವಾಗಿತ್ತೆಂದರೆ ಮಕ್ಕಳು ತಮ್ಮ ತಂದೆ ಯಾರು ಎಂದು ತಿಳಿಯರಾರದಷ್ಟು ! ಆದುದರಿಂದಲೇ ಅಲ್ಲಿ ಮಾತೃ ಮೂಲೀಯ ವ್ಯವಸ್ಥೆಯೇ ರೂಢಿಯಲ್ಲಿರಲು ಕಾರಣವಾಯಿತು. ಕೇರಳದ ನಂಬೂದಿರಿ ಬ್ರಾಹ್ಮಣರನ್ನು ಬಿಟ್ಟರೆ ಬ್ರಾಹ್ಮಣೇತರರಲ್ಲಿ ಹೆಚ್ಚಿನವರೂ ಮಾತೃ ಮೂಲೀಯ ವ್ಯವಸ್ಥೆಯನ್ನು ಅವಲಂಬಿಸಿದವರೇ. ಕಾಸರಗೋಡಿನ ಕಡೆಯ ಮುಸ್ಲಿಮರೂ ಮೊದಲು ಮರುಮಕ್ಕತ್ತಾಯಮ್ ಪದ್ಧತಿಯನ್ನೇ ಅನುಸರಿಸುತ್ತಿದ್ದರು. ಮಿಕ್ಕ ವಿಷಯಗಳಲ್ಲಿ ಮಾತ್ರ ಶರಿಯಾತ್ ಎನ್ನುವ ಮುಸ್ಲಿಂ ಕಾನೂನನ್ನು ಅನುಸರಿಸುತ್ತಿದ್ದರು. ಇದು ಪ್ರಾದೇಶಿಕತೆಯ ಸಮುದಾಯವು ಅನೂಚಾನವಾಗಿ ರೂಢಿಸಿಕೊಂಡು ಬಂದ ವ್ಯವಸ್ಥೆಯ ಮೇಲೆಯೂ ಯಾವ ರೀತಿಯಲ್ಲಿ ಪ್ರಭಾವ ಬೀರುತ್ತದೆ ಎನ್ನುವುದಕ್ಕೆ ಉದಾಹರಣೆ. ಇತ್ತೀಚೆಗೆ ಮರುಮಕ್ಕತಾಯಮ್ ಕಾಯಿದೆ ಮತ್ತು ಮಾಪ್ಲಾ ಮರುಮಕ್ಕತ್ತಾಯಮ್ ಕಾಯಿದೆಯಿಂದಲಾಗಿ ಇದರಲ್ಲಿ ಬದಲಾವಣೆಗಳಾಗಿವೆ.

" ೧೯೩೩ನೆಯ ಮಲಬಾರಿನ ' ಮರುಮಕ್ಕತ್ತಾಯಮ್ ' ಕಾಯಿದೆಯನ್ವಯ ಮಕ್ಕಳಿಗೆ ತಂದೆಯ ಆಸ್ತಿ ಬರುವಂತಾಯಿತು. ೧೯೫೬ನೆಯ ಇಸವಿಯ ಹಿಂದೂ ವಾರಸಾ ಕಾಯಿದೆ ಅಂಗೀಕೃತವಾದಾಗ, ಮಲಬಾರಿನಲ್ಲಿ ಎರಡು ಬಗೆಯ ವಾರಸಾ ಪದ್ಧತಿಗಳು ಪ್ರಚಲಿತವಾದವು. ಇದರಂತೆ ' ತರವಾಡ್ ' ಆಸ್ತಿಯು ಮಾತೃ ಪ್ರಧಾನವಾಗಿಯೇ ಹೋಗುತ್ತದೆ. ಉಳಿದ ಆಸ್ತಿಯ ಮೇಲೆ ಮಕ್ಕಳಿಗೆ ಹಕ್ಕು ಬಂತು. ಹಿಂದೂ ವಾರಸಾಕಾಯಿದೆ ೧೯೫೬ ನೆಯ ಇಸ್ವಿಯ ದತ್ತಕ ವಿಧಾನ ಹಾಗೂ ಘೋಷಣೆಯ ಕಾನೂನು ಇವುಗಳ ಮೇರೆಗೆ, ಹೆಂಡತಿ ಮತ್ತು ಮಕ್ಕಳನ್ನು ಗಂಡನು ಪೋಷಿಸಬೇಕೆಂಬ ಕಾಯಿದೆಯನ್ವಯ ಹೊಣೆಗಾರಿಗೆ ಗಂಡಸಿಗೆ ಬಂತು ಎನ್ನಲಾಗಿದೆ.

ಶಾಲಿಯಾ ಸಮುದಾಯದಲ್ಲಿ ಈಗ ಎರಡು ಪದ್ಧತಿಗಳೂ ರೂಢಿಯಲ್ಲಿರುವುದನ್ನು ಕಾಣಬಹುದು. ಮರುಮಕ್ಕತ್ತಾಯವ್ ತರವಾಡಿ (ಮೂಲದ ಮನೆ) ನ ಅವಕಾಶವು ಸ್ತ್ರೀ ಪರಂಪರೆಯಿಂದ ಮುಂದುವರೆದುಕೊಂಡು ಹೋಗುತ್ತದೆ. ತರವಾಡಿನ ಸ್ವತ್ತು ತಾಯಿಯಿಂದ ಹೆಣ್ಣು ಮಕ್ಕಳಿಗೆ ಬರುತ್ತದೆ. ಕುಟುಂಬದ ಅಥವಾ ಗೋತ್ರದ ಹೆಸರು ತಾಯಿಯಿಂದ ಬರುತ್ತದೆ. ತಾಯಿಯ ಕಡೆಯ ಸಂಬಂಧಿಕರ ಜತೆಗೆ ಮಕ್ಕಳಿಗೆ ಹೆಚ್ಚಿನ ಸಂಬಂಧವಿರುತ್ತದೆ. ತಾಯಿಯ ಕಡೆಯವರು ಹೆತ್ತಾಗ ಮತ್ತು ಸತ್ತಾಗ ಸೂತಕಗಳಿರುತ್ತದೆ. ಸತ್ತಾಗ ಕ್ರಿಯೆಯನ್ನು ಹಿಡಿಯುವವರೂ ಸೋದರಿಯರು ಹಾಗೂ ಸೋದರಿಯರ ಮಕ್ಕಳೇ. ಪತಿಯ ಮರಣಾನಂತರ ಹೆಣ್ಣು ಮಗಳು ತಂದೆಯ ಮನೆಗೆ ಹೋಗ ಬೇಕು. ಅವಳಿಗೆ ಪತಿಗೃಹದಲ್ಲಿ ಯಾವ ಹಕ್ಕು ಇಲ್ಲ. ಅವನ ಸ್ಥಿರ-ಚರ-ಸೊತ್ತಗಳಿಗೆ ಹೆಂಡತಿಗೂ ಮಕ್ಕಳಿಗೂ ಹಕ್ಕಿಲ್ಲ. ಮೃತನ ಪತ್ನಿ ತನ್ನ ಮಕ್ಕಳನ್ನು ಕರೆದುಕೊಂಡು ತನ್ನ ಮನೆಗೆ ಹೋಗಬೇಕು. ಆ ಸಂದರ್ಭದಲ್ಲಿ ಮೃತನ ಕುಟುಂಬಿಕರು 'ದುಃಖಸೀರೆ' ಎಂದು ಒಂದು ಸೀರೆ ಕೊಡುತ್ತಾರೆ. ಅದನ್ನು ಉಟ್ಟುಕೊಂಡು ಅವಳ ತನ್ನ ತವರು ಮನೆಗೆ ಹೋಗಬೇಕೆಂಬ ಲೆಕ್ಕ. ಗಂಡ ಸಂಪಾದಿಸಿದುದರಲ್ಲಿ ಅವನ ಮನೆಯವರು ಏನಾದರೂ ತಾವಾಗಿಯೇ ಕೈಯೆತ್ತಿ ಕೊಟ್ಟರೆ ಮಾತ್ರ ಅವಳಗೆ ಅದನ್ನು ತೆಗೆದುಕೊಂಡು ಹೋಗಬಹುದು.

ಕಾಲಕ್ರಮೇಣ ಈ ಪದ್ಧತಿಯು ಶಿಥಿಲಗೊಂಡು ಈಗ ಮಕ್ಕಳ ಕಟ್ಟು ಜಾರಿಯಲ್ಲಿದೆ. ಹೊಸ ಕಾಯಿದೆಯನ್ವಯ ತಂದೆಯ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಿಗೂ ಸಮಾನವಾದ ಅವಕಾಶವಿದೆ. ತಾಯಿಯ ತರವಾಡಿನ ಆಸ್ತಿಯನ್ನು ಬಿಟ್ಟರೆ ಉಳಿದೆಲ್ಲದರಲ್ಲೂ ಗಂಡು ಮಕ್ಕಳಿಗೂ ಅವಕಾಶವಿದೆ.

ಶಾಲಿಯ ಸಮುದಾಯದ ಕೆಲವು ಸಂಪ್ರದಾಯಗಳನ್ನು ಅವಲೋಕಿಸಿದಾಗ ಅವರು ಪ್ರದೇಶದ ಪ್ರಭಾವಕ್ಕೊಳಗಾಗಿ ಈ ರೀತಿ ಅಳಿಯಕಟ್ಟಿನ ಸಂಪ್ರದಾಯ ರೂಢಿಸಿಕೊಂಡಿದ್ದರೆಂಬುದು ತಿಳಿದು ಬರುತ್ತದೆ. ನಗರದ ವ್ಯವಸ್ಥೆಯಲ್ಲಿ ಆಚಾರವರ್ಗದ ಹಕ್ಕು ಮರುಮಕ್ಕತ್ತಾಯಮ್ ಪದ್ಧತಿಯಲ್ಲಿ ಮುಂದುವರೆದರೂ, ಉಳಿದಂತೆ ಇವರ ಸಂಪ್ರದಾಯ ಮಕ್ಕಳ ಕಟ್ಟೇ. ಮಕ್ಕಳು ಕ್ಷೇತ್ರದ ಸದಸ್ಯರಾಗಬೇಕಿದ್ದರೆ ಅವರು ತಂದೆಯ ಕ್ಷೇತ್ರ (ನಗರ) ಕ್ಕೆ ಬರಬೇಕು. ಮದುವೆಯಾದ ಮೇಲೆ ಸ್ತ್ರೀ ಆಕೆಯ ಪತಿ ಯಾವ ನಗರದ ಸದಸ್ಯನೊ ಅದೇ ನಗರಕ್ಕೆ ಸೇರಲ್ಪಡುತ್ತಾಳೆ.

ಈಗ ಶಾಲಿಯಾ ಸಮುದಾಯವು ಮಕ್ಕಳ ಕಟ್ಟಿಗೆ ಸೇರಿದವರಾದರೂ ಅಳಿಯಕಟ್ಟನ್ನು ಸ್ವಲ್ಪಮಟ್ಟಿಗೆ ಅನುಸರಿಸುತ್ತಿರುವುದರಿಂದ, " ಅತ್ತಲೂ ಅಲ್ಲ ". ಇತ್ತಲೂ ಅಲ್ಲ" ಎನ್ನುವ ಒಂದು ಎಡಬಿಡಂಗಿತನದ ವ್ಯವಸ್ಥೆಗೆ ಬಂದು ತಲುಪಿದೆ.

೪. **ಹಬ್ಬಗಳು:**

ಧರ್ಮಕ್ಕೂ ಆಚರಣೆಗೂ ಬಹಳ ನಿಕಟವಾದ ಸಂಬಂಧವಿದೆ. ಪ್ರತಿಯೊಂದು ಧರ್ಮದ ಕಲ್ಪನೆಯೂ ಅದಕ್ಕೆ ಸಂಬಂಧಪಟ್ಟ ಆಚರಣೆಗಳಿಗೆ ಹಾದಿಯನ್ನು ತೆರೆಯುತ್ತದೆ. ಧರ್ಮಕ್ಕೂ, ದೇವರಿಗೂ ಸಂಬಂಧಿಸಿದಂತೆ ಆಚರಣಗಳು ಬಂದು ಧರ್ಮ-ದೇವರು-ಮಾನವ ಈ ಮೂರನ್ನು ಒಂದೇ ಸೂತ್ರದಲ್ಲಿ ಬಂಧಿಸುತ್ತದೆ. ಮಾನವನು ತನ್ನನ್ನು ತಾನೇ ಧರ್ಮದೊಂದಿಗೆ ಬೆಸೆದುಕೊಳ್ಳಲು ಹಬ್ಬಗಳನ್ನು ರೂಢಿಸಿಕೊಳ್ಳುತ್ತಾನೆ. ಆಯಾಯ ಧರ್ಮಕ್ಕೆ ಸಂಬಂಧಿಸಿದ ಹಾಗೇ ವಿಭಿನ್ನ ಹಬ್ಬಗಳು ಆಚರಣೆಯಲ್ಲಿರುತ್ತವೆ. ಇವುಗಳಲ್ಲಿ ಧರ್ಮ ಸಂಸ್ಥಾಪಕರ ಹುಟ್ಟಿದ ದಿನ ಹಾಗೂ ಧರ್ಮದಲ್ಲಿ ಉಲ್ಲೇಖಿಸಲಾದ ವಿಶೇಷ ದಿನಗಳು ಪ್ರಮುಖವಾಗಿರುತ್ತವೆ. ಹಿಂದೂ ಧರ್ಮದಲ್ಲಿ ಹಬ್ಬಗಳ ಸಂಖ್ಯೆ ಬಹಳಷ್ಟು ಇವೆ. ಇದಕ್ಕೆ ಹಲವು ದೇವೋಪಾಸನೆಯೇ ಕಾರಣ. ವರ್ಷದ ಹಲವು ದಿನಗಳು ಹಬ್ಬದಲ್ಲೇ ಕಳೆದು ಹೋಗುತ್ತವೆ. ಹಿಂದಿನ ಕಾಲದಲ್ಲಿ ಜೀವನ ದುಸ್ಸಹವೆನಿಸಿ, ಬೇಸರಿಕೆ ಮೂಡಿದಾಗ, ಆಗಾಗ ಬರುವ ಹಬ್ಬಗಳು ಮಾನವನಲ್ಲಿ ಜೀವನೋತ್ಸಾಹವನ್ನು ತುಂಬಿ ಉತ್ತೇಜಿಸುವ ಔಷಧಿಗಳಂತೆ ಕೆಲಸಮಾಡುತ್ತಿದ್ದವು. ಶ್ರಮ ಜೀವಿಗಳಾದ ಅವರು ಯಾಂತ್ರಿಕವಾದ ದುಡಿತದ ದಿನಗಳಿಂದ ಭಿನ್ನವಾದ ಹಬ್ಬದ ದಿನಗಳೆಡೆಗೆ ತಮ್ಮ ದೃಷ್ಟಿಯನ್ನು ಅದಕ್ಕಾಗಿ ಕಾಯುವಂತೆ ಮಾಡುತ್ತಿದ್ದವು. ಪ್ರತಿಯೊಂದು ಹಬ್ಬದ ಹಿಂದೆಯೂ ದೈವೀಕ ಕಲ್ಪನೆ ಇದ್ದು ಕಷ್ಟಪಟ್ಟಾದರೂ ಅದನ್ನು ಭಯ-ಭಕ್ತಿಗಳಿಂದ ಆಚರಿಸಿ ಸಂತಸ ಪಟ್ಟುಕೊಳ್ಳುವಂತೆ ಮಾಡುತ್ತಿದ್ದನು. ಇದು ಪರಂಪರಾಗತ ಮೌಲ್ಯವಾದುದರಿಂದ ಎಷ್ಟು ಬಡವನಾಗಿದ್ದರೂ ಆತ ಅದನ್ನು ನಡೆಸಲೇ ಬೇಕಿತ್ತು. ಅದನ್ನು ಒಂದು 'ಧಾರ್ಮಿಕ ಅಗತ್ಯ' ಎಂದು ಆತ ಪರಿಗಣಿಸಲಾಗುತ್ತಿತ್ತು.

ಹಬ್ಬಗಳ ಹಿಂದಿನ ಉದ್ದೇಶವು ಎಲ್ಲಾ ಸಮುದಾಯಕ್ಕೂ ಸಮಾನವಾಗಿರುತ್ತದೆ. ಅದನ್ನು ಹೀಗೆ ಸಂಗ್ರಹಿಸಬಹುದು.

೧ ಜೀವನದ ಏಕತಾನತೆಯನ್ನು ಹೋಗಲಾಲಿಸುವುದು.

೨ ಧರ್ಮ - ಸಮಾಜ - ಕುಟುಂಬ - ಬಂಧು - ಬಳಗದೊಂದಿಗೆ ಭಾವನಾತ್ಮಕ ಸಂಬಂಧವನ್ನು ಬಲಪಡಿಸುವುದು.

೩ ಪ್ರತಿಯೊಂದು ಹಬ್ಬಗಳ ಹಿಂದೆಯೂ ಧಾರ್ಮಿಕ ಹಾಗೂ ಅರ್ಥಪೂರ್ಣ ಕಾರಣಗಳಿರುವುದರಿಂದ ಆಚರಿಸುವವನಿಗೆ ಮಾನಸಿಕ ಹಾಗೂ ದೈಹಿಕ ನೆಮ್ಮದಿಯನ್ನು ಕೊಡುವುದು.

೪ ಕುಸಿಯುತ್ತಿರುವ ಧಾರ್ಮಿಕ ನಂಬಿಕೆಗಳನ್ನು ಬಲಪಡಿಸಿ, ದೈವ ಶ್ರದ್ಧೆಯನ್ನು ಹುಟ್ಟಿಸುವುದು.

೫ ಬಿಡುವಿಲ್ಲದ ದುಡಿತಕ್ಕೆ ಅಲ್ಪವಿರಾಮವನ್ನು ಕೊಟ್ಟು ಜೀವನೋತ್ಸಾಹವನ್ನು ತುಂಬುವುದು.

## ಶಾಲಿಯ / ದೇವಾಂಗ ಸಮುದಾಯದ ಹಬ್ಬಗಳು

ಕನ್ನಡ ಮತ್ತು ತುಳು ಸಂಸ್ಕೃತಿಯೊಂದಿಗೆ ವಿಲೀನಗೊಂಡ ಮಲಯಾಳಂ ಸಂಸ್ಕೃತಿಯ ಶಾಲಿಯಾ ಸಮುದಾಯದಲ್ಲಿ ಹಬ್ಬಗಳಲ್ಲೂ ' ಮಿಶ್ರ ಸಂಸ್ಕೃತಿ ' ಯನ್ನು ಕಾಣಬಹುದು. ವರ್ಷಾರಂಭದ (ಸೌರಮಾನ) ವಿಷುವಿನಿಂದ ತೊಡಗಿ ಮೀನ ಮಾಸದ ಪರಂಪರೆಗೆ ಇತರ ಹಬ್ಬಗಳು ವ್ಯಾಪಿಸಿವೆ. ವಿಷು, ಚೌತಿ (ಗಣೇಶ ಚತುರ್ಥಿ), ನಾಗರ ಪಂಚಮಿ, ಓಣಂ, ನವರಾತ್ರಿ, ದೀಪಾವಳಿ, ಅಷ್ಟಮಿ, ಷಷ್ಠಿ, ಕೆಡ್ಡಸ, ಪೂರಂ ಈ ಮೊದಲಾದ ಹಬ್ಬಗಳನ್ನು ಇವರು ಆಚರಿಸುತ್ತಾರೆ. ಅದರೊಂದಿಗೆ ಹುತ್ತರಿ, 'ನಿರ' ಮೊದಲಾದ ಹಬ್ಬಗಳೂ ಇವೆ. ಇವುಗಳಲ್ಲಿ ಕೆಲವನ್ನು ವೈಭವದಿಂದ ಆಚರಿಸಿದರೆ ಕೆಲವನ್ನು ನಾಮಕಾವಸ್ಥೆಗೆ ಮಾತ್ರ ಆಚರಿಸುತ್ತಾರೆ. ಪರಂಪರಾಗತವಾಗಿ ಬಂದಂತಹ ವಿಷು ಮತ್ತು ಓಣಂ ಹಬ್ಬಗಳು ಇತರ ವಿಶೇಷವಾದ ಹಬ್ಬಗಳು.

**ವಿಷು:-** ಇವರು ಸೌರಮಾನವನ್ನು ಅವಲಂಬಿಸಿದವರು ಆದುದರಿಂದಲೇ ಸೌರಮಾನ ಯುಗಾದಿ ಇವರಿಗೆ ವಿಶೇಷವಾದ ಹಬ್ಬ. ಸೂರ್ಯನು ಮೀನರಾಶಿಯಿಂದ ಮೇಷರಾಶಿಗೆ ಕಾಲಿಡುವ 'ವಿಷು' ಸಂಕ್ರಮಣ ದಿನವೇ ವಿಷು. ಅದನ್ನು 'ಬಿಸು' ಎಂದು ಹೇಳುತ್ತಾರೆ. ವಿಶ್ವದ ಪ್ರತಿಯೊಂದು ಸಂಸ್ಕೃತಿಯಲ್ಲಿ ವರ್ಷಾರಂಭಕ್ಕೆ ವಿಶೇಷವಾದ ಪ್ರಾಧಾನ್ಯತೆ ಇದೆ. ಅಂದೇನು ಮಾಡಿದರೂ ಅದು ಇಡೀ ವರ್ಷಕ್ಕೆ ಮುಂದುವರೆಯುತ್ತದೆ ಎಂಬ ನಂಬಿಕೆ ಬಲವಾದುದರಿಂದ, ಅಂದು ಒಳ್ಳೆಯದನ್ನೇ ಮಾಡಬೇಕು, ಒಳ್ಳೆಯದನ್ನೇ ತಿನ್ನಬೇಕು, ಒಳ್ಳೆಯದನ್ನೇ ನೋಡಬೇಕು ಎನ್ನುವ ನಂಬಿಕೆ ಬಂದಿರಬಹುದು. ಆದುದರಿಂದ ಆ ದಿನವನ್ನು ಎಲ್ಲಾ ಸಮುದಾಯದವರು ವಿಶೇಷವಾಗಿ ಸಂಭ್ರಮದಿಂದ ಸ್ವಾಗತಿಸುತ್ತಾರೆ: ಹೊಸದಿನವಾಗಿ ಅದನ್ನು ಸಂಭ್ರಮದಿಂದ ಆಚರಿಸಿ ವರ್ಷಪೂರ್ತಿ ಹಾಗೇ ಇರಬೇಕೆಂದು ಆಶಿಸುತ್ತಾರೆ. ಕ್ರಿಶ್ಚಿಯನ್ ಸಮುದಾಯದವರಿಗೆ ಜನವರಿ ಒಂದು ನೂತನ ದಿನವಾದರೆ: ಮುಸ್ಲಿಮರಿಗೆ ಮೊಹರಂ ನೂತನ ದಿನವಾಗಿದೆ. ಹಿಂದೂಗಳಿಗೆ ಯುಗಾದಿ ವರ್ಷದಾರಂಭದ ದಿನ ಬಹುಶಃ ವಿಶ್ವದ ಎಲ್ಲಾ ಜನವರ್ಗವು ತಮ್ಮ ತಮ್ಮ ಧರ್ಮದಲ್ಲಿ ಉಲ್ಲೇಖಿಸಿದ ಆರಂಭದ ದಿನಕ್ಕೆ ಪ್ರಾಶಸ್ತ್ಯವನ್ನು ಕೊಡುತ್ತದೆ. (ವಾರದ ಮೊದಲ ದಿನ ಹಾಗೂ ತಿಂಗಳ ಮೊದಲ ದಿನ ಮನೆಯೊಳಗಿನ ಯಾವುದೇ ವಸ್ತುವನ್ನು ಅವರು ಹೊರಗೆ ಕೊಡುವುದಿಲ್ಲ. ಹಣವನ್ನಂತೂ ಯಾರಿಗೂ ನೀಡುವುದಿಲ್ಲ. ಅಸೌಖ್ಯವಾದರೂ ವೈದ್ಯರ ಬಳಿಗೆ ಹೋಗುವುದಿಲ್ಲ.)

ವಿಷುವಿನ ಮೊದಲನೆಯ ದಿನವೇ ಮರುದಿನದ 'ಕಣಿ' ಗೆ ಬೇಕಾದ ಸಾಮಾಗ್ರಿಗಳನ್ನು ತರಲಾಗುತ್ತದೆ. (ಕಣಿ ಎಂದರೆ ದೃಷ್ಟಿ) ತಮ್ಮ ಹಿತ್ತಲಿನಲ್ಲೇ ಬೆಳೆದ ಗೇರು, ಮಾವು, ಹಲಸು, ಪೇರಳೆ ಮೊದಲಾದ ಹಣ್ಣುಗಳನ್ನು , ಸೌತೆ, ಕುಂಬಳಕಾಯಿ, ಸಿಹಿಕುಂಬಳ, ಬೆಂಡೆ, ಅಲಸಂಡೆ ಮೊದಲಾದ ತರಕಾರಿಗಳನ್ನು ತಂದು ಇಟ್ಟಿರುತ್ತಾರೆ. ಮುಂಜಾನೆ ಬೇಗನೇ ಎದ್ದು ಮನೆಯ ಯಜಮಾನ ಸ್ನಾನಮಾಡಿ ಗಂಧವನ್ನು ಅರೆದು ತರುತ್ತಾನೆ. ಈ ಹೊತ್ತಿಗೆ ಮನೆಯ ಹೆಂಗಸರು ದೇವರ ಸಾಮಾಗ್ರಿಗಳನ್ನೆಲ್ಲಾ ತೊಳೆದು ದೇವರ ಕೋಣೆಯನ್ನು ಶುಚಿಗೊಳಿಸುತ್ತಾರೆ. ಸ್ನಾನ ಮಾಡಿ ಬಂದಂತಹ ಮನೆಯ ಯಜಮಾನನು 'ಕಣಿ' ಗಾಗಿ ತಂದಂತಹ ಸಾಮಾಗ್ರಿಗಳನ್ನು ಒಟ್ಟಾಗಿ ಜೋಡಿಸಿಡುತ್ತಾನೆ. ಹೊಸ ಬಟ್ಟೆಯೊಂದನ್ನು ಅಕ್ಕಿಯೊಂದಿಗೆ ತಟ್ಟೆಯಲ್ಲಿ ಇಡಲಾಗುತ್ತದೆ. ದೇವರ ಮುಂದೆ ದೀಪವನ್ನು ಹಚ್ಚಿಡಲಾಗುತ್ತದೆ. ಮನೆಯವರೆಲ್ಲರೂ ಸ್ನಾನವನ್ನು ಮುಗಿಸಿ ಹೊಸಬಟ್ಟೆಯನ್ನುಟ್ಟು ದೇವರ ಕೋಣೆಗ ಪ್ರವೇಶಿಸಿ 'ವಿಷುಕಣಿ' ನೋಡುತ್ತಾರೆ. ದೇವರಿಗೆ ನಮಸ್ಕರಿಸಿ ಗಂಧ ಪ್ರಸಾದವನ್ನು ಹಚ್ಚಿಕೊಳ್ಳುತ್ತಾರೆ. (ಸಮೃದ್ಧತೆಯ ಸಂಕೇತ 'ವಾಗಿ ಮನೆಯೊಳಗೆ ಈ ರೀತಿಯಲ್ಲಿ 'ಕಣಿ' ಯನ್ನಿಡುವ ಪದ್ಧತಿಯು ಬಂದಿರಬೇಕು ನೂತನ ವರ್ಷಾರಂಭದ ದಿನ ಈ ರೀತಿಯಲ್ಲಿ ಮನೆಯೊಳಗೆ ಸಮೃದ್ಧಿಯನ್ನು ಕಂಡರೆ, ವರ್ಷಪೂರ್ತಿ ಆ ಮನೆ ಸಂಪದ್ಭರಿತವಾಗಿರುತ್ತದೆ ಎನ್ನುವ ನಂಬಿಕೆಯೇ ಇದಕ್ಕೆ ಮೂಲ) ಅನಂತರ ಕಿರಿಯರೆಲ್ಲಾ ಹಿರಿಯರ ಕಾಲುಗಳನ್ನು ಮುಟ್ಟಿ ನಮಸ್ಕರಿಸುತ್ತಾರೆ. ಆಗ ಹಿರಿಯರು 'ವಿಷು ಕಾಣಿಕೆ ' ಎಂದು ಅವರ ಕೈಗೆ ಹಣವನ್ನೋ, ವಸ್ತುವನ್ನೋ ನೀಡುತ್ತಾರೆ. ಇದನ್ನು ' ವಿಷು ಕೈ ನೀಟ್ಟಂ ' ಎಂದು ಹೇಳುತ್ತಾರೆ.

ಕೇರಳದೆಡೆಯಿಂದ ವಲಸೆ ಬಂದ ಆರಂಭದ ಕಾಲದಲ್ಲಿ ಶಾಲಿಯರು ಈ ಪ್ರದೇಶದಲ್ಲಿ ಯಾವುದಾದರೂ ಶ್ರೀಮಂತರ ಆಶ್ರಯವನ್ನು ಪಡೆದುಕೊಂಡು ನಿಂತಿದ್ದರು? ಆ ಕಾಲದಲ್ಲಿ ಮಗ್ಗದಲ್ಲಿ ನೇಯ್ದು ಬಟ್ಟೆಯೊಂದನ್ನು 'ವಿಷು ಕಾಣಿಕೆ' ಯಾಗಿ ಅವರಿಗೆ ಕೊಂಡೊಯ್ದು ಕೊಡುವ ಪದ್ಧತಿ ಇತ್ತು. ಪ್ರತಿ ಕಾಣಿಕೆಯಾಗಿ ಅಕ್ಕಿಯೊ, ತೆಂಗಿನಕಾಯಿಯೋ ಬರುತ್ತಿತ್ತು.

ಓಣಂ: ಕಾಸರಗೋಡಿನ ಶಾಲಿಯರ ವಿಶೇಷ ಹಬ್ಬ ಓಣಂ ಕಾಣಂ ವಿಟ್ಟೆಂಗಿಲುಂ ಓಣಂ ಉಣ್ಣಣಂ, (ಲಂಗೋಟಿ ಮಾರಿಯಾದರೂ ಓಣವನ್ನುಣ್ಣಬೇಕು) ಎನ್ನುವ ಗಾದೆ ಮಾತೇ ಓಣಂನ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. 'ಓಣಂ ಕೇರಳದ ರಾಜ್ಯ ಹಬ್ಬ. ವಾಮನನಿಂದ ಅದುಮಲ್ಪಟ್ಟು ಪಾತಾಳ ಸೇರಿದ ಬಲಿಯು ತನ್ನೂರನ್ನು ನೋಡಲು ಬರುವ ದಿನ. ಆತನನ್ನು ಸ್ವಾಗತಿಸಲೋಸುಗಲೇ ಓಣಂ ದಿನಗಳ ಸಂಭ್ರಮ ' ಎಂದು ಹೇಳಲಾಗುತ್ತದೆ. ಸಿಂಹ ಮಾಸದ ೧೦ ದಿನ ಓಣಂ ಆಚರಿಸಲಾಗುತ್ತದೆ. ಓಣಂಗಿಂತ ಮೂರುದಿನ ಮೊದಲು ಮಗ್ಗದ ಕೆಲಸವನ್ನು ಇವರು ಸ್ಥಗಿತಗೊಳಿಸುತ್ತಾರೆ. ಇದನ್ನು 'ಓಣತ್ತಿನಿ ಪಣಿ ವೆಕ್ಕಲ್ ' (ಓಣಂಗೆ

ಕೆಲಸವಿಡುವುದು) ಎಂದು ಹೇಳುತ್ತಾರೆ. ಈ ಮೂರು ದಿನಗಳು ಕೆಲಸಕ್ಕೆ ರಜೆ ಈ ಸಮಯದಲ್ಲಿ ನೆಯ್ಗೆ ಕೆಲಸಕ್ಕೆ ಉಪಯೋಗಿಸುವ ಎಲ್ಲಾ ಉಪಕರಣಗಳನ್ನು ತೊಳೆದು ಶುಚಿಗೊಳಿಸಿ ಇಡುತ್ತಾರೆ. ಓಣಂ ಕಳೆದ ಮೇಲೆ ಶುಚಿಗೊಳಿಸಿ ಇಟ್ಟ ಉಪಕರಣಗಳಿಗೆ ಗಂಧಪ್ರಸಾದವನ್ನು ಹಚ್ಚಿ ಪೂಜೆ ಮಾಡಿ ದೇವರನ್ನು ಸ್ಮರಿಸಿ ಶುಭಮುಹೂರ್ತದಲ್ಲಿ ಕೆಲಸವನ್ನು ಪ್ರಾರಂಭಿಸುತ್ತಾರೆ. ಹಬ್ಬವನ್ನು ಸಂಭ್ರಮದಿಂದ ಆಚರಿಸಲು ಇರುವ ಸಿದ್ಧತೆಯಿದು. ವರ್ಷಪೂರ್ತಿ ದುಡಿಯುವವನಿಗೆ ಆ ದಿನಗಳಲ್ಲಾದರೂ ಸ್ವಲ್ಪ ವಿಶ್ರಾಂತಿ ಸಿಗಲಿ ಎನ್ನುವ ಕಾರಣದಿಂದಲಾಗಿರಬಹುದು ಈ ಪದ್ಧತಿ ಬಂದಿರುವುದು . ಈ ಮೂರೂ ದಿನ ನೇಕಾರರ ತೆರುವಿನಲ್ಲಿ ನೇಯ್ಗೆಯ ಶಬ್ದ ಕೇಳಿಬರುವುದಿಲ್ಲ. ಓಣಂ ಹಬ್ಬ ಸಿಂಹ ಮಾಸ (ಆಗಸ್ಟ್-ಸೆಪ್ಟೆಂಬರ್) ತಿಂಗಳಲ್ಲಿ ಬರುತ್ತದೆ. ಕೆಲವರು ೯ ದಿನ ಇದನ್ನು ಆಚರಿಸುತ್ತಾರೆ. ಅಷ್ಟು ದಿನವೂ ಚಂದ್ರಗಿರಿಯ ದಕ್ಷಿಣದಲ್ಲಿ ಅಂಗಳದಲ್ಲಿ ಹೂವಿನ ರಂಗೋಲಿ ಬಿಡಿಸುತ್ತಾರೆ. ಕೊನೆಯ ದಿನ 'ತಿರುವೋಣಂ' ಅದರ ಮೊದಲನೆಯ ದಿನ ಉತ್ರಾಡಂ (ಉತ್ತರಾಷಾಡ). ಕಾಸರಗೋಡು ಭಾಗದಲ್ಲಿ ಆ ದಿನ ರಾತ್ರಿ ಎಲ್ಲಾ ವಿಧದ ಧಾನ್ಯಗಳನ್ನು ಉಪ್ಪುನೀರು ಕೊಟ್ಟು ಹುರಿಯಲಾಗುತ್ತದೆ. ಮನೆಯವರೆಲ್ಲರೂ ಕಾಯಿ-ಬೆಲ್ಲ ಸೇರಿಸಿ ಅದನ್ನು ತಿನ್ನುತ್ತಾರೆ. ಮರುದಿನ ಬರುವ ಅತಿಥಿಗಳಿಗೂ ಅದನ್ನು ನೀಡುವ ಸಂಪ್ರದಾಯವಿದೆ. 'ಓಣಂ' ನ ದಿನ ಮನೆಯವರೆಲ್ಲರೂ ಸ್ನಾನ ಮಾಡಿ ಹೊಸ ಬಟ್ಟೆಯನ್ನುಡುತ್ತಾರೆ. ಅದನ್ನು 'ಓಣಕ್ಕೋಡಿ' ('ಕೋಡಿ' ಎಂದರೆ ಹೊಸಬಟ್ಟೆ ) ಎನ್ನುತ್ತಾರೆ. ಮರುದಿನ ಹಬ್ಬದಡುಗೆ ಕೆಲವರು ಮಾಂಸದಡುಗೆಯನ್ನೂ ಮಾಡುವುದಿದೆ.

(ಬೌದ್ಧರ 'ಶ್ರಾವಣ' ದಿನವೆ 'ಆವಣಿ ಓಣ' ವಾಯಿತು ಎಂದೂ ಹೇಳುತ್ತಾರೆ. ಬುದ್ಧನು ಶ್ರವಣ ಪದವಿ ದೊರೆತವರಿಗೆ ಪೀತಾಂಬರವನ್ನು ನೀಡಿದುದರ ಸಂಕೇತವಾಗಿ ಹಳದಿ ವರ್ಣದ ಬಟ್ಟೆಗಳನ್ನು ಹೂವುಗಳನ್ನು ಬಳಸಲಾಗುತ್ತದೆ. (ಸಿ.ವಿಶ್ವನಾಥನ್ ನಾಯಕ್ : 1993:2003)

<u>ಕೃಷಿ ಪ್ರಧಾನ ಸಂಸ್ಕೃತಿಯ ಅಂಗವಾಗಿ ಆಚರಿಸಲಾಗುವ ಹಬ್ಬಗಳು</u>

೧. **ಕೆಡ್ಡಸ:** ತುಳುನಾಡಿನ ಪ್ರಭಾವದಿಂದ 'ಕೆಡ್ಡಸ ' ಎನ್ನುವ ಹಬ್ಬವೊಂದನ್ನು ಇವರು ಆಚರಿಸುವುದು ಇದೆ. (ಹೆಚ್ಚಾಗಿ ಹಳ್ಳಿಗಳಲ್ಲಿ ಮಾತ್ರ) ಕೆಡ್ಡಸದ ದಿನವು ' ಭೂಮಾತೆಯು ಮುಟ್ಟಾಗುವ ದಿನ ' ವೆಂದು ಜನಪದರ ಒಂದು ನಂಬಿಕೆ. ತಮ್ಮೆಲ್ಲಾ ಲೋಪದೋಷಗಳನ್ನು ದೇವರಿಗೂ ಪ್ರಕೃತಿಗೂ ಅನ್ವಯಿಸುವ ಮುಗ್ಧ ಮನಸ್ಸಿನ ಕಲ್ಪನೆಯಿದು. ಇದು ಒಂದು ರೀತಿಯ ಪ್ರಕೃತಿ ಪೂಜೆ. ಆ ದಿನ ಅಂಗಳದ ಮೂಲೆಯಲ್ಲಿ ಸ್ವಲ್ಪ ಎಣ್ಣೆಯನ್ನು ಇಡುತ್ತಾರೆ. ಅನಂತರ ಹುರಿದ ಅಕ್ಕಿ ಮತ್ತು ಬೆಲ್ಲವನ್ನು ಇಡುತ್ತಾರೆ. (ಋತುಮತಿಯಾದವರಿಗೆ ಪುಷ್ಟಿಗಾಗಿ ಹುರಿದ ಅಕ್ಕಿ ಕೊಡುವ ಸಂಪ್ರದಾಯ ಇಲ್ಲಿ ಸಾಮಾನ್ಯ) ಪ್ರಕೃತಿಯನ್ನೂ ತಮ್ಮಂತೇ ಕಾಣುವ ಜನಪದರ ಹೃದಯ ಶ್ರೀಮಂತಿಕೆಗೆ ಇದು ಸಾಕ್ಷಿ. ಆ ದಿನ ಭೂಮಿಯನ್ನು

ನೋಯಿಸಬಾರದು ಎಂದು ನಂಬುವ ಅವರು ಮಕ್ಕಳನ್ನು ನೆಲದ ಮೇಲೆ ಗಟ್ಟಿಯಾಗಿ ಹೆಜ್ಜೆಯಿಟ್ಟು ನಡೆಯಲೂ ಆಸ್ಪದಗೊಡುತ್ತಿರಲಿಲ್ಲ.ಐದು ದಿನ ಕಳೆದ ಮೇಲೆ ಹುರಿದ ಅಕ್ಕಿ ಹಾಕಿದ ಜಾಗವನ್ನು ಸಾರಿಸಿ, ಅರಿಶಿನ , ಸೀಗೆಪುಡಿ ಇಡುವ ಕ್ರಮವೂ ಇದೆ. ಇದು ಭೂಮಾತೆಯ ಸ್ನಾನಕ್ಕಾಗಿ.

' ಕೆಡ್ಡಸ ' ಎನ್ನುವ ಹೆಸರು ಬೇಟೆಯೊಡನೆ ಸಂಬಂಧ ಪಡೆದುಕೊಂಡಿದೆ. ' ಕೆಡ್ಡ ' ಎಂದರೆ ಬೇಟೆ ಎಂಬರ್ಥವಿದೆ ಎಂದು ಅಮೃತ ಸೋಮೇಶ್ವರ ಅವರು ಹೇಳಿದ್ದಾರೆ. (ಅಮೃತ ಸೋಮೇಶ್ವರ :1984) ಇಲ್ಲಿನ ಉಳಿದ ಸಮುದಾಯದಲ್ಲಿ ಈ ಕಾಲದಲ್ಲಿ ಬೇಟೆಯಾಡುವ ಸಂಪ್ರದಾಯವಿದೆ. ಆದರೆ ಶಾಲಿಯರಲ್ಲಿ ಈ ಸಂಪ್ರದಾಯವಿಲ್ಲ.

೨. ಮನೆ ತುಂಬಿಸುವುದು: (ನಿರ) ಇದನ್ನು ವರ್ಷಕ್ಕೊಮ್ಮೆ ಆಚರಿಸುತ್ತಾರೆ. ಭತ್ತದ ಗದ್ದೆಯಲ್ಲಿ ತೆನೆಯು ಮೂಡಿ ಬಂದು ಪೈರಿನಲ್ಲಿ ಹಾಲು ತುಂಬಿದ ಸಮಯ ನೋಡಿ ಇದನ್ನು ಆಚರಿಸಲಾಗುತ್ತದೆ. ಗದ್ದೆಯ ಕೊಯಿಲಿಗಿಂತ ಮೊದಲು ಇದನ್ನು ಮಾಡಬೇಕು. ಗದ್ದೆಯಿಂದ ತೆನೆಗಳನ್ನು ಕೊಯ್ದು ತಂದು ಮನೆಯ ಯಜಮಾನನು ಜೇಡಿಮಣ್ಣಿನಿಂದ ಮಣೆಯ ಮೇಲೆ ಬಿಡಿಸಿದ ಗಣಪತಿಯ ಚಿತ್ರದ ಮೇಲೆ ಇಟ್ಟು ತಲೆಯಲ್ಲಿ ಹೊತ್ತುಕೊಂಡು ಮನೆಯೊಳಗೆ ಬಂದು ನೇರ ದೇವರ ಕೋಣೆಗೆ ಹೋಗಿ ದೇವರ ಮುಂದಿಡುತ್ತಾನೆ. ಅನಂತರ ದೇವರ ಪೂಜೆಯನ್ನು ಮಾಡಲಾಗುತ್ತದೆ. ಅತ್ತಿ, ಇತ್ತಿ, ಆಲ, ಗೋಳಿ ಹಲಸು ಮುಂತಾದ ಮರಗಳ ಎಲೆಗಳನ್ನು (ಐದು ವಿಧ ಎಲೆಗಳಿರಬೇಕೆಂಬ ನಿಯಮವಿದೆ) ತಂದು ಅದರಲ್ಲಿ ಈ ತೆನೆಗಳನ್ನು ಇಟ್ಟು ಪೊಲಿಬಳ್ಳಿಯಲ್ಲಿ ಸಣ್ಣ ಸಣ್ಣ ಕಟ್ಟು ಮಾಡಿ ಕಟ್ಟುತ್ತಾರೆ. ಹೀಗೆ ಕಟ್ಟಿದ ತೆನೆಗಳನ್ನು ಮನೆಯ ಎಲ್ಲಾ ಭಾಗಗಳಿಗೂ, ಮಗ್ಗ, ಹಟ್ಟಿ, ಕೊಟ್ಟಿಗೆ, ಹಾಗೂ ಕೃಷಿಯುಪಕರಣಗಳಿಗೂ ದಡ್ಡಾಲದ ಮರದ ನಾರಿನಿಂದ ಕಟ್ಟುತ್ತಾರೆ. ತೆನೆಯಿಂದ ತೆಗೆದ ಹಾಲಕ್ಕಿಯನ್ನು ಹಾಲಿನ ಪಾಯಸಕ್ಕೆ ಹಾಕಿ ಆ ದಿನ ಪಾಯಸದೂಟವನ್ನು ಮಾಡುವ ಸಂಪ್ರದಾಯವಿದೆ. ಕೆಲವರು ಅದೇ ದಿನ ಹೊಸ ಅಕ್ಕಿಯ ಊಟವನ್ನು ಮಾಡುವ ಸಂಪ್ರದಾಯವಿದೆ.

೨. ಪುತ್ತರಿ: ' ಪುತ್ತನ್ ' ಎಂದರೆ ಹೊಸತು ಎಂದರ್ಥ ' ಅರಿ ' ಎಂದರೆ ಅಕ್ಕಿ. ಗದ್ದೆಯ ಕೊಯ್ಲು ಆದ ಮೇಲೆ ಮನೆಗೆ ಹೊಸ ಅಕ್ಕಿ ಬರುತ್ತವೆ. ಈ ಹೊಸ ಅಕ್ಕಿಯನ್ನು ಮೊದಲನೆಯ ಬಾರಿ ಉಣ್ಣುವಾಗ ಹಬ್ಬದೂಟವನ್ನು ಮಾಡಿ ಉಣ್ಣುವುದು ಸಂಪ್ರದಾಯ. ಆ ದಿನ ತರಕಾರಿಯನ್ನೇ ಅಡುಗೆಗೆ ಬಳಸುತ್ತಾರೆ. ವಿವಿಧ ಭಕ್ಷ್ಯಭೋಜ್ಯಗಳೊಂದಿಗೆ ಹೊಸ ಅಕ್ಕಿಯ ಊಟವನ್ನು ಮೊದಲಬಾರಿ ಉಣ್ಣುವುದರಿಂದ ಮತ್ತೆ ವರ್ಷಪೂರ್ತಿ ಊಟಮಾಡುವಾಗಲೂ ಅದೇ ಸಮೃದ್ಧತೆ ಇರುತ್ತದೆ, ಎಂಬ ಆಶಯ ಇದರಲ್ಲಿದೆ. ಆದಿನ ಮನೆಯನ್ನು ಅಡಿಗೆಮನೆಯನ್ನು ಶುಭ್ರಗೊಳಿಸಿ ಒಲೆಕಟ್ಟೆಗೆ ಸೆಗಣಿ ಸಾರಿಸಿ, ಅನ್ನವನ್ನು ತಯಾರಿಸಲಾಗುತ್ತದೆ.

ಅನ್ನದೊಂದಿಗೆ ಪಾಯಸ ಅತೀ ಅಗತ್ಯವಾಗಿ ಬೇಕು.

ಇತರ ಹಬ್ಬಗಳು

೧.ನವರಾತ್ರಿ :- ನವರಾತ್ರಿಯ ಸಮಯದಲ್ಲಿ ಕೆಲವು ಮನೆಗಳಲ್ಲಿ ದೇವೀ ಪೂಜೆಯನ್ನು ಮಾಡುತ್ತಾರೆ. ಹಿಂದಿನ ಕಾಲದಲ್ಲಿ ವಿಜಯದಶಮಿಯಂದು ಶಾರದಾ ಪೂಜೆಯನ್ನು ಮನೆಗಳಲ್ಲಿ ಮಾಡುತ್ತಿದ್ದರು. ಮೂರು ದಿನ ಮೊದಲು ಪುಸ್ತಕಗಳನ್ನೆಲ್ಲಾ ದೇವರ ಮುಂದೆ ಓರಣವಾಗಿಡಲಾಗುತ್ತದೆ. ಮಕ್ಕಳಿಗೆ ಆ ದಿನಗಳಲ್ಲಿ ಪುಸ್ತಕ ಓದಬಾರದೆಂದು ಆದೇಶಿಸುತ್ತಾರೆ. ಶಾರದಾಪೂಜೆಯ ದಿನ ದೇವರ ಪೂಜೆ ಮಾಡಿ, ಪುಸ್ತಕದ ಪೂಜೆಯನ್ನು ಮಾಡಲಾಗುತ್ತದೆ. ಅನಂತರ ದೇವರ ಮುಂದೆ ಕುಳಿತು ಪುಸ್ತಕವನ್ನು ಬಿಡಿಸಿ ಗಟ್ಟಿಯಾಗಿ ಓದುತ್ತಾರೆ. ಅನಂತರ ಬೆಲ್ಲ ಕಾಯಿ ಸೇರಿಸಿ ಕಲಸಿದ ಅವಲಕ್ಕಿಯನ್ನು ಪ್ರಸಾದ ರೂಪವಾಗಿ ಹಂಚಲಾಗುತ್ತದೆ.

೨.ದೀಪಾವಳಿ :- ದೀಪಾವಳಿಯ ಮೂರು ದಿನ ಸಂಜೆಯ ಹೊತ್ತಿನಲ್ಲಿ ದೇವರಿಗೆ ದೀಪ ಹಚ್ಚುವ ವೇಳೆಗೆ ಮನೆಯ ತುಳಸಿಕಟ್ಟೆ ಹಾಗೂ ಹೊರಭಾಗಗಳಲ್ಲಿ ಹಣತೆಗಳನ್ನು ಹಚ್ಚಿಡುತ್ತಾರೆ. ಪಟಾಕಿಗಳನ್ನು ಸಿಡಿಸಲಾಗುತ್ತದೆ. ನರಕ ಚತುರ್ದಶಿಯಂದು ಎಣ್ಣೆನೀರಿನ ಸ್ನಾನ ಮೊದಲನೆಯ ದಿನವೇ ನೀರು ತುಂಬುವ ಪಾತ್ರೆಗಳನ್ನು ಚೆನ್ನಾಗಿ ತೊಳೆದಿಟ್ಟು, ರಂಗೋಲಿ ಬರೆದು ಹೂವಿನ ಹಾರಗಳನ್ನು ಹಾಕಿ ಅಲಂಕರಿಸಿ, ನೀರು ತುಂಬಿಡಲಾಗುವುದು. ಮರುದಿನ ಮುಂಜಾನೆ ನೀರೊಲೆಗೆ ಬೆಂಕಿ ಹಾಕಿ ಮನೆಯವರೆಲ್ಲರೂ ಎಣ್ಣೆ ಹಚ್ಚಿ ಸ್ನಾನ ಮಾಡಿ, ದೇವರ ಮುಂದೆ ಬೆಳಗಿಸಿದ ದೀಪಕ್ಕೆ ನಮಸ್ಕರಿಸಿ, ಒಂದೆರಡು ಪಟಾಕಿ ಸಿಡಿಸಿ, ಬೆಲ್ಲ ಮತ್ತು ಕಾಯಿ ಹಾಕಿ ಕಲಸಿದ ಅವಲಕ್ಕಿಯನ್ನು ತಿನ್ನುತ್ತಾರೆ. ಅಂದು ಮನೆಯಲ್ಲಿ ಹಬ್ಬದೂಟ.

ಗೋಪೂಜೆಯ ದಿನ ಮುಂಜಾನೆಯೇ ದನ-ಕರುಗಳನ್ನು ಮೇಯಿಸಿ ಹೂವು ಕುಂಕುಮವಿಟ್ಟು, ಪೂಜಿಸುತ್ತಾರೆ. ಅನಂತರ ಬೆಲ್ಲ ಹಾಗೂ ಸೌತೆಕಾಯಿ ಹಾಕಿ ಹಬೆಯಲ್ಲಿ ಬೇಯಿಸಿದ ತಿಂಡಿಯನ್ನು ಅವುಗಳಿಗೆ ತಿನ್ನಲು ಕೊಟ್ಟು, ಮೇಯಲು ಬಿಡುತ್ತಾರೆ.

ಅಷ್ಟಮಿ : ದಕ್ಷಿಣ ಕನ್ನಡ ಪ್ರದೇಶಗಳಲ್ಲಿರುವ ಶಾಲಿಯಾ ಸಮುದಾಯಕ್ಕೆ ಅಷ್ಟಮಿಯು ವಿಶಿಷ್ಟವಾದುದು. ಅಷ್ಟಮಿಯ ದಿನ ಮಧ್ಯಾಹ್ನ ಮೊಳಕೆ ಬರಿಸಿದ ಪಚ್ಚೆ ಹೆಸರಿನ ಕಾಳಿನೊಂದಿಗೆ ಹರಿವೆ ದಂಟನ್ನು ಸೇರಿಸಿ ಪಲ್ಯ ಮಾಡಲೇ ಬೇಕು. ಹಲವು ವಿಧದ ತರಕಾರಿಗಳಿಂದ ಆ ದಿನ ಬಗೆ ಬಗೆಯ ಪಲ್ಯಗಳನ್ನು ತಯಾರಿಸುತ್ತಾರೆ. ಪಾಯಸದೊಂದಿಗೆ ಮಧ್ಯಾಹ್ನದೂಟ ಅದೇ ದಿನ, ಮುಂಜಾನೆ 'ಮೂಡೆ' ಅಥವಾ 'ಕೊಟ್ಟಿಗೆ' ಗೆ ಅರೆದು ಇಟ್ಟಿರುತ್ತಾರೆ. ಅದನ್ನು ರಾತ್ರಿ ಹಬೆಯಲ್ಲಿ ಬೇಯಿಸುತ್ತಾರೆ. ಚಂದ್ರಮೂಡುವವರೆಗೂ ಜಾಗರಣೆ

# ಅಧ್ಯಾಯ -೫

## ಜೀವನಾವರ್ತನ ಆಚರಣೆಗಳು

೧) ಜನನ ಕಾಲದ ಆಚರಣೆ

೨) ಬಾಲ್ಯ ಕಾಲದ ಆಚರಣೆ

೩) ಋತು ಶಾಂತಿ

೪) ಮದುವೆ

೫) ಸೀಮಂತ

೬) ಅಂತ್ಯ ಸಂಸ್ಕಾರ ಹಾಗೂ ಉತ್ತರ ಕ್ರಿಯೆ

# ಅಧ್ಯಾಯ ೫
# ಜೀವನಾವರ್ತನ ಆಚರಣೆಗಳು

ಆಯಾ ಜಾತಿಗಳ ಸಂಸ್ಕೃತಿಯನ್ನು ರೂಪಿಸುವಲ್ಲಿ ಸಂಸ್ಕಾರಗಳಿಗೆ ವಿಶೇಷವಾದ ಪಾತ್ರವಿದೆ. ಹುಟ್ಟಿನಿಂದ ಸಾವಿನವರೆಗಿನ ಮನುಷ್ಯನ ಬೆಳವಣಿಗೆಯ ಹಂತದಲ್ಲಿ ಆಯಾಯ ಕಾಲದಲ್ಲಿ ನಡೆಸಬೇಕಾದ ಸಂಸ್ಕಾರಗಳು ಆತನ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗೆ ಪೂರಕವಾಗುತ್ತವೆ ಮಾತ್ರವಲ್ಲ, ಸಮಾಜದ ಜತೆಗೆ ಆತನನ್ನು ಬಂಧಿಸಿ, ಅದರ ಒಂದು ಅಂಗವನ್ನಾಗಿಸುವ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ತಲೆಮಾರುಗಳೊಂದಿಗೆ ಅವನನ್ನು ಜೋಡಿಸಿ, ಜಾತಿ ಪ್ರಜ್ಞೆಯನ್ನು ಜಾಗೃತಗೊಳಿಸುತ್ತವೆ. "ಸಂಸ್ಕಾರಗಳು ವ್ಯಕ್ತಿಯನ್ನು ಸಂಸ್ಕೃತಿಗೆ ಒಳಪಡಿಸುತ್ತಾ ಅಂತಿಮವಾಗಿ ಸಂಕೀರ್ಣ ಮಾನವೀಕರಣ ಪ್ರಕ್ರಿಯೆಗೆ ಸಮುದಾಯವನ್ನು ಒಳಪಡಿಸುತ್ತಿರುತ್ತದೆ. ಇಂತಹ ಕ್ರಿಯೆಯ ಮೂಲಕ ಪ್ರಾಚೀನ ಕುಲಗಳಲ್ಲಿದ್ದುಕೊಂಡು ಇದ್ದ ಕುಲಗಳ ಸಾಂಸ್ಕೃತಿಕ ವಿಕಾಸವಾದಂತೆಲ್ಲ ಸಂಸ್ಕಾರಗಳು ಧರ್ಮದ ಜತೆಗೆ ಹೊಂದಾಣಿಕೆಯನ್ನು ಮಾಡಿಕೊಂಡಿವೆ. ಸಂಸ್ಕಾರಗಳು ಮನುಷ್ಯನ ವ್ಯಕ್ತಿತ್ವಕ್ಕೆ ಸಂಬಂಧಪಟ್ಟವು. ವ್ಯಕ್ತಿಯನ್ನು ಕುಟುಂಬಕ್ಕೂ, ಸಮುದಾಯಕ್ಕೂ, ಸಮಾಜಕ್ಕೂ, ಧರ್ಮಕ್ಕೂ ಕೂಡಿಸಿ ಕಟ್ಟುವ ಮನುಷ್ಯ ನಿರ್ಮಿತ ಸಾಂಸ್ಕೃತಿಕ ನಡವಳಿಕೆಗಳು. ಕುಟುಂಬದಿಂದ ಸಮುದಾಯಕ್ಕೆ, ಸಮುದಾಯದಿಂದ ಸಮಾಜದ ಅನೇಕ ಶಾಖೆಗಳಿಗೆ ಮನುಷ್ಯನ ಅರ್ಥಪೂರ್ಣ ವಿಕಾಸಕ್ಕೆ ಪೂರಕವಾಗುವ ಈ ಸಂಸ್ಕಾರಗಳು ಒಂದು ಬಗೆಯಲ್ಲಿ ಸಂಸ್ಕೃತಿಯ ನಿಯಮಗಳು. ವ್ಯಕ್ತಿಯನ್ನು ರೂಪಿಸುವ ಸಂಸ್ಕಾರಗಳು ಸಮಾಜವನ್ನು ರೂಪಿಸುವ ಮಟ್ಟಿಗೂ ವ್ಯಾಪಿಸಿಕೊಂಡಿರುತ್ತವೆ. ಮನುಷ್ಯನ ಉಗಮ ವಿಕಾಸದಂತೆಯೇ ಪ್ರತಿಯೊಂದು ಸಂಸ್ಕೃತಿಯಲ್ಲಿ ಸಂಸ್ಕಾರಗಳು ವಿವಿಧ ಆಕೃತಿ ನಿಯಮಗಳನ್ನು ಅಳವಡಿಸಿಕೊಂಡು ಬೆಳೆಯುತ್ತಲೇ ಇರುತ್ತವೆ. ಆದಿಮಯುಗದ ನಾಗರಿಕತೆಗಳಲ್ಲೆಲ್ಲಾ ಸಾವಿನ ಸಂಸ್ಕಾರಗಳು ಬಹಳ ಗಂಭೀರವಾಗಿರುತ್ತಿದ್ದವು. ಭಾಗಶಃ ಮನುಷ್ಯನ ಸಂಸ್ಕಾರಗಳಲ್ಲೆಲ್ಲಾ ಅತ್ಯಂತ ವಿಶಿಷ್ಟವಾದವು ಹುಟ್ಟು ಸಾವಿನ ಸಂಸ್ಕಾರಗಳು, ಧರ್ಮದ ಜತೆಯಲ್ಲಿ ಹೀಗೆ ಎಲ್ಲಾ ಸಮುದಾಯಗಳಿಂದಲೂ ಒಂದೊಂದು ಸಾಂಸ್ಕೃತಿಕ ಗುರುತಿನಿಂದ ಧರ್ಮದಿಂದ ಪ್ರತ್ಯೇಕಗೊಳಿಸಿದೆ. ಹೀಗೆ ಪ್ರತ್ಯೇಕಗೊಳಿಸಿದುದರಿಂದಲೇ ಜಗತ್ತಿನ ಸಂಸ್ಕಾರಗಳಲ್ಲಿ ಬಹುತ್ವ ವಿಕಾಸವಾಗಲು ಸಾಧ್ಯವಾಯಿತು. ಈ ವಿಶಿಷ್ಟ ವಿಭಿನ್ನತೆಯೇ ಸಂಸ್ಕೃತಿಯ ಬೆಳೆಯುವಿಕೆಗೂ ದಾರಿ ಮಾಡಿಕೊಟ್ಟಿತು. ಒಂದು ಜನಾಂಗದ ಸಂಸ್ಕಾರಗಳ ರೀತಿಯಲ್ಲಿ ಇನ್ನೊಂದು ಜನಾಂಗದ ಸಂಸ್ಕಾರಗಳು ಇಲ್ಲದಿರುವುದೇ ಒಂದೊಂದು ಸಮುದಾಯವು ಸಾಂಸ್ಕೃತಿಕವಾಗಿ ವಿಶಿಷ್ಟವಾದ ಸೃಜನಶೀಲತೆಯನ್ನು ಮೈಗೂಡಿಸಿಕೊಳ್ಳಲು ಕಾರಣವಾಯಿತು. ಹೀಗೆ ಸಂಸ್ಕೃತಿಯ ಬಹು ಸಾಧ್ಯತೆಯೇ ಬಹುಚಿಂತನಗಳಿಗೆ ದಾರಿ ಮಾಡಿಕೊಟ್ಟಿತು. (ಮೊಗಳ್ಳಿ, ಗಣೇಶ್ "ಸೊಲ್ಲು" ಪುಟ ೧೦).

ಆಯಾ ಜಾತಿಯವನ ಜೀವನಾವರ್ತನ ಆಚರಣೆಗಳು, ಭಾಷೆ, ಜೀವನಶೈಲಿ ಮತ್ತು ವೃತ್ತಿ ಅವನು ಯಾವ ಸಮುದಾಯಕ್ಕೆ ಸೇರಿದವನು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಜೀವನ ಶೈಲಿಯು ಕಾಲಕ್ರಮೇಣ ವ್ಯತ್ಯಸ್ತವಾದರೂ, ಆಚರಣೆಗಳು ಬಹಳ ಮಂದಗತಿಯಿಂದ ಬದಲಾವಣೆಗೆ ಒಳಗಾಗುತ್ತದೆ. ಸಾಮಾನ್ಯವಾಗಿ ಇದು ತಲೆತಲಾಂತರದವರೆಗೆ ಮುಂದುವರಿಯುತ್ತದೆ. ಇವುಗಳನ್ನು ನಿರ್ದಿಷ್ಟವಾಗಿ ಪಾಲಿಸದೇ ಇದ್ದರೆ, ಪಾಪವು ಅಂಟಿಕೊಳ್ಳುತ್ತದೆ, ಕುಟುಂಬಕ್ಕೆ ತೊಂದರೆಯುಂಟಾಗುತ್ತದೆ ಎಂಬ ಆಂತರಿಕ ಭಯವು ಇದಕ್ಕೆ ಕಾರಣವಾಗಿರಬಹುದು. ಒಂದೆಡೆಯಿಂದ ಇನ್ನೊಂದೆಡೆಗೆ ವಲಸೆ ಬಂದ ಸಮುದಾಯಗಳ ಸಂಸ್ಕಾರಗಳಲ್ಲಿ ಪ್ರಾದೇಶಿಕತೆ ಪರಿಣಾಮವನ್ನು ಬೀರಿದರೂ, ಶೋಧಿಸುತ್ತಾ ಹೋದರೆ, ಮೂಲದ ಯಾವುದಾದರೂ ಒಂದು ಅಂಶ ಅದರಲ್ಲಿ ಉಳಿದುಕೊಂಡಿರುತ್ತದೆ. ಇದು ಜನಾಂಗದ ಮೂಲದ ಅಧ್ಯಯನಕ್ಕೆ ಅಲ್ಪಮಟ್ಟಿಗೆ ಸಹಾಯಕವಾಗುತ್ತದೆ. ಮೂಲ ಸಂಸ್ಕೃತಿಯಿಂದ ಬೇರ್ಪಟ್ಟು ವಲಸೆ ಬರುವ ಕಾಲದಲ್ಲಿ, ಹಾದು ಬರುವ ಪ್ರದೇಶಗಳ ಸಂಸ್ಕೃತಿಯನ್ನು ಜತೆಗೇ ಸೇರಿಸುತ್ತಾ ಸಾಗುವ ಜನಾಂಗವು ಕ್ರಮೇಣ ಮೂಲಸಂಸ್ಕೃತಿ ಹಾಗೂ ಆಚರಣೆ ಯಾವುದು ಎನ್ನುವುದನ್ನೇ ಮರೆಯುವ ಸಾಧ್ಯತೆಯೂ ಇದೆ. ಇಂತಹ ಸಂದರ್ಭದಲ್ಲಿ ವಲಸೆ ಬಂದಿರುವ ಸಮುದಾಯದ ಬಗ್ಗೆ ಅಧ್ಯಯನವನ್ನು ನಡೆಸುವಾಗ, ಭಾಷೆ, ಜೀವನಶೈಲಿ, ವೃತ್ತಿ ಹಾಗೂ ಆಚರಣೆಗಳಲ್ಲಿ ಸಾಮ್ಯತೆ ಕಂಡುಬರುವ ಇತರ ಸಮುದಾಯಗಳ ಜತೆಗೆ ಹೋಲಿಸಿ ಸಂಶೋಧನೆಯನ್ನು ನಡೆಸುವುದು ಅನಿವಾರ್ಯವಾಗುತ್ತದೆ.

ಜನಾಂಗಗಳ ನಡವೆ ಆಚಾರ ಅನುಷ್ಠಾನಗಳ ಕೊಡು–ಕೊಳ್ಳುವಿಕೆಯು ಸಾಮಾನ್ಯವಾಗಿ ಎಲ್ಲಾ ಕಡೆಯೂ ಕಂಡು ಬರುತ್ತದೆ. ಮೂಲ ಜನಾಂಗದಿಂದ ಬೇರ್ಪಟ್ಟು ಬಂದಂತಹ ಜನಾಂಗವು ಮೂಲಸಂಸ್ಕೃತಿಯನ್ನು, ಆಚಾರಗಳನ್ನು ಮರೆತು, ಅನುಸರಿಸಿದ ಆಚರಣೆಗಳನ್ನೇ ಮೂಲಸಂಸ್ಕೃತಿ ಎಂದು ಭಾವಿಸುವ ಸಾಧ್ಯತೆಗಳೇ ಹೆಚ್ಚು. ಈ ರೀತಿ ಆಚಾರಾನುಷ್ಠಾನಗಳು ಪರಸ್ಪರ ಅನುಕರಿಸಲ್ಪಡುವುದು, ಸಾಮಾನ್ಯವಾಗಿ ಒಂದೇ ವರ್ಗಕ್ಕೆ ಸೇರಿದವರಲ್ಲಿ ಹೆಚ್ಚಾಗಿರುತ್ತದೆ. ಆಗ ಜಾತಿಯ ವರ್ಗೀಕರಣವು ಮಸುಕಾಗಿ ವೃತ್ತಿಯ ಹಿನ್ನೆಲೆಯಲ್ಲಿ ವರ್ಗೀಕರಣವು ನಡೆದು ವೃತ್ತಿಗಳನ್ನವಲಂಬಿಸುವವರೆಲ್ಲರೂ ಒಂದೇ ವರ್ಗ ಎನ್ನುವ ನಿಲುವಿಗೆ ಬರುತ್ತದೆ. ಆಗ ಕೃಷಿ ಸಮುದಾಯ, ವೃತ್ತಿ ಸಮುದಾಯ, ಆರಾಧಕರ ಸಮುದಾಯ ಮತ್ತು ಅಸ್ಪೃಶ್ಯ ಸಮುದಾಯ ಎಂದು ವರ್ಗೀಕರಣ ಮಾಡಿಕೊಳ್ಳಬೇಕಾಗುತ್ತದೆ.

ವೃತ್ತಿ ಸಮುದಾಯದಲ್ಲಿ ಮನುಷ್ಯನ ಕೆಲವು ಬೇಡಿಕೆಗಳನ್ನು ಪೂರೈಸುವ ವೃತ್ತಿಯನ್ನವಲಂಬಿಸಿದವರು ಸಮಾನರಾಗುತ್ತಾರೆ. ಉದಾ : ಎಣ್ಣೆ ತೆಗೆಯುವ ಗಾಣಿಗ, ಬಟ್ಟೆ

ನೇಯುವ ನೇಕಾರ, ಮೀನು ಹಿಡಿಯುವ ಮೀನುಗಾರ, ಮೂರ್ತೆ ನಡೆಸುವ ತೀಯಾ, ದೇವಾಲಯದ ಕೆಲಸ ಮಾಡುವ ಮಣಿಯಾಣಿ ಇವರೆಲ್ಲ ಒಂದಾಗುತ್ತಾರೆ. ಇವರ ನಡುವೆ ಆಚಾರಾನುಷ್ಠಾನಗಳ ಕೊಡು–ಕೊಳ್ಳುವಿಕೆಯು ಬಹಳ ಪ್ರಮುಖವಾಗಿ ನಡೆಯುತ್ತದೆ. ಇದರೊಂದಿಗೆ ಪ್ರಾದೇಶಿಕತೆಯೂ ತನ್ನ ಪ್ರಭಾವವನ್ನು ಆಚಾರಾನುಷ್ಠಾನಗಳ ಮೇಲೆ ಬೀರುತ್ತದೆ. ಆದುದರಿಂದಲೇ ಶಾಲಿಯಾ ಸಮುದಾಯದ "ಚರಡ್ ಕಟ್ಟಲ್" ಸಂಪ್ರದಾಯಕ್ಕೂ, ಮಣಿಯಾಣಿ ಸಮುದಾಯದ "ಪಂದಲ್‌ಮಂಗಲಂ"ಗೂ ಸಾಮ್ಯತೆಯಿದೆ. ಶಾಲಿಯಾ ಸಮುದಾಯದ "ವಾಲ್ಯಕಾರನಾಕಲ್" ಸಂಪ್ರದಾಯಕ್ಕೂ ತೀಯಾ ಸಮುದಾಯದ "ಮೋತ್‌ವಾಳ್" ಕ್ರಮಕ್ಕೂ ಹೋಲಿಕೆಯಿದೆ. ಹಾಗೇ ಸೀಮಂತ–ನಾಮಕರಣ–ಮದುವೆ–ಅಪರಕ್ರಿಯೆಗಳಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳಿದ್ದರೂ ಸಮಾನವಾದ ಆಚಾರಾನುಷ್ಠಾನಗಳನ್ನು ಅನುಸರಿಸುತ್ತಿರುವುದನ್ನು ಕಾಣಬಹುದು. ಕಾಸರಗೋಡಿನ ಭಾಗದಲ್ಲಿ ಹಿಂದಿನ ಕಾಲದಲ್ಲಿ ಈ ಎಲ್ಲಾ ವರ್ಗದವರೂ "ಪೊಡಮುರಿ" ಎನ್ನುವ ಮದುವೆಯ ಸಂಪ್ರದಾಯವನ್ನು ಆಚರಿಸುತ್ತಿದ್ದರು ಎಂದೂ ಹೇಳಲಾಗುತ್ತದೆ.

# ೧. ಜನನ ಕಾಲದ ಆಚರಣೆ

ಮಾನವನ ಜೀವನಾವರ್ತನದಲ್ಲಿ ಜನನದಿಂದ ಸಾವಿನವರೆಗಿನ ಸಂಸ್ಕಾರಗಳು ಆತನ ಬೆಳವಣಿಗೆಯ ಹಂತಗಳನ್ನು ಸೂಚಿಸುತ್ತವೆ. ಇವುಗಳಲ್ಲಿ ನಾಮಕರಣ, ಉಪನಯನ, ಮದುವೆ, ಸೀಮಂತ, ಅಪರಕ್ರಿಯೆಗಳು ಪ್ರಮುಖವಾಗಿ ಸೇರಿಕೊಳ್ಳುತ್ತವೆ. ಪ್ರತಿಯೊಂದು ಸಮುದಾಯವೂ ಇದನ್ನು ಬೇರೆ ಬೇರೆ ರೀತಿಯಿಂದ ಆಚರಿಸಿಕೊಂಡು ಬಂದಿರುವುದನ್ನು ಕಾಣಬಹುದು. ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ/ದೇವಾಂಗ ಸಮುದಾಯವು ತನ್ನದೇ ಆದ ಇಂತಹ ಆಚರಣೆಗಳನ್ನು ರೂಡಿಸಿಕೊಂಡಿದೆ. ಕಾಲದಿಂದ ಕಾಲಕ್ಕೆ ಪರಿಸರ ಮತ್ತು ಇತರ ಕಾರಣಗಳಿಂದ ಈ ಆಚರಣೆಗಳಲ್ಲಿ ಕೆಲವು ಸಂಪ್ರದಾಯಗಳು ಹೊಸತಾಗಿ ಸೇರ್ಪಡೆಯಾಗಿದ್ದರೆ, ಇನ್ನು ಕೆಲವು ಮಾಯವಾಗಿರುವುದೂ ಇದೆ. ಅಂತಹ ಕೆಲವು ಆಚರಣೆಗಳ ಕಿರುಪರಿಚಯವು ಇಲ್ಲಿದೆ. ಇತ್ತೀಚಿನವರೆಗೂ ಈ ಸಮುದಾಯವು ಇವುಗಳಲ್ಲಿ ಕೆಲವನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿರುವುದನ್ನು ಕಾಣಬಹುದು. ಹಿಂದಿನ ಕಾಲದ ಸಂಪ್ರದಾಯಗಳನ್ನು ಇಲ್ಲಿ ದಾಖಲಿಸುವ ಪ್ರಯತ್ನವಿದೆ.

೧. ಬಾಣಂತನ ಮತ್ತು ನಾಮಕರಣ : "ಶಾಲಿಯಾ ಸಮುದಾಯ"ವು ಮಗುವೊಂದು ಜನಿಸಿತು ಎನ್ನುವಾಗ, ಅದನ್ನು ಬಹಳ ಸಂಭ್ರಮದಿಂದ ಸ್ವಾಗತಿಸುತ್ತದೆ. ಹಿಂದಿನ ಕಾಲದಲ್ಲಿ ಕೆಲವೆಡೆ ತೆಂಗಿನ ಮಡಲಿ (ಗರಿ) ನಿಂದ ನೆಲಕ್ಕೆ ಬಡಿದು ಮಗು ಗಂಡೋ ಹೆಣ್ಣೋ ಎಂಬುದನ್ನು ಸೂಚಿಸಲಾಗುತ್ತಿತ್ತು. ತೆಂಗಿನ ಮಡಲನ್ನು ಒಂದು ಬಾರಿ ನೆಲಕ್ಕೆ ಬಡಿದರೆ "ಗಂಡು" ಎಂದರ್ಥ. ಎರಡು ಬಾರಿ ಬಡಿದರೆ "ಹೆಣ್ಣು" ಎಂದರ್ಥ. ಪ್ರಸವವಾದ ವಾರ್ತೆಯನ್ನು ಪತಿಗೃಹಕ್ಕೆ ತಿಳಿಸಲು ಗಂಡು ಮಕ್ಕಳನ್ನು ಕಳುಹಿಸಲಾಗುತ್ತದೆ. ಈ ವಾರ್ತೆಯೊಂದಿಗೆ ಬರುವ ಹುಡುಗನಿಗೆ ಹೊಸವಸ್ತ್ರಗಳನ್ನು ನೀಡಿ ಸತ್ಕರಿಸಿ ಕಳುಹಿಸಿಕೊಡಲಾಗುತ್ತದೆ. ಪ್ರಸವದ ಕೆಲವು ದಿನ ಬಾಣಂತಿಯನ್ನು ಜಾಗರೂಕತೆಯಿಂದ ನೋಡಿಕೊಳ್ಳಲಾಗುತ್ತದೆ. ಅವಳಿಗೆ ದಿನನಿತ್ಯ ಬಿಸಿನೀರಿನ ಸ್ನಾನ ಮಾಡಿಸಿ, ಸುಗಂಧ ದ್ರವ್ಯದ ಧೂಮ ಹಾಕಿ ಬೆಚ್ಚಗೆ ಮಲಗಿಸಲಾಗುತ್ತದೆ.

ಬಾಣಂತಿ ಮದ್ದು : ಹಿಂದಿನ ಕಾಲದಲ್ಲಿ ಹೆರಿಗೆಗಳು ಮನೆಯಲ್ಲೇ ಆಗುತ್ತಿದ್ದುದರಿಂದ ಬಾಣಂತಿಗೆ ಮದ್ದು ತಯಾರಿಸುವ ಜವಾಬ್ದಾರಿ ಮನೆಯವರದ್ದೇ ಆಗಿತ್ತು. ಜನಪದ ವೈದ್ಯ ಪದ್ಧತಿಯಲ್ಲಿ ಮನೆಯಲ್ಲೇ ಈ ಬಾಣಂತಿ ಮದ್ದು ತಯಾರಾಗುತ್ತಿತ್ತು. ಮೂರು ರೀತಿಯಲ್ಲಿ ಈ ಮದ್ದನ್ನು ತಯಾರಿಸಲಾಗುತ್ತಿತ್ತು. ಔಷಧೀಯ ಗುಣವುಳ್ಳ ವಸ್ತುಗಳನ್ನೇ ಇದಕ್ಕೆ ಹೆಚ್ಚಾಗಿ ಬಳಸುತ್ತಿದ್ದರು :

೧. <u>ಬೆಳ್ಳುಳ್ಳಿ ಮದ್ದು</u> : ಬೇಕಾಗುವ ಸಾಮಾಗ್ರಿಗಳು :

| | | |
|---|---|---|
| ಬೆಳ್ಳುಳ್ಳಿ ಸಿಪ್ಪೆ ತೆಗೆದದ್ದು | : | ೧ ಸೇರು |
| ಶುಂಠಿ ಸಿಪ್ಪೆ ತೆಗೆದದ್ದು | : | ೨ ಸೇರು |
| ತುಪ್ಪ | : | ೨ ಕುಡ್ತೆ |
| ತೆಂಗಿನಕಾಯಿ | : | ೨ |
| ಬೆಲ್ಲ | : | ೨ ಕಿಲೋ (ಹಿಂದಿನ ಕಾಲದಲ್ಲಿ ತೊಲದ ಲೆಕ್ಕವಿತ್ತು). |

ತಯಾರಿಸುವ ವಿಧಾನ : ಬೆಳ್ಳುಳ್ಳಿಯನ್ನು ಎಣ್ಣೆ ಹಚ್ಚಿ ಬಿಸಿಲಿಗಿಟ್ಟು ಸಿಪ್ಪೆಯನ್ನು ಸುಲಿದು ಇಡಬೇಕು. ಸಿಪ್ಪೆ ತೆಗೆದ ಬೆಳ್ಳುಳ್ಳಿಯನ್ನು ತೆಂಗಿನಕಾಯಿಯ ತೆಳು ಹಾಲಿನಲ್ಲಿ ಬೇಯಿಸಬೇಕು. ಸಿಪ್ಪೆ ತೆಗೆದ ಶುಂಠಿಯನ್ನು ಚೆನ್ನಾಗಿ ಅರೆದು ನೀರು ಹಾಕಿ ಬೇರೆಯೇ ಸ್ವಲ್ಪ ಹೊತ್ತು ಇಟ್ಟಾಗ ಅದರಲ್ಲಿ ಸುಣ್ಣದಂತಹ ವಸ್ತು ತಳದಲ್ಲಿ ನಿಲ್ಲುತ್ತದೆ. ಬೇಯಿಸಿದ ಬೆಳ್ಳುಳ್ಳಿಗೆ ಶುಂಠಿಯ ನೀರನ್ನು ಹಾಕಿ, ಚೆನ್ನಾಗಿ ಕುದಿಸಿ, ಮಿಶ್ರಣ ದಪ್ಪವಾಗುತ್ತಾ ಬಂದ ಹಾಗೆ ತೆಂಗಿನಕಾಯಿಯ ದಪ್ಪಹಾಲು ಹಾಕಬೇಕು. ಬೆಲ್ಲ ಹಾಕಿ ಕುದಿಸಿ ದಪ್ಪವಾಗುತ್ತಿರುವಂತೆ, ತುಪ್ಪವನ್ನು ಹಾಕುತ್ತಾ ಮಗುಚಬೇಕು. ಪಾಕವು ತಳ ಬಿಟ್ಟರೆ ಮದ್ದು ತಯಾರಾಯಿತು. ಆನಂತರ ವೀಳ್ಯದೆಲೆಯಲ್ಲಿ ಮದ್ದನ್ನು ಹಾಕಿ ಅಂಟಿಕೊಳ್ಳುತ್ತದೆಯೇ ಎಂದು ನೋಡಬೇಕು. ಅಂಟದಿದ್ದರೆ ಮದ್ದು ಸರಿಯಾಯಿತು ಎಂದು ಲೆಕ್ಕ. ಇದನ್ನು ಬಾಣಂತಿಗೆ ಬೆಳಿಗ್ಗೆ ಮತ್ತು ಸಂಜೆ ತಿನ್ನಲು ಕೊಡಬೇಕು.

೨. <u>ಓಮದ ಮದ್ದು</u> : ಬೇಕಾದ ಸಾಮಾಗ್ರಿಗಳು :

| | | | |
|---|---|---|---|
| ೧) | ಓಮ | : | ೨ ಪಾವು |
| ೨) | ಗಸಗಸೆ | : | ೧/೪ ಪಾವು |
| ೩) | ಬೆಲ್ಲ | : | ೨ ಕಿಲೋ |
| ೪) | ತುಪ್ಪ | : | ೨ ಕುಡ್ತೆ |
| ೫) | ತೆಂಗಿನಕಾಯಿ | : | ೨ |

ಓಮವನ್ನು ಚೆನ್ನಾಗಿ ಕುಟ್ಟಿ ಅದರ ಸಿಪ್ಪೆಯನ್ನು ಗಾಳಿಸಿ ತೆಗೆಯಬೇಕು. ತೆಂಗಿನಕಾಯಿಯ ತೆಳುಹಾಲಿನಲ್ಲಿ ಓಮ ಮತ್ತು ಗಸಗಸೆಯನ್ನು ನುಣ್ಣಗೆ ಅರೆದು ಕುದಿಸಬೇಕು. ಚೆನ್ನಾಗಿ ಕುದಿದ ಮಿಶ್ರಣಕ್ಕೆ ದಪ್ಪ ಹಾಲು, ಬೆಲ್ಲವನ್ನು ಹಾಕಿ ಕುದಿಸುತ್ತಿರಬೇಕು. ತಳ ಬಿಡುತ್ತಿರುವಂತೆ ತುಪ್ಪ ಹಾಕಬೇಕು. ವೀಳ್ಯದೆಲೆಗೆ ಹಾಕಿ ಮದ್ದು ಅಂಟಿಕೊಳ್ಳುತ್ತದೆಯೇ ಎಂದು ಪರೀಕ್ಷಿಸಬೇಕು.

೩) ಪುಡಿಮದ್ದು : (ಇದನ್ನು ಅಡಿಗೆ ಮದ್ದು ಎಂದೂ ಹೇಳುತ್ತಾರೆ) ಬೇಕಾಗುವ ಸಾಮಾಗ್ರಿಗಳು :

| | | |
|---|---|---|
| ತೆಂಗಿನಕಾಯಿ | : | ೫ |
| ಅವಲಕ್ಕಿ | : | ೨ ಸೇರು |
| ಬೆಲ್ಲ | : | ೨ ಕಿ.ಗ್ರಾ. |
| ಒಣಮೆಣಸು | : | ೧/೪ ಪಾವು |
| ಸಿಪ್ಪೆ ಸುಲಿದ ಬೆಳ್ಳುಳ್ಳಿ | : | ೨ ಪಾವು |
| ಓಮ | : | ೧/೨ ಪಾವು |
| ಜೀರಿಗೆ | : | ೧/೨ ಪಾವು |
| ಕೊತ್ತಂಬರಿ | : | ೧/೨ ಪಾವು |
| ಸಾಸಿವೆ | : | ೧/೪ ಪಾವು |
| ತುಪ್ಪ | : | ೧ ೧/೪ ಕುಡ್ತೆ |
| ಎಳ್ಳೆಣ್ಣೆ | : | ೨ ಕುಡ್ತೆ |
| ತೆಂಗಿನೆಣ್ಣೆ | : | ೬ ಕುಡ್ತೆ |
| ಬೆಳ್ತಿಗೆ ಅಕ್ಕಿ | : | ೩ ಪಾವು |
| ಉತ್ತುತ್ತೆ | : | ೧/೪ ಕಿ.ಗ್ರಾ. |
| ದ್ರಾಕ್ಷಿ (ಒಣ) | : | ೧/೪ ಕಿ.ಗ್ರಾ. |
| ಕಲ್ಲುಸಕ್ಕರೆ | : | ೧/೪ ಕಿ.ಗ್ರಾ. |

ಇವುಗಳಲ್ಲದೆ, ನೆಗ್ಗಿನ ಮುಳ್ಳು, ಜಾಯಿಕಾಯಿ, ಜೇಷ್ಠ ಮಧು, ಕರಿಮೆಣಸು, ಒಣಶುಂಠಿ, ಪತ್ರೆ, ಕರಿಜೀರಿಗೆ, ಇತ್ತಿಮರದ ಬೇರು, ಗಸಗಸೆಗಳನ್ನು ಸ್ವಲ್ಪಸ್ವಲ್ಪ ಹಾಕಬೇಕು.

ತಯಾರಿಸುವ ವಿಧಾನ : ತೆಂಗಿನಕಾಯಿಯನ್ನು ತುರಿದು ಇಟ್ಟುಕೊಳ್ಳಬೇಕು. ತುರಿದ ಕಾಯಿಯನ್ನು ಮತ್ತು ಅವಲಕ್ಕಿಯನ್ನು ಹುರಿಯಬೇಕು. ಮಸಾಲೆ ಸಾಮಾಗ್ರಿ ಮತ್ತು ಔಷಧ ಸಾಮಾಗ್ರಿಗಳನ್ನು ನುಣ್ಣಗೆ ಪುಡಿ ಮಾಡಿಟ್ಟುಕೊಳ್ಳಬೇಕು. ಅಕ್ಕಿಯನ್ನು ಅರೆದು ಹಲವು ತೂತಿರುವ ಪಾತ್ರೆಯಲ್ಲಿ ಹಾಕಿ ಕುದಿಯುವ ಎಣ್ಣೆಯಲ್ಲಿ ಬೂಂದಿ ಮಾಡಿಕೊಳ್ಳಬೇಕು. ಸಿಪ್ಪೆ ತೆಗೆದ ಬೆಳ್ಳುಳ್ಳಿಯನ್ನು ಕೆಂಪಗೆ ಕಾಯಿಸಿ, ಎಳ್ಳೆಣ್ಣೆಯನ್ನು ಹಾಕಬೇಕು. ನೊರೆ ಬರಲಾರಂಭಿಸಿದಾಗ ಬೆಲ್ಲ ಹಾಕಬೇಕು. ಬೆಲ್ಲ ಕುದಿಯಲಾರಂಭಿಸಿದಾಗ ಹುರಿದಿಟ್ಟ ತೆಂಗಿನಕಾಯಿ, ಅವಲಕ್ಕಿ, ಅಕ್ಕಿಯ ಬೂಂದಿ, ಪುಡಿಮಾಡಿಟ್ಟ ಮಸಾಲೆ ಸಾಮಾಗ್ರಿ ಹಾಗೂ ಔಷಧ ಸಾಮಾಗ್ರಿಗಳನ್ನು ಹಾಕಿ ಮಿಶ್ರಣವನ್ನು ಚೆನ್ನಾಗಿ ಮಗುಚಬೇಕು. ಮದ್ದು ಪರಿಮಳವನ್ನು ಬೀರಲಾರಂಭಿಸಿದಾಗ ಉರಿ ಕಡಿಮೆ ಮಾಡಿ, ಮಿಶ್ರಣ ಗಟ್ಟಿಯಾಗುವವರೆಗೆ ಮಗುಚಬೇಕು. ಮದ್ದು ಪುಡಿರೂಪಕ್ಕೆ ಬಂದ ಮೇಲೆ ಇಳಿಸಬೇಕು.

ಈ ಮೇಲಿನ ಮದ್ದುಗಳಲ್ಲದೆ ಬಾಣಂತಿಗೆ ಹಸಿ ಮಸಾಲೆಗಳನ್ನು ಅರೆದು ಕೊಡಲಾಗುತ್ತದೆ. ಸಾಸಿವೆ ಗಂಜಿ, ಮೆಂತೆ ಗಂಜಿ, ಕೊತ್ತಂಬರಿ ಗಂಜಿ, ತತ್ತಾಯಿಯ ("ತಾತಯಿ ಎಂದೂ ಹೇಳುತ್ತಾರೆ) ಹಾಲುಬಾಯಿ ಈ ಮೊದಲಾದವುಗಳನ್ನು ನೀಡುತ್ತಾರೆ. 'ಮುಕ್ಕುಡಿ' ಎಂದು ಕರೆಯಲ್ಪಡುವ ವಿಶೇಷ ಖಾರದ ಪದಾರ್ಥವನ್ನೂ ಮಾಡಿಕೊಡುತ್ತಾರೆ. ಹಿಂದಿನ ಕಾಲದಲ್ಲಿ ಬಹಳಷ್ಟು ಹೆರುತ್ತಿದ್ದ ಹೆಂಗಸರು ಆರೋಗ್ಯಪೂರ್ಣವಾಗಿರಲು ಇಂತಹ ಬಾಣಂತನ ಮದ್ದುಗಳೇ ಪ್ರಮುಖ ಕಾರಣಗಳು. ಈ ಮದ್ದಿನಿಂದಾಗಿ ಬಾಣಂತಿಗೆ ಮಾತ್ರವಲ್ಲ, ನವಜಾತ ಶಿಶುವಿಗೂ, ಶೀತ, ಜ್ವರ, ಕೆಮ್ಮುಗಳ ಬಾಧೆ ಬರುತ್ತಿರಲಿಲ್ಲ.

ಹೆರಿಗೆಯಾದ ನಾಲ್ಕನೇ ದಿನ "ನಾಲಾಂಮಾಟ್" (ನಾಲ್ಕನೇ ಶುದ್ಧ) ಆ ದಿನದಿಂದ ಬಾಣಂತಿಗೆ ಮಾಂಸಾಹಾರವನ್ನು ನೀಡಲು ಆರಂಭ. "ನಾಲಿಲ್ಲಂನ ಹೆಂಗಸರು ಆದಿನ ಬರಬೇಕು. ಇದನ್ನು "ಸಣ್ಣಶುದ್ಧ" ಎಂದೂ ಹೇಳುತ್ತಾರೆ.

ಹೆರಿಗೆಯ ಸಮಯದಲ್ಲಿ ಬಾಲಾಯ್ಮ ಎಂಬ ಪ್ರಸವ ಕಾಲದ ಸೂತಕವನ್ನು ಶಾಲಿಯಾ ಸಮುದಾಯ ಇತ್ತೀಚಿನವರೆಗೂ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿತ್ತು. ೧೬ ದಿನಗಳ ಕಾಲ ಕುಟುಂಬದವರಿಗೆ ಈ ಸೂತಕವಿರುತ್ತಿತ್ತು. ಈ ಸೂತಕವನ್ನು ಕಳೆಯುವ ಹಕ್ಕು ಮಡಿವಾಳ ಜಾತಿಯವರಿಗೇ ನಿರ್ಧಿಷ್ಟವಾಗಿತ್ತು. ಹೆರಿಗೆಯ ಅನಂತರದ ೧೬ನೇ ದಿನ ಮಡಿವಾಳತಿ (ವಣ್ಣಾತಿ) ಯು ಬಂದು ಮನೆಯನ್ನು ಶುದ್ಧಗೊಳಿಸಿ ಮಡಿಬಟ್ಟೆಯನ್ನು ಎಲ್ಲರಿಗೂ ನೀಡುತ್ತಿದ್ದಳು. ಈ ಬಟ್ಟೆಗೆ "ವಣ್ಣಾತಿ ಮಾಟ್" ಎಂದು ಹೆಸರು. ಇದಕ್ಕೆ ಉಳಿದ ಸಂದರ್ಭಗಳಲ್ಲೂ ವಿಶೇಷವಾದ ಸ್ಥಾನವಿದೆ. ಸ್ನಾನದ ಅನಂತರ ಅದನ್ನು ಧರಿಸಿಕೊಂಡರೆ ಶುದ್ಧವಾಯಿತು. ಈ ಪದ್ಧತಿಯನ್ನು ಸಮುದಾಯವು ಕಡ್ಡಾಯವಾಗಿ ಆಚರಿಸಬೇಕು. ಇದನ್ನು ಉಲ್ಲಂಘಿಸಿದವರನ್ನು ಜಾತಿಯಿಂದ ಹೊರಹಾಕಲೂ ಸಮುದಾಯದ ಹಿರಿಯರು ಹಿಂದೆಗೆಯುತ್ತಿರಲಿಲ್ಲ. ಕಾಸರಗೋಡಿನ 'ನಗರಂ'ನಲ್ಲಿ ಈ ವಿಷಯದಲ್ಲಿ ೫೦ ವರ್ಷಗಳ ಹಿಂದೆ ನಡೆದಂತಹ ಘಟನೆಯೇ ಇದಕ್ಕೆ ಸಾಕ್ಷಿಯಾಗಿದೆ. ಅದು ಹೀಗಿದೆ : "ಒಂದು ಬಾರಿ ಕಾಸರಗೋಡಿನ 'ನಗರಂ'ಗೆ ಸೇರಿದ ಒಂದು ಕುಟುಂಬದ ಸದಸ್ಯನೊಬ್ಬನು 'ವಣ್ಣಾತಿಮಾಟ್' ಧರಿಸಲು ಹಿಂದೇಟು ಹಾಕಿದನು. ವಿಷಯವು 'ನಗರಂ'ಗೆ ತಿಳಿಯಿತು. ಆತನನ್ನು 'ಜಾತಿಭ್ರಷ್ಟ' ಎಂದು 'ನಗರಂ' ನಿಂದ ಹೊರಹಾಕಲಾಯಿತು. ಆತನು ತನಗುಂಟಾದ ಮಾನಹಾನಿಗೆ ಪರಿಹಾರ ನೀಡಬೇಕೆಂದು 'ನಗರಂ'ನ ಸ್ಥಾನಿಕರ ವಿರುದ್ಧ ಕೋರ್ಟಿನಲ್ಲಿ ದಾವೆ ಹೂಡಿದನು. ನ್ಯಾಯಾಲಯದ ತೀರ್ಪು 'ನಗರಂ'ನ ಸ್ಥಾನಿಕರ ಪರವಾಗಿ ಬಂತು. ಆದರೆ ವಿಷಯ ನ್ಯಾಯಾಲಯದವರೆಗೂ ಹೋದುದರಿಂದ ಮನನೊಂದ ಸ್ಥಾನಿಕರು ಸಾಮೂಹಿಕವಾಗಿ ದೇವಿಯಲ್ಲಿ ಪ್ರಾರ್ಥಿಸಿದರೆಂದೂ,

ಆ ವ್ಯಕ್ತಿ ಮಾನಸಿಕವಾಗಿ ಹಾಗೂ ಸಾಂಪತ್ತಿಕವಾಗಿ ಬಹಳಷ್ಟು ಅಧಃಪತನಕ್ಕೆ ಇಳಿದು ಕೊನೆಗೆ ಆತ್ಮಹತ್ಯೆ ಮಾಡಿಕೊಂಡನೆಂದೂ ಹೇಳಲಾಗುತ್ತದೆ.

ಬಾಣಂತಿಯು ೪೦ ದಿನ ಬಾವಿ ಮುಟ್ಟಬಾರದು, ಅಲಂಕಾರ ಮಾಡಿಕೊಳ್ಳಬಾರದು, ಅಡಿಗೆ ಮಾಡಬಾರದು ಎಂಬ ನಿಯಮವಿದೆ. (೪೦ನೇ ದಿನದ ಸ್ನಾನವೆಂದರೆ ಒಂದು ಕಡಿಮೆ ನಲವತ್ತು ಎಂದರೆ ೩೯ನೇ ದಿನದ ಸ್ನಾನ). ಸ್ನಾನ ಮಾಡಿದ ಮೇಲೆ, ಮುಡಿಯುಟ್ಟು, ಹೂ ಮತ್ತು ಕುಂಕುಮವನ್ನು ಧರಿಸಿ, ೫ ವೀಳ್ಯದೆಲೆ ಮತ್ತು ಒಂದು ಅಡಿಕೆಯನ್ನು ಬಾವಿಯ ಮೇಲೆ ಇರಿಸಿ ನಮಸ್ಕರಿಸಿದ ಮೇಲೆ ಬಾವಿಯಿಂದ ನೀರನ್ನು ಸೇದುತ್ತಾಳೆ. ಕೆಲವರು ೪೦ನೇ ದಿನದ ಸ್ನಾನವನ್ನು ೨೯ರಂದು ಮಾಡುವುದೂ ಇದೆ. (ಈ ಪದ್ಧತಿಯು ಪ್ರಸವವಾದ ಹೆಂಗಸು ಶ್ರಮದ ಕೆಲಸ ಮಾಡಬಾರದು, ಆದರಿಂದ ಅವಳ ಆರೋಗ್ಯಕ್ಕೆ ಹಾನಿಯಾಗಬಹುದು ಎಂಬ ಕಾರಣಕ್ಕೆ ಬಂದಿರಬಹುದು.) ಆ ದಿನ ಅವಳು ತಾಂಬೂಲವನ್ನು ಜಗಿಯುವ ಸಂಪ್ರದಾಯವೂ ಇದೆ. ಅರ್ಥಪೂರ್ಣವಾದ ಈ ತಾಂಬೂಲ ಜಗಿಯುವಿಕೆಯು ಮುಂದಿನ ದಾಂಪತ್ಯ ಜೀವನಕ್ಕೆ ಸಿದ್ಧವಾದುದರ ಸಂಕೇತ.

ನವಜಾತ ಶಿಶುವಿಗೆ ೨೮ನೇ ದಿನ ಪ್ರಮುಖವಾಗಿರುತ್ತದೆ. ಆ ದಿನ "ನಾಮಕರಣ ಶಾಸ್ತ್ರ"ವನ್ನು ಮಾಡುತ್ತಾರೆ. ಸಾಮಾನ್ಯವಾಗಿ "ತೊಟ್ಟಿಲಿಗೆ ಹಾಕುವುದು" ಎಂದು ಇದನ್ನು ಗುರುತಿಸುತ್ತಾರೆ. ಕೆಲವರು ೧೯ನೇ ದಿನದಂದು ಇದನ್ನು ಮಾಡುವುದಿದೆ. ಸಮುದ್ರದ ಉಬ್ಬರವಿಳಿಯುವುದಕ್ಕಿಂತಲೂ ಮೊದಲು ಇದನ್ನು ಆಚರಿಸಬೇಕು ಎಂಬ ನಿಯಮವಿದೆ. ಹೆಚ್ಚಾಗಿ ಮಧ್ಯಾಹ್ನವಾಗುವುದಕ್ಕಿಂತಲೂ ಮೊದಲೇ ತೊಟ್ಟಿಲು ಹಾಕುವ ಕ್ರಮವಿದೆ. "ಬಾಣಂತಿಯೂ ಮಗುವೂ" ಸ್ನಾನ ಮುಗಿಸಿದ ಮೇಲೆ ಮಗುವಿಗೆ ಹೊಸ ಬಟ್ಟೆಯನ್ನು ತೊಡಿಸಲಾಗುತ್ತದೆ. ಹಚ್ಚಿದ ದೀಪವೊಂದರ ಮುಂದೆ ಹರಿವಾಣದಲ್ಲಿ ಅಕ್ಕಿ ಹಾಗೂ ಹೊಸ ಮುಂಡು ಮಡಚಿ ಇಟ್ಟಿರುತ್ತಾರೆ. ಅದರ ಬಳಿಯಲ್ಲೇ ಚಿನ್ನದ ತುಂಡೊಂದನ್ನು (ಹೆಚ್ಚಾಗಿ ಉಂಗುರವನ್ನು) ಹಾಕಿದ ಹಾಲಿನ ಬಟ್ಟಲನ್ನು ಇಟ್ಟಿರುತ್ತಾರೆ. ಅದರ ಮುಂದೆ ಬಾಣಂತಿ ಮಗುವನ್ನು ಮಡಿಲಲ್ಲಿಟ್ಟು ಕುಳಿತುಕೊಳ್ಳುತ್ತಾಳೆ. ಹಲಸಿನ ಎಲೆಯಿಂದ ತಯಾರಿಸಿದ ಚಮಚದಂತಹುದರಲ್ಲಿ ಹಿರಿಯರೆಲ್ಲಾ ಮಗುವಿಗೆ ಹಾಲನ್ನು ಕುಡಿಸಿ, ಅಕ್ಷತೆ ಕಾಳುಗಳನ್ನು ಮಗುವಿಗೂ ಬಾಣಂತಿಗೂ ಹರಸುತ್ತಾರೆ. ಮಗುವಿಗೆ ಉಡುಗೊರೆಗಳನ್ನು ಈ ಸಂದರ್ಭದಲ್ಲಿ ಕೊಡುವ ಸಂಪ್ರದಾಯವೂ ಇದೆ. ಆನಂತರ ಮಗುವಿನ ತಂದೆ ಮನೆಯವರು ಮಗುವಿಗೆ ಹೆಸರನ್ನಿಡುತ್ತಾರೆ. ಅಲಂಕೃತವಾದ ತೊಟ್ಟಿಲಲ್ಲಿ ಮಗುವನ್ನು ಮಲಗಿಸಿ ತೂಗಲಾಗುತ್ತದೆ. ಕೆಲವೆಡೆ ಮಗುವನ್ನು ತೊಟ್ಟಿಲಿನ ಕೆಳಭಾಗದಲ್ಲಿ ಹಾಗೂ ಮೇಲ್ಭಾಗದಲ್ಲಿ ಮೂರು ಬಾರಿ ಆಚೆಯಿಂದ ಈಚೆ, ಈಚೆಯಿಂದ ಆಚೆ ಹಸ್ತಾಂತರಿಸಿ ಸುತ್ತು ಬರಿಸಿದ ಮೇಲೆ ತೊಟ್ಟಿಲಲ್ಲಿ ಮಲಗಿಸುತ್ತಾರೆ.

ಮಗುವಿಗೆ ಚಿನ್ನವನ್ನು ಹಾಕಿದ ಹಾಲು ಕುಡಿಸುವುದು ಸಮೃದ್ಧತೆಯ ಸಂಕೇತವಾಗಿರಬಹುದು. ಅಥವಾ ಚಿನ್ನವನ್ನು ತೇದು ಕುಡಿಸಿದರೆ ಮಗುವಿನ ಬಣ್ಣ ಚಿನ್ನದಂತೆಯೇ ಆಗುತ್ತದೆ ಎಂಬ ನಂಬಿಕೆಯೂ ಇದಕ್ಕೆ ಕಾರಣವಾಗಿರಬಹುದು.

ಅದೇ ದಿನ ಮಗುವಿನ ಕಿವಿಯನ್ನು ಚುಚ್ಚಿಸುವ ಕ್ರಮವೂ ಇದೆ. ಅದಕ್ಕಾಗಿ ಅಕ್ಕಸಾಲಿಗನು ಮುಂಜಾನೆ ಮನೆಗೆ ಬರುತ್ತಾನೆ. ಅವನಿಗೆ ಅಕ್ಕಿ ತೆಂಗಿನಕಾಯಿ ಮತ್ತು ಹಣವನ್ನು ಕಾಣಿಕೆಯಾಗಿ ಕೊಡಲಾಗುತ್ತದೆ.

ಮಗುವಿಗೆ ಒಂಭತ್ತು ಅಥವಾ ಹನ್ನೊಂದನೇ ತಿಂಗಳಲ್ಲಿ ಕೂದಲು ಕತ್ತರಿಸುವ ಸಂಪ್ರದಾಯವೂ ಇತ್ತು ಎನ್ನಲಾಗಿದೆ. ಅದಕ್ಕೆ ಕೂದಲು ತೆಗೆಯುವ ಭಂಡಾರಿಯೂ ಮನೆಗೇ ಬರುತ್ತಿದ್ದನು. ಕತ್ತರಿಸಿದ ಕೂದಲನ್ನು ಬಾಳೆಯ ತುದಿ ಎಲೆಯಲ್ಲಿ ಹಾಕಿ ಹರಿಯುವ ನೀರಿನಲ್ಲಿ ಬಿಡಲಾಗುತ್ತಿತ್ತು. ಕೂದಲು ಕತ್ತರಿಸಿದವನಿಗೂ ಅಕ್ಕಿ, ತೆಂಗಿನಕಾಯಿ ಮತ್ತು ಹಣದ ಕಾಣಿಕೆ ಸಲ್ಲುತ್ತಿತ್ತು.

## ೨. ಬಾಲ್ಯ ಕಾಲದ ಆಚರಣೆ

ಶಾಲಿಯಾ ಸಮುದಾಯವು ನಡೆಸಿಕೊಂಡು ಬಂದ ಆಚರಣೆಗಳಲ್ಲಿ ವಿಶಿಷ್ಟವಾದ ಆಚರಣೆಗಳು ಬಾಲ್ಯ ಕಾಲದ ಸಂಸ್ಕಾರಗಳು. ಉಪನಯನ ಸಂಸ್ಕಾರವನ್ನು ಹೋಲುವ ಈ ಸಂಸ್ಕಾರವನ್ನು ಬಾಲಕಿಯರಿಗೂ, ಬಾಲಕರಿಗೂ ಇವರು ನಡೆಸುತ್ತಾರೆ. ಇದು ಯಾವಾಗ, ಹೇಗೆ, ಯಾಕೆ ರೂಢಿಗೆ ಬಂತು ಎನ್ನುವುದಕ್ಕೆ ಯಾವುದೇ ಮೂಲಗಳೂ ಲಭಿಸುವುದಿಲ್ಲ. ಬಾಲಕಿಯರು ಋತುಮತಿಯರಾಗುವುದಕ್ಕಿಂತಲೂ ಮುನ್ನ ನಡೆಸುವ ಸಂಸಾರವನ್ನು 'ಚರಡ್ ಕೆಟ್ಟಲ್' ಅಥವಾ =ತ; ?} A ಜÔ?à (ನೂಲು) ಕಟ್ಟುವುದು ಅಥವಾ (ಚಪ್ಪರದ ಮದುವೆ) ಎಂದು ಹೇಳುತ್ತಾರೆ. ಬಾಲಕರು ಯುವತ್ವಕ್ಕೆ ಬಂದಾಗ ನಡೆಸುವ ಸಂಸ್ಕಾರವನ್ನು 'ವಾಲ್ಯಕ್ಕಾರನಾಕಲ್' (ಯುವಕನಾಗಿಸುವುದು) ಎಂದು ಹೇಳುತ್ತಾರೆ.

'ಚರಡ್ ಕೆಟ್ಟಲ್': ಬಾಲಿಕೆಯೊಬ್ಬಳಿಗೆ ಹನ್ನೆರಡು ವರ್ಷವಾಗುವುದಕ್ಕಿಂತಲೂ ಮೊದಲು ಎಂದರೆ ಅವಳು ಋತುಮತಿಯಾಗುವುದಕ್ಕಿಂತ ಮುನ್ನ ಆಕೆಯನ್ನು 'ಸ್ಥಾನಂ'ಗೆ ಕರೆದುಕೊಂಡು ಹೋಗಿ ಇದನ್ನು ಆಚರಿಸುತ್ತಾರೆ. ಶಾಲಿಯಾ 'ಸ್ಥಾನಂ'ಗಳ ಗರ್ಭಗುಡಿಯ ಬಾಗಿಲನ್ನು ಸಾಮಾನ್ಯವಾಗಿ ಸಂಕ್ರಮಣದ ದಿನ ಅಥವಾ ಸಂಕ್ರಮಣ ಕಳೆದು ಬರುವ ಮೊದಲ ಮಂಗಳವಾರ (ಇದನ್ನು 'ಸೋಮವಾರ ಹಡೆದ ಮಂಗಳವಾರ' ಎಂದು ಹೇಳುತ್ತಾರೆ) ಮಾತ್ರ ಹಿಂದೆ ತೆರೆಯುತ್ತಿದ್ದರು. ಆ ದಿನ ಅಥವಾ 'ಸ್ಥಾನಂ'ನ ವಿಶೇಷ ಉತ್ಸವಗಳ ದಿನಗಳಲ್ಲಿ ಇದನ್ನು ಆಚರಿಸಲಾಗುತ್ತದೆ. ಇದನ್ನು 'ಪಂದಲ್ ಮಂಗಲ' ಚಪ್ಪರದ ಮದುವೆ ಎಂದೂ ಹೇಳುತ್ತಾರೆ. 'ಚರಡ್ ಕೆಟ್ಟಲ್' ಎಂದರೆ 'ನೂಲು ಕಟ್ಟುವುದು' ಎಂದರ್ಥ. ಇದುವೇ ಇಲ್ಲಿನ ಪ್ರಮುಖ ಕ್ರಿಯೆ. ಬಾಲಿಕೆಯು ತನ್ನ ಬಂಧು ಬಾಂಧವರೊಂದಿಗೆ ಆ ದಿನ 'ಸ್ಥಾನಂ'ಗೆ ಬರುತ್ತಾಳೆ. ಅವಳಿಗೆ ಮದುಮಗಳ ಅಲಂಕಾರವನ್ನು ಮಾಡಿ, ಹೊಸಬಟ್ಟೆಯನ್ನು ತೊಡಿಸುತ್ತಾರೆ. 'ಸ್ಥಾನಂ'ಗೆ ೧೦೦ ಅಡಿಕೆ ಮತ್ತು ಐದು ಕಟ್ಟು (ಸೂಡಿ) ವೀಳ್ಯದೆಲೆಯನ್ನು ಅರ್ಪಿಸಲಾಗುತ್ತದೆ. ಅಚ್ಚಮ್ಮಾರು ಮುಂದೆ ಇರಿಸಿದಂತಹ ಮಣೆಯಲ್ಲಿ ಬಾಲಿಕೆಯು ತನ್ನ ತಾಯಿ ತಂದೆಯರಿಗೆ ಅಭಿಮುಖಳಾಗಿ ಕುಳಿತುಕೊಳ್ಳುತ್ತಾಳೆ. 'ಪಯಕ್ಕೊ' ಎನ್ನುವ 'ಚೆಟ್ಟಿಯಾರ್‌ಚ'ನ ಸಹಾಯಕನು ವೀಳ್ಯದೆಲೆ ಮತ್ತು ಅಡಿಕೆಯ ಕಟ್ಟುಗಳನ್ನು ಬುಟ್ಟಿಯಲ್ಲಿ ಹಿಡಿದುಕೊಂಡು ಬಂದು ಅವಳ ಮುಂದೆ ಇರಿಸಿ, 'ತಮಿಗು ವೆಕ್ಕುನ್ನು' (ತಟ್ಟೆ ಇಡುತ್ತೇನೆ.) ಎಂದು ಮೂರು ಬಾರಿ ಗಟ್ಟಿಯಾಗಿ ಕೂಗಿ ಹೇಳುತ್ತಾನೆ. ಅದರೊಂದಿಗೆ ತಟ್ಟೆಯಲ್ಲಿ ಅಕ್ಕಿ ಮತ್ತು ಬಿಳಿಯ ನೂಲನ್ನು ಇರಿಸಲಾಗುತ್ತದೆ. ಮುಂತೆ ಚೆಟ್ಟಿಯಾರ್ ತಟ್ಟೆಯಿಂದ ನೂಲನ್ನು ತೆಗೆದು ಹುಡುಗಿಯ ಕೊರಳಿಗೆ ಕಟ್ಟುತ್ತಾರೆ. ಅನಂತರ ಬುಟ್ಟಿಯಿಂದ ೫ ವೀಳ್ಯದೆಲೆ ಮತ್ತು ಒಂದು ಅಡಿಕೆಯನ್ನು ಅವಳ ಕೈಗೆ ಇಟ್ಟು

'ಹದಿನಾಲ್ಕು ತೇರುಗಳಿಂದಲೂ ಇದನ್ನು ಪಡೆದುಕೊ' ಎಂದು ಹೇಳಿ ಅಕ್ಷತೆಯನ್ನು ಹಾಕಿ ಹರಸುತ್ತಾರೆ. ಇದನ್ನು 'ಅಂಶ' ನೀಡುವುದು ಎಂದು ಹೇಳುತ್ತಾರೆ. 'ಅಂಶ' ಎಂದರೆ ಪಾಲು. ಅವಳು ಸಮುದಾಯದ ಕ್ಷೇತ್ರಗಳ 'ನಗರಂ'ಗಳಲ್ಲಿ ತನ್ನ ಹಕ್ಕು ಪಡೆದುಕೊಳ್ಳುವ ಅಂಗೀಕಾರವನ್ನು ಈ ಮೂಲಕವಾಗಿ ಪಡೆದುಕೊಳ್ಳುತ್ತಾಳೆ. ಅವಳು ಎಲ್ಲಿ ಇದ್ದರೂ ೧೫ 'ನಗರಂ'ಗಳಲ್ಲಿ ಆಕೆಗೆ ಪಾಲಿದೆ. ಯಾವ 'ನಗರಂ'ಗೆ ಹೋದರೂ ಅವಳಿಗೆ ವಿಶೇಷ ಸ್ಥಾನವಿದೆ. ಇದಾದ ಮೇಲೆ ಹಿರಿಯರೆಲ್ಲರೂ (ಮೊದಲು ಆಚಾರ ವರ್ಗದವರು) ಬಾಲಿಕೆಯನ್ನು ಅಕ್ಷತೆ ಕಾಳು ಹಾಕಿ ಹರಸುತ್ತಾರೆ. ಅನಂತರ ನಾಲ್ಕು ಮನೆಯ ತಾಯಂದಿರು (ಅಂಶ) "ಎಲೆ ಅಡಿಕೆ ತೆಗೆದುಕೊಳ್ಳಿ" ಎಂದು ಪುನಃ ಎತ್ತರಿಸಿ ಹೇಳುತ್ತಾರೆ. ಮುತ್ತೈದೆಯರು ಬಂದು ಬಾಲಿಕೆಯನ್ನು ಹರಸಿ ಬುಟ್ಟಿಯಿಂದ ಐದು ವೀಳ್ಯದೆಲೆ ಮತ್ತು ಒಂದು ಅಡಿಕೆಯನ್ನು ತೆಗೆದುಕೊಳ್ಳುತ್ತಾರೆ. ಹಿರಿಯರೆಲ್ಲರೂ ಆಶೀರ್ವದಿಸಿ ಎಲೆ ಅಡಿಕೆ ತೆಗೆದುಕೊಂಡಾದ ಮೇಲೆ ಹುಡುಗಿಯನ್ನು ಏಳಿಸಲಾಗುತ್ತದೆ. ದೇವಾಲಯಕ್ಕೆ ಪ್ರದಕ್ಷಿಣೆ ಬಂದು ದೇವರ ಆಶೀರ್ವಾದವನ್ನು ಪಡೆದು ಮನೆಗೆ ಹಿಂತಿರುಗುತ್ತಾರೆ. ಅಂದು ಮನೆಯಲ್ಲಿ ಹಬ್ಬದ ಅಡುಗೆ. ಸಿಹಿ ಹಂಚುವುದು ಕಡ್ಡಾಯ. 'ಹುಡುಗಿಗೆ ತಾಲಿ ಕಟ್ಟಿ ಆಯಿತು" ಎಂದು ಹಿರಿಯ ಘೋಷಿಸುವುದೂ ಇದೆ. "ಚಪ್ಪರ ಮದುವೆ"ಯಾದ ಹುಡುಗಿಯನ್ನು ಸಂಬಂಧಿಕರು ಒಂದೆರಡು ದಿನಗಳಿಗೆ ಕರೆದೊಯ್ಯುವುದೂ, ಉಪಚರಿಸುವುದೂ ಇದೆ.

ಈ ಕ್ರಮವನ್ನು ನಡೆಸಲು 'ನಗರಂ'ನ ಸ್ಥಾನಕ್ಕೆ ನಿಗದಿತ ಹಣವನ್ನು ಪಾವತಿಸಲೇಬೇಕು. ಇತ್ತೀಚೆಗೆ ಕೆಲವು 'ತಾನಂ'ಗಳಲ್ಲಿ 'ಆ ಹಣವನ್ನು ಪಾವತಿಸಿಬಿಟ್ಟರಾಯಿತು' ಎಂದು ಭಾವಿಸಿ, ಹಣವನ್ನು ಕಟ್ಟಿ ಸಂಪ್ರದಾಯವನ್ನು ಕೈಬಿಡುತ್ತಿದ್ದಾರೆ. ಕೆಲವೆಡೆ ಹುಡುಗಿಯ 'ಕುತ್ತಿಗೆಗೆ ತಾಲಿ ಕಟ್ಟುವವನು ಗಂಡನಾಗುತ್ತಾನೆ' ಎಂಬ ನಿಯಮವಿರುವುದರಿಂದ ಈ ಪದ್ಧತಿಯನ್ನು ವಿರೋಧಿಸುತ್ತಾರೆ. (ಉದಾ : ನೀಲೇಶ್ವರಂ ನಗರಂ) ಮತ್ತೆ ಕೆಲವೆಡೆ ಇಂದೂ ಅದನ್ನು ಆಚರಿಸಿಕೊಂಡು ಬರುತ್ತಾರೆ.

ಈ ಸಂಪ್ರದಾಯವು ಕಾಸರಗೋಡು ಭಾಗದ ಇನ್ನು ಕೆಲವು ಸಮುದಾಯಗಳಲ್ಲಿ ಇತ್ತೀಚಿನವರೊಗೂ ರೂಢಿಯಲ್ಲಿತ್ತು ಎಂದು ತಿಳಿದು ಬಂದಿದೆ. ಮಣಿಯಾಣಿ ಸಮುದಾಯದಲ್ಲಿ ಇದನ್ನು 'ಪಂದಲ್‌ಮಂಗಲಂ' ಎಂದೇ ಹೇಳುತ್ತಾರೆ. ಯಾದವರು ಎಂದು ಗುರುತಿಸಲ್ಪಡುವ ಅವರು, ಶ್ರೀ ಕೃಷ್ಣನೆಂದು ಸಂಕಲ್ಪಿಸಲಾದ ಕಲ್ಲಿಗೆ ಕನ್ಯೆಯರನ್ನು ಧಾರೆಯೆರೆದು ಮಾಂಗಲ್ಯಧಾರಣೆ ಮಾಡಿಸುವ ಪದ್ಧತಿಗೆ ಒೞಗನ್ನುತ್ತಾರೆ. ವಾಣಿಯಾ ಸಮುದಾಯದಲ್ಲಿ ಕೂಡಾ ಇದು ಆಚರಣೆಯಲ್ಲಿದೆ. ಮದುವೆಗಿಂತ ಮೊದಲು ಹುಡುಗಿಯರಿಗೆ 'ಸ್ಥಾನಂ'ನ ವಲಿಯಕೋಮರಂ ತಾಲಿ ಕಟ್ಟಿ ಹರಸುವುದನ್ನು ಅವರು 'ಪಂದಲ್ ಮಂಗಲಂ' ಎನ್ನುತ್ತಾರೆ. ಭಂಡಾರಿ

ಸಮುದಾಯದಲ್ಲೂ ಇಂತಹದೇ ಆಚರಣೆಯು ಇತ್ತು. ತೀಯಾ ಸಮುದಾಯದವರು ಮಾತ್ರ 'ಪಂದಲ್ ಮಂಗಲಂ' ಎಂದರೆ 'ಸಾಮೂಹಿಕ ಮದುವೆ' ಎಂದು ಹೇಳುತ್ತಾರೆ.

ತುಳುನಾಡಿನಲ್ಲಿ ಮಲಯಾಳಂ ಮೂಲದ ಕೆಳವರ್ಗದ ಸಮುದಾಯದಲ್ಲಿ ಇದು ಆಚರಣೆಗೆ ಬರಲು ಒಂದು ಕಾರಣ 'ಮುಸ್ಲಿಮರ ಧಾಳಿ' ಎಂಬ ಅಭಿಪ್ರಾಯವಿದೆ. ಕೊರಳಲ್ಲಿ ನೂಲು ಕಟ್ಟಿಸಿಕೊಂಡ ಹೆಣ್ಣು ವಿವಾಹಿತೆಯ ಸಾಲಿಗೆ ಸೇರುವುದರಿಂದ ಆಕೆಗೆ ಪರ ಮತೀಯರಿಂದಲೂ, ಪರಪುರಷರಿಂದಲೂ ತೊಂದರೆಗಳು ಬರುವುದು ಕಡಿಮೆ. ಆದುದರಿಂದ ಹೆಣ್ಣಿನ ಮಾನ ರಕ್ಷಣೆಯನ್ನು ಮಾಡಲು ಈ ಪದ್ಧತಿಯನ್ನು ರೂಢಿಗೆ ತಂದಿರಬಹುದೆನ್ನುತ್ತಾರೆ. 'ತಾನಂ'ನ ದೇವಿಯ ಎದುರು ಕನ್ಯೆಯನ್ನು ನಿಲ್ಲಿಸಿ 'ಇನ್ನು ಮುಂದೆ ನೀನೇ ಅವಳನ್ನು ರಕ್ಷಿಸು' ಎನ್ನುವುದರ ಸಂಕೇತವಾಗಿ ಇದನ್ನು ಕಟ್ಟುವ ಸಂಪ್ರದಾರವು ಬಂದಿರಬಹುದು. ದೇವಿಯ ಮುಂದೆ ತಟ್ಟೆಯಲ್ಲಿ ಮೊದಲು ಈ ನೂಲನ್ನು ಇಟ್ಟಿರುತ್ತಾರೆ. ಅನಂತರವೇ ಅದನ್ನು ಚೆಟ್ಟ್ಯಾರ್ಚ ಹುಡುಗಿಯ ಕೊರಳಿಗೆ ಕಟ್ಟುತ್ತಾರೆ. 'ದೇವೀ ರಕ್ಷಾಯಂತ್ರ'ದಂತೆ ಅವಳ ರಕ್ಷಣೆ ಹಾಗೂ ಅನುಗ್ರಹ ಈ ನೂಲಿನ ಮುಖಾಂತರ ಹುಡುಗಿಗೆ ಸದಾಕಾಲ ಸಿಗಲಿ ಎನ್ನುವ ಆಶಯವೂ ಇದರ ಹಿಂದೆ ಇದ್ದಿರಬಹುದು.

ಕೊರಳಿಗೆ ನೂಲು ಕಟ್ಟುವ ಈ ಸಂಪ್ರದಾಯವು ಲಿಂಗಾಯತರು ಲಿಂಗವನ್ನು ಕಟ್ಟಿಕೊಳ್ಳುವ ಸಂಪ್ರದಾಯವನ್ನು ಹೋಲುತ್ತದೆ. ನೇಕಾರ ಸಮುದಾಯದ ಹೆಚ್ಚಿನ ವಿಭಾಗಗಳೂ ಲಿಂಗಾಯತ ಪಂಥದವರಾಗಿದ್ದಾರೆ. ವೀರಶೈವ ಸಂಪ್ರದಾಯಕ್ಕೆ ಸೇರಿದ ನೇಕಾರ ಸಮುದಾಯವು ಕೇರಳದ ಕಡೆಗೆ ಬಂದು ತಮ್ಮ ಮೂಲ ಸಂಸ್ಕೃತಿಯನ್ನು ಕ್ರಮೇಣ ಮರೆತಿರಬಹುದು. ಆದರೆ ಸಂಪ್ರದಾಯವು ಈ ರೀತಿಯಲ್ಲಿ ಉಳಿದಿರಬಹುದು. ಅಥವಾ ಮೊದಲು ಶಿವಾರಾಧಕರಾಗಿ ಇತ್ತ ಕಡೆ ಬಂದಾಗ ದೇವೀ ಆರಾಧನೆಯನ್ನು ಮಾಡತೊಡಗಿದಾಗ ನೂಲಿನಲ್ಲಿ ಕಟ್ಟಿದ ಶಿವಲಿಂಗವನ್ನು ಬಿಟ್ಟು ದೇವಿಯ ಹೆಸರಿನಲ್ಲಿ ಕೊರಳಿಗೆ ಬರಿಯ ನೂಲನ್ನು ಕಟ್ಟುವ ಸಂಪ್ರದಾಯವನ್ನು ರೂಢಿಸಿಕೊಂಡಿರಬಹುದು.

ತಮಿಳುನಾಡಿನ 'ಕೈಕೋಲರ್' ಎನ್ನುವ ನೇಕಾರ ವರ್ಗದಲ್ಲಿ ದೇವದಾಸಿ ಪದ್ಧತಿಯು ಹಿಂದೆ ರೂಢಿಯಲ್ಲಿತ್ತು. ಆಗ ಹುಡುಗಿಯರನ್ನು ದೇವಾಲಯಕ್ಕೆ ಕೊಂಡೊಯ್ದು ಆಚಾರ ವರ್ಗದವರಿಂದ ತಾಲಿ ಕಟ್ಟಿಸುವ ಸಂಪ್ರದಾಯವಿತ್ತು ಎನ್ನಲಾಗಿದೆ. ಮೂಲದ ಈ ಸಂಪ್ರದಾಯವು ಆ ಪ್ರದೇಶವನ್ನು ಬಿಟ್ಟು ಬರುವಾಗ ಈ ರೂಪದಲ್ಲಿ ರೂಢಿಯಲ್ಲಿ ಉಳಿದಿರುವ ಸಾಧ್ಯತೆಯೂ ಇದೆ. ಇಲ್ಲಿನ ಶಾಲಿಯಾ ಸಮುದಾಯಕ್ಕೂ ತಮಿಳುನಾಡಿನ ಕೈಕೋಲರ್‌ಗೂ ಆಚಾರ-ವಿಚಾರಗಳಲ್ಲಿ ಕೆಲವು ಸಾಮ್ಯತೆಗಳು ಕಂಡು ಬರುವುದರಿಂದ, ಇಲ್ಲಿನ ಶಾಲಿಯಾ ಸಮುದಾಯದ ಮೂಲ 'ಕೈಕೋಲರ್' ಆಗಿರುವ ಸಾಧ್ಯತೆಗಳೂ ಇವೆ.

ಕೇರಳದ ನಾಯರ್ ಕುಟುಂಬಗಳಲ್ಲಿ 'ತಾಲಿಕೆಟ್ಟ್' ಎನ್ನುವ ಸಂಪ್ರದಾಯವು ಬಹಳ ಹಿಂದಿನಿಂದಲೇ ರೂಢಿಯಲ್ಲಿದೆ. 'ಮದುವೆ ಮತ್ತು ವೈವಾಹಿಕ ಸಂಬಂಧವು ದೃಢವಾಗಿಲ್ಲದ' ಹಳೆಯ ನಾಯರ್ ಕುಟುಂಬಗಳಲ್ಲಿ ಮದುವೆಗಿಂತ ಮುನ್ನ ಹುಡುಗಿಗೆ ತಾಲಿ ಕಟ್ಟಿ, ಅವಳಿಗೆ ಸಾಂಸಾರಿಕ ಜೀವನಕ್ಕೆ ಪರವಾನಗಿಯನ್ನು ಈ ಮೂಲಕ ಕೊಡಲಾಗುತ್ತಿತ್ತು. ಕೇರಳದ ಮೂಲಕಾಗಿ ಹಾದು ಬರುವಾಗ ಅಲ್ಲಿನ ಸಂಸ್ಕೃತಿ ಹಾಗೂ ಆಚರಣೆಯು ಈ ರೀತಿಯಲ್ಲಿ ಶಾಲಿಯಾ ಸಮುದಾಯದವರ ಜತೆಗೆ ಸೇರಿಕೊಂಡಿರುವ ಸಾಧ್ಯತೆಯಿದೆ. ಆದರೆ ನಾಯರ್ ಸಮುದಾಯದ 'ತಾಲಿಕೆಟ್ಟ್'ನ ಹಿಂದಿರುವ ಉದ್ದೇಶಕ್ಕೂ, ಶಾಲಿಯಾ ಸಮುದಾಯದವರ 'ಚರಡ್ ಕೆಟ್ಟಲ್'ನ ಹಿಂದಿರುವ ಉದ್ದೇಶಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಶಾಲಿಯಾರಲ್ಲಿ ವೈವಾಹಿಕ ಸಂಬಂಧಕ್ಕೆ ಬಹಳಷ್ಟು ಪ್ರಾಮುಖ್ಯತೆಯಿದೆ.

ಸಮಾಜದಲ್ಲಿ ಸ್ತ್ರೀಗೆ ಪ್ರಾಧಾನ್ಯತೆಯನ್ನು ನೀಡಲು ಈ ಪದ್ಧತಿಯು ಆಚರಣೆಗೆ ಬಂದಿರುವ ಸಾಧ್ಯತೆಯಿದೆ. ಸ್ತ್ರೀಯನ್ನು ಸಮುದಾಯಕ್ಕೆ ಸೇರಿಸಿಕೊಂಡು ಕೆಲವು ಹಕ್ಕುಗಳನ್ನೂ, ಗೌರವಗಳನ್ನೂ ಪಡೆದುಕೊಳ್ಳಲು ಅವಳು ಅರ್ಹಳಾಗಿದ್ದಾಳೆ ಎಂಬುದನ್ನು ಸಾಂಕೇತಿಕವಾಗಿ ಈ ಪದ್ಧತಿಯ ಮೂಲಕ ಸೂಚಿಸುತ್ತಿರಬಹುದು. ದಕ್ಷಿಣದ ಬಲಂಗ ಶಾಲಿಯರನ್ನೂ ಸೇರಿಸಿ ಎಲ್ಲಾ ಶಾಲಿಯಾ ತೆರುಗಳಲ್ಲೂ ಇದನ್ನು ಕ್ರಮಬದ್ಧವಾಗಿ ಆಚರಿಸಲಾಗುತ್ತಿತ್ತು. ಬಲಂಗರ ಕ್ಷೇತ್ರಗಳಲ್ಲಿ ಕ್ಷೇತ್ರದ ತೆರುವಿಗೆ ಸಂಬಂಧಪಟ್ಟವರನ್ನೆಲ್ಲಾ ಆಹ್ವಾನಿಸಿ ಅವರೆಲ್ಲರ ಸಮಕ್ಷಮದಲ್ಲಿ ಇದನ್ನು ನಡೆಸಲಾಗುತ್ತಿತ್ತು. 'ಪತ್ತಿಲ್ಲತ್ತ್ ಪತ್ತನ್ಮಾರ' ಎಂಬ ಹೆಸರನ್ನು ಪಡೆದ ಜನಿವಾರವನ್ನು ಧರಿಸಿದ ಸ್ಥಾನಿಕರು ಇತರ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ನಾಲ್ಕು ದಿನಗಳ ಕಾಲ ಇದು ನಡೆಯುತ್ತಿತ್ತು. ಒಂದೇ ತಾಲಿಯನ್ನು ಹಲವು ಕನ್ಯೆಯರಿಗೆ ಕಟ್ಟುತ್ತಿದ್ದರು. ತಾಲಿ ಕಟ್ಟಲ್ಪಟ್ಟ ಹುಡುಗಿ ಮತ್ತೆ ಮದುವೆಯ ಸಂದರ್ಭದಲ್ಲಿ ಪುನಃ ತಾಲಿ ಕಟ್ಟಿಸಿಕೊಳ್ಳುವ ಅಗತ್ಯವಿರಲಿಲ್ಲ. ಇದನ್ನು ಕಟ್ಟಿಸಿಕೊಳ್ಳದ ಹುಡುಗಿ ವಿವಾಹಕ್ಕೆ ಯೋಗ್ಯಳಲ್ಲವೆಂದು ಪರಿಗಣಿಸಲಾಗಿತ್ತು.

ಎಡ್ಗರ್ ಥರ್ಸ್ಟನ್ ಈ ಪದ್ಧತಿಯನ್ನು ಹೀಗೆ ದಾಖಲಿಸಿದ್ದಾನೆ. 'ಮಲಬಾರು ಪ್ರದೇಶದ ಇತರ ಜಾತಿಗಳಂತೆ ಚಾಲಿಯರೂ ಕೂಡಾ ತಾಳಿಕೆಟ್ಟ್ (ಚಪ್ಪರದ ಮದುವೆ)ಯನ್ನು ನೆರವೇರಿಸುತ್ತಿದ್ದರು. ಈ ಸಮಾರಂಭವನ್ನು ನೆರವೇರಿಸುವ ದಿನ ಹುಡುಗಿಯನ್ನು ಒಬ್ಬ ಮುಖ್ಯಸ್ಥನ ಮನೆಗೆ ತರುವರು. ಇಲ್ಲಿ ಒಂದು ಚಪ್ಪರವನ್ನು ಹಾಕಲಾಗಿರುವುದು. ಅಲ್ಲಿ ಪಾಲೆ ಮರದಿಂದ ತಯಾರಿಸಿದ ಒಂದು ಹಲಗೆ, ಬೆಳಗಿಸಿದ ಒಂದು ದೀಪ, ವೀಳ್ಯದೆಲೆ, ಅಡಿಕೆ, ಬೆಳ್ತಿಗೆ ಅಕ್ಕಿ ಇವುಗಳನ್ನು ಇರಿಸಲಾಗುವುದು. ಬಲಗೈಯಲ್ಲಿ ಒಂದು ನಕಲಿ ಬಾಣವನ್ನು

(ಶಾಂತುಲು ಕೋಲು) ಹಿಡಿದುಕೊಂಡು ಹುಡುಗಿಯು ಹಲಗೆಯ ಮೇಲೆ ಕೂರುವಳು. ಮಡಿವಾಳನು (ಪೋತುವನ್) ತನ್ನ ಸೇವೆಗಾಗಿ ಒಂದು ನಾಣ್ಯವನ್ನು, ಮೂರು ಕಟ್ಟು ವೀಳ್ಯದೆಲೆಯನ್ನು ತೆಗೆದುಕೊಂಡು ತಾಳಿಯನ್ನು ಉರಾಳ ಕುಟುಂಬದ ಓರ್ವ ಸದಸ್ಯನ ಕೈಯಲ್ಲಿ ಕೊಡುವನು. ಅವನು ಅದನ್ನು ಹುಡುಗಿಯ ಕೊರಳಿಗೆ ಕಟ್ಟುವನು. (Edger Thurston : The Castes and Tribes of Southern India - Vol. III P.13). ಥರ್ಸ್ಟನ್ ಹೇಳಿದ ಈ ಆಚರಣೆಯು ನೂರು ವರ್ಷಗಳ ಹಿಂದೆ ದಕ್ಷಿಣದ ಶಾಲಿಯಾ ತೆರುಗಳಲ್ಲಿತ್ತು.

<u>ವಾಲ್ಯಕಾರನಾಕಲ್ ಅಥವಾ ಎಡಂಗಾಚಾರ</u> : ಎಡಂಗ ಶಾಲಿಯಾ ಸಮುದಾಯದಲ್ಲಿ ಮಾತ್ರಕಂಡು ಬರುವ ಈ ಸಂಪ್ರದಾಯದ ಹೆಸರಿನಲ್ಲೇ ಇದರ ಅರ್ಥವೂ ಅಡಗಿದೆ. ಎಡಂಗ + ಆಚಾರ = ಎಡಂಗಾಚಾರ > ಎಡಂಗಾಚಾರ ಆಗಿರಬಹುದು. ಪುರುಷನೊಬ್ಬನನ್ನು 'ಎಡಂಗ ಶಾಲಿಯಾ' ನನ್ನಾಗಿಸುವ ಕ್ರಮ ಎಂದು ಇದನ್ನು ಗುರುತಿಸಬಹುದು. ಈ ಸಮುದಾಯದಲ್ಲಿ ಪ್ರತಿಯೋರ್ವ ಸ್ತ್ರೀ ಪುರುಷನೂ ಸಮುದಾಯದ ಅಂಗವಾಗಿರಬೇಕು ಎಂಬ ನಿಯಮವಿದೆ. ಎಲ್ಲಾ ಕ್ಷೇತ್ರಗಳಲ್ಲೂ ಇದನ್ನು ಕಡ್ಡಾಯವಾಗಿ ಆಚರಿಸಲಾಗುತ್ತದೆ. ಪುರುಷನಿಗೆ ಅಂಗತ್ವವನ್ನು ನೀಡುವ ಕ್ರಮವನ್ನೇ 'ವಾಲ್ಯಕಾರನಾಕಲ್' ಎಂದು ಹೇಳುತ್ತಾರೆ. ೧೬ ವರ್ಷದಿಂದ ಮೇಲ್ಪಟ್ಟು ೧೯ ವರ್ಷದೊಳಗೆ ಈ ಸಂಸ್ಕಾರವನ್ನು ನಡೆಸಬೇಕು. ಸ್ನಾನ ಮಾಡಿ ಮುಂಡು ಉಟ್ಟು ಅಂಗಿ ಧರಿಸದ ಯುವಕನು ಒಂದು ಅಡಿಕೆ, ವೀಳ್ಯದೆಲೆ ಮತ್ತು ಒಂದು ತೆಂಗಿನಕಾಯಿಯನ್ನು ಹಿಡಿದುಕೊಂಡು ಕ್ಷೇತ್ರಕ್ಕೆ ಬರಬೇಕು. (ಇದೂ ಕೂಡಾ ಸಂಕ್ರಾಂತಿಯ ದಿನ ಅಥವಾ ವಿಶೇಷ ಉತ್ಸವದ ದಿನ ನಡೆಯುತ್ತದೆ). 'ಸ್ಥಾನಂ'ಗೆ ಪ್ರದಕ್ಷಿಣೆ ಬಂದು ಚೆಟ್ಟಿಯಾರರ ಕೈಯಲ್ಲಿ ಅದನ್ನಿಟ್ಟು ದೈವಗಳಿಗೆ ನಮಸ್ಕರಿಸಿದಾಗ, ಚೆಟ್ಟಿಯಾರ್ ಅದನ್ನು ದೇವರ ಮುಂದೆ ಇರಿಸಿ ಇವನ ಕೈಗೆ ನೀಡುತ್ತಾರೆ. ಅದರೊಂದಿಗೆ ಕ್ಷೇತ್ರಕ್ಕೆ ಪ್ರದಕ್ಷಿಣೆ ಬಂದು 'ಚೆಟ್ಟಿಯಾರ್'ರ ಸಮ್ಮುಖದಲ್ಲಿ ದೇವರ ಮುಂದಿನ ಕಲ್ಲಿಗೆ ಒಡೆಯಬೇಕು. ಅಕಸ್ಮಾತ್ ಅದು ಒಡೆಯದೇ ಇದ್ದರೆ, ೫ ತೆಂಗಿನಕಾಯಿಗಳನ್ನು ತಪ್ಪೊಪ್ಪಿಗೆಯಾಗಿ ಕ್ಷೇತ್ರಕ್ಕೆ ನೀಡಬೇಕು. ಅನಂತರ ಆತನ ಹೆಸರನ್ನು 'ನಗರಂ'ನ ಸದಸ್ಯರ ಯಾದಿಯಲ್ಲಿ ಸೇರಿಸಿ, ನೊಂದಾಯಿಸಲಾಗುತ್ತದೆ. ಅನಂತರವೇ ಆತನಿಗೆ ಹಿರಿಯರೊಂದಿಗೆ ಸಹಪಂಕ್ತಿಯಲ್ಲಿ ಕುಳಿತು ಭೋಜನ ಮಾಡಲು ಅನುಮತಿ ಹಾಗೂ ಹಕ್ಕು ದೊರೆಯುತ್ತದೆ. ಎಡಂಜಾಗಾಚಾರವನ್ನು ಮಾಡಿಸಿಕೊಳ್ಳದವನು ವಯಸ್ಸಿನಲ್ಲಿ ಎಷ್ಟೇ ಹಿರಿಯನಾದರೂ ಕಿರಿಯನೆಂದೇ ಅರ್ಥ. ಭೋಜನಕ್ಕೆ ಹಿರಿಯರು ಕುಳಿತ ಪಂಕ್ತಿಯಲ್ಲಿ ಈ ಸಂಪ್ರದಾಯವನ್ನು ಮಾಡಿಸಿಕೊಳ್ಳದವರು ಇದ್ದರೆ, ಕೂಡಲೇ ಅವರನ್ನು ಪಂಕ್ತಿಯಿಂದ ಎಬ್ಬಿಸಲಾಗುತ್ತಿತ್ತು. ಇದಾಗದವನಿಗೆ 'ನಗರಂ'ನಿಂದ ವಿವಾಹಕ್ಕೆ ಸಮ್ಮತಿ ('ಅನುವಾಸಂ')

ದೊರಕುತ್ತಿರಲಿಲ್ಲ. (ಕಾಸರಗೋಡಿನ 'ತೀಯಾ' ಸಮುದಾಯದಲ್ಲಿಯೂ ಈ ಪದ್ಧತಿಯಿತ್ತು. ಇದನ್ನು ಅವರು 'ಮೋತ್‌ವಾಳ್' ಎನ್ನುತ್ತಾರೆ. ಮೂತೆ (ಹಿರಿಯ) ಆಳು ಎನ್ನುವ ಮೂಲಪದವೇ ಈ ರೀತಿ 'ಮೋತ್‌ವಾಳ್' ಎಂದು ಪರಿವರ್ತಿತವಾಗಿರಬಹುದು).

'ಚೆಟ್ಟ್ಯಾರ್ಚ' ಈತನಿಗೂ 'ಅಂಶ'ವನ್ನು ನೀಡುತ್ತಾರೆ. ಈ 'ಅಂಶ'ವನ್ನು ಪಡೆದುಕೊಂಡವನು ಉಳಿದ 'ನಗರಂ'ಗಳಲ್ಲೂ ಅಂಶವನ್ನು ಪಡೆದುಕೊಳ್ಳಲು ಅರ್ಹನಾಗುತ್ತಾನೆ.

ಸಭೆ ಸಮಾರಂಭಗಳಲ್ಲಿ ವೀಳ್ಯದೆಲೆ ಹಾಗೂ ಅಡಿಕೆಗೆ (ತಾಂಬೂಲ) ಹಿಂದಿನ ಕಾಲದಲ್ಲಿ ಬಹುಮುಖ್ಯ ಪಾತ್ರವಿತ್ತು. ಅದನ್ನು ನೀಡುವುದು ಅತಿಥಿ ಸತ್ಕಾರದ ಬಹುಮುಖ್ಯ ಅಂಗವೆಂದು ಪರಿಗಣಿಸಲಾಗಿತ್ತು. ಅದನ್ನು ನೀಡದಿದ್ದರೆ ಅತಿಥಿಗಳಿಗೆ ಅವಮರ್ಯಾದೆ ಮಾಡಿದಂತೆ. ಮನೆಗೆ ಯಾರಾದರೂ ಅತಿಥಿಗಳು ಬಂದಾಗ, ಹಿಂದಿನ ಕಾಲದಲ್ಲಿ ಅವರನ್ನು ಮಣೆ ಹಾಕಿ ಕೂರಿಸಿ, ಎಲೆ ಅಡಿಕೆ ತಟ್ಟೆಯನ್ನು ಅವರ ಮುಂದಿಡುವ ಕ್ರಮವು ತುಳುನಾಡಿನ ಪ್ರದೇಶಗಳಲ್ಲಿ ಮಾತ್ರವಲ್ಲದೆ, ಭಾರತದ ಇತರ ಭಾಗಗಳಲ್ಲೂ ಪ್ರಚಲಿತವಾಗಿದೆ. ಸುಣ್ಣ, ವೀಳ್ಯದೆಲೆ ಮತ್ತು ಅಡಿಕೆ ಸೇರಿಸಿ ಜಗಿದಾಗ, ಹುಟ್ಟುವ ಕೆಂಪಗಿನ ರಸವು ಪ್ರೀತಿ ಸೌಹಾರ್ದತೆಗಳ ಸಂಕೇತವಾಗಿ ಪರಿಗಣಿಸಲಾಗಿತ್ತು. ಗೌರವದ ದ್ಯೋತಕವಾದ ತಾಂಬೂಲವಿಲ್ಲದೆ ಯಾವ ಸಮಾರಂಭವೂ ಪರಿಪೂರ್ಣವಲ್ಲ ಎಂದು ಅಭಿಪ್ರಾಯವಿತ್ತು. ತುಳುನಾಡಿನಲ್ಲಿ ನಿಶ್ಚಿತಾರ್ಥದ ಸಂದರ್ಭದಲ್ಲಿ ತಾಂಬೂಲದ ತಟ್ಟೆಯನ್ನು ಅದಲು ಬದಲು ಮಾಡಿ ಪರಸ್ಪರ ಸಂಬಂಧವನ್ನು ಗಟ್ಟಿಗೊಳಿಸುವ ಸಂಪ್ರದಾಯವು ಪ್ರಾಚೀನ ಕಾಲದಿಂದಲೇ ರೂಢಿಯಲ್ಲಿದೆ.

ಅಂಶ : ಶಾಲಿಯಾ ಸಮುದಾಯವು ಕ್ಷೇತ್ರಗಳಲ್ಲಿ ತಾಂಬೂಲ ನೀಡುವುದನ್ನು 'ಅಂಶ' ಅಥವಾ 'ಪಾಲು' ಎಂದು ಗುರುತಿಸುತ್ತದೆ. ಸಮುದಾಯದಿಂದ ಅಂಗೀಕರಿಸಲ್ಪಟ್ಟ ಪ್ರತಿಯೋರ್ವನಿಗೂ ಅದನ್ನು ಪಡೆದುಕೊಳ್ಳುವ ಹಕ್ಕು ಇದೆ. ಆತ (ಆಕೆ) ಯಾವ ತೆರುವಿಗೆ ಹೋದರೂ ಅದನ್ನು ಪಡೆದುಕೊಳ್ಳಬಹುದು. ಸಾಮಾನ್ಯವಾಗಿ ತೆರುಗಳಲ್ಲಿ ನಡೆಯುವ ಉತ್ಸವವೇ ಮೊದಲಾದ ಸಂದರ್ಭದಲ್ಲಿ ಅಥವಾ ಬಾಲಿಕೆಯರಿಗೆ 'ಚರಡ್ ಕೆಟ್ಟಲ್' ಸಂದರ್ಭದಲ್ಲಿ ಈ 'ಅಂಶ'ಗಳನ್ನು ಬಂದವರಿಗೆ ಹಂಚಲಾಗುತ್ತದೆ. ತನ್ನ 'ನಗರಂ'ನಲ್ಲಿ ತಾಂಬೂಲವನ್ನು ತಾನೇ ತೆಗೆದುಕೊಂಡರೆ, ಬೇರೆಡೆಗೆ ಹೋದಾಗ ಆತನನ್ನು ಮರ್ಯಾದೆಯಿಂದ ಕರೆದು ನೀಡಬೇಕು. ಪ್ರತಿಯೊಂದು 'ನಗರಂ'ದಲ್ಲೂ ಈ 'ಅಂಶ'ಗಳನ್ನು ಮೊದಲು 'ನಗರಂ'ನ ಸ್ಥಾನಿಕರಿಗೆ ನೀಡಲಾಗುತ್ತದೆ. ಅನಂತರ ಅನ್ಯ 'ನಗರಂ'ನವರನ್ನು 'ಅಂಶ'ವನ್ನು ಸ್ವೀಕರಿಸಲು ಕೇಳಿಕೊಳ್ಳಲಾಗುತ್ತದೆ. "ಅನ್ಯ 'ನಗರಂ'ನ ಅಮ್ಮಂದಿರೂ, ಅಪ್ಪಂದಿರೂ, ಯುವಕರೂ ಬಂದಿದ್ದರೆ ದಯವಿಟ್ಟು 'ಅಂಶ' ತೆಗೆದುಕೊಳ್ಳಿ" ಎಂದು ಕೂಗಿ ಹೇಳುತ್ತಾರೆ. ಅನಂತರವೇ

ಆಯಾ 'ನಗರಂ'ನವರು 'ಅಂಶ'ವನ್ನು ತೆಗೆದುಕೊಳ್ಳುತ್ತಾರೆ. ಯಾರಿಗಾದರೂ 'ಅಂಶ'ವು ಸಿಗಲಿಲ್ಲವೆಂದಾದರೆ ಅದನ್ನು 'ಸಾಮಾಜಿಕ ಅವಗಣನೆ' ಎಂದು ಪರಿಗಣಿಸಿ ದೇವಾಲಯದಿಂದ ಹೊರಗೆ ಕುಪಿತರಾಗಿ ನಡೆಯುವವರು ಹಿಂದೆ ಬಹಳಷ್ಟು ಇದ್ದರು. ಇತ್ತೀಚೆಗೆ ತಾಂಬೂಲ ಜಗಿಯುವವರೇ ಕಡಿಮೆಯಾಗಿರುವಾಗ ಅದರ ಬಗ್ಗೆ ತಲೆಕೆಡಿಸಿಕೊಳ್ಳುವವರು ಯಾರಿದ್ದಾರೆ ?

ಬಾಲಿಕೆಯರಿಗೆ 'ಪಂದಲ್ ಮಂಗಲಂ' ನಡೆಸುವಾಗ ೧೨ ವರ್ಷಕ್ಕಿಂತ ಮೊದಲು, ಹಾಗೂ ಬಾಲಕರಿಗೆ ಎಡಂಗಾಚಾರ ನಡೆಸುವಾಗ ೧೬ ವರ್ಷಕ್ಕಿಂತ ಮೇಲ್ಪಟ್ಟು ಮೇಲೆ ಜರುಗಿಸುವುದರ ಹಿನ್ನೆಲೆಯಲ್ಲೂ ಅರ್ಥವಿರುವುದು ಕಾಣುತ್ತದೆ. ಹುಡುಗನೊಬ್ಬನು ಬೌದ್ಧಿಕವಾಗಿ ಬೆಳೆದು ಜವಾಬ್ದಾರಿ ಬರಬೇಕಿದ್ದರೆ, ೧೬ ವರ್ಷ ಪ್ರಾಯವಾಗಬೇಕು. ಆದರೆ ಹುಡುಗಿಗೆ ೧೦–೧೨ ವರ್ಷ ಪ್ರಾಯದಲ್ಲಿ ಋತುಮತಿಯೂ ಆಗಿ ಸಂಪೂರ್ಣ ಪ್ರಬುದ್ಧಳೆನಿಸುತ್ತಾಳೆ. ಆದುದರಿಂದಲೇ ಅವಳನ್ನು ಋತುಮತಿಯಾಗುವುದಕ್ಕಿಂತ ಮೊದಲೇ ೧೦–೧೨ ವರ್ಷ ಪ್ರಾಯದಲ್ಲಿ ಸಮೂಹದ ಗೌರವಾನ್ವಿತ ವ್ಯಕ್ತಿಯನ್ನಾಗಿಸಿ ಈ ಪದ್ಧತಿಯ ಮೂಲಕ ಗುರುತಿಸುವ ಪ್ರಯತ್ನವಿದೆ. ಜನ ಸಾಮಾನ್ಯ ಭಾಷೆಯಲ್ಲಿ ಬಳಸುವ 'ಹುಡುಗಾಟ' ಎನ್ನುವ ಪದವು ಬುದ್ಧಿಯಿಲ್ಲದೇ ನಡೆದುಕೊಳ್ಳುವುದನ್ನು ಸಂಕೇತಿಸುತ್ತದೆ. ಇದು ಹುಡುಗ + ಆಟವೇ ಹೊರತು ಹುಡುಗಿ + ಆಟವಲ್ಲ. ಹುಡುಗಾಟವಿರುವುದು ಹುಡುಗರಿಗೇ ಹೊರತು ಹುಡುಗಿಯರಿಗಲ್ಲ ಎನ್ನುವುದನ್ನೂ ಇಲ್ಲಿ ನೆನಪಿಸಿಕೊಳ್ಳಬೇಕು.



ಎಡಂಗಾಜಾರ ಅಥವಾ ಪುರುಷನಿಗೆ ಕ್ಷೇತ್ರದಲ್ಲಿ ಪ್ರೌಢತ್ವ ನೀಡುವುದು



ಚರಡ್ ಕಟ್ಟುವುದು ಅಥವಾ ಚಪ್ಪರದ ಮದುವೆ



ಚೆಟ್ಟಿಯಾರರಿಂದ ಅಂಶಂ ವಾಙಲ್ (ಹಾಲು ತೆಗೆದು ಕೊಳ್ಳುವುದು)

## ೩. ಋತುಶಾಂತಿ

ಸ್ತ್ರೀಯ ಜೀವನದ ಅತ್ಯಂತ ಪ್ರಧಾನವಾದ ಪರಿವರ್ತನಾ ಘಟ್ಟವು "ಋತುಮತಿ"ಯಾಗುವುದರ ಮೂಲಕ ಆರಂಭಗೊಳ್ಳುತ್ತದೆ. "ಸೃಷ್ಟಿ ಕ್ರಿಯೆಗೆ ಆಕೆಯ ದೇಹವು ಸಿದ್ಧವಾಗಿದೆ" ಎಂಬುದನ್ನು ಇದು ಸೂಚಿಸುತ್ತದೆ. ಈ ಸಂದರ್ಭದಲ್ಲಿ ಅವಳಿಗೆ ಮಾನಸಿಕ ಹಾಗೂ ದೈಹಿಕ ಆರೈಕೆಗಳ ಅಗತ್ಯವಿದೆ. ನಮ್ಮ ಪೂರ್ವಿಕರು ಅದನ್ನು ದೃಷ್ಟಿಯಲ್ಲಿರಿಸಿಕೊಂಡೇ "ಮೈಲಿಗೆ"ಯ ಕಲ್ಪನೆಯನ್ನು ಮಾಡಿ, ಅವಳ ದೇಹಕ್ಕೆ ಆ ಕಾಲದಲ್ಲಿ ಸಂಪೂರ್ಣ ವಿಶ್ರಾಂತಿಯು ಸಿಗುವಂತೆ ಮಾಡಿದ್ದಾರೆ. ಆದುದರಿಂದ ಎಲ್ಲಾ ಸಮುದಾಯಗಳಲ್ಲೂ ಈ ಸಂದರ್ಭದಲ್ಲಿ ಬೇರೆ ಬೇರೆ ರೀತಿಯ ಆಚರಣೆಗಳು ರೂಢಿಗೆ ಬಂದವು.

ಹುಡುಗಿಯೊಬ್ಬಳು "ಮೈನೆರೆದಳು" ಎನ್ನುವಾಗ ಹೆತ್ತವರಿಗೆ ಜವಾಬ್ದಾರಿಯು ಹೆಚ್ಚುತ್ತದೆ. ಅವಳಿಗೆ ಸರಿಯಾಗದ ಸಂಗಾತಿಯೊಬ್ಬನನ್ನು ಹುಡುಕುವ ಕಾಲ ಬಂತು ಎನ್ನುವುದನ್ನು ಅರಿತ ಅವರು, ಈ ವಿಷಯವನ್ನು ನೇರವಾಗಿ ಸಮುದಾಯದ ಬಂಧುಗಳಿಗೆ ತಿಳಿಸದೆ, ವಿಶೇಷವಾದ ಆಚರಣೆಗಳ ಮೂಲಕ ಸಾಂಕೇತಿಕವಾಗಿ ಅದನ್ನು ತಿಳಿಸುತ್ತಾರೆ. ಈ ವಿಶಿಷ್ಟ ಆಚರಣೆಗಳು ಸಮುದಾಯದಿಂದ ಸಮುದಾಯಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಶಾಲಿಯಾ ಸಮುದಾಯದಲ್ಲಿಯೂ ಹೆಣ್ಣೊಬ್ಬಳು ಪ್ರೌಢಾವಸ್ಥೆಗೆ ಬಂದಾಗ ಇಂತಹ ವಿಶಿಷ್ಟ ಆಚರಣೆಗಳು ಇವೆ.

ಹುಡುಗಿಯು ಋತುಮತಿಯಾಗುವುದನ್ನು "ಬಯಸ್ಸರಿಯಿಕ್ಕಲ್" ಎನ್ನುತ್ತಾರೆ. (ವಯಸ್ಸನ್ನು ಸೂಚಿಸುವುದು ಎಂದರ್ಥ) ಅದೇ ದಿನ ಈ ವಿಷಯವನ್ನು ಹುಡುಗಿಯ ಗೋತ್ರವಲ್ಲದ ಐದು ಗೋತ್ರದ (ಇಲ್ಲಂ) ಮುತ್ತೈದೆಯರಿಗೆ ತಿಳಿಸುತ್ತಾರೆ. ಅವರು ಹುಡುಗಿಯ ಮನೆಗೆ ಬಂದು ಹುಡುಗಿಯನ್ನು ೫ ಅಥವಾ ೭ ಸೀಯಾಳಗಳ ಮೇಲೆ ಕೂರಿಸುತ್ತಾರೆ. ಅನಂತರ ೪ ತಂಬಿಗೆ ಹಾಗೂ ಒಂದು ಕೊಡ ನೀರನ್ನು ತರುತ್ತಾರೆ. ಐದು ವೀಳ್ಯದೆಲೆ ಮತ್ತು ಅಡಿಕೆಯನ್ನು ಕೈಯಲ್ಲಿ ಹಿಡಿದು ಅದರ ಮೂಲಕವಾಗಿ ಪ್ರತಿಯೊಬ್ಬರೂ ತಂಬಿಗೆಯ ನೀರನ್ನು ಹುಡುಗಿಯ ತಲೆಯ ಮೇಲೆ ಹೊಯ್ಯುತ್ತಾರೆ. ಕೊನೆಯಲ್ಲಿ "ಕೊಡ"ದ ನೀರನ್ನು ಎಲೆಯಡಿಕೆಯೊಂದಿಗೆ ಹೊಯ್ಯುವ ಹಕ್ಕು ಕೊಂಕಣಗೋತ್ರದ ಹೆಂಗಸಿಗೆ ಮೀಸಲಾಗಿದೆ. ಅನಂತರ ಆಕೆಯನ್ನು ಮನೆಯ ಹೊರಗೆ ನಿರ್ಮಿತವಾದ ತಾತ್ಕಾಲಿಕ ಗುಡಿಸಲಲ್ಲಿ ೫ ಅಥವಾ ೭ ದಿನ ಇರಿಸುತ್ತಾರೆ. ಅವಳು ಕುಳಿತ ಸೀಯಾಳಗಳಲ್ಲಿ ಒಂದನ್ನು ಮಡಿವಾಳತಿಗೆ ಇಟ್ಟು ಉಳಿದುದನ್ನು ಅವಳಿಗೇ ತಿನ್ನಲು ಕೊಡುತ್ತಾರೆ. ಅವಲಕ್ಕಿ, ಓಲೆಬೆಲ್ಲ, ಹುರಿದ ಅಕ್ಕಿ, ಸೀಯಾಳದ ತಿರುಳು ಈ ದಿನಗಳಲ್ಲಿ ಅವಳಿಗೆ "ಪುಷ್ಟಿ"ಗಾಗಿ ನೀಡುವ ಆಹಾರಗಳು ಈ ದಿನಗಳಲ್ಲಿ ಯಾರೂ ಅವಳನ್ನು ಮುಟ್ಟಬಾರದು. ಅವಳೂ

ಯಾವುದನ್ನೂ ಮುಟ್ಟಬಾರದು. ಬಟ್ಟೆ ಕಳಚಿದ ಮಗುವಿಗೆ ಮಾತ್ರ ಅವಳ ಬಳಿಗೆ ಪ್ರವೇಶವಿದೆ. ಅವಳು ಹೊರಗೆ ಇರಬೇಕಾದ ದಿನಗಳಲ್ಲಿ ತನ್ನೊಂದಿಗೆ ಒಂದು ಕತ್ತಿಯನ್ನು ಇಟ್ಟುಕೊಳ್ಳಬೇಕು. (ಇದು ಯಾವುದೇ ದೈವದ ಉಪಟಳವಾಗದೇ ಇರಲಿ ಎನ್ನುವ ಕಾರಣಕ್ಕಾಗಿ ಎಂದು ಹೇಳಿದರೂ, ವಾಸ್ತವದಲ್ಲಿ ಹೊರಗೆ ಮಲಗಬೇಕಾದ ಸಂದರ್ಭವಾದ ಕಾರಣ ಅವಳ ಆತ್ಮರಕ್ಷಣೆಗಾಗಿ ಇದನ್ನು ಬಳಿಯಲ್ಲಿ ಇರಿಸಿಕೊಳ್ಳುವ ಪದ್ಧತಿ ರೂಢಿಗೆ ಬಂದಿರಬೇಕು.) ಬೆಳಗ್ಗೆ ಋತುಮತಿಯಾದರೆ ಆಕೆಗೆ ಮಧ್ಯಾಹ್ನದ ಊಟವನ್ನು ನೀಡುವ ಕ್ರಮವಿಲ್ಲ. ಮುತ್ತೈದೆಯರು ತಲೆಗೆ ನೀರು ಹೊಯ್ಯಲು ಬರುವುದು ಸಂಜೆಯ ಹೊತ್ತಿನಲ್ಲೇ. ಈ ಸ್ನಾನವಾಗದೆ ಅವಳು ಊಟಮಾಡುವಂತಿಲ್ಲ. ಸ್ನಾನವನ್ನು ರಾತ್ರಿಯೇ ಮಾಡಬೇಕು ಎಂಬ ನಿಯಮವಿದೆ. (ಹಿಂದಿನ ಕಾಲದಲ್ಲಿ ಸ್ನಾನದ ಮನೆಗಳು ಸರಿಯಾಗಿ ಇರಲಿಲ್ಲ. ನವಯುವತಿಯಾದ ಹುಡುಗಿ, ಹಗಲು ಸ್ನಾನ ಮಾಡಿದರೆ "ಯಾರದಾದರೂ ಕಣ್ಣಿಗೆ ಬಿದ್ದು ಬಿಟ್ಟರೆ" ಎಂಬ ಆತಂಕವು ಈ ನಂಬಿಕೆಗೆ ಕಾರಣವಾಗಿರಬೇಕು. ಐದು ಅಥವಾ ಏಳನೇ ದಿನ ಅವಳು ವಿಶೇಷ ಸ್ನಾನ ಮಾಡಿ ಶುದ್ಧಳಾಗುವ ದಿನ. ಆ ದಿನ ಮಡಿವಾಳರು ಬರಲೇಬೇಕು. ಆ ದಿನ "ವಣ್ಣಾತಿ ಮಾಟ್" (ಮಡಿವಾಳರ ಮಡಿ ಬಟ್ಟೆ) ನ್ನು ಸ್ನಾನದ ನಂತರ ಆಕೆ ಉಟ್ಟುಕೊಳ್ಳಬೇಕು. "ಮಾಟ್" ಎಂದರೆ "ಬದಲಾಯಿಸು" ಎಂದರ್ಥ. ಹಳೆಯ ವಸ್ತ್ರವು ಅಶುದ್ಧವೆಂದು ತ್ಯಜಿಸಿ ಮಡಿವಾಳತಿ ಮಡಿ ಮಾಡಿಕೊಟ್ಟ ವಸ್ತ್ರವನ್ನೇ "ಮಡಿ" (ಶುದ್ಧ) ಎಂದು ಬದಲಾಯಿಸಿಕೊಳ್ಳುವುದನ್ನೇ "ವಣ್ಣಾತಿ ಮಾಟ್" ಎನ್ನುತ್ತಾರೆ. ಪ್ರತಿಬಾರಿ ಅವಳು ಋತುಸ್ನಾತೆಯಾದ ಮೇಲೆ ಈ ಬಟ್ಟೆಯ ಒಂದು ತುಂಡನ್ನು ಹಿಡಿದುಕೊಂಡು ತಲೆಗೆ ನೀರುಹೊಯ್ದುಕೊಂಡರೆ ಮಾತ್ರ ಶುದ್ಧಳಾದಳು ಎಂದು ಪರಿಗಣಿಸಲಾಗುತ್ತದೆ. ಆದುದರಿಂದ ಹಿಂದಿನ ಕಾಲದಲ್ಲಿ ಎಲ್ಲರ ಮನೆಗಳಲ್ಲೂ ಒಂದು ತುಂಡು "ವಣ್ಣಾತಿ ಮಾಟ್" (ಮಡಿವಾಳರು ಒಗೆದು ಶುಭ್ರಮಾಡಿಕೊಟ್ಟ ಬಟ್ಟೆ) ಇದ್ದೇ ಇರುತ್ತಿತ್ತು.

ಋತುಸ್ನಾತೆಯಾಗಿ ಹುಡುಗಿ ಒಳಬಂದ ದಿನ ಮದುವೆಯಂತೇ ವಿಶೇಷ ಸಮಾರಂಭ ಮನೆಯಲ್ಲಿ ಜರಗುತ್ತದೆ.ಇದನ್ನು "ತೆರಂಡ ಮಜಲಂ" ಎಂದೂ "ಬಯಸರಿಚ್ಚೆ ಮಜಲಂ" ಎಂದೂ ಹೇಳುತ್ತಾರೆ. ಹುಡುಗಿಗೆ ಮದುಮಗಳಂತೆ ಅಲಂಕಾರ ಮಾಡಿ, ಹೊಸ ವಸ್ತ್ರಗಳನ್ನು ಉಡಿಸಲಾಗುತ್ತದೆ. ದೇವರ ಮುಂದೆ ಬೆಳಗಿಸಿದ ದೀಪದ ಮುಂದೆ ಅವಳನ್ನು ಕೂರಿಸಿ, ಅಕ್ಷತೆ ಕಾಳುಗಳನ್ನು ಹಾಕಿ ಹಿರಿಯರು ಹರಸುತ್ತಾರೆ.

ಬಾಲ್ಯ ವಿವಾಹವಿದ್ದ ಕಾಲದಲ್ಲಿ ಹೆಣ್ಣು ಮಕ್ಕಳು ಋತುಮತಿಯಾಗುವ ಕಾಲದಲ್ಲಿ ಸಾಮಾನ್ಯವಾಗಿ ಗಂಡನ ಮನೆಯಲ್ಲಿಯೇ ಇರುತ್ತಿದ್ದರು. ಆಗ ತವರು ಮನೆಯಿಂದ ಒಂದು ಮುಡಿ ಅವಲಕ್ಕಿಯೂ ಬೆಲ್ಲವೂ, ಸಿಹಿತಿಂಡಿಗಳೂ ಉಡುಗೊರೆಯ ರೂಪದಿಂದ ಗಂಡನ ಮನೆಗೆ ಕೊಂಡುಹೋಗುವ ಪದ್ಧತಿಯಿತ್ತು.

ಸಗೋತ್ರ ವಿವಾಹವು ನಿಷೇಧವಾಗಿರುವುದರಿಂದಲೇ ಹುಡುಗಿ ಋತುಮತಿಯಾದ ಸಂದರ್ಭದಲ್ಲಿ ಇತರ ಗೋತ್ರದ ಮುತ್ತೈದೆಯರಿಗೆ ವಿಷಯ ತಿಳಿಸಿ ನೀರು ಹೊಯ್ಯಲು ಆಮಂತ್ರಿಸುವ ಸಂಪ್ರದಾಯ ಬಂದಿರುವುದು. ಇದರ ಹಿಂದಿನ ಉದ್ದೇಶವಂತೂ ಸ್ಪಷ್ಟ. ತಮ್ಮ ಹುಡುಗಿ ಋತುಮತಿಯಾಗಿ ವಿವಾಹಕ್ಕೆ ಸಿದ್ಧಳಾಗಿದ್ದಾಳೆ ಎಂದು ಸಗೋತ್ರವಲ್ಲದವರಿಗೆ ಪರೋಕ್ಷವಾಗಿ ತಿಳಿಸುವುದೇ ಆಗಿದೆ. ಶಾಲಿಯಾ ಸಮುದಾಯದಲ್ಲಿ ಹುಡುಗನ ಕಡೆಯವರೇ ಹುಡುಗಿಯನ್ನು ಹುಡುಕಿ ವಿವಾಹವಾಗುವ ಸಂಪ್ರದಾಯವಿದೆ. ಹುಡುಗಿಯೊಬ್ಬಳು ಋತುಮತಿಯಾಗಿ ಮದುವೆಗೆ ಸಿದ್ಧಳಾಗಿದ್ದಾಳೆ ಎನ್ನುವ ವಿಷಯ ಸಮುದಾಯದವರಿಗೆ ತಿಳಿದ ಮೇಲೆ, ವಿವಾಹದ ಪ್ರಸ್ತಾವನೆಯು ಯಾವುದಾದರೂ ಹುಡುಗನ ಕಡೆಯಿಂದ ಬರಲು ಸಾಧ್ಯವಾಗುತ್ತದೆ. ೧೫ ೧೬ನೇ ವಯಸ್ಸಿನಲ್ಲೇ ಹುಡುಗಿಗೆ ಮದುವೆಯೂ ಆಗಿಬಿಡುತ್ತದೆ.

ಪ್ರತಿಯೊಂದು ಸಂಪ್ರದಾಯದ ಹಿಂದೆಯೂ ಹಲವು ಬಲವಾದ ಕಾರಣಗಳನ್ನು ಹಿಂದಿನವರು ಇರಿಸಿಕೊಂಡೇ ಅದನ್ನು ರೂಢಿಗೆ ತರುತ್ತಿದ್ದರು ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ. ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಅದು ಅಗತ್ಯವಾಗಿತ್ತು. ಇಂದಿನ ಸಮಾಜಕ್ಕೆ ಅದರ ಅಗತ್ಯವಿಲ್ಲದುದರಿಂದ ಇಂದೀಗ ಅದು ಅರ್ಥಹೀನವಾಗಿ ಕಾಣುತ್ತದೆ.

ಮಲಬಾರಿನ ಶಾಲಿಯನರ ಈ ಸಂಪ್ರದಾಯದ ಬಗ್ಗೆ ಬರೆಯುತ್ತಾ ಥರ್ಸ್ಟನ್ ಹೀಗನ್ನುತ್ತಾರೆ. "ಜಾತಿಯ ಎಲ್ಲಾ ವ್ಯವಹಾರಗಳನ್ನೂ ಮುಖ್ಯಸ್ಥನಾದ "ಉರಾಳನ್" ಎಂಬವನು ನೋಡಿಕೊಳ್ಳುತ್ತಿದ್ದನು. ಜಾತಿಯ ಯಾವುದೇ ಹುಡುಗಿಯು ಪ್ರೌಢಾವಸ್ಥೆಗೆ ಬಂದಾಗ ಉರಾಳ ಕುಟುಂಬದ ವಯಸ್ಕ ಹೆಂಗಸರು ಅವಳನ್ನು ಕೆರೆಗೆ ಕರೆದುಕೊಂಡು ಹೋಗಿ ಹಲಸಿನ ಮರದ ಎಲೆಗಳಿಂದ ತಯಾರಿಸಿದ ತಟ್ಟೆಯಿಂದ ಅವಳ ತಲೆಗೆ ನೀರು ಹಾಕುತ್ತಿದ್ದರು. ಎಳೆಯ ತೆಂಗಿನ ಸೋಗೆಗಳಿಂದ ಅಲಂಕೃತವಾದ ಕೋಣೆಯಲ್ಲಿ ಚಾಪೆಯ ಮೇಲೆ ಅವಳನ್ನು ಕೂರಿಸಿ ಚಾಪೆಯ ಸುತ್ತಲೂ ಬೆಳ್ತಿಗೆ ಅಕ್ಕಿ ಮತ್ತು ಭತ್ತವನ್ನು ಹರಡುತ್ತಿದ್ದರು. ತೆಂಗಿನ ಹೂ ಹಾಗೂ ತೆಂಗಿನ ಕಾಯಿಗಳಿಂದ ತುಂಬಿದ ಒಂದು ಪಾತ್ರೆಯನ್ನು ಅವಳ ಮುಂದಿರಿಸುವರು. ಮೂರನೇ ದಿನ ಮಡಿವಾಳನು (ಪೆರುವಣ್ಣಾನ್) ಹೊಸತಾಗಿ ಶುದ್ಧಗೊಳಿಸಲಾದ "ಮಾಟ್"ನ್ನು ತರುವನು. ಅದಕ್ಕಾಗಿ ಅವನಿಗೆ ಅಕ್ಕಿ ಅಥವಾ ಭತ್ತ ಕಾಣಿಕೆಯಾಗಿ ಸಿಗುತ್ತಿತ್ತು. ಅದನ್ನು ಅವನು ಒಂದು ಎಲೆಯಲ್ಲಿ ತುಂಬಿಸಿ ಪೂಜೆ ನಡೆಸುವನು ಮತ್ತ ವಸ್ತ್ರವನ್ನು ಒಂದು ಹಲಗೆಯ ಮೇಲಿಟ್ಟು ತನ್ನ ತಲೆಯಲ್ಲಿರಿಸುವನು. ಕೆಲವು ಒಳ್ಳೆಯ ನುಡಿಗಳನ್ನು ಹೇಳಿ ಅದನ್ನು ನೆಲದ ಮೇಲೆ ಇರಿಸುವನು. ಹುಡುಗಿಯ ಕೆಲವು ಸ್ತ್ರೀ ಸಂಬಂಧಿಕರು ಬೆಳಗಿಸಿದ ದೀಪ, ಒಂದು ಕೊಡ ನೀರು, ಒಂದು ಅಳತೆಯ ಅಕ್ಕಿಯನ್ನು ಹಿಡಿದುಕೊಂಡು ಆ ಹಲಗೆಗೆ ಮೂರು ಸುತ್ತು ಬರುವರು.

(Edger Thurston the castes and tribes of Southern India Vo. III, P. 13 ) ಇಲ್ಲಿ ಎಡ್ಗರ್ ಥರ್ಸ್ಟನ್ ಉಲ್ಲೇಖಿಸಿದ "ಉರಾಳ" "ನಗರಂ"ನ ಆಚಾರ ವರ್ಗದವನೇ ಆಗಿರಬೇಕು. "ನೂರು ವರ್ಷಗಳ ಕೆಳಗೆ ಆಚಾರ ವರ್ಗದವರಂತೇ ಅವರ ಮಡದಿಯರಿಗೂ ಸಮಾಜದಲ್ಲಿ ಸ್ಥಾನವಿತ್ತು" ಎಂಬುದು ಇದರಿಂದ ಸ್ಪಷ್ಟ. ಚಂದ್ರಗಿರಿಯ ದಕ್ಷಿಣ ಭಾಗದಲ್ಲಿ ಹಿಂದೆ ನಡೆಸುತ್ತಿದ್ದ ಸಂಪ್ರದಾಯಕ್ಕೂ ಇತ್ತೀಚಿನವರೆಗೂ ಕಾಸರಗೋಡು ಭಾಗದಲಿಲ ನಡೆಸುತ್ತಿದ್ದ ಆಡರಣೆಗಳಿಗೂ ವ್ಯತ್ಯಾಸವು ಇಲ್ಲಿ ಸ್ಪಷ್ಟವಾಗಿದೆ. ತುಳುಪ್ರದೇಶಕ್ಕೆ ಬಂದಾಗ ತುಳು ಸಂಸ್ಕೃತಿ ಸಮುದಾಯದ ಮೇಲೆ ಬೀರಿದ ಪ್ರಭಾವವೇ ಇದೊಂದು ಮಿಶ್ರ ಸಂಸ್ಕೃತಿಯಾಗಿ ರೂಪು ತಾಳಲು ಕಾರಣವಾಯಿತು. ಹೆಚ್ಚು ಕಡಿಮೆ ಇಂತಹದೇ ಸಂಪ್ರದಾಯ ಇಲ್ಲಿನ ಇತರ ಸಮುದಾಯಗಳಲ್ಲಿವೆ.

# ೪ ಮದುವೆ

"ಪಟ್ಟುವದಿಂದ ಪಣಂಬೂರು" ವರೆಗಿನ ಶಾಲಿಯರ ಮದುವೆಯ ಸಂಪ್ರದಾಯವು ಪ್ರಾದೇಶಿಕ ಭಿನ್ನತೆಗಳನ್ನು ಒಳಗೊಂಡಿರುವುದು ಕಾಣಬಹುದು. ಚಂದ್ರಗಿರಿಯ ದಕ್ಷಿಣದಲ್ಲಿ "ಪೊಡಮುರಿ" ಎಂಬ ಮದುವೆಯ ಸಂಪ್ರದಾಯವು ನಾಯರ್ ಸಮುದಾಯದವರ ಸಂಪರ್ಕದಿಂದ ರೂಢಿಗೆ ಬಂದಿದೆ. "ಪೊಡೆಯುಂಪಣವುಂ" ಎನ್ನುವ ಮದುವೆಯ ಸಂಪ್ರದಾಯವು ಮೂಲತಃ "ಎಡಂಗ ಶಾಲಿಯ"ರ ಮದುವೆಯ ಸಂಪ್ರದಾಯವಾಗಿದೆ. "ಪೆಣ್‌ಕೊಂಡ್‌ವರಿಕ" (ಹೆಣ್ಣನ್ನು ಕರೆದುಕೊಂಡು ಬರುವುದು) ಎನ್ನುವ ವಿವಾಹ ಸಂಪ್ರದಾಯವೂ ಇತ್ತು ಎನ್ನಲಾಗಿದೆ.

ನಿಶ್ಚಿತಾರ್ಥ : ತಮ್ಮ ಗಂಡಿಗೆ ಇಂತಹ ಕಡೆ ಸರಿ ಹೊಂದುವ ಹುಡುಗಿ ಇದ್ದಾಳೆ ಎಂದು ಬಂಧುಬಾಂಧವರ ಮೂಲಕವಾಗಿ ತಿಳಿದ ಗಂಡಿನ ಮನೆಯವರು ಹೆಣ್ಣಿನ ಮನೆಯವರಲ್ಲಿ ಹುಡುಗಿಯನ್ನು ಕೊಡಲು ಒಪ್ಪಿಗೆಯೇ ಎಂದು ವಿಚಾರಿಸುತ್ತಿದ್ದರು. ಹೆಣ್ಣಿನ ನಿಕಟ ಬಂಧುಗಳು ಗಂಡಿನ ಮನೆಗೆ ಹೋಗಿ, ಅವರಿಗೆ ಹುಡುಗಿ ಒಪ್ಪಿಗೆಯಾಗಿದೆ ಎಂಬುದನ್ನು ಖಾತ್ರಿಪಡಿಸಿಕೊಂಡು, "ಹಾಗಾದರೆ ನಮ್ಮ ಮನೆಗೆ ಊಟಕ್ಕೆ ಯಾವಾಗ ಬರುತ್ತೀರಿ" ಎಂದು ಕೇಳುತ್ತಾರೆ (ಹೆಣ್ಣು ಮತ್ತು ಗಂಡಿನ ಮನೆಯವರು ಪರಸ್ಪರ ಊಟ ಮಾಡಿದರೆ ಮದುವೆಗೆ ತೀರ್ಮಾನ ತೆಗೆದುಕೊಂಡಂತೆ) "ಊಟ ಮಾಡಿ ಹೋದ ಮೇಲೆ ನಮಗೆ ಒಪ್ಪಿಗೆಯಿಲ್ಲ" ಎಂದು ಹೆಣ್ಣಿನ ಕಡೆಯವರಾಗಲಿ, ಗಂಡಿನ ಕಡೆಯವರಾಗಲಿ ಹೇಳಿದರೆ ಅದು ಅವರ ಗೌರವಕ್ಕೆ ದೊಡ್ಡ ಕುಂದು ಎಂದು ಭಾವಿಸಲಾಗುತ್ತದೆ. (ಉಂಡ ಮನೆಗೆ ಎರಡು ಬರೆಯಬಾರದು ತಾನೇ ?) ಇದನ್ನು "ಕಂಞಿಕುಡಿ" ಎನ್ನುತ್ತಾರೆ. ಹುಡುಗಿಯನ್ನು ಹುಡುಗ ನೋಡುವ ಸಂಪ್ರದಾಯವಾಗಲೀ, ಜಾತಕ ಹೊಂದಿಕೆಯಾಗಿದೆಯೇ ಎಂದು ಜೋಯಿಷಿಗಳಲ್ಲಿ ಕೇಳುವ ಸಂಪ್ರದಾಯವಾಗಲೀ ಈ ಸಮುದಾಯದಲ್ಲಿ ಮೊದಲು ಇರಲಿಲ್ಲ.

ನಿಶ್ಚಿತಾರ್ಥವನ್ನು ಹುಡುಗಿಯ ಮನೆಯಲ್ಲಿಯೇ ನಡೆಸುವುದು ಸಂಪ್ರದಾಯ. ಹಿಂದೆಲ್ಲಾ ಗಂಡಿನ ಕಡೆಯ ಗಂಡಸರು ಮಾತ್ರ ಹುಡುಗಿಯ ಮನೆಗೆ ಬರುವ ಪದ್ಧತಿ ಇತ್ತು. ಕ್ರಮೇಣ ಹಿರಿಯ ಹೆಂಗಸರು ನಿಶ್ಚಿತಾರ್ಥಕ್ಕೆ ಜತೆಗೆ ಬರಲಾರಂಭಿಸಿದರು. ಇತ್ತೀಚಿನವರೆಗೂ ಹುಡುಗ ಬರುವ ಸಂಪ್ರದಾಯವಿರಲಿಲ್ಲ. ಅಲ್ಲಿ ಎರಡೂ ಕಡೆಯ ಹಿರಿಯರು, ಅಚ್ಚನ್ಮಾರರೂ ಕುಳಿತು ಮದುವೆಯ ದಿನ ನಿಷ್ಕರ್ಷೆ, ಮುಹೂರ್ತ, ಹೇಳಿಕೆ ಮುಂತಾದವುಗಳ ಕುರಿತು ಚರ್ಚೆ ನಡೆಸುತ್ತಿದ್ದರು. ಎರಡೂ ಕಡೆಯವರು ಒಮ್ಮತಕ್ಕೆ ಬಂದ ಮೇಲೆ ಮಾಂಸಾಹಾರದ ಊಟವು ನಡೆಯುತ್ತಿತ್ತು.

೧. ಪೊಡಮುರಿ : "ಪುಡವ" ಎಂದರೆ "ವಸ್ತ್ರ" ಎಂದರ್ಥ "ಮುರಿ" ಎಂದರೆ ತುಂಡರಿಸು ಎಂದರ್ಥ. ಇದು ನಾಯರ್ ಸಂಪ್ರದಾಯದಲ್ಲಿರುವ ವಿವಾಹ ಪದ್ಧತಿ. ಶಾಲಿಯರ್‌ರಂತಹ

ಕೇರಳದ ಇತರ ಸಮುದಾಯದವರೂ ಇದನ್ನು ಅನುಸರಿಸುವುದನ್ನು ಕಾಣಬಹುದು. ಪೂರ್ಣ ಅಲಂಕೃತವಾದ ಕೊಠಡಿಯಲ್ಲಿ ದೀಪಗಳನ್ನು ಉರಿಸಿಡಲಾಗುತ್ತವೆ. ಅಲ್ಲಿ "ಅಷ್ಟಮಾಂಗಲ್ಯಂ" ಎನ್ನುವ ಎಂಟು ವಿಧದ ಶುಭ ಸೂಚಕವಾದ ವಸ್ತುಗಳನ್ನು ಇರಿಸಲಾಗುತ್ತದೆ. ಅದರಲ್ಲಿ ಅಕ್ಕಿ ಭತ್ತ, ತೆಂಗಿನಕಾಯಿ, ಹೂವು, ಸಣ್ಣ ಕತ್ತಿ, ಕನ್ನಡಿ, ಶುಭ್ರವಾದ ಬಟ್ಟೆ, ಉರಿಯುವ ಬೆಂಕಿ ಹಾಗೂ "ಚೆಪ್ಪು" ಎನ್ನುವ ಸಣ್ಣ ಮರದ ಪೆಟ್ಟಿಗೆ ಮುಂತಾದವುಗಳು ಸೇರುತ್ತದೆ. ಅಲ್ಲಿಗೆ ವರನನ್ನು ಮೊದಲು ಕರೆತಂದ ಮೇಲೆ ವಧುವನ್ನು ಕರೆತರಲಾಗುತ್ತದೆ. ಅಲ್ಲಿ ಅವಳಿಗೆ ತಾಲಿಯನ್ನು ಕಟ್ಟಿ ತಟ್ಟೆಯಲ್ಲಿರಿಸಿದ ವಸ್ತ್ರವನ್ನು ವರನು ತುಂಡರಿಸಿ ಒಂದು ತುಂಡನ್ನು ಆಕೆಗೆ ನೀಡುತ್ತಾನೆ. ಇಲ್ಲಿಗೆ ಮದುವೆ ಮುಗಿದಂತೆಯೆ.

"ಪೆಣ್ ಕೊಂಡುವರಿಗ" : ಚಂದ್ರಗಿರಿಯ ದಕ್ಷಿಣಕ್ಕೆ ಹೋದ ಹಾಗೇ ಶಾಲಿಯಾ ತೆರುಗಳಲ್ಲಿ ಹಿಂದೆ ನಡೆಸಲ್ಪಡುವ ಮದುವೆ ಸಂಪ್ರದಾಯದಲ್ಲಿ ಇದೂ ಒಂದು. ಈ ಸಂಪ್ರದಾಯದಲ್ಲೂ ವಧುವನ್ನು ವರನು ನೋಡಲಿಕ್ಕಿಲ್ಲ. ಸೋದರಮಾವ ಕಂಡರೆ ಸಾಕು. ಮದುವೆಯ ದಿನವೂ ವರನು ವಧುವಿನ ಮನೆಗೆ ಹೋಗುವ ಸಂಪ್ರದಾಯವಿಲ್ಲ. ವರದ ಸಹೋದರಿಯರು ವಧುವಿನ ಮನೆಗೆ ಹೋಗಿ ಔತಣದ ಊಟವನ್ನು ಮುಗಿಸಿ ವಧುವನ್ನು ಕರೆದುಕೊಂಡು ಬರುತ್ತಾರೆ. ಇದನ್ನು "ಪೆಣ್ ಕೊಂಡವರಿಗ" (ಹುಡುಗಿಯನ್ನು ಕರೆದು ತರುವುದು) ಎಂದು ಹೇಳುತ್ತಾರೆ. ಈ ರೀತಿ ವಧುವನ್ನು ಕರೆತರಬೇಕಾದರೆ ವಧುವಿನ ಮನೆಯವರಿಗೆ ವಧುದಕ್ಷಿಣೆಯನ್ನು ಕೊಡಬೇಕು. ಪತಿಗೃಹಕ್ಕೆ ಬರುವ ಹೆಣ್ಣು "ಕಣಿಶನ್" ಎಂಬ ಜಾತಿಯವರು ತಯಾರಿಸಿದ ತಾಳಿ ಕೊಡೆಯನ್ನು ಹಿಡಿದು ಬರುತ್ತಾಳೆ. ಮನೆಯಿಂದ ಆಕೆಯನ್ನು ಕಳುಹಿಸಿಕೊಡುವಾಗ ಅಕ್ಷತೆ ಕಾಳು ಹಾಕಿ ಹರಸಿ ಕಳುಹಿಸಲಾಗುತ್ತದೆ. ಈ ಸಂದರ್ಭದಲ್ಲಿ "ಪಣಂವೆಪ್ಪ್" (ಹಣವಿಡುವುದು) ಕಡ್ಡಾಯವಾಗಿತ್ತು. ಬಂದವರೆಲ್ಲರೂ ತಮ್ಮ ಶಕ್ತ್ಯಾನುಸಾರ ಸಹಾಯರೂಪದ ಹಣವನ್ನು ಹರಿವಾಣದಲ್ಲಿ ಇಡಲೇಬೇಕಿತ್ತು.

ತನ್ನ ಮನೆಯಿಂದ ಹೊರಟ ಹೆಣ್ಣು, ಅಲ್ಲಿನ ಕ್ಷೇತ್ರಕ್ಕೆ ಬರುತ್ತಾಳೆ. ಅಲ್ಲಿ ದೈವಗಳಿಗೆ ವಂದಿಸಿ ನೇರವಾಗಿ ಗಂಡನ ಊರಿಗೆ ಬಂದು, ಅಲ್ಲಿನ ಕ್ಷೇತ್ರವನ್ನು ಸಂದರ್ಶಿಸಿದ ಮೇಲೆ ಆಕೆ ಪತಿಗೃಹವನ್ನು ಪ್ರವೇಶಿಸಬೇಕಿತ್ತು.

೩. ಪೊಡೆಯುಂ ಪಣವುಂ : ಇದು ಮೂರು ದಿನಗಳ ಮದುವೆ. ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಶಾಲಿಯರು ಹಿಂದೆ ಮೂರು ದಿನ ಈ ಮದುವೆಯನ್ನು ನಡೆಸುತ್ತಿದ್ದರು. ಮೊದಲನೆಯ ಮತ್ತು ಎರಡನೇಯ ದಿನ ಮದುವೆಯ ಕಾರ್ಯಕ್ರಮಗಳು ವಧುವಿನ ಮನೆಯಲ್ಲೇ ನಡೆಯುತ್ತಿತ್ತು. ವರನ ಮನೆಯವರು ಮೊದಲನೆಯ ದಿನದ ರಾತ್ರಿ, ದಿಬ್ಬಣವನ್ನು ತೆಗೆದುಕೊಂಡು ವಧುವಿನ ಮನೆಗೆ ಬರುತ್ತಾರೆ. ಈ ದಿಬ್ಬಣದಲ್ಲಿ ಮದುಮಗನೊಂದಿಗೆ "ಮೂನಾನ್" ಎಂಬ ಯುವಕನೂ ಇರುತ್ತಾನೆ. ಮದುವೆಗೆ ವರನು ಒಪ್ಪದೇ ಇದ್ದರೆ, ವಧುವನ್ನು ಕಟ್ಟಿಕೊಳ್ಳಲು ಆತ ಸಿದ್ಧನಿರಬೇಕು.

(ಮಣೆಯಾಣಿ ಸಮುದಾಯದಲ್ಲಿ ಮದುವೆಯ ಪಾರುಪತ್ಯ ನಡೆಸುವವನನ್ನು "ಮೂನಾನ್" ಅನ್ನುತ್ತಾರೆ) ಜತೆಗೆ ವಾದ್ಯಘೋಷಗಳಿರುತ್ತವೆ. ಸಿಡಿಮದ್ದು ಸಿಡಿಸಲಾಗುತ್ತದೆ. ಎರಡೂ ಕಡೆಯವರು ಎದುರು ಬದುರಾಗಿ ಕುಳಿತು ಮದುವೆಯ ಮಾತುಕತೆ ನಡೆಸುತ್ತಾರೆ. "ಕೋಳಿ ಕೂಗುವುದಕ್ಕಿಂತ ಮೊದಲು ನಿಮ್ಮ ಹೆಣ್ಣನ್ನು ನಮಗೆ ಕೊಡಿ, ಕೋಳಿ ಕೂಗಿದ ಮೇಲೆ ನಿಮ್ಮ ಹೆಣ್ಣು ನಮಗೆ ಬೇಡ" ಎಂದು ಗಂಡಿನ ಕಡೆಯವರು ಹೇಳುವ ವಾಡಿಕೆಯಿತ್ತು. ಈ ವಾಡಿಕೆಯ ಹಿಂದೆ ಕನ್ಯಾಕುಮಾರಿಯ ಐತಿಹ್ಯವು ಸೇರಿಕೊಂಡಿದೆ. (ಕನ್ಯಾಕುಮಾರಿಯು ಶಿವನನ್ನು ವರಿಸಲು ತಪವನ್ನಾಚರಿಸುತ್ತಾಳೆ. ಬಾಣಾಸುರನ ಸಂಹಾರವು ಕನ್ಯೆಯಾದ ಆಕೆಯಿಂದಲೇ ಆಗಬೇಕಿತ್ತು. ಆಕೆ ವಿವಾಹವಾದರೆ ಅಸುರ ಸಂಹಾರ ಸಾಧ್ಯವಿಲ್ಲ ಎಂದು ತಿಳಿದ ದೇವತೆಗಳು ಮದುವೆಯನ್ನು ನಿಲ್ಲಿಸಲು ಆಲೋಚಿಸುತ್ತಾರೆ. ಆಕೆಯನ್ನು ವಿವಾಹವಾಗಲು ಬಂದವರು ಮುಂಜಾನೆ ಕೋಳಿ ಕೂಗುವುದಕ್ಕಿಂತ ಮೊದಲು ಬಂದು ವಿವಾಹವಾಗಬೇಕು ಎಂಬ ಷರತ್ತನ್ನು ಒಡ್ಡುತ್ತಾರೆ. ತನಗಾಗಿ ತಪವನ್ನಾಚರಿಸುವ ಕನ್ಯಾಕುಮಾರಿಯನ್ನು ವಿವಾಹವಾಗ ಬಯಸಿ ಬಂದ ಈಶ್ವರನನ್ನು ನಾರದನು ತಡೆದು ವಿಳಂಬವಾಗುವಂತೆ ಮಾಡುತ್ತಾನೆ. ದೇವತೆಗಳು ಬೆಳಗಾಯಿತು ಎಂಬುದರ ಸೂಚಕವಾಗಿ ಕೋಳಿಯಂತೆ ಕೂಗುತ್ತಾರೆ. ಷರತ್ತಿನಂತೆ ಈಶ್ವರನು ಹಿಂದಕ್ಕೆ ಹೋಗುತ್ತಾನೆ. ಕನ್ಯಾಕುಮಾರಿ ಕನ್ಯೆಯಾಗಿಯೇ ಉಳಿಯತ್ತಾಳೆ). ಕನ್ಯಾಕುಮಾರಿಯಂತೆ ಶಾಲಿಯಾ ಕನ್ಯೆಯು ಕನ್ಯೆಯಾಗಿಯೇ ಉಳಿಯಬಾರದು ಎಂದು "ಮೂನಾನ್"ನ್ನು ಜತೆಗೆ ಕರೆದುಕೊಂಡು ಹೋಗುತ್ತಾರೆ. ಕೆಲವೊಮ್ಮೆ ಮದುವೆ ತರ್ಕವು ಮುಂಜಾವದವರೆಗೂ ಮುಂದುವರಿಯುವ ಸಾಧ್ಯತೆಯಿದೆ. ಹಾಗಾದರೆ ಆ ಹುಡುಗ ಹುಡುಗಿಯನ್ನು ಮದುವೆಯಾಗುವಂತಿಲ್ಲ. ಆದುದರಿಂದ ಅಂತಹ ಸಂಭವ ನಡೆಯಬಾರದು ಎಂದು "ಮೂನಾನ್"ನ್ನು ಕರೆದುಕೊಂಡು ಹೋಗಲಾಗುತ್ತದೆ. ಮೂನಾನ್ ಮೂರನೇಯವನಾದುದರಿಂದ ಅವಳನ್ನು ವಿವಾಹವಾಗಬಹುದು. ಮಾತುಕತೆಯಾದ ಮೇಲೆ ರಾತ್ರಿಯೇ "ಪೊಡೆಯುಂ ಪಣವುಂ", "ಪೊಡೆ" ಎಂದರೆ ವಸ್ತ್ರ,"ಪಣ" ಎಂದರೆ ಹಣ. ವರನು ಒಂದು ತಟ್ಟೆಯಲ್ಲಿ ಒಂದು ಪಂಚೆ ಮತ್ತು ನಾಲ್ಕಾಣೆಯ ಪಾವಲಿಯನ್ನು ಇಟ್ಟು ವಧುವಿನ ಕೈಗೆ ಕೊಡುತ್ತಾನೆ. ಆಗ ಹಿರಿಯರು "ಹುಡುಗಿಗೆ ವಸ್ತ್ರವನ್ನೂ ಹಣವನ್ನೂ ಕೊಡುತ್ತಿದ್ದೇವೆ, ಎಲ್ಲರಿಗೂ ಸಮ್ಮತಿ ತಾನೇ ? ಎಂದು ಮೂರು ಬಾರಿ ಕೂಗಿ ಹೇಳುತ್ತಾರೆ. ಅವಳು ಅದನ್ನು ಸ್ವೀಕರಿಸಿದರೆ ಸಂಪೂರ್ಣ ಸಮ್ಮತಿ ದೊರೆಯಿತು ಎಂದು ಭಾವಿಸಲಾಗುತ್ತದೆ.

ಎರಡನೇಯ ದಿನ ವಿವಾಹ ಕಾರ್ಯಕ್ರಮ ಮುಂಜಾನೆ ನವ ವಧೂವರರಿಗೆ ತೆಂಗಿನ ಕಾಯಿಯ ಹಾಲನ್ನು ತೆಗೆದು ಅದಕ್ಕೆ ಅರಿಶಿನವನ್ನು ಬೆರಸಿ ಹಚ್ಚಲಾಗುತ್ತದೆ. ಅನಂತರ ಅಭ್ಯಂಜನ. ಮದುವೆ ಮುಗಿಯುವವರೆಗೂ ಈರ್ವರೂ ಅಕ್ಕಿಯಿಂದ ತಯಾರಿಸಿದ ಆಹಾರವನ್ನು ಸೇವಿಸಬಾರದು ಎನ್ನುವ ನಿಯಮವಿದೆ. ವಿವಾಹವನ್ನು ಇವರು "ಮಜಲಂ" ಎನ್ನುತ್ತಾರೆ. ವಿಶಾಲವಾದ ಕೊಠಡಿಯಲ್ಲಿ ಮಧ್ಯದಲ್ಲಿ ವಧೂವರರು ಕುಳಿತುಕೊಳ್ಳುವ ಆಸನಗಳನ್ನು

ಇಡಲಾಗುತ್ತದೆ. ಅದರ ಸುತ್ತಲೂ ಮಡಿವಾಳರು ಶುಭ್ರವಾದ ಬಿಳಿಯ ಬಟ್ಟೆಯನ್ನು ಹಾಸುತ್ತಾರೆ. ಅದನ್ನು "ವೆಳ್ಳಪ್ಪುಡವ ವಿರಿಕ್ಕಲ್" (ಬಿಳಿಯ ವಸ್ತ್ರ ಹಾಕುವುದು) ಎನ್ನುತ್ತಾರೆ. ಕಾಲುದೀಪ ಹಾಗೂ ಒಂದು ತಟ್ಟೆಯಲ್ಲಿ ಅಕ್ಕಿ ಹಾಗೂ ಹೊಸ ವಸ್ತ್ರವನ್ನು ಮಡಚಿ ಇಟ್ಟುಕೊಂಡು "ಕೊಂಕಣಿ ಗೋತ್ರ"ದ ಸ್ತ್ರೀಯು ಮುಂದಿನಿಂದ ಆ ಬಟ್ಟೆಯ ಮೇಲೆ ನಡೆದು ಬರುವಾಗ ಹಿಂದಿನಿಂದ ಅಲಂಕೃತರಾದ ವಧೂವರರ ಕೈಗಳನ್ನು ಅವರ ಸೋದರ ಮಾವಂದಿರು ಹಿಡಿದು ಬರುತ್ತಾರೆ. ಅವರ ಹಿಂದಿನಿಂದ ನಿಕಟ ಬಂಧುಗಳೂ ನಡೆಯುತ್ತಾರೆ. ವಧೂವರರಿಬ್ಬರನ್ನೂ ಪೀಠದಲ್ಲಿ ಕೂರಿಸಿ ಅವರ ಮುಂದೆ ದೀಪವನ್ನೂ ಅಕ್ಕಿ ಮತ್ತು ಹೊಸಬಟ್ಟೆಯಿರುವ ತಟ್ಟೆಯನ್ನೂ ಇರಿಸಲಾಗುತ್ತದೆ. ಅನಂತರ ಸಣ್ಣ ತಾಲಿಯೊಂದನ್ನು ವರನು ವಧುವಿನ ಕೊರಳಿಗೆ ಕಟ್ಟುತ್ತಾನೆ. ಇದನ್ನು "ಮಿನ್ನ್‌ಕೆಟ್ಟ್" ಎನ್ನುತ್ತಾರೆ. ಅವರ ಮುಂದೆ ದೊಡ್ಡ ಪಾತ್ರೆಯೊಂದರಲ್ಲಿ ಮುಡಿಗಟ್ಟಲೆ ಅಕ್ಕಿಯನ್ನು ಹಾಗೂ ಒಂದು ಹರಿವಾಣವನ್ನು ಇಡಲಾಗುತ್ತದೆ. "ಹಿರಿಯರೆಲ್ಲರೂ ಬಂದು ವಧೂವರರನ್ನು ಹರಸಿ" ಎಂದಾಗ ಮೊದಲು ಅಚ್ಚಮ್ಮಾರರೂ, ಅನಂತರ ನಿಕಟ ಬಂಧುಗಳೂ, ಮತ್ತೆ ಬಾಂಧವರೂ ಅವರ ಮುಂದೆ ಇರಿಸಿದ ತಟ್ಟೆಯಲ್ಲಿ ತಮ್ಮ ಶಕ್ತ್ಯಾನುಸಾರ ಹಣವನ್ನು ಇಡುತ್ತಾರೆ. ಹಿಂದೆ ಹಣವನ್ನು ಲಕೋಟೆಯೊಳಗೆ ಹಾಕಿಡುವ ಸಂಪ್ರದಾಯವಿರಲಿಲ್ಲ. ಅಲ್ಲೇ ಒಬ್ಬನು ನಿಂತುಕೊಂಡು, ಗಟ್ಟಿಯಾಗಿ "ಇಂತವರು ಇಷ್ಟು ಹಣ ಇಟ್ಟಿದ್ದಾರೆ" ಎಂದು ಕೂಗಿ ಹೇಳುವ ಕ್ರಮವಿತ್ತು. ಅನಂತರ ಪಾತ್ರೆಯಲ್ಲಿಟ್ಟ ಅಕ್ಕಿಯನ್ನು ತೆಗೆದು ವಧೂವರರ ಮೇಲೆ ಹಾಕಿ ಹರಸಿ, ಮೂರು ಬಾರಿ ಬೊಗಸೆಯಲ್ಲಿ ಅಕ್ಕಿಯನ್ನು ಬಾಚಿ ಮೇಲಕ್ಕೆ ಚಿಮ್ಮುತ್ತಾರೆ. ಇದನ್ನು "ದೇಸೆ" ಎನ್ನುತ್ತಾರೆ. ಎಲ್ಲರೂ ಅಕ್ಕಿ ಚೆಲ್ಲಿ ಹರಸಿದ ಮೇಲೆ "ಸಭಿಕರಲ್ಲಿ ಹರಸಲು ಇನ್ನಾರಾದರೂ ಉಳಿದಿದ್ದಾರೆಯೇ" ಎಂದು ಕೇಳಿ "ಮದುಮಗನನ್ನೂ ಮದುಮಗಳನ್ನೂ ದೇಸೆಯಿಂದ ಎಬ್ಬಿಸುತ್ತೇವೆ, ಎಬ್ಬಿಸುತ್ತೇವೆ, ಎಬ್ಬಿಸುತ್ತೇವೆ" ಎಂದು ಮೂರು ಬಾರಿ ಕೂಗಿ ಹೇಳಿ ಅವರನ್ನು ಎಬ್ಬಿಸುತ್ತಾರೆ. ಅನಂತರ ಭೋಜನ. ಮದುವೆಯ ಊಟಕ್ಕೆ ಸಸ್ಯಾಹಾರವನ್ನೇ ಮಾಡಲಾಗುತ್ತಿತ್ತು. ಊಟ ಮುಗಿದ ಮೇಲೆ ವಧುವನ್ನೂ ಆಕೆಯ ಕೆಲವು ಬಂಧುಗಳನ್ನೂ ಕರೆದುಕೊಂಡು ವರನ ಮನೆಗೆ ಹೋಗುತ್ತಾರೆ. ಅಲ್ಲಿ ಮನೆಯ ಅಂಗಳಕ್ಕೆ ವಧೂವರರು ಬಂದಾಗ ವರನ ತಾಯಿ (ಅವಳಿಲ್ಲದಿದ್ದರೆ ಅಕ್ಕ ಅಥವಾ ಚಿಕ್ಕತಾಯಿ) ಕುರ್ದಿ ನೀರನ್ನು (ಅರಶಿನ ಮತ್ತು ಕುಂಕುಮ ಬೆರಸಿದ ನೀರು) ತಂದು ತಲೆಯಿಂದ ಕಾಲಿನವರೆಗೂ ಸವರಿ, ಇಬ್ಬರ ಕಾಲುಗಳ ಮೇಲೂ ಹೊಯ್ಯುವಳು. ಇದನ್ನು ಕಣ್ಣೀರ್ ಎಡ್‌ಕ್ಕ್‌ನೆ (ದೃಷ್ಟಿ ತೆಗೆಯುವುದು) ಎಂದು ಹೇಳುತ್ತಾರೆ. ಅನಂತರ ಅವರನ್ನಿಬ್ಬರನ್ನೂ ಕರೆತಂದು ಒಳಕೋಣೆಯಲ್ಲಿ ದೇವರ ಮುಂದೆ ಕೂರಿಸಿ, ವರನ ತಾಯಿ ಒಂದು ಗ್ಲಾಸು ಹಾಲನ್ನು ವರನ ಕೈಗೆ ಕೊಡುತ್ತಾಳೆ. ಅದರಲ್ಲಿ ಅರ್ಧವನ್ನು ಕುಡಿದು ಆತ ವಧುವಿಗೆ ನೀಡುತ್ತಾನೆ. (ಜೀವನದಲ್ಲಿ ನಾವಿನ್ನು

ಎಲ್ಲವನ್ನೂ ಹಂಚಿಕೊಳ್ಳೋಣ ಎನ್ನುವುದನ್ನು ಇದು ಸಂಕೇತಿಸುತ್ತದೆ.) ರಾತ್ರಿಯ ಊಟಕ್ಕೆ ಕೋಳಿ, ಮೀನು ಆಗಲೇಬೇಕು. ಈ ಭೋಜನಕ್ಕೆ ವರನ ಮನೆಯ "ಸಮ್ಮಾನದೂಟ" ಎನ್ನುವರು. ಈ ಸಮುದಾಯಕ್ಕೆ ಕಡಲೆ ಮತ್ತು ಒಣಗಿದ ಶಾರ್ಕ್ (ಸ್ರಾವು) ಮೀನಿನ ಪಲ್ಯ ತುಂಬಾ ಪ್ರಿಯವಾದುದು. ಆದುದರಿಂದ ಸಮಾರಂಭಗಳಿಗೆ ಅದನ್ನು ತಯಾರಿಸುವುದು ಹಿಂದೆ ಕಡ್ಡಾಯವಾಗಿತ್ತು. ಕಡಲೆ ಕಾಳಿನ ಬದಲು ಕೆಲವೊಮ್ಮೆ ತೊಗರಿ ಕಾಳನ್ನು ಬಳಸುವುದಿತ್ತು.

ಆ ದಿನ ವಧುವಿಗೆ ಅಲ್ಲಿ ಬದಲಾಯಿಸಲು ಹೊಸ ಸೀರೆಯೊಂದನ್ನು ಕೊಡಲಾಗುತ್ತದೆ. ಇದನ್ನು "ಮಳ್‌ಮಾಟಿ ಮಾಟ್‌ತುಣಿ" (ನೂತನ ವಧು ಬದಲಾಯಿಸುವ ಸೀರೆ) ಎಂದು ಹೇಳುತ್ತಾರೆ. ಆಚೀಚೆಗಿನ ಅನ್ಯ ಜಾತಿಯವರು ನವವಧುವನ್ನು ನೋಡಲು ಬರುವುದಿದೆ. ಅವರಿಗೆ ಎಳನೀರು, ಬಾಳೆಹಣ್ಣು, ಅವಲಕ್ಕಿ ಕೊಡುವ ಸಂಪ್ರದಾಯವಿತ್ತು. ವಧುವನ್ನು ಒಪ್ಪಿಸಿಕೊಡುವ ಶಾಸ್ತ್ರವಿನ್ನೂ ನಡೆಯದಿರುವುದರಿಂದ ವಿವಾಹವಾದರೂ ವಧೂ ವರರು ಅಂದು ಜತೆಗೆ ಮಲಗುವಂತಿಲ್ಲ.

ಮರುದಿನ ವಧುವಿನ ಮನೆಯಿಂದ ಹತ್ತಾರು ಮಂದಿ ವರನ ಮನೆಗೆ ಬರುತ್ತಾರೆ. ಅಲಂಕೃತರಾದ ವಧೂ ವರರನ್ನು ಕೂರಿಸಿ ಹಿರಿಯರೆಲ್ಲರೂ ಅಕ್ಷತೆ ಹಾಕಿ ಪುನಃ ಹರಸುತ್ತಾರೆ. ಅನಂತರ ವಧುವಿನ ತವರು ಮನೆಯವರು ವರನ ಮನೆಯವರನ್ನು ತಮ್ಮ ಮನೆಗೆ ಭೋಜನಕ್ಕೆ ಆಹ್ವಾನಿಸುತ್ತಾರೆ. ವಧೂ ವರರನ್ನು ವರನ ಕಡೆಯವರನ್ನೂ ಕರೆದುಕೊಂಡು ವಧುವಿನ ಮನೆಗೆ ಬರಲಾಗುತ್ತದೆ. ವಧೂ ವರರು ವಧುವಿನ ಮನೆಯ ಬಾಗಿಲಿಗೆ ಬಂದಾಗ ವಧುವಿನ ಕಿರಿಯ ತಮ್ಮನು ತಂಬಿಗೆಯಲ್ಲಿ ನೀರನ್ನು ತಂದು ವರನ ಕೈಗೆ ಕಾಲು ತೊಳೆಯಲೆಂದು ಕೊಡುತ್ತಾನೆ. ವರನು ಆ ನೀರಿನಿಂದ ಕಾಲು ತೊಳೆದು, ತಂಬಿಗೆಯೊಳಗೆ ಸ್ವಲ್ಪ ಹಣವನ್ನು ಕಾಣಿಕೆಯಾಗಿ ಆ ಹುಡುಗನಿಗೆ ನೀಡುತ್ತಾನೆ. ಅಂದು ಮಧ್ಯಾಹ್ನ ವಧುವಿನ ಮನೆಯಲ್ಲಿ ಮಾಂಸಾಹಾರದ ಭೋಜನಕ್ಕೆ ಏರ್ಪಾಡು ಮಾಡಿರುತ್ತಾರೆ. ಇದನ್ನು "ವಧುವಿನ ಮನೆಯ ಸಮ್ಮಾನದೂಟ" ಎನ್ನುವರು. ಭೋಜನವಾದ ಮೇಲೆ ಶುಭ ಮುಹೂರ್ತವನ್ನು ನೋಡಿ, ಹುಡುಗಿಯನ್ನು ಕಳುಹಿಸಿಕೊಡುವ ಸಂಪ್ರದಾಯವಿದೆ. ಇದನ್ನು "ಪೆಣ್ಣನೆ ಕಿಟಿಚಿ ಕೊಡುಕ್ಕಲ್" (ಹೆಣ್ಣನ್ನು ಇಳಿಸಿಕೊಡುವುದು) ಎಂದು ಹೇಳುತ್ತಾರೆ.

ಮನುಷ್ಯ ಮನುಷ್ಯರೊಳಗಿನ ಸಂಬಂಧವನ್ನು ಮನೆಯ ಹೊಸ್ತಿಲಿನ ಆಧಾರದಿಂದ ಗ್ರಹಿಸುವ ಸಂಸ್ಕೃತಿಯು ಬಹಳ ಪ್ರಾಚೀನವಾದುದು. ಮನೆಯ ಹೊಸ್ತಿಲಲ್ಲಿ "ಗೃಹ ದೇವತೆ" ನೆಲೆಗೊಂಡಿರುವಳು ಎಂಬ ನಂಬಿಕೆಯಿದೆ. "ಮನೆಯೊಳಗಿನ ಪರಸ್ಪರ ಭಾವನಾತ್ಮಕ ಸಂಬಂಧಗಳು ಅವಳನ್ನು ದಾಟಿ ಒಳಬರುವುದರಿಂದ ಭದ್ರವಾಗುತ್ತದೆ ಎಂದೂ, ಅವಳನ್ನು ದಾಟಿ ಹೊರ ಹೋಗುವುದರಿಂದ ಶಿಥಿಲವಾಗುತ್ತದೆ" ಎಂದೂ ಭಾವಿಸಲಾಗುತ್ತದೆ. ಆದುದರಿಂದಲೇ ಹೊಸ್ತಿಲು ಪೂಜೆಯಂತಹ ಸಾಂಸ್ಕೃತಿಕ ಆಚರಣೆಗೆ ವಿಶೇಷವಾದ ಮಹತ್ವವನ್ನು ನೀಡಲಾಗುತ್ತದೆ.

ದೇವಾಲಯವನ್ನೂ, ಮನೆಯನ್ನೂ ಪ್ರವೇಶಿಸುವಾಗ ಹೊಸ್ತಿಲನ್ನು ಮೊದಲು ಮುಟ್ಟಿ ನಮಸ್ಕರಿಸುವುದು ಆ ಗೃಹ ದೇವತೆಯ ಹರಕೆಯನ್ನು ಪಡೆಯಲೋಸುಗವೇ.

"ಮನೆಯ ಮೆಟ್ಟಿಲು ತುಳಿದರೆ ಜಾಗ್ರತೆ", "ನಿನ್ನ ಮನೆಯ ಹೊಸ್ತಿಲು ತುಳಿಯಲಾರೆ", ಈ ಮೊದಲಾದ ಮಾತುಗಳು ಸಂಬಂಧವನ್ನು ಕಡಿದುಕೊಳ್ಳುವುದನ್ನು ಸೂಚಿಸುತ್ತದೆ. ಜೀವಂತ ಮಾನವನ ಭಾವನಾತ್ಮಕ ಸಂಬಂಧದ ಜತೆಗೆ ನಿರ್ಜೀವವಾದ ಹೊಸ್ತಿಲು ವಹಿಸುವ ಪಾತ್ರವೇನೂ ಕಡಿಮೆಯದ್ದಲ್ಲ ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ. ಅದಕ್ಕೆ ಶಾಲಿಯರು ವಧುವನ್ನು ವರನ ಮನೆಗೆ ಕಳುಹಿಸುವುದನ್ನು "ಪೆಣ್ಣನೆ ಕಿಳಿಚಿ ಕೊಡುಕ್ಕಲ್" (ಹೆಣ್ಣನ್ನು ಇಳಿಸಿ ಕೊಡುವುದು) ಎಂದು ಕರೆದಿದ್ದಾರೆ. ಅಂದರೆ "ಮನೆಯ ಹೊಸ್ತಿಲಿನಿಂದ ಇಳಿಸಿ ಕೊಡುವುದು" ಎಂದರ್ಥ. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ, ಅವಳಿಗೂ ಮನೆಯೊಳಗಿನ ಇತರರಿಗೂ ಸಂಬಂಧವು ಇಳಿದುಹೋಯಿತು" ಎಂಬುದನ್ನು ಇದು ಸೂಚಿಸುತ್ತದೆ.

ಮನೆಯೊಳಗೆ, ದೇವರ ಮುಂದೆ ವಧೂವರರೂ, ವಧುವಿನ ತಂದೆ—ತಾಯಿ, ನಿಕಟ ಬಂಧುಗಳು, ವರನ ಹತ್ತಿರದವರು ಹಾಗೂ ಬಂಧುಗಳು ನಿಂತುಕೊಳ್ಳುತ್ತಾರೆ. ಅನಂತರ "ಹಿರಿಯರು ಯಾರಾದರೂ ಒಳ್ಳೆ ಮಾತುಗಳನ್ನು ಹೇಳಿ" ಎನ್ನುತ್ತಾರೆ. (ಇದನ್ನು "ನಲ್ಲೆವಾಕ್" ಎಂದು ಹೇಳುತ್ತಾರೆ). ಆಗ ವಧುವಿನ ಸೋದರ ಮಾವ, "ಎರಡೂ ಮನೆಯವರ ಸಮ್ಮತಿಯಂತೆ ನಾವಿಂದು ನಮ್ಮ ಹುಡುಗಿಯನ್ನು ಇಂತಹವರ ಮಗನಿಗೆ ಮದುವೆ ಮಾಡಿಕೊಟ್ಟಿದ್ದೇವೆ. ಈ ಮನೆಯ ಕುಲದೈವ ಹಾಗೂ ಈ ಊರಿನ ದೈವಗಳ ಹರಕೆ ಆಶೀರ್ವಾದಗಳೂ ಅವರ ಮೇಲೆ ಇರಬೇಕು. ಅವರ ಹೆಸರಿನಲ್ಲಿ ನಾವು ಪ್ರತ್ಯೇಕ ಪೂಜೆಗಳನ್ನು ನಮ್ಮ ಶಕ್ತ್ಯಾನುಸಾರ ಕುಲದೈವಕ್ಕೂ ಈ ಊರಿನ ಇಂತಿಂತಹ ದೈವಕ್ಕೂ ಕೊಡಿಸುತ್ತೇವೆ. ಯಾವ ವಿಘ್ನಗಳೂ ಬಾರದಂತೆ ಅವರನ್ನು ಕಾಪಾಡಿ ಮುಂದಕ್ಕೆ ನಡೆಸಿಕೊಂಡು ಹೋಗುವ ಜವಾಬ್ದಾರಿ ದೈವಗಳದ್ದು" ಎಂದು ಹೇಳಿ ಹುಡುಗನ ಕಡೆಯವರಲ್ಲಿ "ಇಷ್ಟರವರೆಗೆ ಈ ಹುಡುಗಿ ನಮ್ಮ ಮನೆಯವಳಾಗಿದ್ದಳು. ಇನ್ನು ಅವಳು ನಿಮ್ಮ ಮನಗೆ ಸೇರಿದವಳು. ಅವಳೇನು ತಪ್ಪು ಮಾಡಿದರೂ ಹೊಟ್ಟೆಯೊಳಗಿಟ್ಟುಕೊಂಡು ಅವಳನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿ ನಿಮ್ಮದು. ಎಲ್ಲಾ ದೈವಗಳ ಸಾಕ್ಷಿಯಾಗಿ ನಮ್ಮ ಹುಡುಗಿಯನ್ನು ನಿಮಗೆ ಒಪ್ಪಿಸುತ್ತೇವೆ" ಎಂದು ಹೇಳುತ್ತಾನೆ.

ಮದುವೆಗೆ ಬಟ್ಟೆಬರೆಗಳನ್ನು ಖರೀದಿಸುವ ಸಮಯದಲ್ಲಿ ಒಂದು ಪೆಟ್ಟಿಗೆ ಕನ್ನಡಿ ಹಾಗೂ ಕೊಡೆಯನ್ನು ಹುಡುಗಿಗಾಗಿ ಖರೀದಿ ಮಾಡಿಟ್ಟಿರುತ್ತಾರೆ. ಪೆಟ್ಟಿಗೆಯಲ್ಲಿ ಅವಳ ಬಟ್ಟೆ ಬರೆಗಳನ್ನೂ, ಕನ್ನಡಿಯನ್ನೂ ಇಟ್ಟು ಅವಳ ಕೈಗೆ ನೀಡುತ್ತಾರೆ. ಆಕೆ ಮನೆಯವರೆಲ್ಲರ ಕಾಲು ಹಿಡಿದು ಆಶೀರ್ವಾದವನ್ನು ಪಡೆದುಕೊಂಡು, "ನಾನು ಹೋಗಿಬರುತ್ತೇನೆ" ಎನ್ನುತ್ತಾಳೆ. ಮಾರ್ಮಿಕವಾದ ಈ ಸನ್ನಿವೇಶದಲ್ಲಿ ಅಳದಿರುವವರು ಬಹಳ ಕಡಿಮೆ. ಮನೆಯವರೆಲ್ಲಾ

ಹುಡುಗಿಯೊಂದಿಗೆ ನದಿ ತೀರದವರೆಗೋ, ಗುಡ್ಡದವರೆಗೋ ಬಂದು ಕಣ್ಣೀರಿನೊಂದಿಗೆ ಬೀಳ್ಕೊಡುತ್ತಾರೆ. ಹೊಸ ಪರಿಸರಕ್ಕೆ ಹುಡುಗಿ ಹೊಂದಿಕೊಳ್ಳುವವರೆಗೆ ಹುಡುಗಿಗೆ ಬೇಸರವಾಗಬಾರದು ಎಂದು ವಧುವಿನ ಮನೆಯಿಂದ ಅವಳ ಚಿಕ್ಕ ತಂಗಿಯೊಬ್ಬಳನ್ನು ಜತೆಗೆ ಕಳುಹಿಸಿ ಕೊಡುವ ಸಂಪ್ರದಾಯವೂ ಇತ್ತು. ಹೆಚ್ಚಾಗಿ "ಬಾಲ್ಯ ವಿವಾಹ"ವು ರೂಢಿಯಲ್ಲಿದ್ದ ಆ ಕಾಲದಲ್ಲಿ ಇನ್ನೂ ಚಿಕ್ಕವಳಾದ ಹುಡುಗಿಗೆ ಒಂಟಿತನ ಕಾಡಬಾರದು ಎನ್ನುವುದೇ ಇದರ ಹಿಂದಿನ ಆಶಯ.

ನಾಲ್ಕೈದು ದಿನಗಳು ಕಳೆದ ಮೇಲೆ ಹುಡುಗಿಯನ್ನು ಒಂದೆರಡು ದಿನಕ್ಕೆ ತವರು ಮನೆಗೆ ಕರೆದೊಯ್ಯಲು ಅವಳ ಬಂಧುಗಳು ಬರುತ್ತಾರೆ. ಮರಳ ಹುಡುಗಿಯನ್ನು ಕರೆತರಲು ಹುಡುಗನ ಮನೆಯವರನ್ನು ಆಹ್ವಾನಿಸುತ್ತಾರೆ. ವಿವಾಹಿತಳಾದ ಹೆಣ್ಣನ್ನು ತವರು ಮನೆಯಿಂದ ಮಂಗಳವಾರ ಕಳುಹಿಸುವ ಸಂಪ್ರದಾಯವಿಲ್ಲ ಈ ಬಾರಿ ಹುಡುಗನ ತಾಯಿಯೇ ಹುಡುಗಿಯನ್ನು ಕರೆತರಲು ಹೋಗಬೇಕು. ಆ ದಿನ ಹುಡುಗಿಯ ಮನೆಯಲ್ಲಿ ವಿಶೇಷವಾದ ಭೋಜನ ಕೂಟವನ್ನು ಏರ್ಪಡಿಸಲಾಗುತ್ತದೆ. "ಕೋಳಿ ಸಾರಿನೊಂದಿಗೆ ಕೆಂಡದಲ್ಲಿ ಕಾಯಿಸಿದ ಅಕ್ಕಿಯ ರೊಟ್ಟಿ" ಅಂದಿನ ವಿಶೇಷತೆ. ಈ ಭೋಜನ ಕೂಟವನ್ನು "ಅಮ್ಮಾಯಿ ಚಮ್ಮಾನಂ" (ಅತ್ತೆ ಸಮ್ಮಾನ) ಎಂದು ಕರೆಯುತ್ತಾರೆ. ಹುಡುಗಿಯ ಅತ್ತೆಯ ಮನಸ್ಸನ್ನು ಈ ರೀತಿಯಲ್ಲಿ ತೃಪ್ತಿ ಪಡಿಸಿದರೆ ಹುಡುಗಿಗೆ ಗಂಡನ ಮನೆಯಲ್ಲಿ ನೆಮ್ಮದಿಯಿರಬಹುದು ಎಂಬುದು ಈ ವಿಶೇಷ ಆತಿಥ್ಯದ ಹಿಂದಿನ ಆಶಯ. ಅತ್ತೆಯನ್ನು ಗೌರವದಿಂದ ಕಂಡು, ಹೊಟ್ಟೆ ತುಂಬಾ ಉಣಿಸಿ, ಆ ದಿನ ರಾತ್ರಿ ವಧುವಿನ ಮನೆಯಲ್ಲಿ ಅವಳನ್ನು ನಿಲ್ಲುವಂತೆ ಮಾಡಿ ಮರುದಿನ ಹುಡುಗಿಯನ್ನು ಅವಳೊಂದಿಗೆ ಕಳುಹಿಸಿಕೊಡುತ್ತಾರೆ. ಇಲ್ಲಿಗೆ ಮದುವೆಯ ಎಲ್ಲಾ ಕಾರ್ಯಕಲಾಪಗಳೂ ಮುಕ್ತಾಯವಾದಂತೆ. (ತುಳುನಾಡಿನ ಹೆಚ್ಚಿನ ಸಮುದಾಯಗಳಲ್ಲೂ ಹೆಚ್ಚು ಕಡಿಮೆ ಇಂತಹ ಆಚರಣೆಗಳೇ ಇವೆ.)

ಈ ಎಲ್ಲಾ ಆಚರಣೆಗಳಲ್ಲಿ ಕೆಲವು ಇತ್ತೀಚೆಗೆ ಅಮೂಲ್ಯತೆಯನ್ನು ಕಳೆದುಕೊಂಡು ಮಾಯವಾಗಿದೆ. ಕೆಲವು ಕೇವಲ ಶಾಸ್ತ್ರಕ್ಕೆ ಉಳಿದಿವೆ. ಮೂರು ದಿನದ ಮದುವೆ ಒಂದೇ ದಿನದಲ್ಲಿ ಮುಗಿದುಹೋಗುತ್ತದೆ. ಜನಪದರಿಗೆ ಸಂಭ್ರಮ ಪಟ್ಟುಕೊಳ್ಳಲು ಬೇರೆ ಅವಕಾಶಗಳಿಲ್ಲದಿದ್ದ ಕಾರಣದಿಂದ ಇಂತಹ ಶುಭಸಂದರ್ಭಗಳನ್ನು ಅವರು ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಬಂಧುಬಾಂಧವರ ಒಳಗೆ ಭಾವನಾತ್ಮಕ ಸಂಬಂಧ ಬೆಳೆಯಲು ಇದರಿಂದ ಅನುಕೂಲವಾಗುತ್ತಿತ್ತು. ಸಾಂಸ್ಕೃತಿಕವಾಗಿ ಬಹಳ ಪ್ರಾಶಸ್ತ್ಯವನ್ನು ಪಡೆದುಕೊಂಡು ಅರ್ಥಗರ್ಭಿತವಾದ "ಮೊಡೆಯುಂ ಪಣವುಂ" ಕೊಡುವ ಹಾಗೂ ದೇಸೆ (ಸೇಸೆ) ಹಾಕುವ ಸಂಪ್ರದಾಯವು ಈಗ ಇಲ್ಲ. ಮೊಡೆ (ವಸ್ತ್ರ)ಯನ್ನು ಹಾಗೂ "ಪಣಂ" (ಹಣ)ವನ್ನು ವರನು ವಧುವಿಗೆ ಕೊಡುವ ಮೂಲಕ "ಹುಡುಗಿಯ ಸಂಪೂರ್ಣ ಹೊಣೆಯನ್ನು ಹೊರಲು ತಾನು ಸಿದ್ಧ" ಎನ್ನುವುದನ್ನು ಸೂಚಿಸುತ್ತಾನೆ. ಹೆಣ್ಣನ್ನು ನೋಡಿಕೊಳ್ಳುವುದರಲ್ಲಿ ಪುರುಷನ ಜವಾಬ್ದಾರಿ ಎಷ್ಟರ ಮಟ್ಟಿಗಿದೆ ಎನ್ನುವುದನ್ನು

ಇದು ಸಂಕೇತಿಸುತ್ತದೆ. ಶ್ರೀಮಂತವಾದ ಈ ಸಂಸ್ಕೃತಿಯನ್ನು ಕಾಸರಗೋಡಿನ ಭಾಗಗಳಲ್ಲಿ ಹೆಚ್ಚಿನ ಸಮುದಾಯದವರೂ ಬೇರೆ ಬೇರೆ ರೀತಿಯಿಂದ ಆಚರಿಸಿಕೊಂಡು ಬರುತ್ತಿದ್ದರು. ಮಣಿಯಾಣಿ (ಯಾದವ) ಸಮುದಾಯದಲ್ಲಿ ಸೀರೆ, ಕಣ, ತಾಂಬೂಲ ಸಹಿತ ವಧುದಕ್ಷಿಣೆಯನ್ನು ಹೆಣ್ಣಿಗೆ ವರನು ನೀಡುವುದನ್ನು "ಪೊಡಮುರಿ" ಎಂದು ಹೇಳುತ್ತಾರೆ. ಈಗ ವಧುದಕ್ಷಿಣೆಯ ಸ್ಥಾನವನ್ನು ವರದಕ್ಷಿಣೆಯು ಆಕ್ರಮಿಸಿಕೊಳ್ಳುತ್ತಿದೆ.

"ವಣ್ಣಾತಿ ಮಾಟ್" ಮತ್ತು ವಣ್ಣಾತಿ (ಮಡಿವಾಳತಿ) ಹಾಸಿದ ಬಟ್ಟೆಯ ಮೇಲೆ ಮೂರು ಬಾರಿ ಪ್ರದಕ್ಷಿಣೆ ಬರುವ ಸಂಪ್ರದಾಯವು ಜನಪದರು ಶುದ್ಧೀಕರಣ ಪ್ರಕ್ರಿಯೆಗೆ ಎಷ್ಟೊಂದು ಪ್ರಾಮುಖ್ಯತೆಯನ್ನು ನೀಡುತ್ತಿದ್ದರು ಎನ್ನುವುದನ್ನು ತಿಳಿಸುತ್ತದೆ. ವಸ್ತ್ರವು ಪರಿಶುದ್ಧವಾಗಬೇಕಿದ್ದರೆ ಮಡಿವಾಳರೇ ಒಗೆಯಬೇಕು. ಆಯಾಯ ವೃತ್ತಿಯನ್ನು ಅವಲಂಬಿಸಿದವರಿಗೆ ಅಂದಿನ ಸಮಾಜವು ನೀಡುತ್ತಿದ್ದ ಪ್ರಾಶಸ್ತ್ಯವನ್ನೂ ಯಾವುದೇ ಕೆಲಸವನ್ನು ಅದರಲ್ಲಿ ಪರಿಣತರಾದವರು ಮಾಡಿದರೆ ಮಾತ್ರ ಅದು ಸಮರ್ಪಕ ಎಂಬ ಅಂದಿನವರ ವಿಶ್ವಾಸವನ್ನೂ ಇದು ಸೂಚಿಸುತ್ತದೆ. ಅದನ್ನೇ ಈ ಜನಗಳ ಮಧ್ಯೆ ಇರುವ ಗಾದೆಯೊಂದು ಹೀಗೆ ಹೇಳುತ್ತದೆ "ಆಟ್‌ನೋನ್ ಆಟಣಂ ನ್ಯೆನೋನ್ ನ್ಯೆಯಣಂ" (ಗಾಣಿಗನೇ ಗಾಣವನ್ನು ತಿರುಗಿಸಬೇಕು, ನೇಕಾರನೇ ನೇಯಬೇಕು). ಇದು ವೃತ್ತಿ ಅಭಿಮಾನದ ದ್ಯೋತಕವೂ ಹೌದು. ಕುಲವೃತ್ತಿಯನ್ನು ಹೀನಾಯವಾದ ದೃಷ್ಟಿಯಿಂದ ಕಾಣುವ ಆಧುನಿಕ ಸಮುದಾಯಕ್ಕೆ ಇದೆಲ್ಲ ಹೇಗೆ ಅರ್ಥವಾಗಬೇಕು ?. ಕ್ರಮೇಣ ಇಂತಹ ವೃತ್ತಿಗಳನ್ನು ಮಾಡುವುದರಿಂದ ಘನತೆಗೆ ಕುಂದು ಎನ್ನುವ ಭಾವನೆಯು ಬಂದು ಈ ವೃತ್ತಿಗಳು ಮೂಲೆಗುಂಪಾಗಿ ಹೋದುವು.

ಮದುವೆಯ ಕಾಲದ "ದೇಸೆ" (ಅಕ್ಕಿ ಚೆಲ್ಲುವ) ಸಂಪ್ರದಾಯವು ಕೃಷಿ ಸಂಪನ್ನತೆಯ ಸಂಕೇತ "ಮನೆ ತುಂಬಾ ಚೆಲ್ಲುವಷ್ಟು ಅಕ್ಕಿಯಿದೆ" ಎಂದರೆ ಅಂಥವರು ಸಂಪನ್ನರು ಎಂದರ್ಥ. ಆದುದರಿಂದಲೇ ಬಂದವರೆಲ್ಲರೂ ಹಿಂದು ಮುಂದು ನೋಡದೆ ಬೊಗಸೆ ತುಂಬಾ ಅಕ್ಕಿಯನ್ನು ತೆಗೆದು ಮೇಲಕ್ಕೆ ತೂರಿ ವಧೂವರರನ್ನು ಹರಸುತ್ತಿದ್ದರು. ಚೆಲ್ಲಿ ಹರಡಿ ಹೋದ ಅಕ್ಕಿಯ ಬಗ್ಗೆ ಅವರಿಗೆ ಚಿಂತೆ ಇರಲಿಲ್ಲ ಎನ್ನುವುದು ಆ ಅಕ್ಕಿಯನ್ನು ಮಡಿವಾಳತಿ ಕೊಂಡೊಯ್ಯುವುದು ಸೂಚಿಸುತ್ತದೆ. ಅಕ್ಕಿ ಚೆಲ್ಲುವ ಈ ಸಂಪ್ರದಾಯ ಈಗ "ಅರಿಕ್ಕಲ್ ನುಳ್ಳಿವೆಕ್ಕುಗ" (ಅರಿ + ಕೈಕಳಿಲ್ + ನುಳ್ಳಿವೆಕ್ಕುಗ = ಅಕ್ಕಿಯನ್ನು ಕೈಯಿಂದ ಚಿವುಟಿ ಇಡುವುದು) ಎನ್ನುವ ಮಟ್ಟಕ್ಕೆ ಇಳಿದಿದೆ. ಈಗಲೂ ಹಳೆಯ ತಲೆಮಾರಿನವರು ಹಿಡಿ ತುಂಬಾ ಅಕ್ಕಿಯನ್ನು ಎರಡೂ ಕೈಯಲ್ಲೂ ತೆಗೆದುಕೊಂಡು ವಧೂವರರ ಶಿರಸ್ಸಿನ ಮೇಲೆ ಹಾಕುವುದು ಹಳೆಯ ವೈಭವವನ್ನು ನೆನಪಿಸಿಕೊಡುತ್ತದೆ.

ಮದುವೆಯೇ ಮುಂತಾದ ಸಮಾರಂಭಗಳಲ್ಲಿ "ನಗರಂ"ನ "ಅಚ್ಚಮ್ಮಾರ"ರಿಗೆ ವಿಶೇಷ ಸ್ಥಾನವಿದೆ. ಚೆಟ್ಟಿಯಾರ್‌ಚ, ಕಾರ್ನವ, ಕೋರಾಚ ಈ ಮೊದಲಾದವರಿಗೆ ಮೊದಲನೆಯ ಮರ್ಯಾದೆ ಸಲ್ಲುತ್ತದೆ. ದೇಸೆ ಹಾಕುವಲ್ಲಿ, ಊಟದ ಪಂಜ್ತಿಯಲ್ಲಿ, ಹೀಗೆ ಪ್ರತಿಯೊಂದರಲ್ಲೂ.

ಶಾಲಿಯಾ ಸಮುದಾಯವು ಶಿಸ್ತು ಮತ್ತು ಅಚ್ಚು ಕಟ್ಟಿಗೆ ಎಷ್ಟೊಂದು ಪ್ರಾಶಸ್ತ್ಯವನ್ನು ಕೊಡುತ್ತಿತ್ತು ಎಂದರೆ, ಹಿರಿಯರ ಊಟದ ಪಂಕ್ತಿಯಲ್ಲಿ ಕಿರಿಯರನ್ನು ಕೂರಿಸಲು ಅವಕಾಶವೇ ಇರಲಿಲ್ಲ. ಮಕ್ಕಳು ಶಿಸ್ತಿನಿಂದ ಉಣ್ಣುವುದನ್ನು ಕಲಿತಿಲ್ಲದಿರುವುದೇ ಇದಕ್ಕೆ ಕಾರಣ. "ವಾಲ್ಯಕಾರನ್" ಅಥವಾ "ಎಡಂಗಾಜಾರ" ಆಗದವರನ್ನು ಅವರೆಷ್ಟೇ ಹಿರಿಯರಾದರೂ ಊಟದ ಪಂಕ್ತಿಯಲ್ಲಿ ಕೂರಿಸುವುದಿಲ್ಲ. ಅಂತಹವರಿಗೆ ಅಡ್ಡಪಂಕ್ತಿಯಿರುತ್ತದೆ.

"ಮೊಡೆಯುಂ ಪಣವು" ಮತ್ತು "ಪೊಡಮುರಿ" ಎಂಬ ಮದುವೆಯ ಪದ್ಧತಿಯು ಕ್ರಮೇಣ "ತಾಲಿಕೆಟ್ಟ್" ಎಂಬ ಸಂಪ್ರದಾಯದ ಕಡೆಗೆ ತಿರುಗಿತು. ಕಪ್ಪು ನೂಲಿನಲ್ಲಿ ಸಣ್ಣ ತಾಲಿಯೊಂದನ್ನು ಕೋದು ವಧುವಿನ ಕೊರಳಿಗೆ ವರನು ಕಟ್ಟುತ್ತಾನೆ. ವರನು ನೀಡಿದ "ಮಂತ್ರಕ್ಕೋಡಿ" (ಪವಿತ್ರವಾದ ಹೊಸಬಟ್ಟೆ) ಎಂಬ ಮುಹೂರ್ತದ ಸೀರೆಯನ್ನು ಉಟ್ಟು ಬಂದ ಹೆಣ್ಣಿಗೆ ಅಗ್ನಿಸಾಕ್ಷಿಯಾಗಿ ವರನು ತಾಲಿ ಕಟ್ಟುತ್ತಾನೆ. ಈ ಸಂದರ್ಭದಲ್ಲಿ ಅವನು ಪೂರ್ವಕ್ಕೆ ಮುಖ ಹಾಕಿ ನಿಲ್ಲಬೇಕು ಎಂಬ ನಿಯಮವಿದೆ. ವರನ ದಿಬ್ಬಣವು ರಾತ್ರಿಯ ಹೊತ್ತು ವಿಶೇಷ ವೈಭವದೊಂದಿಗೆ ವಧೂ ಗೃಹವನ್ನು ಪ್ರವೇಶಿಸುತ್ತದೆ. ಅಂದು ರಾತ್ರಿ ವಧುವಿನ ಮನೆಯಲ್ಲಿ ನಿಂತು ಮರುದಿನ ಮದುವೆಯನ್ನು ಮುಗಿಸಿ ವಧುವಿನೊಂದಿಗೆ ತಮ್ಮ ಮನೆಗೆ ಹಿಂದಿರುಗುತ್ತಾರೆ.

ಶಾಲಿಯಾ ಸಮುದಾಯದಲ್ಲಿ ಹಿಂದೆ ಹೆಣ್ಣಿಗೂ ಗಂಡಿಗೂ ಮರುಮದುವೆಯ ಅವಕಾಶವಿತ್ತು. ಇದನ್ನು"ಪೆಣ್ಣಿನೆ ಪಾರ್ಕ್‌ನೆ"ಎಂದು ಹೇಳುತ್ತಾರೆ.(ತುಳುವಿನಲ್ಲಿ ಇದನ್ನು ಕೈಪತ್ತಾವುನೆ ಎಂದು ಹೇಳುತ್ತಾರೆ.) ಕೆಲವರು ಈ ರೀತಿಯಲ್ಲಿ ಎರಡೋ ಮೂರೋ ವಿವಾಹವಾಗುವುದೂ ಇತ್ತು.

ಹಿಂದೆ ಈ ಸಮಾಜದಲ್ಲಿ ಯುವಕನಾದವನು ಹುಡುಗಿಯೊಬ್ಬಳನ್ನು ನಂಬಿಸಿ ಪ್ರೇಮಿಸಿಯೋ ಬಲಾತ್ಕರಿಸಿಯೋ ಆಕೆ ಗರ್ಭಿಣಿಯಾದ ಮೇಲೆ ಅವಳನ್ನು ಸ್ವೀಕರಿಸಲು ಹಿಂದೇಟು ಹಾಕಿದರೆ, ವಿಷಯ ತಿಳಿದ ಹಿರಿಯರು ಅವನನ್ನು ಒತ್ತಾಯಪೂರ್ವಕವಾಗಿ ಹಿಡಿದು ತಂದಾದರೂ ಅವನಿಂದ ಅವಳಿಗೆ "ಮೊಡೆಯುಂ ಪಣವುಂ" ಕೊಡಿಸಿ ಮದುವೆಯನ್ನು ಮಾಡಿಸುತ್ತಿದ್ದರು. ಮದುವೆಯಾದ ಮೇಲೆ ಅವನು "ನಾನಿವಳನ್ನು ಬಿಟ್ಟೆ ಎಂದು ಹೇಳಿ ಆ ಕೂಡಲೇ ಬಿಡಬಹುದು. ಆದರೆ ಮದುವೆಯಂತೂ ಆಗಲೇಬೇಕು. ಮದುವೆಯು ಹೆಣ್ಣಿಗೆ ಸಾಮಾಜಿಕ ಸ್ಥಾನವನ್ನು ನೀಡುವುದರಿಂದ ಆ ಮೂಲಕ ಸಮಾಜ ಅವಳನ್ನು ಒಪ್ಪುವ ಸಂಪ್ರದಾಯವಿದು. "ಸ್ತ್ರೀ ಮರ್ಯಾದೆ"ಗೆ ಈ ಸಮುದಾಯದ ಹಿರಿಯರು ಎಷ್ಟೊಂದು ಪ್ರಾಮುಖ್ಯತೆಯನ್ನು ನೀಡುತ್ತಿದ್ದರು ಎನ್ನುವುದಕ್ಕೆ ಇದು ಉತ್ತಮ ನಿದರ್ಶನ. ಮೋಸ ಮಾಡಿದ ಪುರುಷ ಯಾವ ಸಂದರ್ಭದಲ್ಲೂ ತಪ್ಪಿಸುವ ಹಾಗಿರಲಿಲ್ಲ. ಮದುವೆಯ ಮೂಲಕ ಅವಳಿಗೆ ಸಾಮಾಜಿಕ ಸ್ಥಾನವನ್ನು ನೀಡಿದ ಮೇಲೆಯೇ ಆತನಿಗೆ ತನ್ನ ತಪ್ಪಿನಿಂದ ಬಿಡುಗಡೆ.

ಕೆಲವೊಮ್ಮೆ ದೈಹಿಕ ಆಕರ್ಷಣೆಗೆ ಗುರಿಯಾಗಿ ತನಗಿಂತ ಹಿರಿಯ ಹೆಣ್ಣಿನ ಜತೆಗೆ ಪುರುಷನಿಗೆ ಸಂಬಂಧವೇರ್ಪಟ್ಟು ಆಕೆ ಗರ್ಭವತಿಯಾದರೆ ಅವಳನ್ನೂ ಅವನು ವಿವಾಹವಾಗಬೇಕಿತ್ತು. ವಯಸ್ಸಿಗಿಂತ ಹಿರಿಯ ಹೆಣ್ಣನ್ನು ಪುರುಷ ವಿವಾಹವಾಗುವುದು ನಿಷಿದ್ಧವೆಂದಿರುವುದರಿಂದ ಆತನನ್ನು ಆಕೆಗಿಂತಲೂ ಹಿರಿಯ ನನ್ನಾಗಿಸುವ ಪದ್ಧತಿಯೊಂದು ಜಾರಿಯಲ್ಲಿದ್ದುದು ಕುತೂಹಲಕಾರಿಯಾಗಿ ಕಂಡು ಬರುತ್ತದೆ. ತನಗಿಂತ ಹಿರಿಯ ಹೆಣ್ಣನ್ನು ಪುರುಷನು ವಿವಾಹವಾಗಬೇಕಿದ್ದರೆ, ಆತ ತನ್ನ ಬಾಯಿಯ ಒಳಗೆ ಕಲ್ಲೊಂದನ್ನು ಇರಿಸಿಕೊಳ್ಳಬೇಕು. ಕಲ್ಲು ವಯಸ್ಸಿನಲ್ಲಿ ಬಹಳ ಹಿರಿದು ತಾನೇ. ಆ ಕಲ್ಲನ್ನು ಆತ ತನ್ನ ಬಾಯಲ್ಲಿರಿಸಿದರೆ ಆತನೂ ಕಲ್ಲಿನಷ್ಟೇ ಪ್ರಾಯವಾದ "ಹಿರಿಯ" ಎಂದು ಅರ್ಥ. ಅನಂತರವೇ ಆತನಿಗೆ ಅವಳನ್ನು ಮದುವೆಯಾಗುವ ಅನುಮತಿಯಿದೆ.

ಸಾಮಾಜಿಕ ಸುಸ್ಥಿರತೆಯನ್ನು ಕಾಪಾಡಲು ಇಂತಹ ಸಂಪ್ರದಾಯಗಳು ಜನಪದರ ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗವಾಗಿತ್ತು.

## ೨೪. ಸೀಮಂತ

ಸ್ತ್ರೀಯ ಜೀವನದ ಅತ್ಯಂತ ಪ್ರಮುಖವಾದ ಮತ್ತು ಸಾರ್ಥಕವಾದ ಘಟ್ಟ ಗರ್ಭಧಾರಣೆ. ಆದುದರಿಂದ ಮೊದಲ ಬಾರಿ ಗರ್ಭವತಿಯಾದಾಗ ವಿಭಿನ್ನ ಸಂಪ್ರದಾಯಗಳಿಂದ ಅದನ್ನು ಆಚರಿಸುತ್ತಾರೆ. ಗರ್ಭಧಾರಣೆಯು ಸಂಭ್ರಮವನ್ನು ತರುವುದರೊಂದಿಗೆ ಒಂದು ರೀತಿಯ ಆತಂಕ ಹಾಗೂ ಭಯವನ್ನು ಅವಳಿಗೂ ಅವಳ ಸಂಬಂಧಿಕರಿಗೂ ನೀಡುತ್ತದೆ. ಗರ್ಭಧಾರಣೆಯಾಯಿತು ಎನ್ನುವಾಗ ಆರಂಭವಾಗುವ ಸಂಭ್ರಮವು ಹೆರಿಗೆಗಾಗುವಾಗ "ಒಮ್ಮೆ ದೇವರ ದಯೆಯಿಂದ ಸುಸೂತ್ರವಾಗಿ ಹೆರಿಗೆಯಾಗಿದ್ದರೆ ಸಾಕಿತ್ತು" ಎನ್ನುವಲ್ಲಿಗೆ ಬಂದು ಮುಟ್ಟುತ್ತದೆ. ಆದುದರಿಂದ ಈ ಸೀಮಂತದಾಚರಣೆಯು "ಸಂಭ್ರಮ, ಆತಂಕ"ಗಳ ಸಮ್ಮಿಶ್ರ ಸಂಪ್ರದಾಯಗಳಾಗಿ ವಿವಿಧ ಸಮುದಾಯಗಳಲ್ಲಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಶಾಲಿಯಾ ಸಮುದಾಯದ ಸೀಮಂತದ ಪದ್ಧತಿಯು ವಿಶಿಷ್ಟ ಸಂಪ್ರದಾಯಗಳಿಂದ ಕೂಡಿಕೊಂಡು "ಮಿಶ್ರಸಂಸ್ಕೃತಿ"ಗೆ ಒಳ್ಳೆಯ ನಿದರ್ಶನವಾಗುತ್ತದೆ.

ವಿವಾಹಿತಳಾದ ಹೆಣ್ಣೊಬ್ಬಳು ಮೊದಲ ಬಾರಿ ಗರ್ಭವತಿಯಾದಳು ಎನ್ನುವ ವಿಷಯವನ್ನು ತಿಳಿದಾಗ ಆಕೆಯ ತವರು ಮನೆಯವರಿಗೂ, ಗಂಡನ ಮನೆಯವರಿಗೂ ಬಹಳಷ್ಟು ಸಂತಸವಾಗುತ್ತದೆ. ಆಕೆಯನ್ನು ಐದನೇ ತಿಂಗಳಲ್ಲಿ ತವರು ಮನೆಯವರೂ ಗಂಡನಮನೆಯವರೂ ಸೇರಿಕೊಂಡು ದೇವಾಲಯಕ್ಕೆ ಕರೆದುಕೊಂಡು ಹೋಗುತ್ತಾರೆ. ಇದನ್ನು "ತೊಬಿವಾನ್ ಕೊಂಡ್‌ಪೋನೆ" (ವಂದಿಸಲು ಕೊಂಡೊಯ್ಯುವುದು) ಎಂದು ಹೇಳುತ್ತಾರೆ. "ಮುಂದೆ ಯಾವ ತೊಂದರೆಗಳೂ ಗರ್ಭಿಣಿಗೆ ಬಾರದಂತೆ ಆ ದೇವರೇ ಕಾಪಾಡಲಿ" ಎಂದು ದೇವರ ಅನುಗ್ರಹವನ್ನು ಪಡೆಯಲು ಆರಂಭದಲ್ಲಿ ದೇವಾಲಯಕ್ಕೆ ಕರೆದುಕೊಂಡು ಹೋಗುವ ಸಂಪ್ರದಾಯವು ಬಂದಿರಬಹುದು.

ಏಳನೇ ತಿಂಗಳಲ್ಲಿ ಗರ್ಭಿಣಿಗೆ "ಪುಳಿಕುಡಿ" ಸಮಾರಂಭ. ಕೇರಳದ ನಾಯರ್ ಸಮುದಾಯದಲ್ಲಿ ಈ ಹಿಂದೆ ಇದ್ದ ಪದ್ಧತಿಯನ್ನು ಶಾಲಿಯಾ ಸಮುದಾಯದವರು ಇಂದೂ ಕೂಡಾ ಆಚರಿಸುತ್ತಾರೆ. ಇದನ್ನು ಕಾಸರಗೋಡಿನ ಉತ್ತರ ಭಾಗದಲ್ಲಿ "ಪುಂಜನ್" ("ಪುಂಸವ"ದ ಅಪಭ್ರಂಶರೂಪ) ಎಂದು ಹೇಳುತ್ತಾರೆ. ಗರ್ಭಿಣಿಯನ್ನು ಹೆರಿಗೆಗಾಗಿ ತವರು ಮನೆಗೆ ಪತಿ ಗೃಹದಿಂದ ಕಳುಹಿಸಿಕೊಡುವ ಸಂಪ್ರದಾಯವಿದು. ಅದಕ್ಕಾಗಿ ಪುರೋಹಿತರನ್ನು ಕೇಳಿ ದಿನವನ್ನು ಶುಭಮುಹೂರ್ತವನ್ನು ನಿಶ್ಚಯಿಸಲಾಗುತ್ತದೆ. ಈ ಸಮಾರಂಭದ ಮೊದಲನೆ ದಿನ ತವರು ಮನೆಯವರು ಹೆಣ್ಣಿನ ಪತಿಗೃಹಕ್ಕೆ ಕೆಲವು ಸಾಮಾಗ್ರಿಗಳು (ಹೂವು, ಸಿಂಗಾರ ಇತ್ಯಾದಿ) ಹಾಗೂ ಸಿಹಿತಿಂಡಿಗಳೊಂದಿಗೆ ಬರುತ್ತಾರೆ. (ಸಮಾರಂಭದ ಸಂಪೂರ್ಣ ಖರ್ಚನ್ನೂ ತವರಿನವರೇ ಭರಿಸಬೇಕು ಎಂದು ಹಿಂದೆ ರೂಢಿಯಲ್ಲಿತ್ತಂತೆ. ಉಪ್ಪು ಮತ್ತು ಕಟ್ಟಿಗೆಗಳನ್ನು ಮಾತ್ರ

ಪತಿಗೃಹದಿಂದ ನೀಡಲಾಗುತ್ತಿತ್ತು). ರಾತ್ರಿ ಉಣ್ಣಿಯಪ್ಪಂ (ಹೊಂಡವಿರುವ ಕಾವಲಿಯಲ್ಲಿ ತಯಾರಿಸುವ ಅಕ್ಕಿಯ ಸಿಹಿತಿಂಡಿ)ನ್ನು ತಯಾರಿಸಲಾಗುತ್ತದೆ. ಸೀಮಂತದ ದಿನ ಗರ್ಭಿಣಿ ಸ್ನಾನ ಮಾಡಿ ಹೊಸ ಸೀರೆಯನ್ನುಟ್ಟು ಅಲಂಕೃತಳಾಗುತ್ತಾಳೆ. ಹೂವಿನೊಂದಿಗೆ ಅಡಿಕೆಯ ಹಿಂಗಾರವನ್ನು ತಲೆಗೆ ಮುಡಿಸಲಾಗುತ್ತದೆ. (ಅಡಿಕೆಯ ಹಿಂಗಾರ ಮುಡಿಸುವ ಪದ್ಧತಿ ಕಾಸರಗೋಡಿನಿಂದ ದಕ್ಷಿಣಕ್ಕಿರುವ ಶಾಲಿಯರಲ್ಲಿ ಇಲ್ಲ. ಅದು ತುಳು ಸಂಸ್ಕೃತಿಯಿಂದ ಬಂದ ಸಂಪ್ರದಾಯ). ಅಷ್ಟು ಹೊತ್ತಿಗೆ ಅವಳ ಪತಿಯು ಹುಳಿಮರದ ಗೆಲ್ಲೊಂದನ್ನು ತಂದು ಅಂಗಳದ ತುಳಸಿ ಕಟ್ಟೆಯಲ್ಲಿ ನೆಡುತ್ತಾನೆ. ಕಾಸರಗೋಡಿನ ಭಾಗದಲ್ಲಿ ಅದರೊಂದಿಗೆ ನೆಲ್ಲಿಯ ಗೆಲ್ಲನ್ನೂ ತಂದು ನೆಡುವ ಸಂಪ್ರದಾಯವಿದೆ. ಆ ಹುಳಿಯ ಗೆಲ್ಲಿಗೆ ಕಬ್ಬಿಣದ ಉಂಗುರವೊಂದನ್ನು ಸಿಕ್ಕಿಸಲಾಗುತ್ತದೆ. ಮುತ್ತೈದೆಯೊಬ್ಬರು ತಟ್ಟೆಯಲ್ಲಿ ಅಕ್ಕಿ ಮತ್ತು ಹೊಸಬಟ್ಟೆ ಇರಿಸಿ, ಕಾಲುದೀಪದೊಂದಿಗೆ ಬಸುರಿಯನ್ನು ಅಲ್ಲಿಗೆ ಕರೆತರುತ್ತಾರೆ. ಆಕೆಯೊಂದಿಗೆ ಬಸುರಿಯು ಆ ಗಿಡಕ್ಕೆ ಪ್ರದಕ್ಷಿಣೆ ಬಂದು ತುಲಸಿ ಗಿಡದ ಮುಂದೆ ಇರಿಸಿದ ಮಣೆಯಲ್ಲಿ ಪೂರ್ವಾಭಿಮುಖವಾಗಿ ಕುಳಿತುಕೊಳ್ಳುತ್ತಾಳೆ. ಅವಳೊಂದಿಗೆ ಅವಳ ಅಣ್ಣನ ಮಗನಾದ ಸಣ್ಣ ಹುಡುಗನನ್ನೂ ಕೂರಿಸುತ್ತಾರೆ. ಅವಳ ಮುಂದೆ ಉರಿಸಿದ ದೀಪ, ಅಕ್ಕಿ ಹಾಗೂ ಹೊಸಬಟ್ಟೆಯಿರಿಸಿದ ತಟ್ಟೆ ಹಾಗೂ ದನದ ಹಾಲನ್ನು ಇರಿಸಲಾಗುತ್ತದೆ. ಪಕ್ಕದಲ್ಲೆ ದೊಡ್ಡ ಬುಟ್ಟಿಯಲ್ಲಿ ವೀಳ್ಯದೆಲೆ ಹಾಗೂ ಅಡಿಕೆಯನ್ನು ಇರಿಸಲಾಗುತ್ತದೆ. ಹಲಸಿನ ಎಲೆಯಿಂದ ತಯಾರಿಸಿದ ಚಮಚ (ಕೋಟ್ಟೆ)ದಲ್ಲಿ ಈ ಹಾಲನ್ನು ಆಕೆಗೆ ಹಿರಿಯರು ಕುಡಿಸುತ್ತಾರೆ. ಹಿಂದೆ "ಹುಳಿರಸ"ವನ್ನು ಕುಡಿಸುತ್ತಿದ್ದರಂತೆ. ಆದುದರಿಂದಲೇ ಇದಕ್ಕೆ "ಪುಳಿಕುಡಿ" ಎಂದು ಹೆಸರು. (ನಾಯರ್ ಸಮುದಾಯದಲ್ಲಿ ಹುಳಿರಸವನ್ನೇ ಇತ್ತೀಚಿನವರೆಗೂ ಕುಡಿಸಲಾಗುತ್ತಿತ್ತು). ಆ ಹುಡುಗನ ಬಾಯಿಗೂ ಸ್ವಲ್ಪ ಹಾಕುವುದಿದೆ. ಅನಂತರ "ನಾಲಿಲ್ಲತ್ತೆ ಅಮ್ಮಮ್ಮಾರ್ ವೆಟ್ಟಿಲಡಕ್ಕ ಎಡುತ್ತೋಳು" (ನಾಲ್ಕು ಗೋತ್ರದ ಅಮ್ಮಂದಿರು ತಾಂಬೂಲ ತೆಗೆದುಕೊಳ್ಳಿ) ಎಂದು ಎತ್ತರಿಸಿ ಹೇಳುತ್ತಾರೆ. ಆಗ "ಪಂದಲ್‌ಮಂಗಲಂ" ಆದ ಹುಡುಗಿಯರ ಸಹಿತ ಹೆಂಗಸರೆಲ್ಲಾ ೫ ವೀಳ್ಯದೆಲೆಯನ್ನೂ ಒಂದು ಅಡಿಕೆಯನ್ನೂ ತೆಗೆದುಕೊಳ್ಳುತ್ತಾರೆ. ಎಲ್ಲರೂ ತೆಗೆದಾದ ಮೇಲೆ ಬಂದಿರುವವರ ಸಮ್ಮತಿಯನ್ನು ಕೇಳಿ ಗರ್ಭಿಣಿಯನ್ನು ಎಬ್ಬಿಸಿ ಮನೆಯ ಒಳಗೆ ಕರೆದೊಯ್ಯಲಾಗುತ್ತದೆ. ಮನೆಯೊಳಗೆ ಎರಡು ಮಣೆಗಳ ಮೇಲೆ ಅವರೀರ್ವರನ್ನೂ (ಗರ್ಭಿಣಿ ಮತ್ತು ಹುಡುಗ) ಕುಳಿತುಕೊಳ್ಳಿಸಿ ಎರಡು ದೊಡ್ಡ ತುದಿ ಬಾಳಿಯೆಲೆಗಳನ್ನು ಹಾಕಲಾಗುತ್ತದೆ. ಅದರಲ್ಲಿ ಮೊದಲ ದಿನ ರಾತ್ರಿ ತಯಾರಿಸಿದ "ಅಪ್ಪ"ಗಳನ್ನೂ ಒಟ್ಟು ಐದೋ ಏಳೋ ವಿಧದ ಸಿಹಿತಿಂಡಿಗಳನ್ನೂ ಬಡಿಸಲಾಗುತ್ತದೆ. ಇದನ್ನು "ಗರ್ಭಿಣಿಗೆ ಬಡಿಸುವುದು" ಎಂದು ಹೇಳುತ್ತಾರೆ. ಹಿಂದೆ ಸೀಮಂತಕ್ಕೆ ಮಾಂಸಾಹಾರವು ಕಡ್ಡಾಯವಾಗಿತ್ತು. ಆಗ ಗರ್ಭಿಣಿಗೆ ಕೋಳಿಯ ತೊಡೆಯ ಮಾಂಸವನ್ನೇ ಬಡಿಸಲಾಗುತ್ತಿತ್ತು.

ಆಕೆಯೊಡನೆ ಕುಳಿತ ಹುಡುಗ ತನಗೆ ಬಡಿಸಿದುದನ್ನು ತಿಂದು ಆಕೆಯ ಎಲೆಯಿಂದ ಆ ಮಾಂಸದ ತುಂಡನ್ನು ಎಳೆಯುವಂತಹ ಸಂಪ್ರದಾಯವಿತ್ತು. ಅತ್ತೆಯ ಎಲೆಯಿಂದ ಈ ರೀತಿಯಲ್ಲಿ ಎಳೆಯುವ ಹಕ್ಕು ಈ ಅಳಿಯನಿಗೆ ಮಾತ್ರವಿದೆ. ಮುಂದೆ "ಅತ್ತೆಗೆ ಹುಟ್ಟುವ ಮಗು ಹೆಣ್ಣಾದರೆ, ಆತನಿಗೇ ಅವಳನ್ನು ಮದುವೆಯಾಗುವ ಹಕ್ಕು ಇದೆ" ಎಂಬುದನ್ನು ಇದು ಸೂಚಿಸುತ್ತದೆ. ಮುಂದೆ ಆ ಹುಡುಗನನ್ನು "ಪುಳಿ ಕುಡ್ಚಿತ್ ತೊಡ ಕಡಿಚ್ಚೋನ್" (ಹುಳಿ ಕುಡಿದು ತೊಡೆ ಕಚ್ಚಿದವನು) ಎಂದು ಹಿರಿಯರು ಛೇಡಿಸುವುದೂ ಇದೆ. ಅವರು ಊಟ ಮಾಡಿದ ಮೇಲೆಯೇ ಇತರರಿಗೆ ಊಟವನ್ನು ಬಡಿಸಲಾಗುತ್ತದೆ.

ಅನಂತರ ಗರ್ಭಿಣಿಯ ಮಡಿಲು ತುಂಬಿಸಿ ಹೆರಿಗೆಗಾಗಿ ತವರು ಮನೆಗೆ ಕಳುಹಿಸುವ ಕಾರ್ಯಕ್ರಮ. ಇದಕ್ಕಾಗಿ ದೇವರ ಕೋಣೆಯಲ್ಲಿ ಹಿರಿಯರೆಲ್ಲಾ ಸೇರುತ್ತಾ ರಕ್ಷಣೆಗೆ ಗರ್ಭಿಣಿಯ ಸೊಂಟಕ್ಕೆ ಹೊಸ ಬಿಳಿಯ ವಸ್ತ್ರವನ್ನು ಬಿಗಿಯಾಗಿ ಕಟ್ಟುತ್ತಾರೆ. ಬಸುರಿಯ ಅತ್ತೆ ಆ ಬಟ್ಟೆಯಲ್ಲಿ ಹತ್ತು ಕುಡುತೆ ಅಕ್ಕಿಯನ್ನು "ಬೆಸ" ಸಂಖ್ಯೆಯಲ್ಲಿ ಬೊಗಸೆಯಿಂದ ಎತ್ತಿ ಹಾಕುತ್ತಾಳೆ. ಇದನ್ನು "ಮಡಿ ನಿರಕ್ಕನೆ" (ಮಡಿಲು ತುಂಬುವುದು) ಎಂದು ಹೇಳುತ್ತಾರೆ. (ಈ ಸಂಪ್ರದಾಯ ಎಲ್ಲಾ ಸಮುದಾಯದಲ್ಲೂ ಇದೆ) ಈ ಅಕ್ಕಿಯೊಂದಿಗೆ ಕಬ್ಬಿಣದ ಮೊಳೆ, ಮಸಿ ತುಂಡುಗಳನ್ನೂ ಹಾಕಲಾಗುತ್ತದೆ. ಅನಂತರ ಹಿರಿಯರಲ್ಲೊಬ್ಬರು "ನಲ್ಲೆವಾಕ್" (ಒಳ್ಳೆಯ ಮಾತು) ಹೇಳುತ್ತಾರೆ. ಹೆರಿಗೆಯು ಸುಸೂತ್ರವಾಗಿ ನಡೆದರೆ, ಕುಲದೈವ, ಊರದೈವ, ಗ್ರಾಮದೈವಗಳಿಗೆ ಹರಕೆಗಳನ್ನು ಸಲ್ಲಿಸೋಣ ಎಂದವರು ಪ್ರಾರ್ಥಿಸುತ್ತಾರೆ. ಅನಂತರ ಗರ್ಭಿಣಿ ಹಿಂದಕ್ಕೆ ನೋಡದೆ ಮನೆಯ ಮೆಟ್ಟಲುಗಳನ್ನಿಳಿದು ಹೊರಗೆ ಬರುತ್ತಾಳೆ. ಮನೆಯನ್ನು ದಾಟಿ ಬಂದು ಹಿತ್ತಿಲಿನಲ್ಲಿ ಚಾಪೆಯನ್ನು ಹಾಸಿ ಸ್ವಲ್ಪ ಹೊತ್ತು ಅಲ್ಲಿ ತಂಗಿ ತಾಂಬೂಲವನ್ನು ಮೆದ್ದು ತವರು ಮನೆಗೆ ಹಿರಿಯರೊಂದಿಗೆ ಬರುತ್ತಾಳೆ. (ಪತಿಯೊಂದಿಗೆ ಆ ಮನೆಯಲ್ಲಿ ರಾಗ (ಪ್ರೀತಿ, ಕೆಂಪು ಬಣ್ಣ) ತುಂಬಿದ ದಾಂಪತ್ಯ ಜೀವನ ನಡೆಸಿದುದರ ಸಂಕೇತವಿದು. ಮುಂದೆಯೂ ತಾನದನ್ನು ಬಯಸುತ್ತೇನೆಂದು ಅವಳು ಈ ಮೂಲಕ ಸೂಚಿಸುತ್ತಾಳೆ).

ಈ ಸಂಪ್ರದಾಯದಲ್ಲಿ ವಿಶಿಷ್ಟವಾಗಿ ಕಂಡುಬರುವ ಹುಳಿ ಮರದ ಗೆಲ್ಲನ್ನು ತುಳಸಿ ಕಟ್ಟೆಯಲ್ಲಿ ನೆಡುವುದು, ಅದಕ್ಕೆ ಕಬ್ಬಿಣದ ಉಂಗುರವನ್ನು ಸಿಕ್ಕಿಸುವುದು ಈ ಮೊದಲಾದವು ಅರ್ಥಪೂರ್ಣವಾದವು. ಹುಳಿ ಮರದಲ್ಲಿ ಕ್ಷುದ್ರದೇವತೆಗಳು ನೆಲೆನಿಂತಿರುತ್ತವೆ ಎಂದು ಹಿಂದಿನವರ ನಂಬಿಕೆ. ಅಂತಹ ಕ್ಷುದ್ರದೇವತೆಯನ್ನು ತಾನು ನಿಗ್ರಹಿಸಿ ತನ್ನ ಮಡದಿಗೂ ಅವಳ ಹೊಟ್ಟೆಯಲ್ಲಿರುವ ತನ್ನ ಮಗುವಿಗೂ ರಕ್ಷಣೆ ಕೊಡಬಲ್ಲೆ ಎನ್ನುವುದನ್ನು ಹುಳಿ ಮರದ ಗೆಲ್ಲು ತಂದು ನೆಡುವುದು, ಮತ್ತು ಅದಕ್ಕೆ ಕಬ್ಬಿಣದ ಉಂಗುರವನ್ನು ತೊಡಿಸುವುದರ ಮೂಲಕ ಪತಿಯು ಸಂಕೇತಿಸುತ್ತಾನೆ. ನಾಯರ್ ಸಮುದಾಯದಲ್ಲಿ ಇದನ್ನು ಬಸುರಿಯ

ಸೋದರನು ಮಾಡುತ್ತಾನೆ. ಮರುಮಕ್ಕತ್ತಾಯಮ್ (ಅಳಿಯಕಟ್ಟು) ಸಂಪ್ರದಾಯವಿರುವ ಅಲ್ಲಿ ಪತಿಗಿಂತಲೂ ಸೋದರನಿಗೇ ಪ್ರಾಶಸ್ತ್ಯ. ಸೋದರಿಯ ರಕ್ಷಣೆಯ ಭಾರವನ್ನು ಹೊರುವವನು ಅವರಲ್ಲಿ ಸೋದರನೇ ಹೊರತು ಅವಳ ಪತಿಯಲ್ಲ. ಕಬ್ಬಿಣ ಇರುವಲ್ಲಿ ಕ್ಷುದ್ರದೇವತೆಗಳಿರುವುದಿಲ್ಲ. ಉಂಗುರವು ಬಂಧನದ ಸೂಚಕ. "ಕ್ಷುದ್ರದೇವತೆಯನ್ನು ಬಂಧಿಸಲಾಗಿದೆ" ಎನ್ನುವ ಸಾಂಕೇತಿಕ ಅರ್ಥ ಇದರಲ್ಲಿದೆ.

ಕ್ಷುದ್ರದೇವತೆಗಳಿಗೆ ಯಾವತ್ತೂ ಅಶಕ್ತರ ಮೇಲೆ ಆಸಕ್ತಿ ಹೆಚ್ಚು ಎಂದೂ, ಗರ್ಭಿಣಿಯರು, ಬಾಣಂತಿಯರು ಹಾಗೂ ಬಾಲಕರನ್ನು ಇವುಗಳು ಬಾಧಿಸುತ್ತವೆ ಎಂದೂ ಹಿರಿಯರ ನಂಬಿಕೆ. ಕ್ಷುದ್ರದೇವತೆಗಳ ದೃಷ್ಟಿಗೆ ಬಿದ್ದರೆ ತೊಂದರೆಗಳು ಸಂಭವಿಸುವ ಸಾಧ್ಯತೆಯಿದೆ ಎಂಬ ಭಯದಿಂದಲೇ ಅವುಗಳ ದೃಷ್ಟಿಯಾಗಬಾರದು ಎಂದು ಗರ್ಭಿಣಿಯ ಮಡಿಲು ತುಂಬುವಾಗ ಕಬ್ಬಿಣದ ಮೊಳೆ ಹಾಗೂ ಮಸಿತುಂಡುಗಳನ್ನು ಹಾಕುತ್ತಾರೆ.

ಹುಳಿನೀರು ಕುಡಿಸುವ ಸಂಪ್ರದಾಯವಾದ "ಪುಳಿಕುಡಿ" ಯು ಗರ್ಭಿಣಿಯ ಬಯಕೆಗಳಲ್ಲಿ ಅತೀ ಪ್ರಮುಖವಾದ ಹಾಗೂ ಎಲ್ಲರಿಗೂ ಸಾಮಾನ್ಯವಾದ, ಹುಳಿ ತಿನ್ನುವ ಬಯಕೆಯನ್ನು ಹಿರಿಯರು ಒಮ್ಮತದಿಂದ ಪೂರೈಸಿ ಕೊಡುವುದನ್ನು ಸಂಕೇತಿಸುತ್ತದೆ. ಗರ್ಭಿಣಿಗೆ ಎಲೆ ತುಂಬಾ ಬಡಿಸುವುದು, ಇಷ್ಟವಾದ ಆಹಾರಗಳನ್ನು ನೀಡುವುದು ಮೊದಲಾದವುಗಳು "ಗರ್ಭಿಣಿಯ ಬಯಕೆಗಳನ್ನು ಪೂರೈಸದೆ ಇದ್ದರೆ ಮಗುವಿನ ಕಿವಿ ಸೋರುವುದು" ಎನ್ನುವ ಕೇವಲ ಮೂಢನಂಬಿಕೆಯ ಹಿಂದಿನಿಂದ ಬಂದದ್ದಲ್ಲ. ಅದರ ಹಿಂದೆ ಕಟುವಾಸ್ತವವೊಂದು ಹಣಿಕಿಕ್ಕುತ್ತದೆ. ಹೆರಿಗೆಗೆ ವಿಶೇಷವಾದ ಅನುಕೂಲತೆಗಳಿಲ್ಲದ ಹಿಂದಿನ ಕಾಲದಲ್ಲಿ ಗರ್ಭಿಣಿ ಹೆಣ್ಣು ಹೆರಿಗೆಯ ಸಮಯದಲ್ಲಿ ಸಾವನ್ನಪ್ಪುವುದು ತೀರಾ ಸಾಮಾನ್ಯವಾದ ವಿಷಯವಾಗಿತ್ತು. ಆದುದರಿಂದ ಅದು ಒಂದು ರೀತಿಯಲ್ಲಿ ಸಾವು—ಬದುಕಿನ ನಡುವಿನ ಹೋರಾಟದ ಕಾಲಘಟ್ಟ. ಸಾವಿನ ದವಡೆಯವರೆಗೆ ಸಾಗುವ ಅವಳು ಉಳಿದುಬಂದರೆ ಒಂದು ಭಾಗ್ಯ. ಅದಕ್ಕಿಂತ ಮುನ್ನ ಬದುಕಿರುವಾಗ ಅವಳ ಲೌಕಿಕ ಆಸೆಗಳನ್ನೆಲ್ಲವನ್ನೂ ಪೂರೈಸೋಣ ಎನ್ನುವ ಹಿರಿಯರ ಆಶ್ರಯವೇ ಈ ಪದ್ಧತಿಗಳ ಮೂಲದಲ್ಲಿದೆ. ಮಾನವನ ಸಹಜವಾದ ಸಾವಿನ ಭಯದಿಂದ ಅದನ್ನು ಹೇಳಲಾರದೆ "ಮಗುವಿನ ಕಿವಿ ಸೋರುವುದು" ಎಂದು ಹೇಳುತ್ತಾರೆ. "ಗರ್ಭಿಣಿ"ಯ ಬಯಕೆಗಳನ್ನೆಲ್ಲಾ ಪೂರೈಸಬೇಕು ಎನ್ನುವ ನಂಬಿಕೆಯ ಮೂಲ ಆಶಯ ಇದು ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಹಿರಿಯರು ರೂಢಿಸಿದ ಪ್ರತಿಯೊಂದು ಸಂಪ್ರದಾಯವೂ ಅರ್ಥಪೂರ್ಣ ಎನ್ನುವುದಕ್ಕೆ ಇದಕ್ಕಿಂತ ಮಿಗಿಲಾದ ನಿದರ್ಶನ ಬೇಕೇ ?

ಎಡ್ಗರ್ ಥರ್ಸ್ಟನ್ ಶಾಲಿಯಾರ ನಡುವಿನ "ಪುಳಿಕುಡಿ" ಸಂಪ್ರದಾಯವನ್ನು ಹೀಗೆ ದಾಖಲಿಸುತ್ತಾನೆ. "ಗರ್ಭವತಿಯಾದ ಏಳನೆಯ ಮಾಸದಲ್ಲಿ "ಪುಳಿಕುಡಿ" ಎಂಬ ಸಮಾರಂಭವನ್ನು ಜರಗಿಸಲಾಗುತ್ತಿತ್ತು. ಸ್ತ್ರೀಯ ಸೋದರನು ಒಂದು ಹುಣಸೆ ಗೆಲ್ಲನ್ನು ತರುವನು. ಅದರ ಎಲೆಗಳನ್ನು ಬೇರ್ಪಡಿಸಿದ ನಂತರ ಅದನ್ನು ನೆಡುವನು. ಆ ಎಲೆಯ ರಸವನ್ನು ಏಳು ತೆಂಗಿನಕಾಯಿಯ ನೀರಿನೊಡನೆ ಸೇರಿಸಿ ಒಂದು ಪಾನಕವನ್ನು ತಯಾರಿಸಲಾಗುತ್ತಿತ್ತು. ಸ್ತ್ರೀ ಸಂಬಂಧಿಕರು ಅವಳಿಗೆ ಅದರ ಸ್ವಲ್ಪ ಭಾಗವನ್ನು ಕುಡಿಯಲು ಕೊಡುವರು. ಈ ಸಮಾರಂಭವು ಮೂರು ದಿನಗಳೂ ಪುನರಾವರ್ತನಗೊಳ್ಳುತ್ತಿದ್ದವು" ( Edger Thurston Castes and Tribes in Southern India, Vol. III, P. 14).

"ಎಡ್ಗರ್ ಥರ್ಸ್ಟನ್"ನ ಈ ಹೇಳಿಕೆ ನಾಯರ್ ಸಂಪ್ರದಾಯದಂತೇ ಶಾಲಿಯಾರ ಪುಳಿಕುಡಿ ನಡೆಯುತ್ತಿತ್ತು ಎನ್ನುವುದನ್ನು ತಿಳಿಸುತ್ತದೆ. ಇದು ನಾಯರ್ ಸಮುದಾಯದ ಪ್ರಭಾವದಿಂದ ಎನ್ನುವುದು ಸ್ಪಷ್ಟ.

ಕಾಸರಗೋಡು ಭಾಗದಲ್ಲಿ ಶಾಲಿಯಾರ ಸೀಮಂತವು ಸುಮಾರು ೬೦ ವರ್ಷಗಳ ಕೆಳಗೆ ಮೂರು ದಿನ ನಡೆಯುತ್ತಿತ್ತು ಎಂಬುದನ್ನು ಇಂದಿಗೂ ಹಿರಿಯರು ಜ್ಞಾಪಿಸುತ್ತಾರೆ. ಅದನ್ನು ಉಲ್ಲಂಘಿಸಿ, ಒಂದು ದಿನಕ್ಕೆ ಇಳಿಸಿದವನನ್ನು ಸಮಾಜದ "ನಗರಂ"ನಿಂದ ಹೊರಹಾಕುವ ಪ್ರಯತ್ನ ನಡೆಯಿತೆಂದೂ, ದೂರು ಮಾಯಿಪ್ಪಾಡಿ ಅರಸರವರೆಗೂ ಹೋಗಿ ಕೊನೆಗೆ ತೀರ್ಮಾನವು ಏಕದಿನ ನಡೆಸುವವನ ಪರವಾಗಿ ಬಂತೆಂದೂ, ಅಂದಿನಿಂದ "ಏಕದಿನ ಸೀಮಂತ" ಪದ್ಧತಿ ರೂಢಿಗೆ ಬಂತೆಂದೂ ಹೇಳಲಾಗಿದೆ.

# ೬ ಅಂತ್ಯ ಸಂಸ್ಕಾರ ಹಾಗೂ ಉತ್ತರಕ್ರಿಯೆ

ಹುಟ್ಟಿದ ಪ್ರತಿಯೊಂದು ಜೀವಿಯೂ ಸಾಯಲೇಬೇಕು. ಜೀವ ಜಾಲದ ರಹಸ್ಯದಲ್ಲಿ ಭೇದಿಸಲು ಸಾಧ್ಯವಾಗದ ನಿಗೂಢ ರಹಸ್ಯವಾಗಿ ಸಾವು ಇನ್ನೂ ಉಳಿದಿದೆ. ಸಾವಿನ ನಂತರ ಆತ್ಮವು ಇದೆ ಎಂದು ಕೆಲವರೂ, ಆತ್ಮವಿಲ್ಲ ಎಂದು ಇನ್ನು ಕೆಲವರೂ ಅಭಿಪ್ರಾಯ ಪಡುತ್ತಾರೆ. ಅದೇನೇ ವಾದಗಳು ಇದ್ದರೂ ಪ್ರತಿಯೊಬ್ಬರ ಒಂದೊಂದು ಹೆಜ್ಜೆಯೂ ಸಾವಿನ ಕಡೆಗೆ ಇದೆ ಎನ್ನುವುದು ಖಂಡಿತ. ತಮಗಿಂತ ಮೊದಲು ಬದುಕಿಗೆ ವಿದಾಯ ಹೇಳಿದವನನ್ನು ಇನ್ನೂ ಬದುಕಿ ಉಳಿದವರು ಸಮರ್ಪಕವಾದ ರೀತಿಯಿಂದ ಕಳುಹಿಸಿ ಕೊಡುವ ಸಂಪ್ರದಾಯವೇ ಮರಣಾನಂತರದ ಕ್ರಿಯೆಗಳಿಗೂ, ಅಪರ ಕ್ರಿಯೆಗಳಿಗೂ ಮೂಲವಾಗಿದೆ. ಭೌತಿಕವಾದ ಶರೀರವನ್ನು ಮರಣಾನಂತರ ಉಳಿಸಲು ಸಾಧ್ಯವಿಲ್ಲ. ಅದಕ್ಕೊಂದು ಗತಿಯನ್ನು ಮೊದಲು ತೋರಿಸಿದ ನಂತರವೇ ಆತ್ಮದ ಕುರಿತಾಗಿ ಚಿಂತಿಸಬೇಕಷ್ಟೆ. ಆದುದರಿಂದ ಮರಣಾನಂತರದ ಕ್ರಿಯೆಗಳು ಶವಸಂಸ್ಕಾರದಿಂದ ಆರಂಭಗೊಂಡು, ಉತ್ತರಕ್ರಿಯೆಗಳವರೆಗೆ ಮುಂದುವರೆಯುತ್ತದೆ. ವೈದಿಕ ಸಂಪ್ರದಾಯವಾದರೆ ಗಂಡು ಮಕ್ಕಳು ಜೀವಿಸಿರುವವರೆಗೆ ವರ್ಷವರ್ಷವೂ ಶ್ರಾದ್ಧಕರ್ಮವಾಗಿ ಅದು ಮುಂದುವರೆಯುತ್ತದೆ.

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಭಾಗದ ಶಾಲಿಯಾ ಸಮುದಾಯದಲ್ಲಿ ಈ ಅಂತ್ಯ ಸಂಸ್ಕಾರ ಕರ್ಮಗಳಲ್ಲಿ ಮಿಶ್ರಸಂಸ್ಕೃತಿಯು ಕಂಡುಬಂದರೂ, ಅದರದೇ ವಿಶಿಷ್ಟ ಸಂಪ್ರದಾಯವೂ ರೂಢಿಯಲ್ಲಿದೆ.

೧. ಶವ ಸಂಸ್ಕಾರದ ಕ್ರಮ : ಶಾಲಿಯಾ "ತೆರು"ವೊಂದರಲ್ಲಿ ವ್ಯಕ್ತಿಯೊಬ್ಬ ಮರಣ ಹೊಂದಿದರೆ ಆ ತೆರುವಿನ ಪ್ರತಿಯೊಂದು ಮನೆಗೂ ಬಂಧುಗಳಿಗೂ ವಿಷಯವನ್ನು ತಿಳಿಸಲು ಜನಗಳನ್ನಟ್ಟುತ್ತಾರೆ. ಮರಣ ಹೊಂದಿದ ವ್ಯಕ್ತಿಯನ್ನು ತೆಂಕುಬಡಗಲಾಗಿ ಮಲಗಿಸಿ, ಒಂದು ತೆಂಗಿನಕಾಯಿಯನ್ನು ಒಡೆದು ಎರಡು ಭಾಗ ಮಾಡಿ ಒಂದನ್ನು ತಲೆಯ ಬದಿಯಲ್ಲೂ ಇನ್ನೊಂದನ್ನು ಕಾಲಿನ ಬುಡದಲ್ಲೂ ಇಡಲಾಗುತ್ತದೆ. ಅದರಲ್ಲಿ ಎಣ್ಣೆ ಹಾಕಿ ಬತ್ತಿಯಿಟ್ಟು ಉರಿಸಲಾಗುತ್ತದೆ. ಊದುಕಡ್ಡಿಗಳನ್ನು ಹೊತ್ತಿಸಿ ಬಾಳೆಯೆಲೆಯ ದಂಡನ್ನು ಕೊಯ್ದು ಅದರಲ್ಲಿ ಸಿಕ್ಕಿಸಲಾಗುತ್ತದೆ. ಸಂಬಂಧಿಕರೂ, ತೆರುಗಳವರೂ ಬಂದ ಮೇಲೆ, ಮನೆಯ ಹೊರಗೆ ಮೂರು ಕಲ್ಲುಗಳನ್ನಿಟ್ಟು ಅದರ ಮೇಲೆ ಹಂಡೆಯನ್ನಿಟ್ಟು ನೀರು ಹೊಯ್ದು ಮುಚ್ಚದೆ ಬೆಂಕಿ ಮಾಡಿ ನೀರು ಬಿಸಿ ಮಾಡುತ್ತಾರೆ. (ಶವವನ್ನು ಸ್ನಾನ ಮಾಡಿಸಲು ಕಾಯಿಸುವ ಹಂಡೆಯ ನೀರಿಗೆ ಮುಚ್ಚುವ ಸಂಪ್ರದಾಯವಿಲ್ಲ ಎಂದು ಹೇಳುತ್ತಾರೆ. ಬಹುಶಃ ಶವವಾದುದರಿಂದ ಇನ್ನು ಆ ನೀರಿಗೆ ಏನಾದರೂ ಬಿದ್ದರೂ ತೊಂದರೆಯಿಲ್ಲ ಎನ್ನುವ ಕಾರಣದಿಂದ ಹೀಗೆ ಹೇಳುತ್ತಿರಬಹುದು).

ಶವವನ್ನು ಮನೆಯೊಳಗಿನಿಂದ ಹೊರತಂದು ಬಂಧುಗಳೆಲ್ಲಾ ಸೋಪು, ಎಣ್ಣೆ, ಅರಿಶಿನವನ್ನು ಮೂರು ಬಾರಿ ಹಚ್ಚಿ, ಮೂರು ಬಾರಿ ತಂಬಿಗೆಯಿಂದ ಬಿಸಿ ನೀರನ್ನು ಹೊಯ್ಯುತ್ತಾರೆ. ಆ ನೀರು ಎಷ್ಟು ಬಿಸಿಯಿದ್ದರೂ ಅದಕ್ಕೆ ತಣ್ಣೀರು ಹೊಯ್ಯಬಾರದು ಎನ್ನುವ ನಂಬಿಕೆಯಿದೆ. (ಆ ಶರೀರವನ್ನು ಬಿಸಿಯಿಂದ ಸುಟ್ಟರೂ ತೊಂದರೆಯಿಲ್ಲ. ಹೇಗೂ ಅದು ನಿರರ್ಥಕ ಎನ್ನುವ ಕಾರಣದಿಂದಲೇ ಈ ನಂಬಿಕೆಯೂ ಬಂದಿರಬೇಕು). ಶವನ ಸ್ನಾವಾದ ಮೇಲೆ ಆ ಹಂಡೆಯನ್ನು ಕವುಚಿ ಹಾಕಲಾಗುತ್ತದೆ (ಇನ್ನು ಆತನಿಗೆ ಸ್ನಾನವಿಲ್ಲ ಎನ್ನುವುದನ್ನು ಇದು ಸಂಕೇತಿಸುತ್ತದೆ). ಅನಂತರ ಒಂದು ಇಡೀ ಬಾಳೆಯೆಲೆಯನ್ನು ಕೊಯ್ದು ತಂದು ಶವಕ್ಕೆ ಶೃಂಗಾರ ಮಾಡಿ ಅದರ ಮೇಲೆ ಮಲಗಿಸುತ್ತಾರೆ. ಪತ್ನಿ ಜೀವಂತಳಾಗಿದ್ದರೆ ಗಂಡ ಹೆಂಡಿರ ಸಂಬಂಧ ಮುರಿಯಿತು ಎನ್ನುವುದನ್ನು ಬಾಳೆಯೆಲೆಯನ್ನು ಮಧ್ಯದಲ್ಲಿ ಸೀಳುವುದರ ಮೂಲಕ ಸಂಕೇತಿಸಲಾಗುತ್ತದೆ. ಶವದ ಮೇಲೆ ಹೊಸಬಟ್ಟೆಗಳನ್ನು ಹಾಕುವರು. ಮರಣ ವಾರ್ತೆಯನ್ನರಿತು ಬರುವವರು ಊದುಕಡ್ಡಿ ಗಳನ್ನೂ, ಹೊಸಬಟ್ಟೆಯನ್ನೂ ತರುವುದು ರೂಢಿ. ಅನಂತರ ತುಳಸಿಯ ನೀರನ್ನು ಸಂಬಂಧಿಕರು ಮೃತನ ಬಾಯಿಗೆ ಹೊಯ್ಯುವರು. ಇದನ್ನು ತುಳಸಿ ನೀರು ಬಿಡುವುದು ಎನ್ನುತ್ತಾರೆ. ಚಂದ್ರಗಿರಿಯ ದಕ್ಷಿಣದಲ್ಲಿ ಇದನ್ನು "ಬಾಯಿಗೆ ಅಕ್ಕಿ ಹಾಕುವುದು" ಎನ್ನುತ್ತಾರೆ. ಅಲ್ಲಿ ಗರಿಕೆ ಹುಲ್ಲಿನ ಸಣ್ಣ ಉಂಗುರವನ್ನು ಮಾಡಿ ನಡುಬೆರಳಿಗೆ ಸಿಕ್ಕಿಸಿ ಒಂದು ಚಿಟಿಕೆ ಅಕ್ಕಿ ತೆಗೆದು ಗಿಂಡಿಯಲ್ಲಿರುವ ನೀರಿನಿಂದ ನೆನೆಸಿ ಮೃತನ ಬಾಯಿಗೆ ಹಾಕುತ್ತಾರೆ. ಕಾಸರಗೋಡು ಭಾಗದಲ್ಲಿಯೂ ಕೆಲವರು ತುಳಸಿಯ ನೀರು ತಂಬಿಗೆಯಲ್ಲಿ ಸ್ವಲ್ಪ ಅಕ್ಕಿಯನ್ನೂ ಹಾಕುವರು. ಹಗಲಿನಲ್ಲಿ ತೀರಿಕೊಂಡರೆ ಸಂಜೆ ದೀಪ ಹಚ್ಚುವುದಕ್ಕಿಂತ ಮುನ್ನ ಅಂತ್ಯಕ್ರಿಯೆಗಳು ಮುಗಿಯಬೇಕು. ಅದು ಸಾಧ್ಯವಿಲ್ಲವಾದರೆ ಶವವನ್ನು ಆ ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಕೊಂಡು ಹೋಗಬೇಕು. ನಂತರ ಶವವನ್ನು ಬಿದಿರಿನಿಂದ ತಯಾರಿಸಿದ "ಚಟ್ಟ"ದಲ್ಲಿ ಮಲಗಿಸಿ ಸ್ಮಶಾನಕ್ಕೆ ಕೊಂಡು ಹೋಗುತ್ತಾರೆ. ಹೀಗೆ ಕೊಂಡೊಯುವಾಗ ಹಿರಿಯ ಮಗ ಬೆಂಕಿಯ ಮಡಿಕೆಯನ್ನೂ, ಕಿರಿಯವನು ನೀರಿನ ಮಡಿಕೆಯನ್ನೂ ಹಿಡಿದಿರುತ್ತಾನೆ. ಇವರೀರ್ವರೂ ತಮ್ಮ ತಲೆಗಳನ್ನು ಬಟ್ಟೆಯಿಂದ ಮುಚ್ಚಿಕೊಳ್ಳುತ್ತಾರೆ. ಚಿತೆಯಲ್ಲಿ ಶವವನ್ನು ಮಲಗಿಸಿ ಶವದ ಮೈಮೇಲಿನ ಬಟ್ಟೆಗಳನ್ನು ತೆಗೆದು ಒಂದು ತುಂಡು ಬಟ್ಟೆಯನ್ನು ಅದರಿಂದ ಹರಿದು ತೆಗೆದಿಟ್ಟು ಕೊಳ್ಳುತ್ತಾರೆ. ಅದನ್ನು ಶವಸಂಸ್ಕಾರದ ನಂತರ ಮನೆಯ ಹೊರಗೆ ಮಾಡಿಗೆ ಸಿಕ್ಕಿಸಿರುತ್ತಾರೆ. ಪುನಃ ತುಳಸಿ ನೀರು (ಅಥವಾ ಅಕ್ಕಿ) ಹಾಕಿ ತಾಂಬೂಲವನ್ನು ಗುದ್ದಿ ಶವದ ಬಾಯಿಗೆ ಇಡಲಾಗುವುದು. ನಾಲಗೆಯ ಅಡಿಯಲ್ಲಿ ಸಣ್ಣ ತುಂಡು ಚಿನ್ನವನ್ನು ಇರಿಸುತ್ತಾರೆ. ಅನಂತರ ಚಿತೆಗೆ ಮೂರು ಬಾರಿ ಪ್ರದಕ್ಷಿಣೆ ಬಂದು ಹಿರಿಯ ಮಗನು ಚಿತೆಗೆ ಬೆಂಕಿ ಕೊಡುತ್ತಾನೆ. ಚಿತೆಗೆ ಮಾವಿನ ಮರದ ಮೂರು ತುಂಡುಗಳು ಅಗತ್ಯವಾಗಿ ಬೇಕು. ಬೆಂಕಿಯನ್ನೂ ನೀರನ್ನೂ ತಂದವರು ಪಾತ್ರೆಯನ್ನು

ಹಿಂದು ಮುಂದಾಗಿ ನಿಂತು ಕಾಷ್ಠಕ್ಕೆ ಎಸೆಯುವರು. ಶವ ಸಂಸ್ಕಾರ ಮುಗಿದ ನಂತರ ನಗರಂನ ಅಚ್ಚಮ್ಮಾರರಿಂದ ಉತ್ತರಕ್ರಿಯೆಗೆ ಸಮ್ಮತಿಯನ್ನು ಪಡೆದು ಅಲ್ಲಿಯೇ ದಿನವನ್ನು ನಿಶ್ಚಯಿಸಿ ಮಕ್ಕಳು ಮತ್ತು ಸೋದರಳಿಯಂದಿರು ನಿಷ್ಠರಾಗಿ ನಮಸ್ಕರಿಸುತ್ತಾರೆ. ಮರಣ ಹೊಂದಿದ ಮನೆಯು ಶುದ್ಧವಾಗುವವರೆಗೆ ಅಚ್ಚಮ್ಮಾರರು ಅಲ್ಲಿಗೆ ಬರುವುದಿಲ್ಲ. ನಿಕಟಬಂಧುಗಳಾಗಿದ್ದರೆ ನೆರೆಮನೆಯಲ್ಲಿ ತಂಗುತ್ತಾರೆ.

ಶವಸಂಸ್ಕಾರದ ನಂತರ ಉತ್ತರಕ್ರಿಯೆಯವರೆಗಿನ ಕ್ರಮಗಳು : ಮರಣದ ದಿನದಿಂದ ಶುದ್ಧಮಾಡುವ ದಿನದವರೆಗೆ ಶವವನ್ನು ಮಲಗಿಸಿದ ಕಡೆಯಲ್ಲಿ ಚಾಪೆಯನ್ನು ಬಿಡಿಸಿ ಹಾಕಿ ಸಂಬಂಧಿಕರು ಕುಳಿತುಕೊಳ್ಳಬೇಕು. ತೆಂಕುಭಾಗದಲ್ಲಿ ಒಂದು ಕಾಲುದೀಪವನ್ನು ಉರಿಸಿಟ್ಟು ಒಂದು ಗಿಂಡಿಯಲ್ಲಿ ನೀರನ್ನು ಇಡಬೇಕು. ಈ ಚಾಪೆಯನ್ನು ಮಡಿಸಲಿಕ್ಕಿಲ್ಲ. ಶವಸಂಸ್ಕಾರದ ಎರಡನೇಯ ದಿನ ಅಂಗಳದಲ್ಲಿ ಮಣ್ಣಿನ ದಿಣ್ಣೆಯೊಂದನ್ನು ಮಾಡಿ ಅದರಲ್ಲಿ ಒಂದು ಎಳನೀರನ್ನು ಹೂತು ಹಾಕಬೇಕು. ದರ್ಭೆ ಹುಲ್ಲಿನಲ್ಲಿ ಒಂದು ಉಂಗುರವನ್ನು ಮಾಡಿ ಸೀಯಾಳಕ್ಕೆ ಸಿಕ್ಕಿಸಬೇಕು. ಮೃತನ ಬಂಧುಗಳು ಅದಕ್ಕೆ ಬಲಿಕರ್ಮಗಳನ್ನು ಶುದ್ಧಿಯಾಗುವ ದಿನದವರೆಗೂ ನಡೆಸುತ್ತಾರೆ. ಪ್ರತಿದಿನ ಮಧ್ಯಾಹ್ನಕ್ಕಿಂತಲೂ ಮೊದಲು ಸ್ನಾನ ಮಾಡಿ ಬೇಯಿಸಿದ ಅನ್ನವನ್ನು ಒಂದು ಬಾಳೆಯಎಲೆಯಲ್ಲಿ ಹಾಕಿ ಅದನ್ನು ಸೀಯಾಳ ಹೂತು ಹಾಕಿದ ಸ್ಥಳಕ್ಕೆ ತರುತ್ತಾರೆ. ಶವದ ಮೈಯಿಂದ ತುಂಡರಿಸಿ ತೆಗೆದ ಬಟ್ಟೆಯನ್ನು ಸೊಂಟಕ್ಕೆ ಸುತ್ತಿ ಹಿರಿಯ ಮಗನು ಗಿಂಡಿಯಿಂದ ಬಲಿಕರ್ಮಗಳನ್ನು ನಡೆಸುವವರ ಕೈಗಳಿಗೆ ನೀರು ಹಾಕುತ್ತಾನೆ. ಮೂರು ಸಲ ಅನ್ನವನ್ನು ಬಲಗೈಯಲ್ಲಿ ತೆಗೆದು ಸೀಯಾಳದ ಬಲಭಾಗದಲ್ಲಿ ಇಟ್ಟಿರುವ ಬಾಳೆಎಲೆಯ ಮೇಲೆ ಕೈಯನ್ನು ತಿರುಗಿಸಿ ಹಾಕುತ್ತಾರೆ. ಅನಂತರ ಕೈತೊಳೆಯುತ್ತಾರೆ. ಎಲ್ಲರೂ ಈ ರೀತಿಯಲ್ಲಿ ಮಾಡಿದ ಮೇಲೆ ಆ ಬಟ್ಟೆಯನ್ನು ಸುತ್ತಿದ ಹಿರಿಯ ಮಗನು ಬಲಿ ಹಾಕುತ್ತಾನೆ. ಆನಂತರ ಆ ಅನ್ನವನ್ನು ಮಣ್ಣಿನ ದಿಣ್ಣೆಯಿಂದ ತೆಗೆದು ಹೊರಗೆ ತಂದು ಇಟ್ಟು ಕೈಗೆ ನೀರನ್ನು ಹಾಕಿ ಕೈತಟ್ಟಿ ಕಾಗೆಯನ್ನು ಕೂಗುತ್ತಾರೆ. ಕೊನೆಗೆ ಕಾಗೆ ಅನ್ನವನ್ನು ಮುಟ್ಟಿದ ಅನಂತರ ಊಟ ಮಾಡುತ್ತಾರೆ. ಪ್ರತಿದಿನವೂ ಮುಸ್ಸಂಜೆ ಹೊತ್ತಿಗೆ ಊಟ ಮಾಡಿ ಸ್ನಾನ ಮಾಡಿ ಕುಟುಂಬದವರೆಲ್ಲರೂ ಆ ಚಾಪೆಯಲ್ಲಿ ಕುಳಿತು ತಲೆಗೆ ಕೈಯಿಟ್ಟು ಮೃತನನ್ನು ಕರೆಕರೆದು ಅಳಬೇಕು. ಇದನ್ನು "ಮುರಿಯಾ ಇಡಲ್" ಎನ್ನುತ್ತಾರೆ. ಈ ಸಂಪ್ರದಾಯ ತುಳುನಾಡಿನ ಇತರ ಸಮುದಾಯಗಳಲ್ಲೂ ಇವೆ. ಮರಣ ಹೊಂದಿದವನ ಸಂಕೇತವಾಗಿ ಸೀಯಾಳವನ್ನಿಡುವ ಕ್ರಮವಿದ್ದರೂ, ಶಾಲಿಯರಂತೆ ಅನ್ನ ಉಂಡೆಯನ್ನಿಟ್ಟು ಬಲಿ ಅರ್ಪಿಸುವ ಪದ್ಧತಿಯಿಲ್ಲ. ಮೂಲತಃ ಹಿರಿಯರಿಗೆ ಪಿಂಡ ಹಾಕುವ ಸಂಪ್ರದಾಯದವರಾದ ಇವರು ತುಳುನಾಡಿನ ಪ್ರಾದೇಶಿಕ ಪ್ರಭಾವದಿಂದ ಸೀಯಾಳವನ್ನು ಇಡುವ ಸಂಪ್ರದಾಯವನ್ನು ರೂಢಿಸಿಕೊಂಡಿರುವ ಸಾಧ್ಯತೆಯಿದೆ. ೧೩ನೇಯ

ದಿನ ಶುದ್ಧ. ಆ ದಿನ ಸಂಜೆ ಊಟ ಮಾಡಿ ಎಲ್ಲವನ್ನೂ ತೊಳೆಯುತ್ತಾರೆ. ಅಡಿಗೆ ಮನೆಯ ಮುಂಬಾಗಿಲಿನಲ್ಲಿ ಹೊಸ್ತಿಲಲ್ಲಿ ಒಂದು ಕುಂಬಳಕಾಯಿ ಹಾಗೂ ಬಾಳೆಕಾಯಿಯನ್ನಿಟ್ಟು ಒಂದೇ ಏಟಿಗೆ ಕತ್ತಿಯಿಂದ ತುಂಡರಿಸುತ್ತಾರೆ. ಅದರ ಸಾರನ್ನು ಮಾಡಿ ಸಂಜೆಯೊಳಗೆ ಊಟ ಮಾಡಿ ಪಾತ್ರೆಗಳನ್ನೆಲ್ಲಾ ತೊಳದಿಟ್ಟು ಸ್ನಾನಮಾಡುತ್ತಾರೆ. ಇದನ್ನು "ತೆಳ್‌ಪು" ಎನ್ನುತ್ತಾರೆ. ಆನಂತರ ಆ ಚಾಪೆಯ ಮೇಲೆ ನಿಂತು ಮಡಿವಾಳರು ತಂದ ಮಡಿಬಟ್ಟೆಯನ್ನು ಹಿಡಿದುಕೊಳ್ಳುತ್ತಾರೆ. ಸಮುದಾಯದ ಶುದ್ಧೀಕರಿಸುವವನು (ಮರ್‍ಯಾದಿಕ್ಕಾರನ್ ಅಥವಾ ತೆಳಿಕ್ಕುನ್ನವವನ್) ತೀರ್ಥಜಲವನ್ನು ಅವರ ಮೇಲೆ ಪ್ರೋಕ್ಷಿಸುವನು ಮನೆಯ ಒಳಗಿನ ಎಲ್ಲಾ ವಸ್ತುಗಳನ್ನು ಹೊರಹಾಕಿ ಆ ದಿನ ಶುದ್ಧೀಕರಣವು ನಡೆಯುವುದು. ಮರ್‍ಯಾದಿಕಾರನು ಎಲ್ಲರಿಗೂ ಪ್ರೋಕ್ಷಣೆ ಮಾಡಿದನಂತರ ಆ ಚಾಪೆಯನ್ನು ಮಡಚಿ ಹೊರಗೆ ಕೊಂಡೊಯ್ಯುವನು.

ಕುಂಬಳಕಾಯಿಯನ್ನು ಕಡಿಯುವ ಪ್ರಕ್ರಿಯೆಯು ಸಂಬಂಧವನ್ನು ಕಡಿದುಕೊಳ್ಳುವುದನ್ನು ಸಂಕೇತಿಸುತ್ತದೆ. ಸಂಬಂಧದ ಒಳಗೆ ವೈಷಮ್ಯ ತಲೆದೋರಿದಾಗ "ಕುಂಬ್ಳಂಜ ಮುರಿಚ್ಚು" (ಕುಂಬಳಕಾಯಿ ತುಂಡರಿಸಿಯಾಯಿತು) ಎಂದು ಹೇಳುವ ಸಂಪ್ರದಾಯವಿದೆ. ಮನುಷ್ಯ ಮನುಷ್ಯರೊಳಗಿನ ಸಂಬಂಧವನ್ನು ಪ್ರಕೃತಿಯ ವಸ್ತುವಿನೊಡನೆ ಸಮೀಕರಿಸುವ, ಉಳಿವಿಗೂ ಅಳಿವಿಗೂ ಅವನ್ನು ಬಳಸಿಕೊಳ್ಳುವ ಈ ಪ್ರಕ್ರಿಯೆಯು ಪ್ರಕೃತಿಯೊಂದಿಗಿನ ಮಾನವನ ಅವಿನಾಭಾವ ಸಂಬಂಧವನ್ನು ಸೂಚಿಸುತ್ತದೆ. ಮಾತ್ರವಲ್ಲ ಪ್ರಕೃತಿಯ ಬಗ್ಗೆ ಅವನಿಗಿರುವ ಗೌರವವನ್ನು ಸೂಚಿಸಿಕೊಡುತ್ತದೆ. "ತೆಂಗಿನ ಮರವನ್ನು ಕಡಿಯಬಾರದು", ಗರ್ಭಿಣಿ ಹೆಂಗಸಿನ ಪತಿ ಗೊನೆ ಹಾಕಿದ ಬಾಳೆಯನ್ನು ಕಡಿಯಬಾರದು. ಈ ಮೊದಲಾದ ಸಂಪ್ರದಾಯಗಳು ಅದನ್ನು ಪುಷ್ಟೀಕರಿಸುತ್ತವೆ.

<u>ಉತ್ತರಕ್ರಿಯೆಯ ಕ್ರಮ</u> : ಮರಣ ಹೊಂದಿದ ೧೩ನೇ ದಿನ ಯಾ ಉತ್ತರಕ್ರಿಯೆಗೆ ನಿಗಧಿ ಪಡಿಸಿದ ದಿನ ಮುಂಜಾನೆ ಬಂಧುಗಳೆಲ್ಲಾ ಸ್ನಾನ ಮಾಡಿ ಬರಿ ಹೊಟ್ಟೆಯಲ್ಲಿ ಒದ್ದೆ ಬಟ್ಟೆಯನ್ನುಟ್ಟು ಪ್ರತ್ಯೇಕವಾದ ಒಲೆಯಲ್ಲಿ ಬಲಿಪಿಂಡ ಹಾಕಲು ಅನ್ನವನ್ನು ಬೇಯಿಸುತ್ತಾರೆ. ಅದೇ ಬೆಂಕಿಯಲ್ಲಿ ಅಕ್ಕಿಯಿಂದ ಮೂರು ರೊಟ್ಟಿಗಳನ್ನು ಸುಡುತ್ತಾರೆ. ಅನಂತರ ಭೋಜನಕ್ಕೆ ತಯಾರು ಮಾಡಿದ ಎಲ್ಲಾ ಆಹಾರ ಸಾಮಾಗ್ರಿಗಳಿಂದ ಪ್ರತ್ಯೇಕವಾಗಿ ಬೇರ್ಪಡಿಸಿ ಇಟ್ಟಿರುವ ಸಾಮಾಗ್ರಿಗಳನ್ನು ಮಕ್ಕಳು ಮತ್ತು ಕುಟುಂಬಸ್ಥರು ಸ್ನಾನವನ್ನು ಪೂರೈಸಿ ಒದ್ದೆ ಬಟ್ಟೆಯಲ್ಲೇ ಬಡಿಸುವರು. ಅದರ ಮೇಲೆ ಇನ್ನೊಂದು ಬಾಳೆಯೆಲೆಯನ್ನು ಮುಚ್ಚಿ ಹಿರಿಯ ಮಗನು ಬಿಳಿ ವಸ್ತ್ರವನ್ನು ತಲೆಗೆ ಹಾಕಿ ಶವ ಸಂಸ್ಕಾರ ಮಾಡಿದ ಸ್ಥಳದಲ್ಲಿ ಕೊಂಡು ಹೋಗಿ ಇಡುವನು. ಆ ಹೊತ್ತಿಗಾಗಲೇ ಅಲ್ಲೊಂದು ಮಣ್ಣಿನ ದಿಣ್ಣೆಯನ್ನು ಮಾಡಿ ಮೂರು ಕಲ್ಲುಗಳನ್ನು ಇಟ್ಟು ಮರದ ಗೆಲ್ಲುಗಳನ್ನು ಅದರಲ್ಲಿ ನೆಟ್ಟಿರುತ್ತಾರೆ. ಆ ಗೆಲ್ಲುಗಳ ಮೇಲೆ ಬಿಳಿಯ ವಸ್ತ್ರವನ್ನು ಹೊದಿಸಿರುವರು. ಬಲಿಪಿಂಡ ಹಾಕಲು ತಂದ ಆಹಾರವನ್ನು ತಲೆಯ ಭಾಗದಲ್ಲಿಟ್ಟು ಎಲ್ಲರೂ ಬಲಿ ಹಾಕುವರು.

ಕೊನೆಗೆ ಮೃತನ ಮಗ ಅಥವಾ ಅಳಿಯ ಬಲಿ ಸಮರ್ಪಿಸಿ ಕೈಗೆ ನೀರು ಹಾಕಿ ಮೂರು ಸಲ ಕೈತಟ್ಟಿ ಕಾಗೆಯನ್ನು ಕರೆಯುವರು. ಕಾಗೆ ಬಂದು ಆಹಾರವನ್ನು ಸೇವಿಸಿದ ಅನಂತರ ಎಲ್ಲರೂ ನಿರ್ಗಮಿಸುವರು. ಹಿಂತಿರುಗಿ ಬಂದು ಅಂಗಳದಲ್ಲಿ ನಿರ್ಮಿಸಿದ್ದ ಬಲಿತ್ತಟ್ಟಿ (ಬಲಿಯ ದಿಣ್ಣೆ)ನ ಮೇಲಿರುವ ಸೀಯಾಳವನ್ನು ತೆಗೆದು ತೆಂಕು ಮುಖ ಮಾಡಿ ನಿಂತು ಬಲಿ ದಿಣ್ಣೆಯನ್ನು ಬಲಕಾಲಿನ ಹಿಂಭಾಗದಿಂದ ಒದ್ದು ಛೇದಿಸಿ, ಸೀಯಾಳವನ್ನು ತಲೆಯ ಮೇಲೆ ಇಟ್ಟುಕೊಂಡು ಹೋಗಿ ಹೊಳೆಯಲ್ಲಿ ವಿಸರ್ಜಿಸುವರು. ಅನಂತರ ಸ್ನಾನ ಮಾಡಿ ಮನೆಗೆ ಬಂದು ಭೋಜನ ಮಾಡುವರು.

ಭೋಜನವಾದ ಮೇಲೆ "ಅಚ್ಚಮ್ಮಾರ"ರು ಒಂದು ತಟ್ಟೆಯಲ್ಲಿ ಎಲೆ ಅಡಿಕೆಯನ್ನಿಟ್ಟು, ಇನ್ನೊಂದು ತಟ್ಟೆಯಲ್ಲಿ ತೆಂಗಿನ ಗರಿಯಿಂದ ತಯಾರಿಸಿದ ಕಿವಿಯೋಲೆಗಳನ್ನು ಇಟ್ಟು ಕುಟುಂಬದವರಿಗೂ ಹೆಂಡತಿ ಮಕ್ಕಳಿಗೂ ಕೊಡುವರು. ಇಷ್ಟು ದಿನವೂ ಆಭರಣಗಳನ್ನು ಧರಿಸದೆ ನಿರಾಲಂಕೃತರಾದ ಹೆಂಗಸರೂ, ಮಧುಮಾಂಸ ಸೇವಿಸದೆ ವ್ರತನಿಷ್ಠರಾದ ಪುರುಷರೂ ಮೊದಲಿನ ಹಾಗೇ ಅಲಂಕಾರ ಹಾಗೂ ಆಹಾರವನ್ನು ಸೇವಿಸುವರು. ಪುರುಷರು ಗಡ್ಡ ಮೀಸೆ ಹಾಗೂ ತಲೆಗಳನ್ನು ಬೋಳಿಸುವ ಸಂಪ್ರದಾಯವೂ ಇದೆ.

ಅದೇ ದಿನ ರಾತ್ರಿ ಮೃತನನ್ನು ಒಳಗೆ ಕರೆಯುವ ಒಂದು ಆಚರಣೆಯನ್ನೂ ಮಾಡುತ್ತಾರೆ. (ಕೆಲವರು ಇದನ್ನು ೧೬ನೇ ದಿನ ಅಥವಾ ವರ್ಷಕ್ಕೊಮ್ಮೆ ತರವಾಡಿನಲ್ಲಿ ನಡೆಯುವ ಸತ್ತವರಿಗೆ ಬಡಿಸುವ ಸಂದರ್ಭದಲ್ಲಿ ಮಾಡುವುದೂ ಇದೆ). ಇದನ್ನು ಅವುತ್ತ್‌ವಿಳಿಕ್ಕಲ್ ಎಂದು ಕರೆಯುತ್ತಾರೆ. ಉತ್ತರ ಕ್ರಿಯೆಗೆಂದು ಮಾಡಿದ ಸಾಮಾಗ್ರಿಗಳನ್ನು ಪ್ರತ್ಯೇಕವಾಗಿ ತೆಗೆದಿರಿಸಿಟ್ಟುಕೊಂಡಿರುತ್ತಾರೆ. ಅದರೊಂದಿಗೆ ಮೀನಿನ ಸಾರು ಮತ್ತು ಕೋಳಿಯ ಪಲ್ಯವನ್ನೂ ತಯಾರಿಸುತ್ತಾರೆ. ಹದಿನಾರು ಎಲೆಗಳಲ್ಲಿ ಅದನ್ನು ಬಿಡಿಸಿ, ಅದರೊಂದಿಗೆ ಸ್ವಲ್ಪ ದೂರದಲ್ಲಿ ೧೭ನೇ ಎಲೆಯನ್ನಿರಿಸಿ ಬಡಿಸುತ್ತಾರೆ. ಬಿಸಿ ನೀರು ಕಾಯಿಸಿ ಮುಂಭಾಗಿಲಿನ ಹೊಸ್ತಿಲಲ್ಲಿ ಅದನ್ನು ಇರಿಸಿ, ಸೋಪು, ಟವೆಲುಗಳನ್ನಿಟ್ಟು ಕುಟುಂಬದ ಹಿರಿಯ ಮುತ್ತೈದೆ ತಂಬಿಗೆಯಲ್ಲಿ ಬಿಸಿ ನೀರನ್ನು ತೆಗೆದು, ಹೊರಚೆಲ್ಲಿ ಮೃತನ ಹೆಸರು ಹಿಡಿದು ಕೂಡಿ "ಒಳಗೆ ಬಂದು ಉಳಿದವರೊಂದಿಗೆ ಸೇರಿಕೋ" ಎಂದು ಹೇಳುತ್ತಾಳೆ. ಅನಂತರ ಒಳಗಡೆ ಇಟ್ಟ ೧೭ನೇ ಎಲೆಯನ್ನು ೧೬ರ ಜತೆಗೆ ಸೇರಿಸಿ "ಈತನನ್ನೂ ನಿಮ್ಮೊಂದಿಗೆ ಸೇರಿಸಿಕೊಳ್ಳಿ" ಎಂದು ಪ್ರಾರ್ಥಿಸಿ ಬಾಗಿಲು ಹಾಕುತ್ತಾರೆ. ಸ್ವಲ್ಪ ಹೊತ್ತಿನ ನಂತರ ಬಾಗಿಲು ತೆರೆದು ಪ್ರತಿ ಎಲೆಯಿಂದಲೂ ಸ್ವಲ್ಪ ಅನ್ನವನ್ನು ಚಿವುಟಿ ಹೊರಹಾಕಿ ಎಲೆ ತೆಗೆದು ಗೋಮಯ ಮಾಡುತ್ತಾರೆ. ಹೊರಗೆ ಊಟಕ್ಕೆ ಕುಳಿತ ಮಕ್ಕಳಿಗೆ ಆ ಎಲೆಯ ಊಟವನ್ನು ಕೊಡುತ್ತಾರೆ.

ಈ ಸಂದರ್ಭದಲ್ಲಿ ಕಾಸರಗೋಡಿನ ಭಾಗದಲ್ಲಿ ಕುಟುಂಬದ ಹಿರಿಯ ವ್ಯಕ್ತಿ ಮೃತಪಟ್ಟವನ ಮಡದಿಗೆ ಒಂದು ಸೀರೆಯನ್ನು ಕೊಡುವುದಿದೆ. ಇದನ್ನು "ದುಃಖದ ಸೀರೆ" ಎನ್ನುತ್ತಾರೆ. ಇದು ತುಳುವರ ಸಂಪ್ರದಾಯ. (ತುಳುನಾಡಿನಲ್ಲಿ ಕೆಳವರ್ಗದಲ್ಲಿರುವ ಸಾಮಾನ್ಯ ಸಂಪ್ರದಾಯವಿದು).

ಶಾಲಿಯರಲ್ಲಿ ಮೊದಲು ಶವವನ್ನು ಸುಡುವ ಬದಲು ಹೂಳುವ ಸಂಪ್ರದಾಯವಿತ್ತು ಎನ್ನಲಾಗಿದೆ. ಆದರೆ ಉಳಿದೆಲ್ಲಾ ಸಂಪ್ರದಾಯಗಳು ಈ ಮೇಲೆ ಹೇಳಿದಂತೆ ನಡೆಯುತ್ತಿದ್ದುವು. ಅದನ್ನು ಥರ್ಸ್ಟನ್ ಹೀಗೆ ದಾಖಲಿಸಿದ್ದಾನೆ : "ಶಾಲಿಯರಲ್ಲಿ ಸತ್ತವರನ್ನು ಹೂಳಲಾಗುತ್ತದೆ. ಒಂದು ಮಡಕೆಯಲ್ಲಿ ಮರಣ ಹೊಂದಿದವನ ಮಗನು ನೀರನ್ನು ಹೊತ್ತು ಹೂಳುವ ಭಾಗದ ಸುತ್ತ ಪ್ರದಕ್ಷಿಣೆ ಬರುತ್ತಾನೆ. ಕ್ಷೌರಿಕನು ಆ ಮಡಕೆಗೆ ತೂತು ಮಾಡಿದ ಮೇಲೆ ಆ ಮಡಕೆಯನ್ನು ತಲೆಯ ಭಾಗಕ್ಕೆ ಎಸೆಯುತ್ತಾನೆ. ಕ್ಷೌರಿಕನು ಶವಕ್ಕೆ ಸುತ್ತಿದ ವಸ್ತ್ರದ ಒಂದು ತುಂಡನ್ನು ಹರಿದು ತೆಗೆದಿಟ್ಟು ಕೊಳ್ಳುತ್ತಾನೆ. ಹತ್ತನೇ ದಿನ ಮಗ ಮತ್ತು ಕ್ಷೌರಿಕ ಸೇರಿಕೊಂಡು ಈ ವಸ್ತ್ರದ ತುಂಡನ್ನು ಸಮುದ್ರಕ್ಕೋ ಕೆರೆಗೋ ಎಸೆಯುತ್ತಾರೆ. ಹೂಳಿದ ಜಾಗದ ಮೇಲೆ ಮೂರು ಕಲ್ಲುಗಳನ್ನಿಡುತ್ತಾರೆ. ಅಶುದ್ಧದ ಅವಧಿಯು ಹತ್ತು ದಿನಗಳಾಗಿದ್ದು ಅದೇ ಜಾತಿಯಲ್ಲಿ ಕೆಳವರ್ಗದವನಾದ "ತಳಿಕ್ಕುನ್ನವನ್" ಶುದ್ಧೀಕರಣವನ್ನು ಮಾಡುತ್ತಿದ್ದನು." (Castes and Tribes in Southern India, Vol. III, P. 14) ).

ಸಮಾರೋಪ : ಶಾಲಿಯಾ ಸಮುದಾಯದ ಆಚಾರ ಅನುಷ್ಠಾನಗಳನ್ನು ಅವಲೋಕಿಸಿದಾಗ ಸ್ತ್ರೀಯರಿಗೆ ಅವರು ನೀಡಿರುವ ಮಹತ್ವದ ಅರಿವಾಗುತ್ತದೆ. ಸಮಾಜದಲ್ಲಿ ಸ್ತ್ರೀಗೆ ವಿಶೇಷವಾದ ಸ್ಥಾನವಿದೆ. ಬಾಲ್ಯದಲ್ಲಿ ಅವಳಿಗೆ ನಡೆಸುವ "ಚಪ್ಪರದ ಮದುವೆ"ಯ ಮೂಲಕ ಸಮುದಾಯ ಅವಳನ್ನು ಗುರುತಿಸಿ ಸ್ವೀಕರಿಸುತ್ತದೆ. ಸಮುದಾಯದ ಯಾವುದೇ ಕಾರ್ಯಕ್ರಮದಲ್ಲೂ ಸಕ್ರಿಯವಾಗಿ ಭಾಗವಹಿಸುವ ಹಕ್ಕನ್ನು ಈ ಮೂಲಕ ದಯಪಾಲಿಸುತ್ತದೆ. ಮುಂದೆ ಮದುವೆಯ ಸಂದರ್ಭದಲ್ಲೂ ಪ್ರಮುಖ ಕ್ರಿಯೆಗಳನ್ನು ನಡೆಸುವವಳು ಅವಳೇ. ದೀಪವನ್ನು ಹಿಡಿದು ವಧೂವರರನ್ನು ಮಂಟಪಕ್ಕೆ ಕರೆತರುವವಳು ಅವಳೇ. ಹಿಂದೆ ವರನ ಸೋದರಿಯರೇ ಹೋಗಿ ವಧುವನ್ನು ಮನೆಗೆ ತರುತ್ತಿದ್ದರು (ಪೆಣ್ಣಿನೆಕೊಂಡ್‌ವರಿಕ). ಕುಟುಂಬದಲ್ಲಿ ಯಾರಾದರೂ ಸತ್ತರೆ ಪುರುಷರಂತೆ "ಬಲಿಕರ್ಮ"ಗಳನ್ನು ನಡೆಸುವುದರಲ್ಲಿ ಹೆಂಗಸರಿಗೆ ಪ್ರಥಮ ಸ್ಥಾನವಿದೆ. ಹಿಂದೆ ಹೆಣ್ಣಿಗೆ ಮರುಮದುವೆಯ ಅವಕಾಶವನ್ನೂ ಈ ಸಮುದಾಯ ನೀಡಿತ್ತು. ಮದುವೆಯ ಸಂಬಂಧವನ್ನು ಬಹಳ ಸುಲಭದಲ್ಲಿ ಮುರಿದು, ತನಗಿಷ್ಟ ಬಂದ ಹಾಗೇ ನಡೆಯುವ ಸ್ವಾತಂತ್ರ್ಯ ಅವಳಿಗಿತ್ತು. ತನ್ನನ್ನು ವಿವಾಹವಾದ ಪುರುಷ, ತನ್ನೊಂದಿಗೆ ಸರಿಯಾಗಿ ನಡೆದುಕೊಳ್ಳದಿದ್ದರೆ, "ನಿನ್ನನ್ನು ನೋಡಿ ನನ್ನ ಹೆತ್ತವರು ನನ್ನನ್ನು ಹೆರಲಿಲ್ಲ" ಎಂದು ಧೈರ್ಯದಿಂದ ಹೇಳಿ ಆಕೆ ಹೊರಬರುತ್ತಿದ್ದಳು.

ಹೆಣ್ಣನ್ನು ನಿಕೃಷ್ಟವಾಗಿ ಕಂಡು, ಅವಳಿಂದ ಎಲ್ಲಾ ಹಕ್ಕುಗಳನ್ನೂ ಕಸಿದುಕೊಂಡ ಸಮಾಜದ ನಡುವೆಯೇ ಬದುಕುತ್ತಿದ್ದ ಈ ಸಮುದಾಯ ತಾನು ಮಾತ್ರ ಹೆಣ್ಣಿಗೆ ಇಂತಹ ಒಂದು ಹಕ್ಕನ್ನು ಕೊಟ್ಟಿರುವುದು ವಿಶೇಷವಾಗಿ ಕಾಣುತ್ತದೆ. ಸಮಾಜದ ಉನ್ನತ ವರ್ಗದವರಲ್ಲಿ ಕಾಣದ ಈ ಸ್ತ್ರೀ ಸ್ವಾತಂತ್ರ್ಯವನ್ನು ಇತ್ತೀಚೆಗೆ ಈ ಸಮುದಾಯವು ಪಾಲಿಸದೇ ಇರುವುದು ವಿಷಾದನೀಯ. "ಸ್ತ್ರೀ ಪುರುಷನ ಅಧೀನ ವಲಯದಲ್ಲಿಯೇ ಬಾಳಬೇಕು" ಎನ್ನುವ ಉನ್ನತ ವರ್ಗದ ನಿಲುವಿನ ಕಡೆಗೆ ಕ್ರಮೇಣ ಇವರೂ ವಾಲುತ್ತಿದ್ದಾರೆ.

ಯಾವುದೇ ಶುಭ ಕಾರ್ಯಕ್ಕೂ ತಟ್ಟೆಯಲ್ಲಿ ಬಿಳಿಯ ಹೊಸ ವಸ್ತ್ರವೊಂದನ್ನು ಕಡ್ಡಾಯವಾಗಿ ಇರಿಸುವ ಇವರ ಸಂಪ್ರದಾಯವು ವೃತ್ತಿಯ ಬಗ್ಗೆ ಅವರಿಗಿರುವ ಅಭಿಮಾನವನ್ನು ತೋರಿಸುತ್ತದೆ.

ಕೇರಳದ ಮುಖಾಂತರವಾಗಿ ಹಾದುಬಂದ ಶಾಲಿಯರ ಆಚಾರಾನುಷ್ಠಾನಗಳ ಮೇಲೆ ಅಲ್ಲಿನ ಪ್ರತಿಷ್ಠಿತ ಸಮುದಾಯವೆಂದು ಗುರುತಿಸಲ್ಪಡುವ "ನಾಯರ್" ವರ್ಗದ ಪ್ರಭಾವವು ಬಹಳಷ್ಟು ಆಗಿದೆ. ತಾಲಿಕೆಟ್ಟ್, ಪುಡಮುರಿ, ಪುಳಿಕುಡಿಯಂತಹ ಸಂಪ್ರದಾಯಗಳು ನಾಯರ್ ಸಂಪ್ರದಾಯಗಳ ಕೊಡುಗೆ. ಆದರೆ ಎಡ್ಗರ್ ಥರ್ಸ್ಟನ್ ಹೇಳುವಂತೆ, "ಚಾಲಿಯನರು ನಾಯರ್ ಜಾತಿಯ ಒಂದು ವೃತ್ತಿನಾಮ (ಬಿರುದು) ಅಥವಾ ಅದರ ಉಪವಿಭಾಗ ಮತ್ತು ಜಾತಿಯ ಹೊರಗೆ ಮಾಡಿಕೊಂಡ ವಿವಾಹಗಳಿಂದ ಉಂಟಾದ ಬಂಟರ ಒಂದು ಪಂಗಡ" (Edger Thurston Castes and Tribes in Southern India, Vol. III)ಎನ್ನುವ ಮಾತನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ ಎಂದು ಹೇಳಬಹುದು. ಹಾಗೆ ಅದೇ ಪುಸ್ತಕದಲ್ಲಿ ಅವನು ಉಲ್ಲೇಖಿಸಿದ "1901ರ ಮದ್ರಾಸು ಜನಗಣತಿಯ ವರದಿ"ಯಲ್ಲಿ "ಚಾಲಿಯನರು ಗಾಣಿಗರಲ್ಲಿ ಒಂದು ಉಪಜಾತಿ" ಎಂಬ ಮಾತೂ ಅರ್ಥಹೀನ ಅನ್ನಿಸುತ್ತದೆ. ಏಕೆಂದರೆ ಶಾಲಿಯಾರು ರೂಢಿಸಿಕೊಂಡ ಹೆಚ್ಚಿನ ಸಂಪ್ರದಾಯಗಳು ಕೇವಲ ಗಾಣಿಗರು ಮಾತ್ರವಲ್ಲ ಈ ಪ್ರದೇಶದ ಮಾಯಾ, ತೀಯಾ, ಮಣಿಯಾಣಿಯಂತಹ ಇತರ ಕೆಳವರ್ಗಗಳಲ್ಲೂ ರೂಢಿಯಲ್ಲಿದ್ದವು. ಹಾಗೆಂದರೆ ಇವರ ಮೂಲವನ್ನು ಅವರಲ್ಲಿಯೂ ಗುರುತಿಸಬೇಕಾಗಿ ಬರಬಹುದು.

ಆಚರಣೆಗಳು ಹಾಗೂ ಸಂಸ್ಕಾರಗಳು ಮೇಲ್ವರ್ಗ ಹಾಗೂ ಕೆಳವರ್ಗದಲ್ಲಿ ವಿಭಿನ್ನವಾಗಿರುತ್ತವೆ ಹಾಗೂ ಅರ್ಥಪೂರ್ಣವಾಗಿರುತ್ತವೆ. ತಾವು ರೂಢಿಸಿಕೊಂಡು ಬರುವ ಸಂಸ್ಕಾರಗಳು ಹಾಗೂ ಆಚರಣೆಗಳು ಸಮಾಜದಲ್ಲಿ ತಮ್ಮ ಜಾತಿಯ ಶ್ರೇಣೀಕರಣವನ್ನು ನಿರ್ಧರಿಸುತ್ತದೆ ಎಂಬ ಭಾವನೆ ಕೆಳವರ್ಗದಲ್ಲಿರುವುದರಿಂದ, ಮೇಲ್ವರ್ಗದವರ ಪದ್ಧತಿ ಹಾಗೂ ಸಂಸ್ಕಾರಗಳನ್ನು ರೂಢಿಸಿಕೊಂಡು ಬರಲು ಅವರು ಬಯಸುತ್ತಾರೆ. ಇದರಿಂದವಾಗಿ ಹಂತಹಂತವಾಗಿ ರೂಢಿಗತವಾಗಿ

ಬಂದ ಮೂಲದ ಆಚರಣೆಗಳು ಮೌಲ್ಯವನ್ನು ಕಳೆದುಕೊಳ್ಳುತ್ತವೆ ಮಾತ್ರವಲ್ಲ, ಕ್ರಮೇಣ ಮಾಯವಾಗುತ್ತವೆ. ಇದರಿಂದ ಪರಂಪರಾಗತವಾಗಿ ಪಾಲಿಸಿಕೊಂಡು ಬಂದ ಮೂಲಸಂಸ್ಕೃತಿಗೆ ಧಕ್ಕೆಯುಂಟಾಗುತ್ತದೆ. ಈ ಬದಲಾವಣೆಯು ಕಾಸರಗೋಡಿನ ದಕ್ಷಿಣ ಭಾಗದ ಶಾಲಿಯಾ ಸಮುದಾಯಕ್ಕಿಂತಲೂ ಉತ್ತರಭಾಗ ಹಾಗೂ ದಕ್ಷಿಣ ಕನ್ನಡ ಭಾಗದ ಶಾಲಿಯಾ ಸಮುದಾಯದಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. ವೈದಿಕ ಸಂಸ್ಕಾರಗಳೇ ಶ್ರೇಷ್ಠ ಎಂದು ಭಾವಿಸಿಕೊಂಡ ಈ ಭಾಗದ ಶಾಲಿಯರು ವಿವಾಹ, ಅಂತ್ಯವಿಧಿಗಳಂತಹ ಸಂದರ್ಭದಲ್ಲಿ ಬ್ರಾಹ್ಮಣ ಪುರೋಹಿತರನ್ನು ನೇಮಿಸಿಕೊಳ್ಳುವ ಸಂಪ್ರದಾಯಗಳನ್ನು ಬೆಳೆಸಿಕೊಂಡಿದ್ದಾರೆ. ಜಾತಿ ವ್ಯವಸ್ಥೆಯೊಳಗಿನ ಇವರ "ಆಚಾರ ವರ್ಗ"ದವರು ಈಗ ಬದಿಗೆ ಸರಿಸಲ್ಪಡುತ್ತಿದ್ದಾರೆ.

# ಅಧ್ಯಾಯ – ೬

## ಧಾರ್ಮಿಕ ಜೀವನಾಚರಣೆ

೧) ತಾನಂ ಮತ್ತು ಭಗವತಿಯರ ಆರಾಧನೆ

೨) ಇತರ ದೈವಗಳ ಆರಾಧನೆ

೩) "ತಾನಂ" ಗಳಲ್ಲಿ ಆರಾಧನೆಯ ಕ್ರಮಗಳು

೪) ಕ್ಷೇತ್ರದ ಸ್ಥಾನಿಕ ವರ್ಗ ಅಥವಾ ಆಚಾರ ವರ್ಗ

೫) ಕ್ಷೇತ್ರದ ಜತೆಗಿನ ಸಾಮಾಜಿಕನ ಸಂಬಂಧ

# ಅಧ್ಯಾಯ ೬

## ಧಾರ್ಮಿಕ ಜೀವನಾಚರಣೆ

ಮನುಷ್ಯ ಪ್ರಕೃತಿಗೂ, ಪ್ರಕೃತಿಗೂ ನಡುವೆ ಸಂಬಂಧಗಳಿರುವಂತೆ ವೈರುಧ್ಯಗಳೂ ಇದೆ. ಪ್ರಕೃತಿಗೆ ಎದುರಾಗಿ ಅವನು ಹುಟ್ಟಿನಿಂದ ಸಾವಿನವರೆಗೆ ಹೋರಾಡುತ್ತಲೇ ಇರುತ್ತಾನೆ. ಪ್ರಕೃತಿ ತನ್ನ ಮೇಲ್ಮೆಯನ್ನು ಅವನ ಮೇಲೆ ಸಾಧಿಸುತ್ತಲೇ ಇರುತ್ತದೆ. ಇಂತಹ ಸಂದರ್ಭದಲ್ಲಿ ದೈವಗಳ ಆವಿರ್ಭಾವವಾಗುತ್ತದೆ. ಮಾನವನು ತನ್ನ ಅಸುರೀ ಪ್ರವೃತ್ತಿಯನ್ನೂ, ಪ್ರಕೃತಿಯ ಕರಾಳತೆಯನ್ನೂ ದೈವಗಳಿಗೆ ಆರೋಪಿಸುತ್ತಾನೆ. ಆ ಕರಾಳತೆಯೇ ತನ್ನ ಬದುಕಿಗೆ ರಕ್ಷಣೆ ಕೊಡುತ್ತದೆ ಎಂದು ನಂಬುತ್ತಾನೆ.

'ತುಳುನಾಡು' ಎಂದು ಪ್ರಾಚೀನ ಕಾಲದಿಂದಲೇ ಕರೆಯಲ್ಪಟ್ಟ ಕಾಸರಗೋಡು ಮತ್ತು ದಕ್ಷಿಣ ಕನ್ನಡ ಪ್ರದೇಶವು ಭೂತಾರಾಧನೆಗೆ ಪ್ರಸಿದ್ಧವಾದುದು. "ಒಂದು ಕಡಿಮೆ ನಲವತ್ತು" ಭೂತಗಳು ಇಲ್ಲಿ ಆರಾಧಿಸಲ್ಪಡುತ್ತದೆ ಎಂದು ಹೇಳಲಾಗುತ್ತದೆ. ಚಂದ್ರಗಿರಿ ಹೊಳೆಯ ಉತ್ತರದಲ್ಲಿ ಭೂತ–ದೈವ ಎಂದು ಕರೆಯಲ್ಪಡುವ ಆರಾಧನಾ ಮೂರ್ತಿಗಳು, ಚಂದ್ರಗಿರಿ ಹೊಳೆಯ ದಕ್ಷಿಣದಲ್ಲಿ 'ತೆಯ್ಯಂ' ಎಂದು ಕರೆಯಲ್ಪಡುತ್ತವೆ. ಉತ್ತರದಲ್ಲಿ ಇವುಗಳ ಆರಾಧನಾಲಯಗಳು 'ಭೂತ ಸ್ಥಾನ' ಅಥವಾ 'ದೈಸ್ಥಾನ' ಎಂದು ಕರೆಯಲ್ಪಟ್ಟರೆ, ದಕ್ಷಿಣದಲ್ಲಿ 'ತಾನಂ' ಎಂದು ಕರೆಯಲ್ಪಡುತ್ತದೆ. 'ಸಂಸ್ಥಾನಂ' ಎನ್ನುವ ಪದವೇ ಸಂಕ್ಷಿಪ್ತಗೊಂಡು 'ಸ್ಥಾನಂ' ಆಗಿ, ಅದರ ಅಪಭ್ರಂಶರೂಪವೇ 'ತಾನಂ' ಆಗಿರುವ ಸಾಧ್ಯತೆಯಿದೆ. ಉತ್ತರ ಹಾಗೂ ದಕ್ಷಿಣ ಭಾಗದ ಆರಾಧನಾ ವಿಧಾನದಲ್ಲಿ ಬಹಳಷ್ಟು ಸಾದೃಶ್ಯಗಳಿರುವಂತೆ, ಕೆಲವು ಪ್ರಾದೇಶಿಕ ವೈದೃಶ್ಯಗಳೂ ಇವೆ. ಉತ್ತರ ಭಾಗದಲ್ಲಿ ಒಂದೊಂದು ಸಮುದಾಯಕ್ಕೂ ಅವರದೇ ನಿರ್ದಿಷ್ಟ ದೈವಗಳೂ ಆರಾಧನಾಲಯಗಳೂ ಇವೆ ಅದರೊಂದಿಗೆ ಇತರ ಸಮುದಾಯಗಳ ದೈವಗಳನ್ನೂ ಆರಾಧಿಸುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

ಅಮರಸಿಂಹನ ಅಮರಕೋಶದಲ್ಲಿ ಭೂತ ಎಂಬುದನ್ನು 'ದೇವಯೋನಿ' ವರ್ಗದ ಒಂದು ಜನಾಂಗ ಎಂದು ವರ್ಣಿಸಲಾಗಿದೆ. ಕ್ರಿ. ಶ. ೧೩೭೯ರ ಕಾರ್ಕಳ ತಾಲೂಕಿನ ಕಾಂತೇಶ್ವರ ದೇವಾಲಯದ ಶಾಸನದಲ್ಲಿ 'ದೈವಕ್ಕೆ ತಪ್ಪಿದವನು' ಎಂಬ ಉಲ್ಲೇಖವಿದೆ. ಲಯಕರ್ತನಾದ ಪರಮೇಶ್ವರ ಹಾಗೂ ಪರಾಶಕ್ತಿಯ ರುದ್ರ ಭಯಂಕರ ಮೂರ್ತಿಯೇ ಭೂತಕಲ್ಪನೆಗೆ ದಾರಿಮಾಡಿಕೊಟ್ಟಿರಬಹುದು. ಅವರ ಹಿಂದೆ ಸಾವಿನ ಛಾಯೆ ಕಾಣುವುದರಿಂದ ನಾಶಕ್ಕೆ ಕಾರಣಕರ್ತನಾದ ಪರಮೇಶ್ವರನು ಸೃಷ್ಟಿ ಮಾಡಿದ ನೋವು, ದುಃಖ, ಸಾವು ಮನುಷ್ಯ ಕಲ್ಪನೆಯಲ್ಲಿ ಉಗ್ರಸ್ವರೂಪವಾಗಿ ರುದ್ರನೂ ಅವನ ಗಣಗಳೂ ಭಯಂಕರವಾಗಿಯೇ ಮೂರ್ತಗೊಂಡವು. ಭಯಂಕರಾಕಾರದ ಅವುಗಳನ್ನು ಬಲಿ ಹಾಗೂ ರಕ್ತತರ್ಪಣದಂತಹ ಉಗ್ರರೀತಿಯಿಂದ ತೃಪ್ತಿಗೊಳಿಸಿದರೆ ತಮಗೆ ಆ ದುಃಖದಿಂದ ವಿಮೋಚನೆ ಎಂಬ ಭಾವನೆಯೇ ಅವುಗಳಿಗೆ ಕೋಲ, ನೇಮ, ಅಥವಾ 'ಕಳಿಯಾಟಂ'ಗಳನ್ನು ನಡೆಸಲು ಪ್ರೇರಣೆಯನ್ನು ನೀಡಿತು ಎನ್ನಬಹುದು. (ಭೂತ ಕಟ್ಟಿ ಆಡಿಸುವುದನ್ನು ತುಳುವಿನಲ್ಲಿ 'ಕೋಲ' ಎಂದರೆ ಮಲಯಾಳದಲ್ಲಿ 'ಕಳಿಯಾಟಂ' ಎಂದು ಹೇಳುತ್ತಾರೆ.)

ಉತ್ತರ ಮಲಬಾರು ಪ್ರದೇಶವು 'ತೆಯ್ಯಂ' ಗಳಿಗೆ ಪ್ರಸಿದ್ಧವಾದುದು. 'ತುಳುನಾಡು' ಎಂದು ಕರೆಯಲ್ಪಡುತ್ತಿದ್ದ 'ಬಾರಕೂರಿನಿಂದ ವಳಪಟ್ಟಣಂ' ವರೆಗೆ ಇರುವ ಪ್ರದೇಶದಲ್ಲಂತೂ 'ತೆಯ್ಯಂ' ಹಾಗೂ 'ಭೂತ' ಗಳ ಆರಾಧನಾ ಕೇಂದ್ರಗಳು ವ್ಯಾಪಕವಾಗಿ ಹರಡಿಕೊಂಡಿರುವುದನ್ನು ಕಾಣಬಹುದು. ಕೆಲವೆಡೆ ದೇವಾಲಯವೂ ದೈವಾಲಯವೂ ಜತೆ ಜತೆಯಾಗಿರುವುದನ್ನು ಕಾಣಬಹುದು. ತುಳುನಾಡಿನ ಎಲ್ಲಾ ಸಮುದಾಯದ ದೇವಾಲಯಗಳಲ್ಲೂ, ಈ 'ದೈವ' ಗಳನ್ನು ಆರಾಧಿಸುತ್ತಾರೆ.( ಕೆಲವೆಡೆ ಬ್ರಾಹ್ಮಣರೂ ಭೂತಾರಾಧಕರಾಗಿದ್ದಾರೆ). ಆರ್ಯ ದ್ರಾವಿಡ ಆರಾಧನಾ ವ್ಯತ್ಯಯವನ್ನು ನಾವು ಇದರಿಂದ ಸ್ಪಷ್ಟವಾಗಿ ಮನಗಾಣಬಹುದು. ಶಿಲೆಗಳಲ್ಲಿ ಆರಾಧನಾ ಮೂರ್ತಿಗಳನ್ನು ಆವಾಹಿಸಿ ಆರಾಧಿಸುವ 'ಸೌಮ್ಯ ಪೂಜಾ ವಿಧಾನವು' ಆರ್ಯ ವಿಧಾನವೆನ್ನಬಹುದು. ನಿರ್ದಿಷ್ಟ ದೈವವನ್ನು ಶಿಲೆಗಳಲ್ಲಿ ಮಾತ್ರವಲ್ಲದೆ, ಆಯುಧಗಳಲ್ಲೂ, ಮರದ ಹಲಗೆಗಳಲ್ಲೂ ಇನ್ನಿತರ ದಿನ ಬಳಕೆಯ ವಸ್ತುಗಳಲ್ಲೂ ಆವಾಹಿಸಿಕೊಂಡು ಆರಾಧಿಸುವುದರೊಂದಿಗೆ, ಶರೀರದಲ್ಲೂ ಆವಾಹಿಸಿಕೊಂಡು ಆರಾಧಿಸುವ ಕಠಿಣ ಪೂಜಾ ವಿಧಾನ ದ್ರಾವಿಡರದ್ದು. ಮಲಬಾರು ಹಾಗೂ ತುಳುನಾಡು ಈ ರೀತಿಯ ಆರಾಧನೆಗೆ ಪ್ರಸಿದ್ಧವಾದುದು. ಒಂದೊಂದು ದೈವಗಳ ಹಿಂದೆ ಒಂದೊಂದು ಅದ್ಭುತ ಕತೆಯೂ, ಐತಿಹ್ಯವೂ ಇರುವುದು ಇನ್ನೊಂದು ವೈಶಿಷ್ಟ್ಯ. ಸಮಾಜದ ಇತರರೊಂದಿಗೆ ಬದುಕಿ ಬಾಳಿ, ಅದೇನನ್ನೋ ಸಾಧಿಸಿದ, ಮೋಸ-ವಂಚನೆಗಳಿಗೆ ಬಲಿಯಾಗಿ ಹೋಗಿ ಏನನ್ನೋ ಸಾಧಿಸಲಾರದೆ ಹೋದ ಮತ್ತು ಅನ್ಯಾಯ-ಅನಾಚಾರಗಳಿಗೆ ಸಿಡಿದೆದ್ದ ಮಾನವರು ಸತ್ತು ಇಲ್ಲಿ 'ತೆಯ್ಯಂ' ಅಥವಾ ಭೂತಗಳಾಗಿ ಆರಾಧಿಸಲ್ಪಡುತ್ತಾರೆ. ಅವರ ಕತೆಗಳು 'ಸತ್ಯದ ಕತೆ ' ಗಳಾಗುತ್ತವೆ. ಅವರೇ ನಿರ್ದಿಷ್ಟ ವ್ಯಕ್ತಿಗಳ ಮೈಮೇಲೆ 'ದರ್ಶನ' ಎನ್ನುವ ಹೆಸರಿನಲ್ಲಿ ಆವೇಶ ರೂಪದಲ್ಲಿ ಪುನರ್ಜೀವ ಪಡೆದುಕೊಳ್ಳುತ್ತಾರೆ. ನಂಬಿದವರಿಗೆ ಇಂಬು ಕೊಡುತ್ತಾರೆ. ನಂಬದವರನ್ನು ಶಿಕ್ಷಿಸುತ್ತಾರೆ. ಇವುಗಳು 'ತಾನಂ' ಗಳಲ್ಲೋ, ನಿರ್ದಿಷ್ಟ ಸ್ಥಳಗಳಲ್ಲೋ, ಮನೆಗಳಲ್ಲೋ ಆರಾಧಿಸಲ್ಪಡುತ್ತವೆ. 'ಕೋಟಿ ಚೆನ್ನಯ' ರಂತಹ ವೀರ ಪುರುಷರು 'ಗರಡಿ' ಗಳಲ್ಲಿ ಆರಾಧಿಸಲ್ಪಡುತ್ತಾರೆ.

ಇಂತಹ ಹಲವು ಸಾತ್ವಿಕ ಹಾಗೂ ತಾಮಸ ಶಕ್ತಿಗಳನ್ನು ಆರಾಧಿಸುವ ಶಾಲಿಯಾ ಸಮುದಾಯದ ಧಾರ್ಮಿಕ ಜೀವನಾಚರಣೆಯ ಪರಿಚಯವು ಇಲ್ಲಿದೆ. 'ಪಟ್ಟುವಂ ತೊಟ್ಟು ಪಣಂಬೂರು' ವರೆಗಿನ ಎಡಂಗ ಶಾಲಿಯಾ ಕ್ಷೇತ್ರಗಳಲ್ಲಿ ಹಲವು ದೈವಗಳ ಆರಾಧನೆಗಳು ನಡೆಯುತ್ತದೆ.

## ೧. ತಾನಂ ಹಾಗೂ 'ಭಗವತಿ'ಯರ ಆರಾಧನೆ

ಪ್ರಾಚೀನ ಕಾಲದಲ್ಲಿ ತುಳುನಾಡಿಗೆ ಬ್ರಾಹ್ಮಣರ ಆಗಮನದೊಂದಿಗೆ ಅವರ ಆಚಾರ ಅನುಷ್ಠಾನಗಳನ್ನೊಳಗೊಂಡ ಆರಾಧನಾ ಪದ್ಧತಿಯು ಬಂದಿತು. ಅದಕ್ಕೆ ಸಂವಾದಿಯಾಗಿ ಅವರ ಆರಾಧನಾ ಕೇಂದ್ರಗಳಾದ ದೇವಾಲಯಗಳು ನಿರ್ಮಾಣಗೊಂಡವು. ಈ ದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿ ಪರಿವರ್ತಿತವಾಗುವುದರೊಂದಿಗೆ ಅಶಿಕ್ಷಿತರಾದ ಇಲ್ಲಿನ ಮೂಲನಿವಾಸಿಗಳನ್ನು ಧರ್ಮದ ಹೆಸರಿನಿಂದ ಶೋಷಿಸುವ ಕೇಂದ್ರಗಳಾಗಿಯೂ ಮಾರ್ಪಟ್ಟವು. ಈ ವೇಳೆಗಾಗಲೇ ಹಲವೆಡೆಗಳಿಂದ ವಾಣಿಜ್ಯದೊಂದಿಗೆ ಸಂಬಂಧಿತರಾಗಿ ವಲಸೆ ಬಂದ ವೃತ್ತಿಯಾಧಾರಿತ ಸಮುದಾಯಗಳಾದ ಶಾಲಿಯಾ, ಮೋಯಾ, ತೀಯಾ,

ವಾಣಿಯಾ, ಆಚಾರಿ, ಮಣಿಯಾಣಿ ಈ ಮೊದಲಾದ ಸಮುದಾಯಗಳು ಇಲ್ಲಿ ನೆಲೆ ನಿಂತವು. ಇವರನ್ನು ಕೆಳವರ್ಗ( ಶೂದ್ರ )ವೆಂದು ಬ್ರಾಹ್ಮಣ ಸಮಾಜವು ಗುರುತಿಸಿತು. ಇದರ ಫಲವಾಗಿ ಜಾತೀಯ ಶ್ರೇಣೀಕರಣ ವ್ಯವಸ್ಥೆ ರೂಪುಗೊಂಡಿತು. ಇಲ್ಲಿನ ಆದಿವಾಸಿಗಳಿಂದಲೂ, ಬ್ರಾಹ್ಮಣರಿಂದಲೂ ಭಿನ್ನವಾದ ಆಚಾರ ಅನುಷ್ಠಾನ ಜೀವನ ಪದ್ಧತಿಗಳನ್ನೊಳಗೊಂಡ ಈ ಸಮುದಾಯವು ತಮ್ಮದೇ ಆದ 'ಘಟಕ' ಅಥವಾ 'ಕಬಿಗಂ' , 'ತಾನಂ' ಅಥವಾ 'ಸಂಸ್ಥಾನ'ಗಳನ್ನು ಕಟ್ಟಿಕೊಂಡರು. ಬ್ರಾಹ್ಮಣರು ತಮ್ಮ ಆರಾಧನಾಲಯಗಳಾದ ದೇವಾಲಯದೊಳಗೆ ಈ ವರ್ಗಗಳ ಪ್ರವೇಶವನ್ನು ನಿಷೇಧಿಸಿದ್ದೇ ಇವರು ತಮ್ಮ 'ಘಟಕ' ಗಳಲ್ಲಿ ಅಥವಾ 'ತಾನಂ' ಗಳಲ್ಲಿ ತಮ್ಮದೇ ಆದ ದೈವಗಳನ್ನು ಸ್ಥಾಪಿಸಿ ವಿಭಿನ್ನವಾದ ರೀತಿಯ ಆರಾಧನಾ ಪದ್ಧತಿಗಳನ್ನು ರೂಢಿಸಿಕೊಳ್ಳಲು ಕಾರಣವಾಯಿತು. ಹೀಗೆ ತುಳುನಾಡಿನಲ್ಲಿ ವೃತ್ತಿಯಾಧಾರಿತವಾದ ಸಮುದಾಯವು ಬ್ರಾಹ್ಮಣಜನ್ಯವಾದ ಆರಾಧನಾ ಪದ್ಧತಿಗೆ ವಿರುದ್ಧವಾಗಿ ತಮ್ಮದೇ ದೇಶೀಯವಾದ ಆರಾಧನಾಲಯಗಳನ್ನು ನಿರ್ಮಾಣ ಮಾಡಿಕೊಂಡವು. ಇದರಿಂದಲೇ 'ತಾನಂ'ಗಳು ಇಲ್ಲಿ ಉದ್ಭವಗೊಂಡವು. ಇವು ತುಳುವಿನಲ್ಲಿ ಭೂತಾಲಯ ಅಥವಾ ಭೂತ ಸ್ಥಾನಗಳೆಂದೂ, ಮಲಯಾಳದಲ್ಲಿ 'ತಾನಂ, ಕಬಿಗಂ, ಕಾವು, ಮುಂಡ್ಯ, ಪಳ್ಳಿಯರ, ಅರ ' ಎಂದೂ ಕರೆಯಲ್ಪಟ್ಟವು. ಈ ಕೆಳವರ್ಗದ ಸಮುದಾಯವು ಸಾಮೂಹಿಕವಾಗಿ ತಮ್ಮದೇ ಆದ ಇಂತಹ ಕ್ಷೇತ್ರಗಳನ್ನು ನಿರ್ಮಾಣ ಮಾಡಿ ಶಕ್ತರಾಗಿ ಇವುಗಳ ನೆರಳಿನಲ್ಲಿ ಸೇರಿಕೊಂಡರು. ಇದು ಅವರಲ್ಲಿ ಒಂದು ರೀತಿಯ ಐಕ್ಯತೆಯನ್ನು ತಂದಿತು. ಬ್ರಾಹ್ಮಣ ಜನ್ಯವಾದ ಪೂಜಾನುಷ್ಠಾನಗಳಿಂದ ವಿರುದ್ಧವಾಗಿ ಇಲ್ಲಿ ಸಾಮೂಹಿಕ ಆರಾಧನಾ ಪದ್ಧತಿಯು ರೂಢಿಗೆ ಬಂತು. ಇದು ಆ ಕೆಳವರ್ಗಕ್ಕೆ ಸೇರಿದ ವ್ಯಕ್ತಿಗೆ ವರ್ಗೀಯ ಶೋಷಣೆಗೆ ಎದುರಾಗಿ 'ಸಾಮೂಹಿಕ ರಕ್ಷಣೆ 'ಯ ವಾಗ್ದಾನದ ಅನುಭವವನ್ನು ಮಾನಸಿಕವಾಗಿ ನೀಡುವುದರೊಂದಿಗೆ ದೈವೀಕ ಆತ್ಮಸ್ಥೈರ್ಯವನ್ನು ನೀಡಿತು.

ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಭಾಗಗಳಲ್ಲಿ ವಾಸವಾಗಿರುವ ಶಾಲಿಯಾ, ಮೋಯಾ, ತೀಯಾ, ವಾಣಿಯಾ ಸಮುದಾಯದವರ ಆರಾಧನಾಲಯಗಳನ್ನು 'ಸ್ಥಾನಂ' ಅಥವಾ 'ಕ್ಷೇತ್ರಂ' ಎಂದು ಗುರುತಿಸಲಾಗುವುದಿದ್ದರೂ ಬಳಕೆಯ ಮಾತಿನಲ್ಲಿ 'ತಾನಂ' ಎಂದು ಹೇಳಲಾಗುತ್ತದೆ. ಈ ನಾಲ್ಕು ಸಮುದಾಯದ ಪ್ರಧಾನ ದೈವವು ಭಗವತಿ-ಒಂದು ಸಮುದಾಯದ 'ತಾನಂ' ಇರುವೆಡೆಯಲ್ಲಿ ಆ ಸಮುದಾಯದ ಹಲವು ಮನೆಗಳಿರುತ್ತವೆ ಹಾಗೇ ಈ 'ತಾನಂ'ನಲ್ಲಿ ಆರಾಧ್ಯ ದೈವವಾದ ಭಗವತಿಯು ವಿವಿಧ ನಾಮಗಳಿಂದ ಆರಾಧಿಸಲ್ಪಡುತ್ತಾಳೆ ಮಾತ್ರವಲ್ಲದೆ, ಇತರ ಪ್ರಾದೇಶಿಕ ಉಪದೈವಗಳೂ ಇಲ್ಲಿ ಆರಾಧಿಸಲ್ಪಡುತ್ತವೆ.

ತೀಯಾ ಮತ್ತು ವಾಣಿಯಾ ಸಮುದಾಯದ 'ತಾನಂ' ಗಳು ಕರಾವಳಿ ತೀರದಲ್ಲಿಯೂ ಒಳನಾಡಿನಲ್ಲಿಯೂ ಕಂಡುಬರುತ್ತವೆ. ಮೋಯಾ ಸಮುದಾಯದವರ 'ತಾನಂ' ಕರಾವಳಿಯಲ್ಲಿಯೇ ಹೆಚ್ಚಾಗಿ ನಿರ್ಮಿತವಾಗಿವೆ. ಶಾಲಿಯಾ ಸಮುದಾಯದವರ 'ತಾನಂ' ಗಳು ಹೆಚ್ಚಾಗಿ 'ರಾಜರ ' ಅಥವಾ 'ಆಶ್ರಯದಾತರ ' ಬಳಿಯಲ್ಲಿಯೇ ಇರುತ್ತವೆ. ಇತ್ತೀಚೆಗೆ ಅರಸೊತ್ತಿಗೆಗಳು ನಾಶವಾದ ನಂತರ ಕೆಲವು ಸ್ಥಳಾಂತರಗೊಂಡಿವೆ.

ಉದಾ:- ಕುಂಬಳೆ ಕ್ಷೇತ್ರ - ಕುಂಬಳೆ ಅರಸರ ಅರಮನೆಯ ಬಳಿಯೇ ಇತ್ತು. (ಕುಂಬಳೆ ಅರಸರ ಅರಮನೆಯು ಈಗ ಸ್ಥಳಾಂತರಗೊಂಡು ಮಾಯಿಪ್ಪಾಡಿಯಲ್ಲಿದೆ. ಶಾಲಿಯಾರ ಕ್ಷೇತ್ರವೀಗ ಕುಂಬಳೆಯಿಂದ ಪೂರ್ವಕ್ಕೆ ನಾರಾಯಣ ಮಂಗಲಂ ಎನ್ನುವಲ್ಲಿದೆ.)

ಮಂಜೇಶ್ವರ ಕ್ಷೇತ್ರ (ತಾನಂ) - ಮಂಜೇಶ್ವರದ ಬಂಗಾಡಿ ಅರಸರ ಅರಮನೆಯ ಬಳಿಯಲ್ಲಿತ್ತು.( ಈಗ ಮಂಗಲ್ಪಾಡಿ ಎಂಬಲ್ಲಿದೆ.)

ನೀಲೇಶ್ವರ ಕ್ಷೇತ್ರ (ತಾನಂ) - ನೀಲೇಶ್ವರದ ಅರಮನೆಯ ಬಳಿಯೇ ಇದೆ.

ಆದಿಯಾಲ್ ಕ್ಷೇತ್ರ (ತಾನಂ) - 'ಮಡಿಯನ್' ಎನ್ನುವ ರಾಜಕುಟುಂಬದ ಮನೆಯ ಬಳಿಯಲ್ಲೇ

ಇದೆ.

ಚೆರಿಕ್ಕುಳಂ ಕ್ಷೇತ್ರ (ತಾನಂ) - ಕೋಡೋತ್ ಎನ್ನುವ ನಾಯರ್ ಮನೆತನದವರ ಮನೆಯ ಬಳಿಯೇ ಇದೆ.

ಪಣಂಬೂರು ಕ್ಷೇತ್ರ (ತಾನಂ) - 'ಜನಾನಂದ ಬೀಡು' ಎನ್ನುವ ಜೈನ ಮನೆತನದವರ ಮನೆಯ ಬಳಿಯೇ ಇತ್ತು. ( ಈಗ ಮಂಗಳೂರಿಗೆ ಸ್ಥಳಾಂತರಗೊಂಡಿದೆ)

ಕಾಸರಗೋಡು ಕ್ಷೇತ್ರ (ತಾನಂ) - 'ಪೊಯಿಲ್' ಅಥವಾ ' ಪೊಳಲಿ' ಎನ್ನುವಲ್ಲಿ ಕೆಳದಿಯ ನಾಯಕರ ಕೋಟೆಯ ಬಳಿಯಿತ್ತು. (ಈಗ ಕಾಸರಗೋಡಿನ 'ತೆರುವತ್ತು' ಎಂಬಲ್ಲಿಗೆ ಸ್ಥಳಾಂತರಗೊಂಡಿದೆ).

ಶಾಲಿಯಾರ 'ತಾನಂ' ಗಳಿರುವ ಕಡೆ ' ಶಾಲಿಯಾ' ತೆರುಗಳೂ ಇರುವುದನ್ನು ಹೆಚ್ಚಿನ ಕಡೆಗಳಲ್ಲಿ ಕಾಣಬಹುದು. ಜಾತಿ ವ್ಯವಸ್ಥೆ ಮತ್ತು ರಾಜರ ಆಧಿಪತ್ಯವಿರುವಂತಹ ಕಾಲದಲ್ಲಿ ಸಮುದಾಯದೊಳಗೆ ಏಕಸ್ವಾಮ್ಯತೆಗಾಗಿಯೂ ರಾಜರ ಆಡಳಿತ ನಿರ್ವಹಣೆಯ ಜವಾಬ್ದಾರಿಯನ್ನು ಹಗುರಗೊಳಿಸಲೂ ಆಯಾ ಸಮುದಾಯದವರು ತಮ್ಮದೇ ಆದ ಆರಾಧನಾಲಯಗಳನ್ನು ಕಟ್ಟಿಕೊಂಡರು. ರಾಜರಿಂದ ಅಧಿಕಾರಗಳನ್ನು ಪಡೆದುಕೊಂಡ ಸಮುದಾಯದ ಮುಖ್ಯಸ್ಥರ ನೇಮಕವೂ ಆಯಿತು. ಇಂತಹ ಆರಾಧನಾಲಯಗಳ ಕೈಕೆಳಗೆ ಆಯಾ ಪ್ರದೇಶದ ನಿರ್ದಿಷ್ಟ ಸಮುದಾಯವು ಸ್ಥಿರವಾಗಿ ಬೆಳೆದು ಬಂತು. ಜಾತಿ ಬಾಂಧವರ ಕುಟುಂಬ ಕಲಹ, ಸೊತ್ತಿನ ತರ್ಕ ಈ ಮೊದಲಾದ ಸಮಸ್ಯೆಗಳಿಗೆ ಇಲ್ಲಿ ಪರಿಹಾರವನ್ನು ಕಂಡುಕೊಳ್ಳಲಾಯಿತು. ಇಲ್ಲಿ ಇತ್ಯರ್ಥವಾಗದೇ ಇದ್ದರೆ ಮಾತ್ರ, ಅದು ಆಯಾ ಪ್ರದೇಶದ ಅರಸರ ಬಳಿಗೆ ಹೋಗುತ್ತಿತ್ತು. ಸಣ್ಣ- ಪುಟ್ಟ

ವಿಷಯಗಳಿಗೆ ಬಹಳಷ್ಟು ತರ್ಕಗಳು ಈ ಹಿಂದೆ ಜಾತಿಬಾಂಧವರ ನಡುವೆ ನಡೆಯುವುದು ಸಾಮಾನ್ಯವಾದ ವಿಷಯವಾಗಿತ್ತು.

ಪ್ರತಿ ಆರಾಧನಾಲಯಗಳಲ್ಲೂ ಅಚ್ಚಮ್ಮಾರರ ಹಾಗೇ ಬೆಳ್ಚಪ್ಪಾಡ (ದರ್ಶನ ಪಾತ್ರಿ)ಗಳೂ ಇದ್ದಾರೆ. ದೇವನೋ ದೇವಿಯೋ ಕೆಲ ಸಂದರ್ಭಗಳಲ್ಲಿ ಇವರ ದೇಹದಲ್ಲಿ ಆವಾಹನೆಗೊಂಡು ದರ್ಶನ ಕೊಡುವುದೂ ಇದೆ. ಇವರ ಸಂಖ್ಯೆ ಒಂದೊಂದು ಸಮುದಾಯಕ್ಕೂ ಭಿನ್ನವಾಗಿದೆ. 'ತಾನಂ' ಗಳ ಉತ್ಸವದ ಸಂದರ್ಭಗಳಲ್ಲಿ ಇವರು ದೈವಕ್ಕೆ ಸಂಬಂಧಪಟ್ಟ ಖಡ್ಗಗಳನ್ನು ಹಿಡಿದುಕೊಂಡು ನಡೆಯುತ್ತಾರೆ.

'ತಾನಂ'ಗಳಲ್ಲಿ ಆಯುಧಗಳನ್ನು ಇರಿಸಿಕೊಂಡು ಆರಾಧಿಸುವುದನ್ನೂ ಕಾಣಬಹುದು. ಕೆಲವು 'ತಾನಂ' ಗಳಲ್ಲಿ ದೈವಗಳ ಪ್ರತೀಕವಾಗಿ ಆಯುಧಗಳೇ ಪ್ರತಿಷ್ಠಾಪಿಸಲ್ಪಟ್ಟಿರುತ್ತವೆ. ಕೆಲವೆಡೆ 'ಕಳರಿ ಅಂಬಲಂ'ಗಳೂ ಕಂಡುಬರುತ್ತವೆ. (ಕೀಟೊರಿನ ಶಾಲಿಯಾ ಕ್ಷೇತ್ರವನ್ನು 'ಕಳರಿ ಅಂಬಲಂ' ಎಂದು ಹೇಳುತ್ತಾರೆ.) 'ಕಳರಿ' ಎಂದರೆ ಯುದ್ಧಾಭ್ಯಾಸವನ್ನು ಮಾಡುವ ಸ್ಥಳ ಅಥವಾ 'ಗರಡಿ' ಎಂದರ್ಥ. (ತುಳುನಾಡಿನಲ್ಲಿ 'ಗರೊಡಿ' ಎಂದು ಹೇಳುತ್ತಾರೆ.) ಆಯುಧಗಳಿಗೇ ಇಲ್ಲಿ ಪ್ರಮುಖ ಸ್ಥಾನ. ಕೆಲವು 'ತಾನಂ' ಗಳಲ್ಲಿ ಹಲವು ವಿಧದ ದಂಡಗಳು, ಖಡ್ಗಗಳು, ತ್ರಿಶೂಲಗಳು ವಿಧವಿಧದ. ಕತ್ತಿಗಳೂ ಕಾಣಲ್ಪಡುತ್ತವೆ. ಯುದ್ಧಗಳು ಸಾಮಾನ್ಯವಾಗಿದ್ದ ಆ ಕಾಲದಲ್ಲಿ ಇವು ಸುರಕ್ಷತೆಯ ದೃಷ್ಟಿಯಿಂದ ಇರಿಸಿದವುಗಳಾಗಿರಬಹುದು. ಅಥವಾ ಯುದ್ಧಾಸಕ್ತಿಯ ಹಿನ್ನೆಲೆಯಲ್ಲಿ ಯುದ್ಧ ದೇವತೆಯ ಆರಾಧನೆಯ ಒಂದು ವಿಧಾನವೂ ಇದಾಗಿರಬಹುದು. ವೈರಿಗಳು ಯಾವ ಮುಹೂರ್ತದಲ್ಲಿಯೂ ಆಕ್ರಮಿಸಬಹುದಾದ ಅಸುರಕ್ಷತೆಯ ಭಾವವು ಆ ಕಾಲದಲ್ಲಿ ಪ್ರತಿಯೊಂದು ವರ್ಗವನ್ನೂ ಬಾಧಿಸುತ್ತಿತ್ತು. ಅಂತಹ ಸಂದರ್ಭದಲ್ಲಿ ತಮ್ಮನ್ನು ರಕ್ಷಿಸುವ ಆಯುಧಗಳನ್ನು ದೈವಗಳ ಸಮಾನವಾಗಿ ಕಂಡ ಅವರು ಒಂದೊಂದು ಆಯುಧದಲ್ಲಿ ಒಂದೊಂದು ದೈವಗಳನ್ನು ಕಲ್ಪಿಸಿಕೊಂಡಿರುವ ಸಾಧ್ಯತೆಯಿದೆ. ಸಮಾಜದ ಮೇಲ್ವರ್ಗದಿಂದ ಅತ್ಯಂತ ನಿಮ್ನವರ್ಗದವರೆಗೆ ಈ ರೀತಿಯ ಆರಾಧನೆಯು ಸಾಮಾನ್ಯವಾಗಿ ಕಂಡುಬರುತ್ತದೆ.

### ಭಗವತಿ ಆರಾಧನೆ

'ದೇವಿ' ಎಂಬ ವಿಶೇಷವಾದ ಅರ್ಥದೊಂದಿಗೆ 'ಭಗವತಿ' ಎನ್ನುವ ಪದಕ್ಕೆ 'ಸ್ತ್ರೀ' ಮತ್ತು 'ತಾಯಿ' ಎಂಬ ಸಾಮಾನ್ಯ ಅರ್ಥವಿದೆ.ಪಂಪಭಾರತದ ಹತ್ತನೇ ಆಶ್ವಾಸದಲ್ಲಿ ಭೀಷ್ಮನಿಗೆ ಸೇನಾಧಿಪತಿಯ ಪಟ್ಟವನ್ನು ಕೌರವನು ಕಟ್ಟಿದಾಗ ಅಸಮಾಧಾನಗೊಂಡ ಕರ್ಣನ ಬಾಯಿಯಿಂದ ಪಂಪನು :-

"ಭಗವತಿಯೇರುವೇಳ್ವ ತೆರದಿಂ ಕಥೆಯಾಯ್ತಿವರೇರು ನೀನಿದಂ

ಬಗೆದಿವರಿನ್ನುಮಾಂತಿರಿವರೆಂದು ವಿಮೋಹಿಸಿ ವೀರಪಟ್ಟಮಂ

ಬಗೆಯದೆ ಕಟ್ಟಿದ್ದೆ ಗುರುಗಳಂ ಕುಲವೃದ್ಧರ ನಾಜಿಗುಯ್ವು ಕೆ

ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ"

ಎಂದು ಹೇಳಿಸುತ್ತಾನೆ. 'ಭೀಷ್ಮನ ಪರಾಕ್ರಮವು ಮುಗಿದುಹೋದ ಕಥೆ, ಅದು ಇನ್ನೂ ಇದೆ ಎಂದು ನೀನು ಭಾವಿಸಿಕೊಳ್ಳುವುದರಿಂದ ಯಾವ ಪ್ರಯೋಜನವೂ ಇಲ್ಲ' ಎನ್ನುವ ಈ ಮಾತಿನಲ್ಲಿ ಅದಕ್ಕಾಗಿ ಬಳಸಿದ 'ಭಗವತಿಯೇರು' ಎನ್ನುವ ಪದವು ಭಗವತಿಯ ಆವೇಶಕ್ಕೆ ಒಳಗಾಗುವವನನ್ನು ಸೂಚಿಸುತ್ತದೆ. ಭಗವತಿಯ ಆವೇಶಕ್ಕೆ ಒಳಗಾದವನು ತಾನೇ ಭಗವತಿಯಾಗಿ ಹಳೆಯ ಪರಾಕ್ರಮದ ಕತೆಯನ್ನು ಹೇಳುತ್ತಾನೆ. ಇದನ್ನೇ ಪಂಪನು ಇಲ್ಲಿ ಬಳಸಿಕೊಂಡಿದ್ದಾನೆ. ಭಗವತಿ 'ಸಮರದೇವತೆ'ಯೆಂದೂ ಇದರಿಂದ ಸ್ಪಷ್ಟವಾಗುತ್ತದೆ. ಪಂಪ ಜೀವಿಸಿದ ಹತ್ತನೇ ಶತಮಾನದಲ್ಲೇ ಭಗವತಿಯು ದರ್ಶನ ಪಾತ್ರಿಗಳ ಮೈಮೇಲೆ ಮೈದುಂಬಿ ಬರುತ್ತಿದ್ದಳು ಎಂದು ಇದರಿಂದ ತಿಳಿದುಕೊಳ್ಳಬಹುದು. ಮಾನವನಿಗೆ ಎಲ್ಲಾ ಬಂಧುಗಳಿಗಿಂತಲೂ ಶ್ರೇಷ್ಟವಾದ ಬಂಧು ತಾಯಿ . ಪ್ರಾಚೀನ ಭಾರತದಲ್ಲಿ ತಾಯಿಗೆ ವಿಶೇಷವಾದ ಸ್ಥಾನವಿತ್ತು. 'ಮಾತೃದೇವೋಭವ' ಎನ್ನುವ ಆರ್ಯೋಕ್ತಿಯಲ್ಲೇ ನಾವಿದನ್ನು ಕಾಣಬಹುದು. ವಿವಾಹದಂತಹ ಸಾಮಾಜಿಕ ವ್ಯವಸ್ಥೆ ದೃಢವಾಗಿಲ್ಲದ 'ಮಾತೃಮೂಲೀಯ ವ್ಯವಸ್ಥೆ' ಯಲ್ಲಿ ನಾವಿದರ ಬೇರುಗಳನ್ನು ಗುರುತಿಸಬಹುದು. ಪ್ರಾಚೀನ ಕಾಲದಲ್ಲಿ ಸ್ತ್ರೀ ತನಗೆ ತಾನೇ ಸ್ವತಂತ್ರಳಾಗಿದ್ದಳು. ಸೃಷ್ಟಿಕ್ರಿಯೆಗೆ ಪುರುಷನು ಕಾರಣನಾಗಿದ್ದನೇ ಹೊರತು ಅವನಿಗೆ ಯಾವುದೇ ಪ್ರಾಧಾನ್ಯತೆ ಇರಲಿಲ್ಲ. ಆದುದರಿಂದ ಹೆತ್ತು, ಹೊತ್ತು, ಮಕ್ಕಳನ್ನು ಸಾಕುವ ತಾಯಿಗೇ ವಿಶೇಷ ಸ್ಥಾನವನ್ನು ಕಲ್ಪಿಸಲಾಗಿತ್ತು. ಕ್ರಮೇಣ ಅವಳ ಸಹನಾಶಕ್ತಿ, ಸಾಮರ್ಥ್ಯ ಅಪ್ರತಿಮವಾದ ಪ್ರೀತಿ ವಾತ್ಸಲ್ಯಗಳನ್ನು ಮನಗಂಡು ಆಕೆಯಲ್ಲಿರುವ ಈ ಅದ್ಭುತವಾದ ಮಾನಸಿಕ ಶಕ್ತಿಯನ್ನು ಪರಿಭಾವಿಸಿ ಆರಾಧಿಸುವ ಪದ್ಧತಿಯು ಬಂತು. ಅಭೂತಪೂರ್ವವಾದ ಅವಳ ಜೀವಸೃಷ್ಟಿಯ ಶಕ್ತಿಯನ್ನೂ, ಪೋಷಿಸುವ ಸಾಮರ್ಥ್ಯವನ್ನು ದೈವೀಕಶಕ್ತಿಯಾಗಿ ಭಾವಿಸಲಾಯಿತು. ಆದುದರಿಂದಲೇ ಆಕೆಯ ಆ ಶಕ್ತಿಯನ್ನು ಪ್ರತಿಯೊಂದರಲ್ಲೂ ಕಂಡು 'ಶಕ್ತಿಯ' ಆರಾಧನೆ ರೂಪುತಾಳಿತು. ವಿವಿಧ ರೂಪಗಳಲ್ಲಿ 'ತಾಯಿಯ' ಆರಾಧನೆಯು ಆರಂಭವಾಯಿತು.

ಜೀವಸೃಷ್ಟಿಯನ್ನು ಭೇದಿಸಲಾರದ ಮಾನವನು ಕಂಡುಕೊಂಡ ಅತ್ಯದ್ಭುತಗಳಲ್ಲಿ ಒಂದು ಮರುಸೃಷ್ಟಿ. ಈ ಅದ್ಭುತ 'ಶಕ್ತಿ'ಯನ್ನು ಕಂಡು ಉಂಟಾದ ಆಶ್ಚರ್ಯ, ಭಯಗಳೇ ಆ ಸೃಷ್ಟಿಶಕ್ತಿಯ ಆರಾಧನೆಯನ್ನು ಮಾಡಲು ಅವನನ್ನು ಪ್ರೇರೇಪಿಸಿತು. ಮರುಸೃಷ್ಟಿಯನ್ನು ಜಗತ್ತಿಗೆ ನೀಡುವಂತಹ ಅಪರಿಮಿತ ಶಕ್ತಿಯ ಪ್ರತೀಕವೇ ಹೆಣ್ಣು. ಆಕೆಯ ಆ ಶಕ್ತಿಗೆದುರಾದ ಇನ್ನೊಂದು ಶಕ್ತಿ ಈ ವಿಶ್ವದಲ್ಲಿ ಇಲ್ಲ ಎಂದು ಪ್ರಾಚೀನಕಾಲದಿಂದಲೇ ಸಮಾಜ ಗುರುತಿಸಿದ್ದೇ 'ಸ್ತ್ರೀಶಕ್ತಿಯ' ಆರಾಧನೆಗೆ ಮೂಲವಾಯಿತು. ಸೃಷ್ಟಿಗೆ ಮೂಲಕಾರಣಳಾದ ಹೆಣ್ಣನ್ನು ದೈವೀಕತೆಯ ಪರಮೋಚ್ಚ ಸ್ಥಿತಿಯಾಗಿ ಕಾಣುವುದೇ 'ಶಕ್ತಿಆರಾಧನೆ.'

ಶೈವಮತ, ವೈಷ್ಣವಮತ, ಸೌರಮತ, ಸ್ಕಾಂದಮತ, ಗಾಣಪತ್ಯಮತ, ಶಾಕ್ತಮತಗಳನ್ನು 'ಷಣ್ಮತ' ಗಳೆಂದು ಹೇಳುತ್ತಾರೆ. ಇವುಗಳಲ್ಲಿ ವಿಶ್ವನಿಯಾಮಕ ಶಕ್ತಿಯನ್ನು 'ಸ್ತ್ರೀಶಕ್ತಿ' ಯಾಗಿ ಪರಿಗಣಿಸಿ ಆರಾಧಿಸುವುದನ್ನು 'ಶಾಕ್ತಮತ' ಎಂದು ಹೇಳಬಹುದು. 'ದೇವಿ' ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಆ ಶಕ್ತಿ "ಕಾಳಿ, ಚಾಮುಂಡಿ, ಭಗವತಿ, ನಾರಾಯಣಿ, ಗಾಯತ್ರಿ, ಆದಿಶಕ್ತಿ, ಪರಾಶಕ್ತಿ, ಮಹಾಮಾಯಿ, ದುರ್ಗಾ, ಅಂಬಿಕಾ, ಸರಸ್ವತೀ" ಹೀಗೇ ಹಲವಾರು ಹೆಸರುಗಳಿಂದಲೂ ರೂಪದಿಂದಲೂ ಆರಾಧಿಸಲ್ಪಡುತ್ತಾಳೆ. ಸೃಷ್ಟಿಕರ್ತನಾದ ಬ್ರಹ್ಮ, ಪಾಲಕನಾದ ವಿಷ್ಣು, ಲಯಕರ್ತನಾದ ಈಶ್ವರನೂ ಆ ಶಕ್ತಿಯಿಂದಲೇ ಜನಿಸಿ ಆ ಪರಾಶಕ್ತಿಯ ಪರಮಸ್ವರೂಪಗಳಾಗಿದ್ದಾರೆಂದು ಶಕ್ತಿ ಆರಾಧಕರು ನಂಬುತ್ತಾರೆ. ಅವಳೇ ಸರಸ್ವತಿ-ಲಕ್ಷ್ಮೀ-ಪಾರ್ವತಿಯೂ ಆಗಿದ್ದಾಳೆ. ಸೃಷ್ಟಿಯ ಮೂಲರಹಸ್ಯವಾದ ಸೃಷ್ಟಿಯ ರಹಸ್ಯ ಅವಳಲ್ಲಿ

ಅಡಗಿದೆ.ಅವಳನ್ನು ಮೀರಿ ಇನ್ನೊಂದು ಈ ಜಗತ್ತಿನಲ್ಲಿ ಇಲ್ಲ. ಆ ಶಕ್ತಿ ಷಟ್‌ದೇವಿಯರಾಗಿ, ಸಪ್ತ ಮತ್ತು ಅಷ್ಟಮಾತೃಕೆಯರಾಗಿ, ಅಷ್ಟ ದೇವಿಯರಾಗಿ, ಅಷ್ಟ ಯೋಗಿನಿಯಾಗಿ, ನವ ದುರ್ಗೆಯರಾಗಿ ಆರಾಧಿಸಲ್ಪಡುತ್ತಾಳೆ. ಶಕ್ತಿ ಎಂಬ ಪದ ಚೈತನ್ಯ ಸ್ವಭಾವ ಅಥವಾ ಕಾರ್ಯನಿರ್ವಹಕಾ ಸಾಮರ್ಥ್ಯದ ಸಂಕೇತವಾಗಿದೆ. ಅದು ವಿಶ್ವದ ಆದಿ ತತ್ತ್ವವೆನಿಸಿ ಅದರಿಂದಲೇ ಎಲ್ಲಾ ಬಗೆಯ ವ್ಯವಹಾರವೂ ನಡೆಯುವುದೆಂದು ಗ್ರಹಿಸಿದ್ದರು.

ಭಾರತದ ಮೂಲ ಸಂಸ್ಕೃತಿಯಲ್ಲಿ 'ಶಕ್ತಿಆರಾಧನೆ' ಗೆ ವಿಶಿಷ್ಟಸ್ಥಾನವಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ದೇವೀ ಆರಾಧನೆ ವಿವಿಧರೂಪ ಹಾಗೂ ರೀತಿಗಳಿಂದ ಬಹುಪ್ರಾಚೀನ ಕಾಲದಿಂದಲೇ ನಡೆಯುತ್ತಾ ಬಂದಿದೆ. ಕೆಲವೆಡೆ ಆಕೆ ರುದ್ರಭಯಂಕರೆಯಾದರೆ, ಕೆಲವೆಡೆ ಶಾಂತ ಸುಂದರಳಾಗಿದ್ದಾಳೆ. ಸ್ತ್ರೀಯ ಮಾನಸಿಕ ಹಾಗೂ ದೈಹಿಕ ಶಕ್ತಿಯ ವಿವಿಧ ಸ್ವರೂಪಗಳು ಈ ಶಕ್ತಿಯ ವಿವಿಧ ರೂಪಗಳಲ್ಲಿದೆ.

ಶಕ್ತಿಯ ಆರಾಧನೆಯೊಂದಿಗೆ ಶಿವಾರಾಧನೆಯೂ ಕಂಡು ಬರುತ್ತದೆ. ಶಿವ-ಶಕ್ತಿಯರು ಆ ಪರಾಶಕ್ತಿಯ ಎರಡು ವಿಭಿನ್ನ ರೂಪಗಳು. ಆದುದರಿಂದ ಶೈವಮತಾವಲಂಬಿಗಳು ಶಾಕ್ತಮತವನ್ನು ಗೌರವಿಸುತ್ತಾರೆ. ಶಾಕ್ತಮತದ ಒಂದು ಭಾಗವೇ 'ಭಗವತೀ ಆರಾಧನೆ' ಎನ್ನಬಹುದು.

ಪ್ರಾಚೀನ ಭಾರತೀಯ ಸಂಸ್ಕೃತಿ ಮಾತೃಮೂಲೀಯಲಾಗಿತ್ತು ಎನ್ನಲು ಈ ಭಗವತಿ ಆರಾಧನೆಯು ಸಾಕ್ಷಿಯಾಗುತ್ತದೆ. 'ದೇವಿ ಆರಾಧನೆ' ಕಂಡುಬರುವ ಎಲ್ಲಾ ಸ್ಥಳಗಳೂ ಒಂದು ಕಾಲದಲ್ಲಿ ಸ್ತ್ರೀ ಪ್ರಾಧಾನ್ಯತೆ ಇರುವಂತಹ ಪ್ರದೇಶವಾಗಿತ್ತು ಎಂದು ಪರಿಗಣಿಸಬಹುದು. ವಿವಾಹದಂತಹ ಸಾಮಾಜಿಕ ವ್ಯವಸ್ಥೆ ರೂಪುತಾಳಿದ ಮೇಲೆ ಸಮಾಜದಲ್ಲಿ ಪುರುಷನು ಆಧಿಪತ್ಯವನ್ನು ಪ್ರತಿಸ್ಥಾಪಿಸಲು ಪ್ರಾರಂಭಿಸಿದ ಹಾಗೂ ಪುರುಷದೇವತೆಗಳು ರೂಪುಗೊಳ್ಳತೊಡಗಿದರು. ಸಂಸಾರದೊಳಗೆ ಹೆಣ್ಣು ಬಂಧಿತಳಾದಳು. ಪಿತೃಮೂಲೀಯ ವ್ಯವಸ್ಥೆ ರೂಪುತಾಳಿತು.

ಕೇರಳದ ತರವಾಡು ಮನೆಗಳಲ್ಲಿ ಈಗಲೂ ಸ್ತ್ರೀಯೇ ಪ್ರಧಾನಳಾಗಿದ್ದಾಳೆ. ಅವಳನ್ನು ವಿವಾಹವಾದವನು ಅವಳ ಮನೆಯಲ್ಲೇ ಇತ್ತೀಚಿನವರೆಗೂ ಬಂದು ಇರಬೇಕಾಗಿತ್ತು. ಅವನಿಗೆ ಅಲ್ಲಿ ಯಾವುದೇ ಪ್ರಾಧಾನ್ಯತೆಯಿರಲಿಲ್ಲ. ಆ ತರವಾಡು ಮನೆಗಳಲ್ಲಿ ಆರಾಧಿಸಲ್ಪಡುವ ದೈವ ದೇವತೆಗಳೂ ಸ್ತ್ರೀಯರೇ ಆಗಿದ್ದಾರೆ. ಪುರುಷನಿಗೆ ಪ್ರಾಧಾನ್ಯತೆ ನೀಡದ ಕೇರಳದ ಈ ಕೌಟುಂಬಿಕ ವ್ಯವಸ್ಥೆ ಪ್ರಾಚೀನ ಭಾರತದ ಸಾಮಾಜಿಕ ವ್ಯವಸ್ಥೆಯೆಡೆಗೆ ಬೆಟ್ಟುಮಾಡಿ ತೋರಿಸುತ್ತದೆ. ಮಾತೃಮೂಲೀಯ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಂತಹ ಕೇರಳದಲ್ಲಿ 'ಭಗವತಿ ಆರಾಧನೆ' ಪ್ರಧಾನವಾಗಿ ಕಂಡುಬರುವುದೂ ಇದೇ ಕಾರಣದಿಂದ ಎನ್ನಬಹುದು.

ಕೇರಳದ ಉದ್ದಕ್ಕೂ ವಿವಿಧ ಜಾತಿ ಪಂಗಡಗಳು, ಬೇರೆಬೇರೆ ಹೆಸರಿನಿಂದ 'ಭಗವತಿ'ಯನ್ನು ಆರಾಧಿಸುತ್ತವೆ. ಕೇರಳದ ಉತ್ತರಭಾಗವಾದ ಕಾಸರಗೋಡಿನಲ್ಲಿಯೂ ನಾವಿದನ್ನೇ ಕಾಣಬಹುದು. ದಕ್ಷಿಣಕನ್ನಡದ ದಕ್ಷಿಣಭಾಗಗಳವರೆಗೂ ಈ ಭಗವತೀ ಆರಾಧನೆ ವ್ಯಾಪಿಸಿದೆ. ಭಗವತೀ ಆರಾಧನಾಕೇಂದ್ರಗಳನ್ನು 'ಸ್ಥಾನ' ಅಥವಾ 'ಕ್ಷೇತ್ರಂ' ಎಂದು ಸಾಮಾನ್ಯವಾಗಿ ಕರೆಯುತ್ತಾರೆ. ಇಂತಹ ಕ್ಷೇತ್ರಗಳಲ್ಲಿ ಆರಾಧಿಸಲ್ಪಡುವ ಭಗವತಿಯರು ವಿಭಿನ್ನ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಉತ್ತರ ಕೇರಳದ ತೀರ ಪ್ರದೇಶದಲ್ಲಿ ಕಂಡುಬರುವ ಭಗವತಿಯರು ಸಮುದ್ರದ ಮೂಲಕವಾಗಿ ಹಡಗಿನಲ್ಲಿ ಬಂದವರು ಎಂದು ಹೇಳಲಾಗುತ್ತದೆ. ಈ ಭಗವತಿಯರಲ್ಲಿ ಕಷ್ಟಕಾಲದಲ್ಲಿ ರಕ್ಷಿಸಿದ ದೇವಿಯರಿಂದ ಆರಂಭವಾಗಿ, ವಿಶೇಷ ಸಾಧನೆಗಳನ್ನು

ಮಾಡಿದ ರಾಜಕುಮಾರಿಯರೂ, ಸಾಮಾನ್ಯ ಸ್ತ್ರೀಯರೂ ಸೇರಿದ್ದಾರೆ. ಮನುಷ್ಯನ ಅಸುರೀಪ್ರವೃತ್ತಿಗೊಳಗಾಗಿ ದುರಂತವನ್ನಪ್ಪಿದ ಅಸಾಹಾಯಕ ಸ್ತ್ರೀಯರೂ ಇದ್ದಾರೆ. ಮಾನವರಾಗಿ ವಿಶೇಷ ಶಕ್ತಿಗಳನ್ನು ಸಂಪಾದಿಸಿ ದೈವಗಳಾದವರಂತೇ, ದುರಂತ ಸಾವಿಗೆ ತುತ್ತಾದ ಅಸಹಾಯಕ ಹೆಣ್ಣುಗಳು ಸಾವಿನ ನಂತರ 'ಶಕ್ತಿ'ಗಳಾಗಿ ಸೇಡು ತೀರಿಸಿದ್ದೂ ಇದೆ. ಇವರು ಭಗವತಿ, ದೇವಿ, ಚಾಮುಂಡಿ ಎಂದು ವಿಧ ವಿಧ ರೂಪಗಳಿಂದ ಆರಾಧಿಸಲ್ಪಡುತ್ತಾರೆ. ಪ್ರತೀ ದೇವಿಯರ ಹಿಂದಿನ ಉಪನಾಮವು ಸೂಚ್ಯವಾಗಿ ಅದರ ಮೂಲವನ್ನೂ, ಐತಿಹ್ಯವನ್ನೂ ಸೂಚಿಸಿಕೊಡುವುದು ಒಂದು ವೈಶಿಷ್ಟ್ಯವಾಗಿದೆ.

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಭಾಗದ ಶಾಲಿಯರು ಭಗವತೀ ಆರಾಧಕರಾಗಿರಲು ಮೂಲ ಕಾರಣ ಅವರು ಕೇರಳದ ಮುಖಾಂತರವಾಗಿ ಹಾದುಬಂದುದೇ ಆಗಿದೆ. ಮೂಲತಃ ಸ್ತ್ರೀಶಕ್ತಿಯ ವಿವಿಧ ರೂಪಗಳ ದೇವೀ ಆರಾಧಕರಾದ ಶಾಲಿಯರು ಕೇರಳಕ್ಕೆ ಬಂದಾಗ ತಮ್ಮ ಆಶ್ರಯದಾತರು ಆರಾಧಿಸುವ ದೈವಗಳನ್ನೇ ಆರಾಧಿಸಿದರು. ಈ ಹಿನ್ನೆಲೆಯಲ್ಲಿ ಭಗವತಿಯು ದೇವಿಯ ಇನ್ನೊಂದು ರೂಪವಾದುದರಿಂದ ಆ ಭಗವತಿಯೇ ಇವರ ಪ್ರಧಾನ ದೈವವಾದಳು ಎನ್ನಬಹುದು. ಇವರು ಆರಾಧಿಸುವ ಭಗವತಿಯರು ಚೂಳಿಯಾರ್ ಭಗವತಿ, ಚೀರುಂಬಾ ಭಗವತಿ, ಕುರುಂಬಾ ಭಗವತಿ (ಇವೆರಡೂ ಒಂದೇ ಎನ್ನುತ್ತಾರೆ), ಎರಿಂಞಿಕಲ್ ಭಗವತಿ, ಭಗವತಿ, ಚುಟಿಲಿ ಭಗವತಿ, ಆರ್ಯಕ್ಕರ ಭಗವತಿ, ಅಷ್ಟಮಿಚ್ಚಾಲ್ ಭಗವತಿ, ಪೋರ್ಕಲಿ ಭಗವತಿ, ಅರಯಿಲ್ ಭಗವತಿ. ದೇವಿಯ ಇತರ ರೂಪಗಳಾದ ಚಾಮುಂಡಿ, ಪಿಲಿ ಚಾಮುಂಡಿ, ವೀರ ಚಾಮುಂಡಿ, ಕುದುರಕ್ಕಾಳಿಯಮ್ಮ, ಸೋಮೇಶ್ವರಿ, ಮೂವಾಟಿಂಕುಟಿ ಚಾಮುಂಡಿಯರನ್ನೂ ಇವರು ಆರಾಧಿಸುತ್ತಾರೆ. (ಮೂವಾಟಿಂಕುಟಿ ಚಾಮುಂಡಿಯೂ ಚಂದ್ರಗಿರಿಯ ದಕ್ಷಿಣದಲ್ಲಿ ಭಗವತಿಯಂತೇ ಶಾಲಿಯರ ಪ್ರಧಾನ ದೇವತೆ). ಚಂದ್ರಗಿರಿ ಹೊಳೆಯ ಉತ್ತರದ ತೆರುಗಳಲ್ಲಿ ಪ್ರಧಾನ ದೈವವು ಚೀರುಂಬಾ ಭಗವತಿ. ಈಕೆಯ ಉದ್ಭವದ ಕಥೆಯು ತೋಟ್ಟಂ ನಲ್ಲಿ ಈ ರೀತಿ ಇದೆ :–

"ಶ್ರೀ ಮಹಾದೇವನ ಮೂರನೆಯ ಕಣ್ಣಿನಿಂದ ಹುಟ್ಟಿಬಂದವರು ಚೀರುಂಬೆಯರು. ಇವರಲ್ಲಿ ಮೂತ್ತೆ ಭಗವತೀ ಹಿರಿಯವಳು, ಇಳಿಯ ಭಗವತೀ ಕಿರಿಯವಳು. ಮಹಾದೇವನು ಆ ಮಕ್ಕಳನ್ನು ಎತ್ತಿದಾಗ ಅವನಿಗೆ ಸಿಡುಬು ತಗಲುತ್ತದೆ. ಆ ಮಕ್ಕಳನ್ನು ತಂದೆಯಾದ ಮಹಾದೇವನು ಕೆಳಲೋಕಕ್ಕೆ ಕಳುಹಿಸುತ್ತಾನೆ. ಅವರೊಂದಿಗೆ ಕಂಡಕರ್ಣ (ಘಂಟಾಕರ್ಣ) ಮತ್ತು ದಂಡರಾಜರನ್ನೂ ಕಳುಹಿಸುತ್ತಾನೆ. ಈ ದೇವತೆಗಳಿಗೆ ಹಾಲ್ಗಡಲನ್ನು ದಾಟಬೇಕು. ನೂರೊಂದು ವರ್ಷ ಪ್ರಾಯದ ತಚ್ಚನ್ ಎಂಬವನನ್ನು ಅವರು ಯುವಕನನ್ನಾಗಿ ಮಾಡಿದರು. ಅವನು ನಿರ್ಮಿಸಿದ ಮರದ ಹಡಗಿನಲ್ಲಿ ಅವರು ಯಾತ್ರೆ ಹೊರಟರು. ಹಡಗು ತೀರಕ್ಕೆ ಬರಲು ಸಾಧ್ಯವಿಲ್ಲದ ಕಾರಣದಿಂದ ಮೊಗವೀರರ ದೋಣಿಯಲ್ಲಿ ಹತ್ತಿ ದಡಕ್ಕೆ ಬಂದರು."

ಚೀರುಂಬಾ ಭಗವತಿ :– ಈ ದೈವವನ್ನು ಚೀರಿಮ್ಮ, ಚೀರುಂಬಾ, ಶ್ರೀ ಕುರುಂಬಾ, ಶ್ರೀ ಕುರು ಲಂಬಾ ಇತ್ಯಾದಿಯಾಗಿ ಕರೆಯುವುದಿದೆ. ದಾರುಕಾಸುರನ ಸಂಹಾರಕ್ಕಾಗಿ ಶಿವನ ಸಂಕಲ್ಪದಂತೆ ಹುಟ್ಟಿ ಬಂದವಳು ಈಕೆ ಎಂಬ ಕಥೆ ಪ್ರಸಿದ್ಧವಾಗಿದೆ. ಶಿವನ ಬಿಸಿ ಕಣ್ಣೀರ ಬಿಂದು ಆತನ ತೊಡೆಗೆ ಬಿದ್ದು ಕೆಂಪಾದ ಕುರು (ಬೆಂಗುರು) ಆಗಲು ಅಲ್ಲಿಂದ ಮಂಗಳವಾರ ಉದ್ಭವವಾದಳು ಎಂಬ ಹೇಳಿಕೆಯಿದೆ. ದಾರುಕನ ಸಂಹಾರದಿಂದ ಅತಿಯಾದ ದಾಹಕ್ಕೆ ಒಳಗಾದ ಆಕೆಗೆ ಪ್ರಾಣ ಬಲಿಯನ್ನು ನೀಡಿದರೂ ದಾಹವಡಗದಿರಲು ಈಶ್ವರನು ತನ್ನ ಕಿರುಬೆರಳನ್ನು ಕಡಿದು ರಕ್ತವನ್ನು ಅರ್ಪಿಸಿದನು. ಆಗ ದೇವಿಯು ಶಾಂತ ಪ್ರಸನ್ನೆಯಾದಳು. ಚೀರುಂಬಾ ಭಗವತಿಯ ಮೂಲಸ್ಥಾನ ಕೊಡುಂಗಲ್ಲೂರು

ಎಂಬುದು ಜನಜನಿತ. ಶ್ರೀ ಕುರುಂಬಾ ಅಥವಾ ಕೊಡಂಗಲ್ಲೂರು ಭಗವತಿಯ ಕಥೆಗೂ ತಮಿಳು ಮಹಾಕಾವ್ಯ 'ಶಿಲಪ್ಪದಿಕಾರಂ' ಇದರ ನಾಯಕಿ ಕಣ್ಣಕಿಗೂ ಸಂಬಂಧವಿರುವುದನ್ನು ಗಮನಿಸಲಾಗಿದೆ. ಚೀರುಂಬಾ ಭಗವತಿ ಪಾತ್ರಿಯ ಮೇಲೆ ಆವೇಶಗೊಳ್ಳುವುದು ಹೊರತು ಈ ದೇವಿಗೆ ತೆಯ್ಯಂ ಕಟ್ಟುವ ವಾಡಿಕೆಯಿಲ್ಲ. ಒಂದು ವೇಳೆ ತೆಯ್ಯಂ ಕಟ್ಟುವ ಸಂದರ್ಭ ಬಂದರೆ ಉಗ್ರದೇವತೆಯಾದ ಇವಳಿಗೆ ನರಬಲಿ ಕೊಡಬೇಕಾಗಿ ಬರಬಹುದು ಎಂಬ ಹೇಳಿಕೆ ಇದೆ. (ಅಮೃತ ಸೋಮೇಶ್ವರ ಭಗವತೀ ಆರಾಧನೆ ಪುಟ ೬೨). ಶಾಲಿಯಾ ಕ್ಷೇತ್ರಗಳಲ್ಲಿ ಚೀರುಂಬಾ ಭಗವತಿಯನ್ನು 'ಮೂತೆ ಭಗವತಿ' ಎಂದು ಹೇಳುತ್ತಾರೆ.

**ಇಳಯ ಭಗವತಿ** :- ಶಾಲಿಯಾ ಕ್ಷೇತ್ರಗಳಲ್ಲಿ ಚೀರುಂಬಾ ಭಗವತಿಯನ್ನು ಸಾತ್ವಿಕ ರೀತಿಯಿಂದ ಪೂಜಿಸಲಾಗುತ್ತದೆ. ಚಂದ್ರಗಿರಿಯ ಉತ್ತರದ ಶಾಲಿಯಾ ಸ್ಥಾನಗಳಲ್ಲಿ ಚೀರುಂಬಾ ಭಗವತಿಯೊಂದಿಗೆ ಇಳೆಯ ಭಗವತಿಯನ್ನೂಆರಾಧಿಸಲಾಗುತ್ತದೆ. ಈ ಇಳಯ ಭಗವತಿಯನ್ನು 'ತಂಗಿ ಭಗವತಿ' ಎಂದೂ ಹೇಳುತ್ತಾರೆ. ('ಇಳಯ' ಎಂದರೆ 'ಸಣ್ಣ' ಎಂದರ್ಥ). ಹಡಗಿನಲ್ಲಿ ಕುಳಿತು ಚೀರುಂಬೆಯು ಕೆಳಲೋಕಕ್ಕೆ ಬರುವಾಗ ಕ್ಷೀರಸಾಗರವನ್ನು ದಾಟಿ ಬರಬೇಕಾಗುತ್ತದೆ. ಆಗ ಆ ಸಾಗರದಲ್ಲಿ ಶಂಖಪಾಲನೆಂಬ ನಾಗನು ಇದಿರಾಗಲು ಆ ನಾಗನ ಬಳಿಯಿದ್ದ ವಿಶೇಷವಾದ ಶಂಖವನ್ನು ದೇವಿಯು ಕೇಳಿದಳು. ಆತನು ಕೊಡದಿದ್ದಾಗ ದೇವಿಯು ಕೋಪಗೊಂಡು ಆತನೊಡನೆ ಯುದ್ಧ ಮಾಡಿ ಸೋಲಿಸಿ, ಆ ಶಂಖವನ್ನು ವಶಪಡಿಸಿಕೊಂಡಳು. ಆಗ ಕ್ಷೀರಸಾಗರದ ಮಧ್ಯದಿಂದ ಲಕ್ಷ್ಮಿಯು ಮೇಲೆದ್ದು ಬರಲು ಚೀರುಂಬೆಯು 'ನೀನು ನನ್ನ ತಂಗಿ ಬಾ' ಎಂದು ಕರೆದಳು. ಆಗ ಲಕ್ಷ್ಮಿಯು 'ದಾರುಕಾಸುರನ ಸಂಹಾರಿಣಿಯಾದ ನೀನು ಎಲ್ಲವನ್ನೂ ಸೇವಿಸುತ್ತೀ. ನನಗೆ ಶುದ್ಧಾಚಾರವಾಗಬೇಕು. ನಿನ್ನೊಂದಿಗೆ ನನಗೆ ಸರಿಹೊಂದದು' ಎಂದಳು. ಆಗ ಚೀರುಂಬೆಯು 'ತಂಗೀ ನಾವು ಎಲ್ಲಿ ಹವಿರ್ಭಾವ ಸ್ವೀಕರಿಸುವುದಾದರೂ ನನ್ನ ಬಲಭಾಗದಲ್ಲಿ ನಿನ್ನನ್ನು ಇರಿಸಿ ನಿನಗೆ ನನಗಿಂತ ಮೊದಲು ಹವಿರ್ಭಾವವನ್ನು ಕೊಟ್ಟು ಮತ್ತೆ ನಾನು ಸ್ವೀಕರಿಸುತ್ತೇನೆ. ನಾವಿಬ್ಬರೂ ಭೂಲೋಕದಲ್ಲಿ ಸಂಚರಿಸಿ ಶಾಂತವೂ ರೌದ್ರವೂ ಆಗಿ ಶಿಷ್ಟರ ಪಾಲನೆಯನ್ನೂ ದುಷ್ಟರ ನಿಗ್ರಹವನ್ನೂ ಮಾಡೋಣ' ಎಂದಳು. ಹೀಗೆ ಎಳೆಯ ಭಗವತಿಯಾದ ಲಕ್ಷ್ಮಿಯು ಚೀರುಂಬಾ ಭಗವತಿಯೊಂದಿಗೆ ಸೇರಿಕೊಂಡಳು. (ಶ್ರೀ ಭಗವತೀ ಮಹಾತ್ಮೆ ಪುಟ ೨೨) ಕಾಸರಗೋಡು ಭಾಗದಲ್ಲಿ ಇಳಯ ಭಗವತಿಯ ಗುಡಿಯು ಚೀರುಂಬಾ ಭಗವತಿಯ ಬಲಭಾಗದಲ್ಲಿರುತ್ತದೆ. ಚೀರುಂಬಾ ಭಗವತಿಯನ್ನು ಮೂತೆ ಎಂದೂ ಕರೆಯುತ್ತಾರೆ. ಮಾತ್ರವಲ್ಲತೆ ಎಳೆಯ ಭಗವತಿಯ ಗುಡಿಯು ಮೂತೆ ಭಗವತಿಯ ಗುಡಿಗಿಂತ ಎತ್ತರವಾಗಿರಬೇಕು. ಒಂದೆ ಕಾಸರಗೋಡಿನ 'ತಾನಂ' ನಲ್ಲಿ ಎಳೆಯ ಭಗವತಿಯ ಗುಡಿಯು ಮೂತೆ ಭಗವತಿ(ಚೀರುಂಬಾ)ಯ ಗುಡಿಗಿಂತ ಚಿಕ್ಕದಾದಾಗ ಸಮಸ್ಯೆಗಳು ಹುಟ್ಟಿಕೊಂಡವಂತೆ. ಅನಂತರ ಜ್ಯೋತಿಷಿಗಳಿಂದ 'ಪ್ರಶ್ನೆ' ಹಾಕಿ ನೋಡಿ, ಸಮಸ್ಯೆಗೆ ಇದೇ ಕಾರಣವೆಂದರಿವಾಗಿ ಇಳಯ ಭಗವತಿಯ ಗುಡಿಯನ್ನು ಎತ್ತರಿಸಲಾಯಿತು ಎಂದು ಸ್ಥಳೀಯರು ಹೇಳುತ್ತಾರೆ.

ಕೆಲವೆಡೆ 'ಇಳಯ ಭಗವತಿ' 'ಸರಸ್ವತಿ' ಎಂದೂ ಮೂತೆ ಭಗವತಿ ಲಕ್ಷ್ಮೀ ಎಂದೂ 'ಚೀರುಂಬಾ ಭಗವತಿ' ಪಾರ್ವತಿಯೆಂದೂ ಕೆಲವರು ನಂಬುತ್ತಾರೆ. ವೈದಿಕಾರಾಧನೆಯಲ್ಲಿ ಸ್ತ್ರೀ ಶಕ್ತಿಯ ಮೂಲದೇವತೆಗಳು ಇವರಾದ ಕಾರಣ ಈ ರೀತಿಯ ನಂಬಿಕೆಯು ಬೆಳೆದು ಬಂದಿರುವ ಸಾಧ್ಯತೆಯಿದೆ. ಜಾನಪದ ಆರಾಧನೆಯ 'ವೈದಿಕೀಕರಣ'ವು ಸಮಾಜದಲ್ಲಿ ಸಾಮಾಜಿಕ ಶ್ರೇಷ್ಠತೆಯನ್ನು ಸಂಪಾದಿಸಲೋಸುಗವಾಗಿ ನಡೆಯುತ್ತದೆ. ಇದರಿಂದ ಜಾನಪದದ ಮೂಲದೇವತೆಗಳು ಈ ರೀತಿಯಲ್ಲಿ ಬದಲಾಗುವುದೂ ಇದೆ.



ಅಕ್ಕ ಮಾತೆ ಭಗವತಿ ದೇವಸ್ಥಾನ



ತಂಗಿ (ಇಳಯ) ಭಗವತಿ ದೇವಸ್ಥಾನ



ಶ್ರೀ ಚೂಲಿಯಾರ್ ಭಗವತಿ




ಮೂತೆ (ಅಕ್ಕ) ಭಗವತಿ




ಇಳಯ (ತಂಗಿ) ಭಗವತಿ



ಕಾಡಾರ ಕುಳಂಜರ ಭಗವತಿ



ಮೂವಾಳು ಕುಟಿ ಭಗವತಿ

## ೨. ಇತರ ದೈವಗಳ ಆರಾಧನೆ.

ಪಟ್ಟುವದಿಂದ ಪಣಂಬೂರುವರೆಗಿನ ಶಾಲಿಯಾರ ಆರಾಧನಾ ಕೇಂದ್ರಗಳಾದ 'ಕ್ಷೇತ್ರಂ' ಅಥವಾ 'ತಾನಂ'ಗಳಲ್ಲಿ ಪ್ರಧಾನ ಆರಾಧನ ದೇವತೆ ಸ್ತ್ರೀ ಸ್ವರೂಪಿಣಿಯೇ ಆಗಿದ್ದಾಳೆ. ಹೆಚ್ಚಿನ ಕಡೆ ಆಕೆ 'ಭಗವತಿ'ಯಾಗಿಯೇ ವಿವಿಧ ಹೆಸರುಗಳಿಂದ ಆರಾಧಿಸಲ್ಪಡುತ್ತಾಳೆ. ಮತ್ತೆ ಕೆಲವೆಡೆ ಮೂವಾಟಿಂಕುಟಿ ಚಾಮುಂಡಿ, ಸೋಮೇಶ್ವರಿ, ಕುದಿರಕ್ಕಾಳಿಯಮ್ಮ ಮತ್ತು ಪಣಂಬೂರಿ (ಮಂಗಳೂರು)ನಲ್ಲಿ ಧೂಮಾವತಿಯಾಗಿ ಆರಾಧಿಸಲ್ಪಡುತ್ತಾಳೆ. ಈ ದೇವಿಯರೊಂದಿಗೆ ವೇಟ್ಟಕ್ಕೊರುಮಗನ್, ಪಡವೀರನ್, ವಿಷ್ಣುಮೂರ್ತಿ, ಗುಳಿಗ ಮೊದಲಾದ ಮಲಯಾಳೀ ದೈವಗಳೂ, ಮಲರಾಯ, ಮೈಸಂದಾಯ, ಮುಂಡತ್ತಾಯ, ಪಂಜುರ್ಲಿ ಮೊದಲಾದ ತುಳು ದೈವಗಳೂ ಆರಾಧಿಸಲ್ಪಡುತ್ತದೆ.

**ಮೂವಾಟಿಂಕುಟಿ ಚಾಮುಂಡಿ :-** ಭಗವತಿಯ ಅನಂತರ ಆರಾಧನೆಯಲ್ಲಿ ಎರಡನೆಯ ಸ್ಥಾನವು ಮೂವಾಟಿಂಕುಟಿ ಚಾಮುಂಡಿಗೆ ಸಲ್ಲುತ್ತದೆ. ಕೆಲವೆಡೆ ಈಕೆಯನ್ನು ಶಾಲಿಯಾರ ಪ್ರಧಾನದೇವತೆ ಎಂದೇ ಗುರುತಿಸಲಾಗಿದೆ. ಈ ದೇವತೆಯ ಉದ್ಭವದ ಬಗೆಗಿನ ಐತಿಹ್ಯ ಹೀಗಿದೆ :- ಚಂದ್ರಗಿರಿ ಹೊಳೆಯ, ದಕ್ಷಿಣದಲ್ಲಿ 'ಕೋಟಿಕುಳಂ'ನ ತ್ರಿಕ್ಕೆಣ್ಣಾವು ಕ್ಷೇತ್ರದ 'ಎಡವನ ' ಎನ್ನುವ ತಂತ್ರಿಯೂ ಉಳಿಯತ್ತಡ್ಕ (ಕಾಸರಗೋಡಿನ ಮಧೂರಿನ ಬಳಿಯ ಊರು ) ವಾವುನ್ನೋರ್ ಅಥವಾ ಬಾವುನ್ನೋರೂ (ಬ್ರಾಹ್ಮಣ) ಇದೇ ಬಾವುನ್ನೋರಿಗೂ ಕುಂಬಳೆಯ 'ತಾನಂ' ನ ಓರ್ವ ಚೆಟ್ಟ್ಯಾರ್ಚನಿಗೂ ಮಾಂತ್ರಿಕ ಸ್ನೇಹ ಸಂಬಂಧವಿತ್ತು ಎನ್ನಲಾಗಿದೆ. ಇವರಿಬ್ಬರೂ ಮಂತ್ರವಿದ್ಯೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದವರಾಗಿದ್ದರು. ತ್ರಿಕ್ಕಣ್ಣಾವು ಕ್ಷೇತ್ರದ ಪೂಜಾದಿಕರ್ಮಗಳನ್ನು ಆರಾರು ತಿಂಗಳು ಇವರು ಕ್ರಮವಾಗಿ ನಡೆಸುತ್ತಾ ಬಂದಿದ್ದರು. ಈರ್ವರೂ ಒಂದು ಕಾಲದಲ್ಲಿ ಸ್ನೇಹಿತರಾಗಿದ್ದರು. ಹೀಗಿರಲು ಅವರಿಬ್ಬರಲ್ಲೂ ಯಾವುದೋ ಕಾರಣದಿಂದ ವೈಮನಸ್ಸು ಉಂಟಾಗಿ ಪರಸ್ಪರ ಹಗೆ ತೀರಿಸುವುದರೆಡೆಗೆ ಗಮನಹರಿಯಿತು. ಇದಕ್ಕಾಗಿ ಅವರು ಮಂತ್ರವಿದ್ಯೆಯನ್ನೇ ಅಸ್ತ್ರವನ್ನಾಗಿ ಬಳಸಿಕೊಂಡರು. ತಮ್ಮ ಮಂತ್ರಶಕ್ತಿಯಿಂದ ಆಚೆಗೂ ಈಚೆಗೂ ಅವರು ಮೂರ್ತಿಗಳನ್ನು ಕಳುಹಿಸತೊಡಗಿದರು. ಓರ್ವ ಕಳುಹಿಸಿದ ಮೂರ್ತಿಯನ್ನು ಮತ್ತೋರ್ವ ಕಟ್ಟುತ್ತಿದ್ದನಂತೆ. ಒಮ್ಮೆ ಉಳಿಯತ್ತಡ್ಕದ ಬಾವುನ್ನೋರ್ 'ಆತ್ಮಸ್ವರೂಪಿಣಿ' ಎನ್ನುವ ಶಕ್ತಿಯನ್ನು ಎಡವನ ತಂತ್ರಿಯ ಬಳಿಗೆ ಕಳುಹಿಸಲು ಎಡವನ ತಂತ್ರಿ ಅದನ್ನು ಒಂದು ತಾಮ್ರದ ತಂಬಿಗೆಯಲ್ಲಿ ಬಂಧಿಸಿ, ಮೂರಾಳು (ಮೂವಾಳಂ) ಆಳದ ಹೊಂಡದಲ್ಲಿ ಅದನ್ನು ಹುಗಿದಿಟ್ಟ. ಅಲ್ಲಿಂದ ತಂಬಿಗೆಯನ್ನು ಒಡೆದು ಹೊರಬಂದ ದೇವಿಯನ್ನು ಮತ್ತೆ ತಂತ್ರಿಗೆ ನಿಯಂತ್ರಿಸಲು ಸಾಧ್ಯವಾಗಲಿಲ್ಲ. ಹುಗಿದಿಟ್ಟ ಹೊಂಡದಿಂದ ಮೂರು ಬಾಳು (ಖಡ್ಗ)ಗಳು ಹೊರಬಂತೆಂದು ಆದುದರಿಂದ ಮೂವಾಳ್‌ಕುಟಿ (ಮೂರುಬಾಳಿನ ಹೊಂಡ) ಎನ್ನುವ ಹೆಸರು ಬಂತೆಂದೂ ಹೇಳುತ್ತಾರೆ. ಹಾಗೇ ಮೂರು ಆಳಿನಷ್ಟು ಆಳದ ಹೊಂಡದಿಂದ ಎದ್ದು ಬಂದವಳು ಎಂದು ಮೂವಾಟಿಂಕುಟಿ ಚಾಮುಂಡಿ ಎಂಬ ಹೆಸರು ಬಂತೆಂದೂ ಐತಿಹ್ಯ ಹೇಳುತ್ತದೆ. ದೇವಿ ಬೆನ್ನಟ್ಟಿ ಬರುವಾಗ ಭಯಗೊಂಡ ತಂತ್ರಿ ತ್ರಿಕ್ಕಣ್ಣಾವಿನ ಶಿವಕ್ಷೇತ್ರಕ್ಕೆ ಓಡಿಬಂದು ಶಿವಲಿಂಗವನ್ನು ಗಟ್ಟಿಯಾಗಿ ಹಿಡಿದುಕೊಂಡನು. ವಿಗ್ರಹದಿಂದ ಆತನನ್ನು ಬೇರ್ಪಡಿಸಲಾಗದ ದೇವಿ ಕ್ಷೇತ್ರದ ಒಂದು ಭಾಗವನ್ನೇ ಅಗ್ನಿಗಾಹುತಿ ಮಾಡತೊಡಗಲು, ದೇವಿಯ ಶಕ್ತಿಯನ್ನರಿತ

ಇನ್ನೊಂದೆಡೆಗೆ ಬಂದು ನೆಲಸಿದ ಐತಿಹ್ಯಗಳು ಹಲವಾರು ಕ್ಷೇತ್ರಗಳಲ್ಲಿ ಲಭ್ಯವಾಗಿದೆ. ಮನುಷ್ಯನಂತೇ ಆತ ನಂಬಿಕೊಂಡ ದೇವತೆಗಳೂ ವಲಸೆ ಹೋಗುತ್ತವೆ. ಕ್ಷೇತ್ರದಿಂದ ಕ್ಷೇತ್ರಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಕೆಲವೊಮ್ಮೆ ರಾಜ್ಯದಿಂದ ರಾಜ್ಯಕ್ಕೂ ಈ ರೀತಿ ದೇವತೆಗಳು ವಲಸೆ ಹೋಗುವುದಿದೆ.) ಇದೇ ದೇವಿ ಮುಂದೆ ಒಂದು ಯುದ್ಧದಲ್ಲಿ ನಾಯರ್ ಸೈನಿಕನ ವೇಷದಲ್ಲಿ ಇಳಂಕುಟ್ಟಿ ಸ್ವರೂಪ (ಹಳೆಯ ಕೇರಳದ ಒಂದು ರಾಜ್ಯ)ದ ರಾಜರಿಗೆ ಸಹಾಯವನ್ನು ಮಾಡಿ ವಿಜಯವನ್ನು ಒದಗಿಸಿಕೊಟ್ಟಳು ಎನ್ನಲಾಗಿದೆ. ಅಂದು ನಡೆದ ಯುದ್ಧವನ್ನು ನೀಲೇಶ್ವರದ 'ಅಞೂಟ್ಟಂಬಲಂ'ನ ಶ್ರೀ ಪೋರ್ಕಲಿ ಭಗವತಿಗೆ ಆಕೆ 'ಪೋರಾಟ್' ರೂಪದಲ್ಲಿ ತೋರಿಸಿದಳೆಂದೂ, ಅದನ್ನೇ ಇಂದೂ ಶಾಲಿಯರು 'ಪೊರಾಟ್'ನ ಮೂಲಕವಾಗಿ ಅನುಕರಿಸುತ್ತಾರೆಂದೂ 'ಶಾಲಿಯರ ಪೊರಾಟ'ನ ಹಿಂದೆ ಒಂದು ಐತಿಹ್ಯವಿದೆ. ಈ ಯುದ್ಧದಲ್ಲಿ ಆಕೆಯೊಂದಿಗೆ ಸೈನಿಕರಾಗಿ ಇದ್ದವರು ಶಾಲಿಯರೇ ಆಗಿದ್ದರು. ಆದುದರಿಂದಲೇ ಇವರ ಆರಾಧ್ಯದೈವವಾಗಿ ಮೂವಾಟಿಂಕುಟಿ ಚಾಮುಂಡಿ ಚಂದ್ರಗಿರಿ ತೀರದ ದಕ್ಷಿಣದಲ್ಲಿ ಆರಾಧಿಸಲ್ಪಡುತ್ತಾಳೆ. ಉತ್ತರದ ತೆರು ಕ್ಷೇತ್ರಗಳಲ್ಲೂ 'ಚಾಮುಂಡಿ' ಅಥವಾ 'ಪಿಲಿಚಾಮುಂಡಿ' ಉಪದೈವವಾಗಿ ಆರಾಧಿಸಲ್ಪಡುತ್ತಾಳೆ.

ವೀರವನಿತೆಯೋರ್ವಳ ನಾಯಕತ್ವದಲ್ಲಿ ಹೋರಾಟವೊಂದು ಹಿಂದೆ ನಡೆದಿರಬಹುದು. ಆಕೆಯ ಅಭೂತಪೂರ್ವ ಸಾಮರ್ಥ್ಯವನ್ನು ಕಂಡು ಆಕೆಯನ್ನೇ ಕ್ರಮೇಣ ದೇವಿ ಎಂದು ಆರಾಧಿಸಿರುವ ಸಾಧ್ಯತೆಯಿದೆ. ಮನುಷ್ಯನ ಕಲ್ಪನೆಯಿಂದ ಅಲ್ಪ ಭಿನ್ನವಾದ ಶಕ್ತಿ ಎಲ್ಲಿ ಕಂಡರೂ ಅದನ್ನು ದೈವೀಕ ಶಕ್ತಿಯಾಗಿ ಪರಿಗಣಿಸುವ ಮಾನವನ ಮನಸ್ಸೇ ಇಂತಹ ದೈವಗಳ ಹುಟ್ಟಿಗೆ ಕಾರಣವಾಗಿರಬಹುದು ಎನ್ನಬಹುದು. ಅಪ್ರತಿಮವಾದ ಮನಶ್ಶಕ್ತಿಯೊಂದು ಪ್ರತಿಯೊಂದು ಮಾನವನಲ್ಲೂ ಇದೆ. ಅದನ್ನು ಪ್ರಯತ್ನಪೂರ್ವಕ ಸಾಧಿಸಿ, ಯಾವುದಾದರೂ ರೂಪದಿಂದ ಆತ ಹೊರಹಾಕಿದಾಗ ದೈವವೋ ದೇವತೆಯೋ ಕಾರಣಪುರುಷನೋ ಆಗುತ್ತಾನೆ. (ಕೆಲವೊಮ್ಮೆ ಮಾಂತ್ರಿಕನೋ, ತಾಂತ್ರಿಕನೋ ಆಗಬಹುದು) ಅದನ್ನರಿಯದ ಮಾನವರು ಆಶ್ಚರ್ಯ ಹಾಗೂ ಭಯದಿಂದ ಅಂತಹ ಅಭೂತಪೂರ್ವ ಶಕ್ತಿಗಳ ಆರಾಧಕರಾಗುತ್ತಾರೆ.

<u>ವೇಟ್ಟಕ್ಕೊರುಮಗನ್</u> :- ಉತ್ತರ ಕೇರಳದ ಹಲವಾರು ಸಮುದಾಯಗಳಿಂದ ಆರಾಧಿಸಲ್ಪಡುವ ದೈವವಿದು. ಈತ ಶಿವ-ಪಾರ್ವತಿಯರು ಅರ್ಜುನನ ಪರೀಕ್ಷಾರ್ಥವಾಗಿ ಬೇಡ- ಬೇಡಿತಿಯ ರೂಪವನ್ನು ತಾಳಿದ ಸಂದರ್ಭದಲ್ಲಿ ಹುಟ್ಟಿದವನು ಎಂಬ ಐತಿಹ್ಯವಿದೆ. ಯಾರನ್ನೂ ಲೆಕ್ಕಿಸದೆ ಕಾಡಲ್ಲಿ ಬೆಳೆದ ಮಗುವಿನ ಬಗ್ಗೆ ದೇವತೆಗಳು ವಿಷ್ಣುವಿನಲ್ಲಿ ದೂರಿಡಲು, ವಿಷ್ಣು ವೃದ್ಧವೇಷದಿಂದ ಕೈಯಲ್ಲೊಂದು ಬಂಗಾರದ ಕಿರು ಗತ್ತಿ ಹಿಡಿದು ಆತನ ಬಳಿಗೆ ಬಂದು, ಕತ್ತಿಯಿಂದ ಆಕರ್ಷಿತನಾದ ಮಗುವಿಗೆ ಆ ಕತ್ತಿಯನ್ನು ಕೊಟ್ಟು ಅದನ್ನು ನೆಲದಲ್ಲಿ ಇಡಬಾರದೆಂದು ಆದೇಶಿಸಿ, ಯಾರಿಗೂ ಹಿಂಸೆ ಮಾಡಬಾರದು ಎಂದು ತಿಳಿಹೇಳಿದ. ಅಲ್ಲಿಂದ ನಬುಮಲೆಯ ಬಾಲುಶ್ಶೇರಿಗೆ ಬಂದ ಬಾಲಕ ಬಡ ಬ್ರಾಹ್ಮಣನೊಬ್ಬನ ಮನೆಯಲ್ಲಿ ಹಾಲು ಕುಡಿದು ಆತನ ದಾರಿದ್ರ್ಯವನ್ನು ದೂರಮಾಡಿದ. ನಬುಮಲೆಯ ಕೋಟೆಯಲ್ಲಿ ನೆಲೆಸಿ ರಾಜನ ಶತ್ರುಗಳ ಎದುರು ಹೋರಾಡಿ ಜಯಗಳಿಸಿ, ಬಾಲುಶ್ಶೇರಿಯ ಅರಮನೆಯಲ್ಲಿ ನೆಲೆಯಾದ.

ಇನ್ನೊಂದು ಐತಿಹ್ಯದಂತೆ :- ಕೋಲತ್ತುನಾಡಿನ ದಕ್ಷಿಣಭಾಗದ ಬಾಲುಶ್ಶೇರಿ ಕೋಟೆಯ ಒಡೆಯನಾಗಿದ್ದ

ಚೆರಿಕ್ಕುಳಂ, ವೆಳ್ಳೂರು ಪಟಿಯೆ ಮತ್ತು ಪುದಿಯೆ, ನೀಲೇಶ್ವರ, ಕಾಞಂಗಾಡ್, ಅದಿಯಾಲ್ ಮುಂತಾದ ಶಾಲಿಯಾ ಕ್ಷೇತ್ರಗಳಲ್ಲಿ ಪಡವೀರನ್‌ನನ್ನು ಆರಾಧಿಸುತ್ತಾರೆ.

ಗುಳಿಗ :- ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶದಲ್ಲಿ ಆರಾಧಿಸಲ್ಪಡುವ ಭೂತಗಳಲ್ಲಿ ಗುಳಿಗನಿಗೆ ಪ್ರಧಾನವಾದ ಸ್ಥಾನವಿದೆ. ಗುಳಿಗನನ್ನು ಮಲಯಾಳದಲ್ಲಿ 'ಗುಲಿಗನ್' ಅಥವಾ 'ಕುಳಿಯನ್' ಎಂದು ಕರೆಯಲಾಗುತ್ತದೆ. ಪುರಾಣಗಳಲ್ಲಿ 'ಗುಳಿಗ' ಎಂದರೆ ಒಂದು ಕ್ರೂರ ಉಪಗ್ರಹ (ಮಾಂದಿ), ಶನಿಯ ಮಗ, ಅಷ್ಟನಾಗಗಳಲ್ಲಿ ಒಂದೆನಿಸಿದ ಸರ್ಪ ಎಂದೆಲ್ಲ ಅರ್ಥವಿದೆ. ಆದರೆ ಈ ಪ್ರದೇಶದಲ್ಲಿ ಆರಾಧಿಸಲ್ಪಡುವ 'ಗುಳಿಗ' ಓರ್ವ ಸ್ಥಳ ದೇವತೆ ಅಥವಾ ರಕ್ಷಣಾ ದೇವತೆ. ಆಯಾ ಸ್ಥಳದ ರಕ್ಷಣೆ ಆಯಾ ಪ್ರದೇಶದ ಗುಳಿಗನ ಹೊಣೆ. ಆದುದರಿಂದ ಆತನನ್ನು 'ಕ್ಷೇತ್ರಪಾಲ' ಎಂದೂ ತಿಳಿಯುತ್ತಾರೆ. ಆದುದರಿಂದ ಇಲ್ಲಿ ಹೆಚ್ಚಿನ ಸ್ಥಳಗಳಲ್ಲಿ ಗುಳಿಗನ ಹೆಸರಿನಲ್ಲಿ ಕಲ್ಲುನೆಟ್ಟು, 'ಗುಳಿಗನ ಕಲ್ಲು' ಎಂದು ಆರಾಧಿಸುತ್ತಿರುವುದನ್ನು ಕಾಣಬಹುದು. ದೇವಾಲಯದ ಹೊರ ಆವರಣಗಳಲ್ಲೂ ಗುಳಿಗನ ಕಲ್ಲುಗಳನ್ನು ನೆಟ್ಟಿರುವುದು ಕಾಣಬಹುದು. ಶಿವನ ತಾಮಸೀಶಕ್ತಿಯ ಗುಣವನ್ನು ಭೂತಗಣವೆಂದು ಕರೆಯುವುದು ಇದೆ. ಆದಿಕಾಲದಲ್ಲಿ ಎಲ್ಲ ಭೂತಗಳನ್ನೂ ಶೈವಾಂಶವೆಂದೇ ಭಾವಿಸಲಾಗುತ್ತಿತ್ತು. ಶಿವನ 'ಕಿರಾತವೇಷ' ವೇ ಪ್ರಧಾನವಾಗಿ ಇಲ್ಲಿ ಆರಾಧನಾ ಅಂಶವಾಗುತ್ತದೆ. ಕಾಡು ಜನರ ವೇಷವನ್ನೇ ಭೂತಗಳಿಗೆ ಪ್ರಧಾನವಾಗಿ ಕಟ್ಟಲಾಗುತ್ತದೆ. ಅಂತಹ 'ಕಾಡು' ಅಥವಾ 'ವನ' ಗಳಲ್ಲಿ ಇಂತಹ ಭೂತಗಳನ್ನು ಮಾನವರು ಕಲ್ಪಿಸಿಕೊಳ್ಳುತ್ತಾರೆ. ಇಂತಹ 'ಗುಳಿಗ'ಗಳಾಗಿರುವ ಭೂತಗಳು ಸಂಖ್ಯೆಯಲ್ಲಿ ಸುಮಾರು ೧೦೮ ರೂಪಗಳಲ್ಲಿ ಇದೆ ಎನ್ನುವ ನಂಬಿಕೆ ಇದೆ. ' ಪೊಟ್ಟಗುಳಿಗ' , ' ಚೌಕಾರುಗುಳಿಗ' , ' ಅಗ್ನಿಗುಳಿಗ' , ಮೂಕಾಂಬಿಗುಳಿಗ , ಭಂಡಾರಿಗುಳಿಗ, ಮಾರಣಗುಳಿಗ, ರಾವುಗುಳಿಗ, ಮಂತ್ರಗುಳಿಗ, ಕೊಂಡೆಕಾರೆಗುಳಿಗ, ಉಮ್ಮಟ್ಟಿಗುಳಿಗ ಮುಂತಾದ ಗುಳಿಗಗಳು ಇವೆ.

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಶಾಲಿಯಾ ಕ್ಷೇತ್ರಗಳಲ್ಲಿ ಆರಾಧಿಸಲ್ಪಡುವ ಗುಳಿಗನು ದಾರು ಕವಧಾ ಪ್ರಸಂಗದಲ್ಲಿ ಬರುವ 'ಆದಿವೇತಾಳ' ಎಂದು ಒಂದು ಅಭಿಪ್ರಾಯವಿದೆ. ಭಗವತಿಗಳ ಕಥೆಯಲ್ಲಿ ಈ ಗುಳಿಗ ಆರ್ಯ ರಾಜನಲ್ಲಿ ೧೮ ಚಾವಡಿಗಳಿಗೆ ಕಾರ್ಯಸ್ಥನಾಗಿದ್ದನೆಂದೂ, ಮುಂದೆ ಭಗವತಿಯು ಭೂಮಿಗೆ ಹೊರಟಾಗ ಆತ ನೌಕೆಯ ಚುಕ್ಕಕಾರನ್ (ಚುಕ್ಕಾಣಿಗಾರ) ಆಗಿ ಒದಗಿದನೆಂದೂ ಹೇಳಲಾಗಿದೆ. ಒಂದು ಕಥನದಂತೆ ಆರ್ಯನಾಡಿನ ರಾಜ ಮರಕ್ಕಲ (ನೌಕೆ)ವನ್ನು ಸಿದ್ಧಪಡಿಸಿ ದೇವಿಯರನ್ನು ಕಳುಹಿಸುವಾಗ ಶಿವನು ಚುಕ್ಕಾಣಿಗಾರನಾಗಿ ಗುಳಿಗನನ್ನೇ ಕಳುಹಿಸುತ್ತಾನೆ. ಚುಕ್ಕಾಣಿಗಾರನ ಸಾಮರ್ಥ್ಯ ಎಷ್ಟೆಂದು ತಿಳಿಯಲು ದೇವಿ ಬಂಡೆ ಕಲ್ಲಿನಲ್ಲಿ ಒಂದು ಶೂಲವನ್ನು ಬರೆದು ಅದನ್ನು ತೆಗೆದುಕೊಂಡು ತನ್ನೊಂದಿಗೆ ಬರಬೇಕೆಂದಳು. ಕಣ್ಣುರೆಪ್ಪೆ ತೆರೆಯುವುದರೊಳಗೆ ಬಂಡೆಕಲ್ಲಿನಿಂದ ಶೂಲವನ್ನು ತೆಗೆದುಕೊಂಡು ಯಾತ್ರೆಗೆ ಸಿದ್ಧನಾದ ಸಂತುಷ್ಟಳಾದ ದೇವಿ ತನ್ನ ಸೊಂಟದಿಂದ ಒಂದು ಮಣಿ (ಘಂಟಾಮಣಿ) ತೆಗೆದು ಬಹುಮಾನವಿತ್ತಳು. ಒಂದು ಕೈಯಲ್ಲಿ ಶೂಲ, ಮತ್ತೊಂದರಲ್ಲಿ ಘಂಟಾಮಣಿ ಹಿಡಿದುಕೊಂಡು ಗುಳಿಗನು ಮುಂದೆಯೂ ದೇವಿ ಅವನ ಹಿಂದೆಯೂ ಪಯಣಿಸಿದರು.(ಅಮೃತಸೋಮೇಶ್ವರ: ಭಗವತೀ ಆರಾಧನೆ ಪುಟ ೧೨೮ )

ವಿಷ್ಣುಮೂರ್ತಿಯ ಖಡ್ಗವೂ ಆತನ ಕೈಯಲ್ಲಿತ್ತು. ಕಣ್ಣನ್ ಬಂದ ವಿಷಯವನ್ನರಿತ ಕುರುಪ್ ಕಳುಹಿಸಿದ ಕೊಲೆಗಾರರು ಕದಳೀಕೊಳದಲ್ಲಿ ಸ್ನಾನಮಾಡುತ್ತಿದ್ದ ಕಣ್ಣನನ್ನು ಅದೇ ಖಡ್ಗದಿಂದ ಕೊಂದು , ಖಡ್ಗವನ್ನು ಕೊಳಕ್ಕೆಸೆಯುತ್ತಾರೆ. ಇದರಿಂದ ಕುರುಪ್ ಮನೆಯಲ್ಲಿ ದುರ್ನಿಮಿತ್ತಗಳುಂಟಾಗುತ್ತದೆ. ಜ್ಯೋತಿಷಿಗಳಲ್ಲಿ ಕೇಳಿದಾಗ ವಿಷ್ಣುಮೂರ್ತಿ ಕಣ್ಣನೊಂದಿಗೆ ಬಂದಿರುವ ವಿಷಯ ತಿಳಿಯುತ್ತದೆ. ಅವನನ್ನು ಒಲಿಸಲು ಕೋಲ ಕೊಡಬೇಕು ಎಂದು ಆದೇಶವಾಗುತ್ತದೆ. ಕುರುಪ್ ಅಷ್ಟು ಸುಲಭವಾಗಿ ಒಪ್ಪುವುದಿಲ್ಲ. ದೈವ ಪರೀಕ್ಷೆಯ ನೆವದಲ್ಲಿ ದೈವ ಕಟ್ಟುವವರಿಗೆ ತೊಂದರೆಯಾಗುವಂತಹ ಅಗ್ನಿಯ ಮೂಲಕ ಹಾದು ಬರುವಂತಹ ತೊಂದರೆಯನ್ನು ನೀಡುತ್ತಾನೆ . ಆದರೆ ಅದೆಲ್ಲವನ್ನೂ ದೈವವು ಮೀರಿದಾಗ ದೈವಕ್ಕೆ ಶರಣಾಗಿ ಗುಡಿ ಕಟ್ಟಿಸಿ ಕೋಲಕೊಡಲು ಆರಂಭಿಸುತ್ತಾನೆ. 'ಪಾಲಾಯಿಪರಪ್ಪನ್' ಎನ್ನುವ ಮಲಯ ಜಾತಿಯವನು 'ಕೋಟ್ಟಪ್ಪುರತ್' ಎನ್ನುವಲ್ಲಿ ಮೊದಲಿಗೆ ವಿಷ್ಣುಮೂರ್ತಿ ಭೂತವನ್ನು ಕಟ್ಟಿದವನು ಎಂದು ನಂಬಲಾಗುತ್ತದೆ. " ಹೀಗೆ ವೈಷ್ಣವಾಂಶದ ದೈವವೊಂದು ದಕ್ಷಿಣ ತುಳುನಾಡಿನಿಂದ ದಕ್ಷಿಣಕ್ಕೆ ವಲಸೆಹೋದುದನ್ನು ಈ ಐತಿಹ್ಯವು ಸೂಚಿಸಿಕೊಡುತ್ತದೆ. ಮನುಷ್ಯರೊಂದಿಗೆ ದೈವಗಳೂ ಒಂದೆಡೆಯಿಂದ ಒಂದೆಡೆಗೆ ಹೋಗುವ ಈ ಪ್ರಕ್ರಿಯೆಯು ಮನುಷ್ಯ ಪ್ರಕೃತಿಯನ್ನೇ ಪ್ರತಿನಿಧೀಕರಿಸುತ್ತದೆ. ಯಾವುದಾದರೂ ಕಾರಣದಿಂದಲೋ, ಪ್ರಭಾವದಿಂದಲೋ ಒಂದೆಡೆಯ ದೈವವನ್ನು ಇನ್ನೊಂದೆಡೆ ಆರಾಧಿಸಲು ಪ್ರಾರಂಭಮಾಡಬಹುದು. ಆದರ ಹಿಂದೆ ಐಹಿತ್ಯವೊಂದು ಸೃಷ್ಟಿಯಾಗಿ ಅದರ 'ಕಾರಣಿಕವನ್ನು' ವನ್ನು ಇನ್ನಷ್ಟು ಶಕ್ತಿಯುತವನ್ನಾಗಿಸುವುದೇ ಇದರ ಉದ್ದೇಶ ಎನ್ನಬಹುದು. ಸಮಾಜದ ಸೃಷ್ಟಿಯಾದ ಪ್ರತಿಯೊಂದರ ಹಿಂದೆಯೂ ಅದರದೇ ಆದ ಚರಿತ್ರೆಯಿದೆ ಎನ್ನುವುದಕ್ಕೆ 'ಪಾಲಂದಾಯಿ ಕಣ್ಣನ' ಕಥೆಯೇ ಸಾಕ್ಷಿಯಾಗಿದೆ.

ಶಾಲಿಯಾರ ಕ್ಷೇತ್ರಗಳಲ್ಲಿ ಭಗವತಿಯೊಂದಿಗೆ ವಿಷ್ಣುಮೂರ್ತಿಯೂ ಅಷ್ಟೇ ಭಕ್ತಿಯಿಂದ ಆರಾಧಿಸಲ್ಪಡುತ್ತದೆ. ಜಾತಿ ಬಾಂಧವರೇ ವಿಷ್ಣುಮೂರ್ತಿಯ ಆವೇಶಕ್ಕೆ ಒಳಗಾಗುತ್ತಾರೆ. ಇವರನ್ನು 'ಬೆಳ್ಚಪ್ಪಾಡರು' ಎಂದು ಕರೆಯುತ್ತಾರೆ.

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಭಾಗಗಳಲ್ಲಿ ಹರಿಜನ ಮತ್ತು ಬ್ರಾಹ್ಮಣವರ್ಗವನ್ನು ಬಿಟ್ಟರೆ ಉಳಿದೆಲ್ಲಾ ಸಮುದಾಯದವರೂ ವಿಷ್ಣುಮೂರ್ತಿಯ ಆವೇಶಕ್ಕೆ ಒಳಗಾಗುತ್ತಾರೆ ಹಾಗೂ ಆರಾಧಿಸುತ್ತಾರೆ.

ಬಬ್ಬರ್ಯ:- ವಬ್ಬರಿಯ,ಬಪ್ಪರಿಯನ್ ಮುಂತಾಗಿ ಮಲಯಾಳಂನಲ್ಲಿ ಕರೆಯಲ್ಪಡುವ ಈ ದೈವವು ಮುಸ್ಲಿಂ ಮೂಲದ್ದು ಎನ್ನಲಾಗಿದೆ. "ಬಬ್ಬರ್ಯ ಶಬ್ದವು ಬರ್ಬರ ಶಬ್ದದ ವಿಕಲ್ಪ, ಬರ್ಬರ ಕರಾವಳಿ ಎಂದರೆ ಆಫ್ರಿಕಾಖಂಡದ ಸೋಮಾಲಿಯಾದ ಕಡಲ ಪ್ರದೇಶ.ಇದು ತುಳುನಾಡಿಗೆ ನೇರ ಪಶ್ಚಿಮದಲ್ಲಿದೆ."ಎಂದು ಈ ಶಬ್ದೋತ್ಪತ್ತಿಯ ಬಗೆಗೆ ಶ್ರೀ ಎಂ.ಎಂ.ಪ್ರಭುಗಳ ಅಭಿಪ್ರಾಯವು ವಿಚಾರಣೀಯವಾದರೂ ದೂರಾನ್ವಯವೆನಿಸುತ್ತದೆ ಎಂದು ಅಮೃತ ಸೋಮೇಶ್ವರರು ಅಭಿಪ್ರಾಯ ಪಡುತ್ತಾರೆ. ಹೆಚ್ಚಿನ ಜಾನಪದ ವಿದ್ವಾಂಸರೂ ಈತ ಬಾಬುಬ್ಯಾರಿ, ಬಪ್ಪಬ್ಯಾರಿ, ಬೊಬ್ಬರಿ ಕುಂಞಾಲಿ ಮುಂತಾದ ಹೆಸರಿನ 'ಮುಸ್ಲಿಂ' ಎಂದೇ ಅಭಿಪ್ರಾಯಪಟ್ಟಿದ್ದಾರೆ. ೧೫೪೭ರ ಬಸರೂರಿನ ಶಾಸನದಲ್ಲಿ 'ಬೊಬ್ಬರಿಗನ ಕೊಟ್ಟು' ದ ಉಲ್ಲೇಖವಿದೆ.ಆದುದರಿಂದ ೧೬ನೇ ಶತಮಾನಕ್ಕಿಂತ ಹಿಂದೆಯೇ ಬಬ್ಬರ್ಯನ ಆರಾಧನೆಯಿತ್ತು. 'ಪಪ್ಪೂರವರ್' ಶಬ್ದಕ್ಕೆ ಮಲಯಾಳದಲ್ಲಿ ನೌಕೆಯ ವೃತ್ತಿಯ ಒಂದು ವರ್ಗವೆಂಬ ಅರ್ಥವಿದೆ. (ಅಮೃತ ಸೋಮೇಶ್ವರ,ಭಗವತೀ ಆರಾಧನೆ ಪು.೧೫೧,೧೨೨)

ಕಡಲ ತೀರದಲ್ಲಿ ವಾಸವಾಗಿದ್ದ 'ಮುಸ್ಲಿಂ' ಯುವಕನೊಬ್ಬನು ವ್ಯಾಪಾರಿಯಾಗಿದ್ದುಕೊಂಡು ಮತಸೌಹಾರ್ದತೆಯಿಂದ ಬದುಕಿ, ತನ್ನ ಶಕ್ತಿ ಸಾಮರ್ಥ್ಯಗಳಿಂದ ಕರಾವಳಿ ಜನರನ್ನು ಸಂಕಷ್ಟದ ಸಂದರ್ಭಗಳಲ್ಲಿ ರಕ್ಷಿಸಿ, ದುರಂತ ಮರಣವನ್ನಪ್ಪಿದುದೇ 'ಬಬ್ಬರ್ಯ'ನ ಹುಟ್ಟಿಗೆ ಕಾರಣವಾಗಿರಬೇಕು. ಹಿಂದೂಗಳ ಜತೆಗಿದ್ದ ಆತನ ಸೌಹಾರ್ದ ಸಂಬಂಧವೇ ಆತನನ್ನು ಆರಾಧಿಸುವ ಪ್ರಕ್ರಿಯೆಗೆ ಮೂಲವಾಗಿರಬಹುದು. ಕರಾವಳಿ ತೀರದ ತೀಯಾ, ಮೋಯ, ಶಾಲಿಯಾ ಸಮುದಾಯದವರು ಈ ದೈವವನ್ನು ಆರಾಧಿಸುತ್ತಾರೆ. ಕರಾವಳಿ ತೀರದ 'ಭಗವತಿ'ಯನ್ನು ಈತನೂ ಆರಾಧಿಸುತ್ತಿದ್ದುದರಿಂದಲೇ ಈತನ ಕಾಲಾನಂತರ 'ಭಗವತಿ'ಯ ಗುಡಿಗಳ ಪಕ್ಕದಲ್ಲಿ ಈತನ ಆರಾಧನೆಯೂ ನಡೆದುಬಂದಿರಬಹುದು. (ಬಪ್ಪನಾಡಿನ ಬಪ್ಪಬ್ಯಾರಿ, ಶಬರಿಮಲೆಯ 'ವಾವರಿ' ಅಥವಾ 'ಬಾಬರಿ' ಈ ಮೊದಲಾದವರು ಹಿಂದು ದೈವಗಳನ್ನು ಆರಾಧನೆ ಮಾಡುತ್ತಿದ್ದ ಇತರ ಮುಸ್ಲಿಂ ಸಮುದಾಯದ ವ್ಯಕ್ತಿಗಳಾಗಿದ್ದುಕೊಂಡು ದೈವಗಳಾದವರು.)

ಶಾಲಿಯಾ 'ಕ್ಷೇತ್ರ'ಗಳಲ್ಲಿ ಬಬ್ಬರಿಯನ ಗುಡಿಯು ಹೊರಭಾಗದಲ್ಲಿ ಪಶ್ಚಿಮಾಭಿಮುಖವಾಗಿ ನಿಂತಿರುತ್ತವೆ. (ಕೆಲವೆಡೆ ಕೇವಲ ವೇದಿಕೆ ಮಾತ್ರವಿರುತ್ತದೆ .) ಕಡಲಿಗೂ ಆತನಿಗೂ ಇರುವ ಸಂಬಂಧವನ್ನು ಇದು ಸೂಚಿಸುತ್ತದೆ. ಸ್ತ್ರೀಯರು ಅದರ ಬಳಿಗೆ ಹೋಗಬಾರದು ಎಂಬ ನಿಷೇದವೂ ಇದೆ. (ಪರಮತೀಯರು ಸ್ತ್ರೀಯರನ್ನು ಅಗೌರವದಿಂದ ಕಾಣುತ್ತಾರೆ ಎಂಬ ಭಾವನೆಯೇ ಇದಕ್ಕೆ ಕಾರಣವಿರಬಹುದು. ಸ್ತ್ರೀಯರ ವಿಷಯದಲ್ಲಿ ಮುಸ್ಲಿಮರ ಬಗೆಗಿನ ಅಪನಂಬಿಕೆಯು ಅವರು ದೈವವಾದರೂ ಹಿಂಬಾಲಿಸುತ್ತದೆ. ಅದಕ್ಕೆ ನಿದರ್ಶನಗಳೂ ಇಲ್ಲದಿಲ್ಲ. ಕುಂಬಳೆಯ ಆರಿಕ್ಕಾಡಿಯಲ್ಲಿ ಮುಸ್ಲಿಂ ಮಂತ್ರವಾದಿಯು ಈ ಕಾರಣಕ್ಕಾಗಿಯೇ 'ಆಲಿಭೂತ'ಎಂಬ ದೈವವಾಗಿದ್ದಾನೆ.) ಈ ಭೂತಕ್ಕೆ ಸೀಯಾಳ ಹಾಗೂ ಅಕ್ಕಿಯಿಂದ ತಯಾರಿಸಿದ 'ಅಡೆ'ಯನ್ನು ಅರ್ಪಿಸುತ್ತಾರೆ. 'ಬಬ್ಬರ್ಯ' ನಲ್ಲದೆ ಕೇರಳದಲ್ಲಿ ಇತರ ಮುಸ್ಲಿಂ ತೈಯ್ಯಂಗಳೂ ಇವೆ. ಮಾಪ್ಪಿಳ ಚಾಮುಂಡಿ, ಉಮ್ಮಚ್ಚಿ ತೈಯ್ಯಂ, ಆಲಿತೈಯ್ಯಂ ಇದಕ್ಕೆ ಉದಾಹರಣೆಗಳಾಗಿವೆ. ಮತಸೌಹಾರ್ದತೆಯೊಂದಿಗೆ ಮತೀಯವೈರುದ್ಧ್ಯಗಳೂ ಇಂತಹ ತೈಯ್ಯಂಗಳ ಸೃಷ್ಟಿಗೆ ಕಾರಣವಾಗಿವೆ.

ಮುಂಡತ್ತಾಯ :- ಮಲಯಾಳಂ ಸಂಸ್ಕೃತಿಯ ಹಾಗೂ ತುಳುನಾಡ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬೆಳೆದುಬಂದ ಇಲ್ಲಿನ ಶಾಲಿಯಾ ಸಮುದಾಯ ಪಟ್ಟುವದಿಂದ ಪಣಂಬೂರುವರಗೆ ವಿವಿಧ ತೆಯ್ಯಂಗಳನ್ನೂ, ದೈವಗಳನ್ನೂ ಆರಾಧಿಸುತ್ತಾ ಬಂದಿದೆ. ಉತ್ತರ ಕಾಸರಗೋಡು ಹಾಗೂ ದಕ್ಷಿಣ ಕನ್ನಡದಲ್ಲಿ ಚಂದ್ರಗಿರಿ ಹೊಳೆಯ ದಕ್ಷಿಣದಲ್ಲಿ ಆರಾಧಿಸಲ್ಪಡುವ 'ತೈಯಂ' ಗಳೊಂದಿಗೆ ಇಲ್ಲಿನ ಪ್ರಾದೇಶಿಕ ದೈವಗಳನ್ನೂ ಆರಾಧಿಸಲಾಗುತ್ತದೆ. ಈ ನಿಟ್ಟಿನಲ್ಲಿ ಪಣಂಬೂರು (ಮಂಗಳೂರು) ಕ್ಷೇತ್ರದಲ್ಲಿ ಆರಾಧಿಸಲ್ಪಡುವ 'ಮುಂಡತ್ತಾಯ' ಹಾಗೂ 'ಧೂಮವತಿ 'ಈ ದೈವಗಳು ವೈಶಿಷ್ಟ್ಯಪೂರ್ಣವಾದವುಗಳು.

'ಮುಂಡತ್ತಾಯ' ದೈವವನ್ನು ಮುಂಡಿತ್ತಾಯ, ಮುಂಡಿಪಾಡಿತ್ತಾಯ, ಮೂಡದಾಯ, ಮೂಡದೇವ ಈ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈಶ್ವರನ 'ಮುಂಡ' (ತುಳುವಿನಲ್ಲಿ 'ಮುಂಡ' ಎಂದರೆ 'ಹಣೆ' ಎಂದರ್ಥ) ದಿಂದ ಜನಿಸಿದ ಕಾರಣ ಈ ಹೆಸರು ಬಂತು ಎಂದು ಅಭಿಪ್ರಾಯ. ನಾಥ ಸಂಪ್ರದಾಯದ ಜೋಗಿಗಳು ತಿರುಪತಿಯಿಂದ ತುಳುನಾಡಿಗೆ ಬರುವಾಗ ಅವರೊಂದಿಗೆ ಈ ದೈವವು ಬಂತು ಎಂದೂ ಇದರ ಪಾಡ್ದನದಲ್ಲಿ ಹೇಳಲಾಗುತ್ತದೆ. ಒಂದು ಪಾಡ್ದನದಲ್ಲಿ ಈ ದೈವವು ಕಾಶಿಯಿಂದ ಬಂದ 'ಕಾಳಭೈರವ' ಎಂದೂ ಹೇಳಲಾಗಿದೆ. ಈ ದೈವಕ್ಕೆ ಅಸುರೀಕ್ರಿಯೆಯಲ್ಲೂ, ದೇವಕ್ರಿಯೆಯಲ್ಲೂ ಆರಾಧನೆ ನಡೆಯುತ್ತದೆ.

ಉತ್ತರ ಕೇರಳದಿಂದ ಉತ್ತರಾಭಿಮುಖವಾಗಿ ಅಲ್ಲಲ್ಲಿ ನೆಲಸುತ್ತಾ ಬಂದ ಶಾಲಿಯಾ ಸಮುದಾಯವು ನೆಲಸಿದ ಕೊನೆಯ ಊರು ದಕ್ಷಿಣ ಕನ್ನಡದ ಪಣಂಬೂರು. (ಈಗಿನ ನವ ಮಂಗಳೂರು) ಇಲ್ಲಿ ಅವರು 'ಜನಾನಂದ ಬೀಡು' ಎನ್ನುವ ಮನೆತನದ ಜೈನರ ಆಶ್ರಿತರಾಗಿದ್ದರು. ಈ ಮನೆಯ ಆರಾಧ್ಯದೈವ 'ಅರಸು ಮುಂಡತ್ತಾಯ' ಹಾಗೂ 'ಧೂಮಾವತಿ'

ಕಾಲಾಂತರದಲ್ಲಿ ಆ ಮನೆತನದವರು ತಾವು ಆರಾಧಿಸುತ್ತಾ ಬಂದ ಈ ದೈವಗಳ ಉಸ್ತುವಾರಿಕೆಯನ್ನು ತಮ್ಮ ಆಶ್ರಿತರಾದ ಶಾಲಿಯಾ ಸಮುದಾಯದವರಿಗೆ ನೀಡಿದರೆಂದೂ, ಅಂದಿನಿಂದ ಇಲ್ಲಿನ ಶಾಲಿಯಾರು ಈ ದೈವಗಳ ಆರಾಧಕರೆಂದೂ ಅಭಿಪ್ರಾಯವಿದೆ. ಈ ದೈವವು ಪಾಂಡೇಶ್ವರ, ಅತ್ತಾವರ, ಮಂಗಳಾದೇವಿ, ಉಳ್ಳಾಲ ಈ ಮೊದಲಾದ ಕಡೆ ಇತರ ಸಮುದಾಯದವರಿಂದಲೂ ಆರಾಧಿಸಲ್ಪಡುತ್ತದೆ. ಮಂಜೇಶ್ವರದ 'ಉದ್ಯಾವರ' ಎಂಬಲ್ಲಿ ಅತೀ ಪ್ರಸಿದ್ಧವಾದ ಅರಸು ಮುಂಡತ್ತಾಯ (ಮಂಜೀಷ್ಟಾರ್?) ದೈವಸ್ಥಾನವಿದೆ. ಅಲ್ಲಿ ಶಾಲಿಯಾ ಸಮುದಾಯದಿಂದ ಒಬ್ಬ 'ದರ್ಶನ ಪಾತ್ರಿ' ಇರಲೇ ಬೇಕು ಎಂಬ ನಿಯಮವೂ ಇದೆ. ಅಲ್ಲಿನ ಉತ್ಸವ ಕಾಲದಲ್ಲಿ ಶಾಲಿಯಾ ಸಮುದಾಯದ ಕಾರ್ನವ (ಗುರಿಕಾರ)ರಿಗೆ ಉಡುಗೊರೆಯನ್ನು ಕೊಡಬೇಕೆಂಬ ನಿಯಮವಿದೆ. ಇದು ಶಾಲಿಯಾ ಸಮುದಾಯಕ್ಕೂ, ಮುಂಡತ್ತಾಯ ದೈವಕ್ಕೂ ಇರುವ ಸಂಬಂಧವನ್ನು ಸೂಚಿಸುತ್ತದೆ.

ಧೂಮಾವತಿ :- ತುಳುನಾಡಿನ ಪ್ರಸಿದ್ಧ ದೈವಗಳಲ್ಲಿ ಧೂಮಾವತಿಯು ಒಂದು. ಈಕೆಯನ್ನು ದೇವಿಯ ಒಂದು ಅವತಾರ ಎಂದೂ ಹೇಳುತ್ತಾರೆ. ಧೂಮ್ರಾಕ್ಷನನ್ನು ವಧಿಸಲು 'ದುರ್ಗೆ' ಎತ್ತಿದ ಅವತಾರವೆಂದೂ, ಧೂಮ್ರ (ಹೊಗೆ) ವರ್ಣದವಳಾದುದರಿಂದ ಧೂಮಾವತಿಗೆ ತುಳುನಾಡಿನ ಅತೀ ಪ್ರಾಚೀನವಾದ ಜುಮಾದಿದೈವ ಎಂದೂ ಹೇಳುತ್ತಾರೆ. 'ಜುಮಾದಿ'ಯು ಹಲವು ಹೆಸರುಗಳಿಂದ ತುಳುನಾಡಿನಲ್ಲಿ ಆರಾಧಿಸಲ್ಪಡುತ್ತದೆ. ತುಳುನಾಡಿನ ಪಂಜುರ್ಲಿ ದೈವಕ್ಕೂ ಸಂಬಂಧವನ್ನು ಕಲ್ಪಿಸಲಾಗಿದೆ. ಈ ದೈವದ ಉಗ್ರತೆಯನ್ನೂ ಪೌರುಷವನ್ನೂ ಸೂಚಿಸಲು ಮುಖವಾಡಗಳಲ್ಲಿ ಮೀಸೆಯಂತಹ ಚಿಹ್ನೆಯನ್ನು ಗುರುತಿಸಲಾಗುತ್ತದೆ.

ಪಣಂಬೂರಿನಿಂದ ಮಂಗಳೂರಿನ ಅಶೋಕನಗರಕ್ಕೆ 'ಸ್ಥಾನ'ವು ಸ್ಥಳಾಂತರಗೊಂಡಾಗ ಈ ದೈವಗಳನ್ನೂ ಶಾಲಿಯಾ ಸಮುದಾಯ ಇಲ್ಲಿಗೆ ತಂದು ಪ್ರತಿಷ್ಠಾಪಿಸಿದೆ. ಅರಸು ಮುಂಡತ್ತಾಯನಿಗೆ 'ಬಂಡಿ' ಉತ್ಸವವೂ ಧೂಮಾವತಿಗೆ ಕೋಲವೂ ಇಲ್ಲಿ ನಡೆಯುತ್ತದೆ.

ಮಲರಾಯ:- ಕಾಸರಗೋಡು ಭಾಗದಲ್ಲಿ ಶಾಲಿಯಾ ಸಮುದಾಯದವರಿಂದ ಆರಾಧಿಸಲ್ಪಡುವ ಇನ್ನೊಂದು ಸ್ಥಳೀಯ ದೈವವು ಮಲರಾಯ. ಕುಂಬಳೆ ಹಾಗೂ ಮಂಜೇಶ್ವರ (ಈಗ ಮಂಗಲ್ಪಾಡಿ) 'ತಾನಂ'ನಲ್ಲಿ ಈ ದೈವದ ಆರಾಧನೆ ನಡೆಯುತ್ತದೆ. ಮಲೆನಾಡಿನಿಂದ ಇಳಿದು ಬಂದ ದೈವವಾದುದರಿಂದ 'ಮಲರಾಯ' ಎಂಬ ಹೆಸರು ಬಂತು ಎಂಬ ಅಭಿಪ್ರಾಯವಿದೆ. ಈ ದೈವವು 'ಪುರುಷದೈವ'ವೆಂದೂ ಕೆಲವೆಡೆ 'ಸ್ತ್ರೀದೈವ'ವೆಂದೂ ಹೇಳಲಾಗುತ್ತದೆ. 'ಮಲಸಾವರಿ' ಎನ್ನುವ ಸ್ತ್ರೀದೈವದ ಹೆಸರೇ 'ಮಲರಾಯ' ಆಗಿರಬಹುದು ಎಂಬ ಅಭಿಪ್ರಾಯವೂ ಇದೆ. ಇದನ್ನು ಪುಷ್ಟೀಕರಿಸುವಂತೆ ಶಾಲಿಯಾ ಕ್ಷೇತ್ರಗಳಲ್ಲಿ ಭಗವತಿಯೊಂಟಿಗೆ ಇರಿಸುವ ದೈವವು ಯಾವಾಗಲೂ ಸ್ತ್ರೀದೈವವೇ ಆಗಿರುತ್ತದೆಯೆಂದೂ, ಮಂಗಲ್ಪಾಡಿ ಹಾಗೂ ಕುಂಬಳೆ ಸ್ಥಾನಗಳಲ್ಲಿ ಭಗವತಿಯೊಂದಿಗೆ ಈ ದೈವವು ಸ್ತ್ರೀಯೇ ಆಗಿರಬೇಕು ಎಂಬ ನಂಬಿಕೆಯೂ ಇದೆ.

ಶಾಲಿಯಾ ಕ್ಷೇತ್ರಗಳಲ್ಲಿ ಆರಾಧಿಸಲ್ಪಡುವ ಹೆಚ್ಚಿನ ದೈವಗಳೂ ಸ್ತ್ರೀದೈವಗಳೇ ಆಗಿವೆ ಎನ್ನುವುದು ಒಂದು ವೈಶಿಷ್ಟ್ಯ. ಭಗವತಿ, ಚಾಮುಂಡಿ, ಸೋಮೇಶ್ವರಿ, ಧೂಮಾವತಿ, ಮಲಸಾವರಿ(?), ತಾಯಿಪರದೇವತಾ ಮೊದಲಾದ ಹೆಸರುಗಳಿಂದ ಈ ದೈವಗಳು ಆರಾಧಿಸಲ್ಪಡುತ್ತವೆ. ಹೆಚ್ಚಿನ ದೈವಗಳೂ ಈಶ್ವರನಿಂದ ಸೃಷ್ಟಿಯಾದ ಶಿವಾಂಶ ಸಂಭೂತರೇ. ಸಾಗರ ಮಾರ್ಗವಾಗಿಯೋ, ಮಲೆನಾಡಿನ ಮೂಲಕವಾಗಿಯೋ ಇಳಿದುಬಂದವರು, ಪುರಾಣ ಇತಿಹಾಸದಿಂದ ಸೃಷ್ಟಿಯಾದವರು. (ವಿಷ್ಣುಮೂರ್ತಿ, ಬಬ್ಬರ್ಯ) ಸ್ಥಳೀಯವಾಗಿ ನಿರ್ಮಾಣವಾದವರು. ಹೀಗೆ ಹಲವು ವಿಧದ ದೈವಗಳು ಇಲ್ಲಿ ಆರಾಧಿಸಲ್ಪಡುತ್ತವೆ. ಚೀರುಂಬಾ ಭಗವತಿ, ಪೋರ್ಕಲಿ ಭಗವತಿ, ಆರ್ಯಕ್ಕರ ಭಗವತಿ, ಇಳಯ ಮತ್ತು ಮೂತ್ತ ಭಗವತಿ, ಪಾಲಾರ್‌ಕುಳಂಗರ ಭಗವತಿ ಮೊದಲಾದ ಭಗವತಿಯರೂ ಮೂವಾಳಂಕುಳಿ ಚಾಮುಂಡಿಯೂ ಇವರ ಇಷ್ಟದೈವಗಳು.



ಪಡವೀರನ್



ಗುಳಿಗನ್



ವಿಷ್ಣು ಮೂರ್ತಿ



ಶ್ರೀ ಮಲರಾಯ



ಶ್ರೀ ಮುಂಡತ್ತಾಯ



ಶ್ರೀ ಧೂಮಾವತಿ



ದೇವರ ಬಲಿ ವಿಗ್ರಹವನ್ನು ಹೊತ್ತು ಪ್ರದಕ್ಷಿಣೆ
ಬರುತ್ತಿರುವ ಕ್ಷೇತ್ರದ ಕಾರ್ನವರು



ಕ್ಷೇತ್ರದ ಸ್ಥಾನಿಕ ವರ್ಗ



ಭಂಡಾರದ ಗುಡಿ

## ೨.ತಾನಂಗಳಲ್ಲಿ ಆರಾಧನೆಯ ಕ್ರಮಗಳು

ಸಮೂಹಜೀವನದೆಡೆಗೆ ಜೀವನಕ್ಕೆ ಮಾನವನು ಮುಖತಿರುಗಿಸಿದಾಗ ವೈಯುಕ್ತಿಕ ಹಾಗೂ ಸಾಮೂಹಿಕಕ್ಷೇಮಾರ್ಥವಾಗಿ ದೇವಾಲಯಗಳು ಸೃಷ್ಟಿಯಾದವು. ಆದರೆವರ್ಗೀಯವೂ ಜಾತೀಯವೂ ಆದ ವೈರುದ್ಧ್ಯಗಳ ಹೆಸರಿನಿಂದ ಇಲ್ಲಿಯೂ ಯಜಮಾನ್ಯತೆಯು ಸಂಸ್ಥಾಪಿಸಲ್ಪಟ್ಟಾಗ, ಅದರಿಂದಲೂ ಒಂದು ವರ್ಗವು ವಂಚಿತವಾಯಿತು. ಇಂತಹ ಸಂದರ್ಭದಲ್ಲಿ ತನ್ನ ಅಸ್ತಿತ್ವವನ್ನು ಪ್ರಕಟಗೊಳಿಸಲು ಶೋಷಿತ ವರ್ಗವು ಕಂಡುಕೊಂಡ ದಾರಿಯೇ ದೈವಾಲಯಗಳ ನಿರ್ಮಾಣ. ಊಳಿಗಮಾನ್ಯ ಪದ್ಧತಿಯಂತಹ ಸಾಮಾಜಿಕ ವ್ಯವಸ್ಥೆಯ ಒಳಗೇ ಇದ್ದುಕೊಂಡು ತಮ್ಮದೇ ಆದ ಆರಾಧನಾ ವಿಧಾನಗಳನ್ನು ಇವರು ಇಂತಹ ದೈವಾಲಯಗಳಲ್ಲಿ ರೂಢಿಸಿಕೊಂಡರೂ ಜೀವಂತಿಕೆಯನ್ನೊಳಗೊಂಡ ಮಾನುಷಿಕ ಹಾಗೂ ಜೈವಿಕ ರೀತಿಯ ಆರಾಧನೆ ಇಲ್ಲಿಯ ವೈಶಿಷ್ಯವಾಯಿತು.

ಈಶ್ವರ ಶಕ್ತಿಯರ ಉಗ್ರಸ್ವರೂಪದ ಅಂಶಗಳಾಗಿ ಸೃಷ್ಟಿಯಾದ ಈ 'ಭೂತ'ಗಳನ್ನು ಆರಾಧಿಸುವ ಸಂದರ್ಭದಲ್ಲಿ ಬಲಿ ಹಾಗೂ ರಕ್ತತರ್ಪಣದಂತಹ ಉಗ್ರರೀತಿಯಿಂದ ತೃಪ್ತಿಗೊಳಿಸಿದರೇ ತಮ್ಮ ಸಂಕಟಗಳಿಂದ ಪಾರಾಗಬಹುದು ಎಂಬ ಭಾವನೆಯೇ 'ಅಸುರಕ್ರಿಯೆ'ಯ ಆರಾಧನಕ್ರಮಕ್ಕೆ ನಾಂದಿಯಾಗಿರಬಹುದು. ಕೆಲವೆಡೆ ಕೆಲವು ಭೂತಗಳಿಗೆ 'ದೇವಕ್ರಿಯೆ'ಯಿಂದಲೂ ಆರಾಧನೆ ನಡೆಯುತ್ತದೆ. 'ಪಟ್ಟುವದಿಂದ ಪಣಂಬೂರು' ವರೆಗಿನ ಶಾಲಿಯ ಕ್ಷೇತ್ರಗಳಲ್ಲಿ ಸಾಮಾನ್ಯವಾಗಿ ತೆಯ್ಯಂ ಆರಾಧನೆಯು ಈ ಎರಡು ರೀತಿಯಲ್ಲಿ ಆರಾಧನೆ ನಡೆಯುತ್ತದೆ.

೧. ಅಸುರಕ್ರಿಯೆ :- ತೆಂಗಿನ ಗರಿ ಮತ್ತು ಬಾಳೆಯ ದಿಂಡಿನಿಂದ ಮೂರರಿಂದ ಎಂಟು ಕೋನಗಳಲ್ಲಿ ಕಲಾತ್ಮಕವಾಗಿ ನಿರ್ಮಾಣ ಮಾಡಿದ ಬೆಲಿತಟ್ಟನಲ್ಲಿ ತೆಂಗಿನಗರಿಗೆ ಬಟ್ಟೆಸುತ್ತಿ ಎಣ್ಣೆಯಿಂದ ಒದ್ದೆಮಾಡಿ ಉರಿಸಿದ ದೀಪ (ಇದನ್ನು 'ಕೋಲ್ತಿರಿ' ಎನ್ನುತ್ತಾರೆ ) ವನ್ನು ಇಡಲಾಗುತ್ತದೆ. ಈ ಬಲಿಯಲ್ಲಿ ಕೋಳಿಯ ತಲೆಯನ್ನು ಕೊಯ್ದು ರಕ್ತವನ್ನು ಸುರಿಸುತ್ತಾರೆ.

ದೈವಸ್ಥಾನಗಳಲ್ಲಿ ದೈವಗಣಗಳಿಗೆ ರಕ್ತಾಹುತಿಯನ್ನು ನೀಡಲು ಶಾಶ್ವತವಾಗಿಯೋ ತಾತ್ಕಾಲಿಕವಾಗಿಯೋ ಬಲಿವೇದಿಕೆಗಳನ್ನು ನಿರ್ಮಿಸಲಾಗುತ್ತದೆ. ದೇವಾಲಯದ ಬಡಗು ದಿಕ್ಕಿನಲ್ಲಿ ಇವುಗಳಿರುತ್ತವೆ. ನಿರ್ದಿಷ್ಟ ಉತ್ಸವ ಕಾಲದಲ್ಲಿ ಮೇಲೆ ಹೇಳಿದ 'ಬಲಿ'ಯನ್ನು ಅದರ ಮೇಲಿಟ್ಟು ಕೋಳಿಗಳನ್ನು 'ಬಲಿ'ಕೊಡಲಾಗುತ್ತದೆ. ಅರಳುಮುದ್ರೆ ಮಾಡಿ ಕೋಳಿತಲೆಯನ್ನು ಕೊಯ್ದು ರಕ್ತಸುರಿದು ಅಕ್ಕಿರೊಟ್ಟಿ ಮತ್ತು ಕೋಳಿಪದಾರ್ಥ ಮಾಡಿ 'ಬಾರಣೆ' ಅಥವಾ 'ಪಸಾರ್ನೆ' ಕೊಡುವುದೂ ಇದೆ.

೨. ದೇವಕ್ರಿಯೆ :- ಶಾಲಿಯ ತೆರುಕ್ಷೇತ್ರಗಳಲ್ಲಿ 'ಭಗವತಿ'ಗೆ 'ದೇವಕ್ರಿಯೆ'ಯಿಂದಲೇ ಆರಾಧನೆ ನಡೆಯುತ್ತದೆ. ಪೂಜಾದಿ ಕರ್ಮಗಳನ್ನು ನಡೆಸಿ, ಹೂಗಳು, ತೆಂಗಿನಕಾಯಿ, ಬೆಲ್ಲ, ವೀಳ್ಯದೆಲೆ, ಅಡಿಕೆ ಹಾಗೂ ಅಕ್ಕಿಯನ್ನು (ಅರಳು ಕೂಡಾ ಬಳಸುತ್ತಾರೆ) ದೇವರಿಗೆ 'ಎಡೆ' ಇಡುವುದು. ಇದನ್ನು 'ಪನಿವಾರ ಅಥವಾ 'ಅಗೆಲು' ಎಂದು ಹೇಳುತ್ತಾರೆ. ಮಲಯಾಳದಲ್ಲಿ 'ಬೆಳಂಬು' ಎನ್ನುತ್ತಾರೆ. ವಿಶೇಷವಾದ ಕೆಲವು ದಿನಗಳಲ್ಲಿ ಈ ರೀತಿಯಲ್ಲಿ ಆರಾಧನೆಗಳು 'ತಾನಂ' ಗಳಲ್ಲಿ ನಡೆಸುತ್ತಾರೆ.

ಕ್ಷೇತ್ರಗಳಲ್ಲಿ ತೆಯ್ಯಂಗಳನ್ನು ಆರಾಧಿಸುವ ವಿಧಾನದಲ್ಲಿ ಮೂರು ಬಗೆಯಿದೆ.

೧. ದೈವದ ಮುಖವಾಡಗಳನ್ನು ಇಟ್ಟು ಆರಾಧಿಸುವುದು.

೨. ದೈವದ ಆಯುಧಗಳನ್ನು ಇಟ್ಟು ಆರಾಧಿಸುವುದು.

೩. ಹಲಗೆಗಳನ್ನೋ, ತೂಗುಮಂಚಗಳನ್ನೋ ಇಟ್ಟು ಆರಾಧಿಸುವುದು.

ಕೆಲವು ತೆಯ್ಯಂ ಗಳನ್ನು ಕೋಲವನ್ನು ಕಟ್ಟಿ ವರ್ಷಕ್ಕೊಮ್ಮೆಯೋ, ವಿಶೇಷ ಸಂದರ್ಭಗಳಲ್ಲಿಯೋ, ಕೆಲವು ವರ್ಷಗಳಿಗೂಮ್ಮೆಯೋ ಆರಾಧಿಸುತ್ತಾರೆ. ಕೆಲವನ್ನು ಪೂಜಾದಿ ಕರ್ಮಗಳ ಮೂಲಕವಾಗಿ ಆರಾಧಿಸಲಾಗುತ್ತದೆ.

<u>ಭಂಡಾರಮನೆ</u>:- ಎಲ್ಲಾ ಕ್ಷೇತ್ರ (ತಾನಂ) ಗಳ ಬಳಿಯಲ್ಲೂ ಒಂದು ಭಂಡಾರಮನೆ ಇರುತ್ತದೆ. 'ಭಂಡಾರಮನೆ 'ಎಂದರೆ ತೆಯ್ಯಂಗಳ ಆಯುಧಗಳನ್ನೂ, ಆಭರಣಗಳನ್ನೂ ಇರಿಸುವ ಸ್ಥಳ. ವಿಶೇಷ ಉತ್ಸವದ ಸಂದರ್ಭಗಳಲ್ಲಿ ಭಂಡಾರದ ಮನೆಗಳಿಂದ ಅವುಗಳನ್ನು ಮೆರವಣಿಗೆಯ ಮೂಲಕ ತರಲಾಗುತ್ತದೆ. ಕೆಲವು ವಾಸಿಸುವ ಮನೆಗಳೇ ಭಂಡಾರದ ಮನೆಗಳಾಗಿರುತ್ತವೆ. ಅಲ್ಲಿ ದೈವದ ಸೊತ್ತುಗಳು ಆ ಮನೆಯವರ ಸುಪರ್ದಿಯಲ್ಲಿರುತ್ತವೆ. ಭಂಡಾರಮನೆಗಳಲ್ಲೂ ಆಯುಧಗಳಿಗೆ ಪೂಜೆಗಳನ್ನು ನಡೆಸುತ್ತಾರೆ.

<u>ತಾನಂಗಳಲ್ಲಿ ಆರಾಧನಾ ವಿಧಾನ</u> :- ಶಾಲಿಯ ಸ್ಥಾನಂಗಳಲ್ಲಿ ನಿತ್ಯ, ಮಾಸಿಕ, ವಾರ್ಷಿಕ, ಪಂಚವಾರ್ಷಿಕಗಳೆಂದು ಕಾಲಾನುಕಾಲಕ್ಕೆ ದೈವಗಳ ಆರಾಧನೆಯು ಜರಗುತ್ತವೆ. ಅವುಗಳು ಈ ರೀತಿಯಲ್ಲಿವೆ.

೧. ನಿತ್ಯಪೂಜೆ:- ಪ್ರತಿದಿನ ಸಂಜೆ ಸ್ಥಾನದ ಹೊರಬಾಗಿಲನ್ನು ತೆಗೆಯದೆ ಸೂರ್ಯಾಸ್ತಮಾನಕ್ಕೆ ಮುನ್ನ ಸ್ಥಾನದ ಗುಡಿಗಳನ್ನು ಶುದ್ಧಮಾಡಿ ದೈವಕ್ಕೆ ದೀಪವನ್ನು ಹಚ್ಚಿ ಇಡಲಾಗುವುದು.

೨. ಚೊವ್ವವಿಳಕ್ಕು:- 'ಚೊವ್ವ' ಅಂದರೆ 'ಮಂಗಳ ' ಎಂದರ್ಥ. ಮಂಗಳವಾರದಂದು ದೇವಿಯ ವಿಗ್ರಹವನ್ನು ಪುಷ್ಪಗಳಿಂದ ಅಲಂಕರಿಸಿ, ಅವಲಕ್ಕಿಯ ನೈವೇದ್ಯವನ್ನು ನಿವೇದಿಸಿ, ಭಕ್ತ್ಯಾನುಸಾರ ಫಲವಸ್ತುಗಳನ್ನು ಸಮರ್ಪಿಸಿ ಪೂಜಿಸುವುದು. ಚೊವ್ವವಿಳಕ್ಕು 'ಭಗವತಿಗೆ' ಅತೀ ಪ್ರಿಯವಾದ ಪೂಜೆ. ಈ ದಿನ ದೇವೀ ದರ್ಶನವೂ ಕೆಲವೆಡೆ ನಡೆಯುತ್ತದೆ. (ಭಗವತಿ ದೇವೀ ಸ್ವರೂಪಳು ಎನ್ನುವುದು ಮಂಗಳವಾರದ ಈ ಪೂಜೆಯು ಸೃಷ್ಟೀಕರಿಸುತ್ತದೆ.) ಮುಖ್ಯಪಾತ್ರಿಗಳೂ, ಅಚ್ಚಮ್ಮಾರರೂ ಈ ದಿನ 'ತಾನಂ' ಗೆ ಬರುತ್ತಾರೆ. ಕೆಲವೊಮ್ಮೆ ಕೋಮರ (ಪಾತ್ರಿ)ರಿಂದ ದರ್ಶನ ಹಾಗೂ ಪ್ರಸಾದ ವಿತರಣೆಯೂ ಇರುವುದು.

೩. ಸಂಕ್ರಮಣದ ಪೂಜೆ:- ಪ್ರತೀ ತಿಂಗಳ ಸಂಕ್ರಮಣದಂದು ' ಅಚ್ಚಮ್ಮಾರರು' ( ಕ್ಷೇತ್ರದ ಸ್ಥಾನಿಕ ವರ್ಗ ) ಸ್ನಾನ ಮಾಡಿ ಗಂಧ ಪ್ರಸಾದವನ್ನು ಹಚ್ಚಿ ಮಡಿ ವಸ್ತ್ರವನ್ನು ಉಟ್ಟು ಗುಡಿಗಳ ಬಾಗಿಲುಗಳನ್ನು ತೆರೆದು ಎಲ್ಲಾ ಗುಡಿಗಳಲ್ಲಿಯೂ 'ಪನಿಯಾರ ' ವನ್ನಿಡುವರು. ತುದಿ ಬಾಳೆಯೆಲೆಯಲ್ಲಿ ಅಕ್ಕಿ, ತೆಂಗಿನಕಾಯಿ, ಅಡಿಕೆ, ವೀಳ್ಯದೆಲೆ ಇತ್ಯಾದಿಗಳನ್ನು ಇಟ್ಟು ದೇವರ ಮುಂದೆ ದೀಪವನ್ನು ಉರಿಸಿ ಪೂಜೆ ಮಾಡಿ ಸ್ಥಾನಿಕರೂ, ಜಾತಿ ಬಾಂಧವರು ಸೇರಿ ಪ್ರಾರ್ಥನೆ ಮಾಡುತ್ತಾರೆ.

ಸಿಂಹಮಾಸದಲ್ಲಿ ೩೦ ದಿನವೂ 'ನಡೆ' ( ದೇವಸ್ಥಾನದ ಹೊಸ್ತಿಲು ) ಯಲ್ಲಿ ಜೇಡಿಮಣ್ಣಿನಿಂದ

ರಂಗೋಲಿ ಬಿಡಿಸಿ ಹೂ ಹಾಕಿ ನಿತ್ಯ ಪೂಜೆಯನ್ನು ಮಾಡುತ್ತಾರೆ. ಕನ್ಯಾ ಸಂಕ್ರಮಣದಂದು ಮುಂಜಾನೆ 'ತಾನಂ' (ಸ್ಥಾನ)ಗೆ ಭತ್ತದ ಕದಿರನ್ನು ತಂದು ಐದು ವಿಧದ ಎಲೆಗಳಲ್ಲಿ ದಡ್ಡಾಲದ ಮರದ ತೊಗಟೆಯ ನಾರಿನಿಂದ ಕಟ್ಟಿ ತೊಲೆಗಳಿಗೆ ಕಟ್ಟುವ ಕ್ರಮವಿದೆ. ಇದನ್ನು 'ನಿರ' ಎಂದು ಹೇಳುತ್ತಾರೆ. ಮಧ್ಯಾಹ್ನ ಸಂಕ್ರಮಣ ಪೂಜೆ ಆದ ನಂತರ ಹೊಸ ಅಕ್ಕಿಯ ಊಟವನ್ನು ಮಾಡಲಾಗುವುದು. ಇದನ್ನು 'ಪುತ್ತರಿ' ಎಂದು ಕರೆಯುತ್ತಾರೆ.

ಸಂಕ್ರಮಣದ ದಿನಗಳಲ್ಲಿ ಚಪ್ಪರಮದುವೆ, ಎಡಂಗಾಜಾರ, ತುಲಾಭಾರದಂತಹ ಸಂಪ್ರದಾಯಗಳನ್ನೂ ನಡೆಸುತ್ತಾರೆ. ಮಧ್ಯಾಹ್ನ ಪೂಜೆಯ ಹೊತ್ತಿಗೆ ಕೋಮರ ( ದರ್ಶನ ಪಾತ್ರಿ ) ರಿಗೆ ದರ್ಶನವೂ ಬಂದು ಭಕ್ತರಿಗೆ ದೇವಿಯಿಂದ ಅಭಯಪ್ರದಾನವಾಗುವುದೂ ಇದೆ.

೪. ವಾರ್ಷಿಕಾಚರಣೆ:- ವರ್ಷಕ್ಕೊಂದಾವರ್ತಿ 'ತಾನಂ' ಗಳಲ್ಲಿ ನಡೆಯುವ ದೈವಾರಾಧನೆಗಳು ಈ ಸಾಲಿಗೆ ಸೇರುತ್ತವೆ

೧. ವಿಷು ಉತ್ಸವ:- ಮೇಷಸಂಕ್ರಮಣದ ಮರುದಿನ ವಿಷುಕಣಿ ಉತ್ಸವವು ನಡೆಯುವುದು. 'ವಿಷು' ಅಥವಾ 'ಬಿಸು' ಎಂದರೆ ಸೌರಮಾನ ಯುಗಾದಿಯ ದಿನ. ಆ ದಿನ 'ಕಣಿ' ಯನ್ನು ಇಡುವ ಕ್ರಮವಿದೆ. 'ಕಣಿ' ಎಂದರೆ ( ಮೊದಲು ಕಾಣುವುದು ಎಂದರ್ಥ ) ಸಮೃದ್ಧತೆಯ ಸೂಚಕವಾದ ವಸ್ತುಗಳನ್ನು ಇರಿಸಿ ವರ್ಷದ ಆರಂಭದಲ್ಲಿ ಅವುಗಳನ್ನು ಕಂಡರೆ ವರ್ಷಪೂರ್ತಿ ಸಮೃದ್ಧತೆಯೇ ಒದಗಿಬರುತ್ತದೆ. ಶುಭವೇ ಉಂಟಾಗುತ್ತದೆ ಎನ್ನುವ ನಂಬಿಕೆ ಇದೆ. ಆ ದಿನ ಜಾತಿ ಬಾಂಧವರೆಲ್ಲರೂ 'ತಾನಂ' ಗೆ ದೇವಿ ದರ್ಶನಕ್ಕೂ ವಿಷು ಕಣಿಯನ್ನು ಕಾಣಲೂ ಬರುತ್ತಾರೆ. ಬೆಳಗಾವುದಕ್ಕಿಂತ ಮುನ್ನವೇ ಸ್ಥಾನಿಕರು ಸ್ನಾನ ಮಾಡಿ ದೇವಿಯ ಗುಡಿಯಲ್ಲಿ ಹಲವು ವಿಧದ ತರಕಾರಿ, ಹಣ್ಣು ಹಂಪಲು ಹಾಗೂ ಶುಭದ ಸಂಕೇತವಾದ ಇತರ ವಸ್ತುಗಳನ್ನೂ ಆಲಂಕಾರಿಕವಾಗಿ ಜೋಡಿಸಿಡುತ್ತಾರೆ. ( 'ಕಣಿಕ್ಕೊನ್ನ' ಎನ್ನುವ ಹೂವನ್ನು ದಕ್ಷಿಣದ ತೆರುಗಳಲ್ಲಿ ಕಡ್ಡಾಯವಾಗಿ ಇರಿಸುತ್ತಾರೆ ) ದೇವರ ಮುಂದೆ ದೀಪವನ್ನು ಬೆಳಗಿ ಇಡಲಾಗುತ್ತದೆ.

೨. ಮೀನ ಮಾಸದ ಪೂರಂ ಚಂದ್ರಗಿರಿಯ ದಕ್ಷಿಣದ ಕ್ಷೇತ್ರಗಳಲ್ಲಿ ಮೀನ ಮಾಸದಲ್ಲಿ ಹುಣ್ಣಿಮೆಗೆ ೯ ದಿನಗಳ ಮೊದಲು ಪೂರಂ ಉತ್ಸವವು ಆರಂಭವಾಗುತ್ತದೆ. 'ಹೂ' ಹಾಕಿ ಕಾಮನನ್ನು ಕನ್ಯೆಯರು ಆರಾಧಿಸಿ 'ಪೂರಂ' ನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ 'ತಾನಂ' ಗಳಲ್ಲಿ 'ಪೂರಕ್ಕಳಿ'ಯನ್ನು ಆಡಲಾಗುತ್ತದೆ. ( ವಿವರಗಳು ೭ ನೇ ಅಧ್ಯಾಯದಲ್ಲಿದೆ ) .

೩. ಮುತ್ರೆ :- ಶಾಲಿಯಾರ ಕೆಲವು 'ತಾನಂ' ಗಳಲ್ಲಿ ಕರ್ಕಾಟಕ ೧೬ ನೇ ದಿನ ನಡೆಯುವ ಒಂದು ಆಚರಣೆ ಮುತ್ರೆ. ಕ್ಷುದ್ರ ದೇವತೆಗಳನ್ನು ಓಡಿಸುವುದು ಎಂದೂ 'ಮಾರಿ ನೂಕುವುದು' ಎಂದೂ ಇದನ್ನು ಹೇಳುತ್ತಾರೆ. (ತುಳುನಾಡಿನ ಇತರ ಸಮುದಾಯದವರು ಇದನ್ನು ಬೇರೆ ಬೇರೆ ಸಂದರ್ಭದಲ್ಲಿ ಆಚರಿಸುತ್ತಾರೆ ) ಕಾಸರಗೋಡಿನ ಭಾಗದಲ್ಲಿ ಮುಖ್ಯವಾಗಿ 'ಕುಂಬಳೆ' ಯ 'ತಾನಂ' ನಲ್ಲಿ ಇದನ್ನು ಕರ್ಕಾಟಕ ೧೬ ರಂದು ಅರ್ಧ ರಾತ್ರಿಯಲ್ಲಿ ನಡೆಸುತ್ತಾರೆ. ಮೊದಲು ಈ ಮೊದಲು ಹೇಳಿದ 'ಅಸುರಕ್ರಿಯೆ' ಗಳು ನಡೆಯುತ್ತವೆ 'ಬಲಿ ತಟ್ಟ' ನ್ನು ನಿರ್ಮಿಸಿ ಕೋಳಿಗಳನ್ನು ಕೊಯ್ದು ಅವುಗಳ ರಕ್ತವನ್ನೂ ಅರಶಿನದ ಹುಡಿಯನ್ನೂ ಬಲಿತಟ್ಟಿಗೆ ಸುರಿದು ಅದನ್ನು ಹಿಡಿದುಕೊಂಡು ದರ್ಶನ ಪಾತ್ರಿಗಳೂ ಸಮಾಜ ಬಾಂಧವರೂ

ಸೇರಿ "ಹುವ್ವ ಹುವ್ವ ಹುವ್ವ" ಎಂದು ದೊಡ್ಡ ಸ್ವರ ಮಾಡುತ್ತಾ – ಮಾರಿಯನ್ನು ನೂಕಿಕೊಂಡು ಸ್ಥಾನ (ತಾನಂ) ದ ಆವರಣದಿಂದ ಹೊರಗೆ ನಿರ್ಜನ ಪ್ರದೇಶಕ್ಕೆ ತಂದು ಇಡಲಾಗುತ್ತದೆ.

ಚಂದ್ರಗಿರಿಯ ದಕ್ಷಿಣ ಭಾಗದಲ್ಲಿ ಸ್ವಲ್ಪ ವ್ಯತಿರಿಕ್ತವಾಗಿ ಇದು ಆಚರಿಸಲ್ಪಡುತ್ತದೆ. ಕರ್ಕಾಟಕ ೧೬ ರಂದೇ ಸಾಮಾನ್ಯವಾಗಿ ಅಲ್ಲಿಯೂ 'ಮುತ್ತಿರೆ' ಯನ್ನು ಆಚರಿಸುತ್ತಾರೆ. ಮೊದಲು 'ಅಸುರ ಕ್ರಿಯೆ' ಗಳು ನಡೆಯುತ್ತವೆ. ಅನಂತರ ದರ್ಶನ ಪಾತ್ರಿಗಳು ಕತ್ತಿಗಳನ್ನೂ ಖಡ್ಗಗಳನ್ನೂ ಹಿಡಿದು ದೇವಾಲಯದಿಂದ ಮೆರವಣಿಗೆ ಹೊರಟು 'ಸ್ಥಾನಂ' ನ ಹತ್ತಿರ ಪ್ರತ್ಯೇಕ ಒಲೆಗಳನ್ನು ಹೂಡಿ ಪ್ರೇತಾತ್ಮಗಳಿಗೆ ಪ್ರತ್ಯೇಕ ಆಹಾರಗಳನ್ನು ತಯಾರಿಸುತ್ತಾರೆ. ಇದನ್ನು 'ಅರಿಇಡ' (ಅರಿಯಡ ?= ಅಕ್ಕಿಯ ತಿಂಡಿ) ಎಂದು ಕರೆಯುತ್ತಾರೆ. ಅನಂತರ ಕೇಪುಳದ ಹೂವು ಮತ್ತು ಬಾಳೆಯ ತುಂಡುಗಳನ್ನು ಸೇರಿಸಿ 'ಅರಿಇಡ' ವನ್ನು ಹಿಡಿದುಕೊಂಡು ಸ್ಮಶಾನಕ್ಕೆ ಬರುತ್ತಾರೆ. ಸ್ಮಶಾನದ ಹೊರಗೆ ಪ್ರತ್ಯೇಕವಾಗಿ ನಿರ್ಮಿಸಿದ 'ಬಲಿಕೇಂದ್ರ' ದಲ್ಲಿ ಗಂಟೆ ಬಾರಿಸಿ, ಕೆಲವು ಮಂತ್ರಗಳನ್ನುಚ್ಚರಿಸಿ ಇದನ್ನು ಇಟ್ಟು 'ಪಡವೀರನ್' ದೈವದ ಕೋಮರ (ದರ್ಶನ ಪಾತ್ರಿ) ಕೋಳಿಯನ್ನು ಕೊಯ್ಯುತ್ತಾನೆ (ಈ ಹಕ್ಕು ಅವನಿಗೆ ಮಾತ್ರವಿದೆ.) ಈ ಸಂದರ್ಭದಲ್ಲಿ ಗುಳಿಗನಿಗಾಗಿ ಕೋಳಿ ಮರಿಯನ್ನು ಸೀಳಿ ಬಿಸುಡುವುದೂ ಇದೆ. ಆ ದಿನ ಇದನ್ನು ಕಾಣಲು ಕಾಳಿ ಕೂಳಿಗಳಂತಹ ಕ್ಷುದ್ರ ದೇವತೆಗಳು ಸಂಚರಿಸಿತ್ತಾರೆ ಎಂಬ ನಂಬಿಕೆಯಿದೆ. ಅವುಗಳ ದೃಷ್ಟಿಗೆ ಮಕ್ಕಳು ಬೀಳದಂತೆ ಹಿಂದೆ ಸಣ್ಣ ಮಕ್ಕಳನ್ನು ತಾಯಂದಿರು ಅರೆಯುವ ಕಲ್ಲಿಗೆ ಕಟ್ಟುತ್ತಿದ್ದರು ಎನ್ನಲಾಗಿದೆ. ನೀರು ತುಂಬಿಸಿಡುವ ಎಲ್ಲಾ ಪಾತ್ರೆಗಳನ್ನೂ ಖಾಲಿ ಮಾಡಿ ಪಾತ್ರೆಗಳನ್ನು ಕವುಚಿ ಹಾಕಲಾಗುತ್ತದೆ. ಕ್ಷುದ್ರದೇವತೆಗಳಿಗೆ ನೀರು ಸಿಗಬಾರದು ಎನ್ನುವುದೇ ಇದರ ಹಿಂದಿನ ಉದ್ದೇಶ ಎಂದು ಅಭಿಪ್ರಾಯಪಡಲಾಗುತ್ತದೆ. ನೀರು ಸಿಕ್ಕದೇ ಕೂಗಿ ಕೂಗಿ ಭೂತ, ಪ್ರೇತ, ಪಿಶಾಚಿಗಳು ನಿಲ್ಲಲಾಗದೆ ಪಾತಾಳ ಲೋಕಕ್ಕೆ ಓಡಿ ಹೋಗುತ್ತಾರೆ ಎಂಬ ನಂಬಿಕೆ ಇದೆ.

ಬಾಳೆದಿಂಡನ್ನು ನೆಲಕ್ಕೆ ಬಡಿಯುತ್ತಾ ಕೇಪುಳದ ಹೂವಿನೊಂದಿಗೆ ಶಬ್ದ ಮಾಡಿಕೊಂಡು ದರ್ಶನ ಪಾತ್ರಿಗಳು ಯುವಕರೂ ಸ್ಮಶಾನದೆಡೆಗೆ ಓಡುವಾಗ ಕೇಪುಳದ ಹೂವು ಬಿದ್ದ ಮನೆಯಿಂದ ಕ್ಷುದ್ರ ದೇವತೆಗಳು ಓಡಿಹೋಗುತ್ತಾರೆ ಎಂಬ ಅಭಿಪ್ರಾಯವಿದೆ.

ಕರ್ಕಾಟಕ ತಿಂಗಳನ್ನು ಸಾಮಾನ್ಯವಾಗಿ ಅತ್ಯಂತ ಸಂಕಷ್ಟದ ತಿಂಗಳು ಎಂದು ಪರಿಗಣಿಸಲಾಗುವುದು. ಭೋರೆಂದು ಸುರಿಯುವ ಮಳೆ, ಕತ್ತಲೆ ಕವಿದ ಆಕಾಶ, ಪ್ರಕೃತಿಯ ರುದ್ರ ತಾಂಡವ ನಡೆಯುವ ಕಾಲವೆಂದು ಇದನ್ನು ಪರಿಗಣಿಸಲಾಗುತ್ತದೆ. ಇಂತಹ ಕರಾಳ ದಿನಗಳಲ್ಲಿ ಕ್ಷುದ್ರ ದೇವತೆಗಳು ತಮ್ಮ ಆಹಾರವನ್ನು ಹುಡುಕುತ್ತವೆ; ಅವುಗಳ ಉಪಟಳ ಹೆಚ್ಚಾಗುತ್ತವೆ ಎನ್ನುವುದು ಒಂದು ನಂಬಿಕೆ. ಬಹುಶಃ ಭೀಕರ ಮಳೆಗಾಲದ ಸಮಯವಾದುದರಿಂದ ಪ್ರಕೃತಿ ವಿಕೋಪವು ಉಂಟಾಗಿ ಮರಣಗಳು ಹೆಚ್ಚಾಗಿ ಈ ಸಮಯದಲ್ಲಿ ಸಂಭವಿಸುತ್ತಿರಬಹುದು. ಸಿಡಿಲಿಗೆ ತುತ್ತಾಗಿಯೋ, ಬಿರುಗಾಳಿಗೆ ಸಿಲುಕಿಯೋ, ಪ್ರವಾಹದ ಸೆಳೆತಕ್ಕೊಳಗಾಗಿಯೋ, ಶೀತ, ಜ್ವರ, ಕೆಮ್ಮು ಮೊದಲಾದ ರೋಗಗಳಿಗೆ ಶರೀರವು ಬಹಳ ಬೇಗ ತುತ್ತಾಗುವುದರಿಂದಲೋ ಈ ತಿಂಗಳು ಮರಣ ಸಂಖ್ಯೆಯು ವರ್ಷದ ಉಳಿದ ತಿಂಗಳುಗಳಿಗಿಂತ ಹೆಚ್ಚಾಗಿ ಸಂಭವಿಸುವ ಸಾಧ್ಯತೆ ಇರಬಹುದು. ಇವೆಲ್ಲಕ್ಕೂ ಪ್ರಕೃತಿಯ ಹಿಂದೆ ಅಡಗಿರುವ ಭೂತ ಪ್ರೇತಗಳಂತಹ ಕ್ಷುದ್ರ ದೇವತೆಗಳೇ ಕಾರಣವೆಂದು ಬಲವಾಗಿ ನಂಬಿದವರು ದುರ್ಮರಣಗಳಿಗೆ ಕಾರಣಕರ್ತರಾದ ಅವುಗಳನ್ನು

ಪ್ರೀತಿಪಡಿಸಿ, ದೂರಕ್ಕೆ ಅಟ್ಟಿಬಿಟ್ಟರೆ ಮುಂದಕ್ಕೆ ಕ್ಷೇಮವಾಗಬಹುದು ಎನ್ನುವ ವಿಶ್ವಾಸವೇ ಕರ್ಕಾಟಕ ತಿಂಗಳಲ್ಲಿ 'ಮಾರಿ ಅಟ್ಟುವ' ಸಂಪ್ರದಾಯ ಅಸ್ತಿತ್ವಕ್ಕೆ ಬರಲು ಕಾರಣವಾಗಿರಬಹುದು. 'ಮಾರಿ' ಎಂದರೆ 'ತೊಂದರೆ' ಎಂದೇ ಅರ್ಥ. ತೊಂದರೆಯನ್ನು ಉಂಟುಮಾಡುವ ದೇವತೆಗಳನ್ನು 'ಮಾರಿ ದೇವತೆಗಳು' ಎಂದೇ ಕರೆಯುತ್ತಾರೆ. ಕರ್ಕಾಟಕ ತಿಂಗಳಿನಂತಹ ಸಂಕಷ್ಟದ ದಿನಗಳಲ್ಲಿ ತೊಂದರೆಗಳು ಎದುರಾದಾಗ, " ಮಾರಿಯನ್ನು ಓಡಿಸಿಯಾಗಿದೆ. ಇನ್ನು ಅದರ ಉಪದ್ರವವಿರಲಾರದು." ಎನ್ನುವ ವಿಶ್ವಾಸವೇ ಅವರಿಗೆ ಮಾನಸಿಕ ಧೈರ್ಯವನ್ನು ಕೊಟ್ಟು, ರೋಗ ನಿರೋಧಕ ಶಕ್ತಿಯು ಶರೀರದಲ್ಲಿ ಪ್ರಬಲಗೊಂಡು ಸಣ್ಣ ಸಣ್ಣ ರೋಗಗಳು ವಾಸಿಯಾಗುತ್ತಿರಬಹುದು. ದೈವ ಭಯವು ರೋಗಕ್ಕೆ ಕಾರಣವಾದರೆ, ದೈವಕ್ಕೆ ನೀಡಬೇಕಾದುದನ್ನು ನೀಡಿ ಶಾಂತಿ ಪಡಿಸುವುದು ಮಾನವನ ಮಾನಸಿಕ ಶಾಂತಿಗೂ ಕಾರಣವಾಗುತ್ತದೆ. ಇದುವೇ ಮಾನವನ ದೈವ ಶ್ರದ್ಧೆಗೆ ಮೂಲವಾದುದು.

ಮನುಷ್ಯನ ಮನಸ್ಸಿನೊಳಗಿನ ದ್ವೇಷಾಸೂಯೆಗಳನ್ನು ಓಡಿಸಲು ಸಾಂಕೇತಿಕವಾಗಿ ಇದನ್ನು ಆಚರಿಸಲಾಗುತ್ತದೆ ಎನ್ನಬಹುದು.

ನಡಾವಳಿ ಉತ್ಸವ :– ಚಂದ್ರಗಿರಿಯ ಉತ್ತರದ 'ತಾನಂ' ಗಳಲ್ಲಿ ಐದು ವರ್ಷಕ್ಕೊಮ್ಮೆ ನಡೆಸಲಾಗುವ ದೊಡ್ಡ ಪ್ರಮಾಣದ ಹಿರಿಯ ಉತ್ಸವಕ್ಕೆ 'ನಡಾವಳಿ' ಉತ್ಸವ ಎಂದು ಕರೆಯುತ್ತಾರೆ. ಈ ಉತ್ಸವದ ಖರ್ಚಿಗೆ ನಗರದ ಸದಸ್ಯರಿಂದ ವಂತಿಗೆಯನ್ನು ವಸೂಲು ಮಾಡಲಾಗುತ್ತದೆ. ಈ ಉತ್ಸವವು ೨ ದಿನಗಳ ಕಾಲ ಆಚರಿಸಲ್ಪಡುತ್ತದೆ. ಮೊದಲನೆಯ ದಿನ ಭಂಡಾರದ ಮನೆಯಿಂದ ಭಂಡಾರವನ್ನು ವಿಜೃಂಭಣೆಯಿಂದ ದೇವಸ್ಥಾನಕ್ಕೆ ತಂದು ನಿಶ್ಚಿತ ಸ್ಥಳದಲ್ಲಿ ಇಡಲಾಗುವುದು. ಭಂಡಾರ ಬಂದ ನಂತರ ರಾತ್ರೆ ಅನ್ನಸಂತರ್ಪಣೆಯಿದೆ. ಆನಂತರ ಭಗವತಿ ದೇವಿಯ ಉತ್ಸವಮೂರ್ತಿಯನ್ನು ಅಲಂಕರಿಸಿ ಅದನ್ನು ಹೊತ್ತುಕೊಂಡು 'ಕಾರ್ನವರು' ಎನ್ನುವ ಸ್ಥಾನಿಕ ದೇವಾಲಯಕ್ಕೆ ಪ್ರದಕ್ಷಿಣೆ ಬರುತ್ತಾರೆ. ಒಂದು ವೇಳೆ 'ತಾನಂ' ನಲ್ಲಿ ಕಾರ್ನವರು ಇಲ್ಲದೇ ಇದ್ದರೆ ಅಥವಾ ಅವರಿಗೆ ಸೂತಕವಿದ್ದರೆ, ಬೇರೆ 'ನಗರದ' ಕಾರ್ನವರನ್ನು ಕರೆಸಿಯೋ, ದೇವಸ್ಥಾನಗಳ 'ಅಡಿ' ಗಳನ್ನು ಕರೆಸಿಯೋ (ದೇವಾಲಯಗಳ ದೇವರನ್ನು ಹೊರುವ ಬ್ರಾಹ್ಮಣ ಅರ್ಚಕರನ್ನು 'ಅಡಿ' ಗಳು ಎಂದು ತುಳು ನಾಡಿನಲ್ಲಿ ಕರೆಯಲಾಗುತ್ತದೆ. ) ಅವರಿಂದ ಈ ಕಾರ್ಯಕ್ರಮವನ್ನು ನಡೆಸುತ್ತಾರೆ. 'ದೇವರ ಬಲಿ' ಎನ್ನುವ ಈ ಪ್ರದಕ್ಷಿಣೆಯು ವಾದ್ಯ, ಚೆಂಡೆ, ಭಜನೆಗಳೊಂದಿಗೆ ವೈಭವದಿಂದ ಮೂರು, ಐದು, ಏಳೊ, ಒಂಭತ್ತೊ ಆಗಿರಬಹುದು. ದೇವರನ್ನು ಹೊತ್ತು ನೃತ್ಯ ಗತಿಯಿಂದ ಲಯಬದ್ಧವಾಗಿ ಆರಂಭವಾಗುವ ದೈವವನ್ನು ಹೊತ್ತವರ ಈ ಪ್ರದಕ್ಷಿಣೆಯು ಅತ್ಯಾಕರ್ಷಕವಾದುದು. ಕ್ರಮೇಣ ತೀವ್ರಗತಿಯೆಡೆಗೆ ಇದು ಸಾಗುತ್ತದೆ. ಮನಮೋಹಕವಾದ 'ಲಾಸ್ಯದ ಹೆಜ್ಜೆಗಳನ್ನು ಇರಿಸಿ' ತಲೆಯ ಮೇಲಿದ್ದ ಅಲಂಕೃತವಾದ ಪ್ರಭಾವಳಿಯೊಂದಿಗಿನ ಬಿಂಬವನ್ನು ಕೈಯಿಂದ ಆಧರಿಸಿಯೂ, ಆಧರಿಸದೆಯೋ ಪ್ರದಕ್ಷಿಣೆ ಬರುತ್ತಾ ನೋಡು ನೋಡುತ್ತಿರುವಂತೆ ನಿರ್ದಿಷ್ಟ ಪ್ರದಕ್ಷಿಣೆಯನ್ನು ಮುಗಿಸಿ ದೈವಸ್ಥಾನದ ಗರ್ಭ ಗುಡಿಯೊಳಗೆ ಅವರು ಪ್ರವೇಶಿಸುತ್ತಾರೆ. ಈ ಸಂದರ್ಭದಲ್ಲಿ ಆಯಾ ನಗರದ ಅಚ್ಚೆಮ್ಮಾರರೂ. ಅವರೊಂದಿಗೆ ಅತಿಥಿಗಳೂ ಬಂದ ಇತರ ನಗರದ ಅಚ್ಚೆಮ್ಮಾರರೂ ಇರುತ್ತಾರೆ. ಪ್ರದಕ್ಷಿಣೆಯ ಸಂದರ್ಭದಲ್ಲಿ ಕೋಮರ (ದರ್ಶನ ಪಾತ್ರಿ) ಗಳ ದರ್ಶನ ನೃತ್ಯವೂ ಜರಗುತ್ತದೆ. ಸಾಮಾನ್ಯವಾಗಿ ನಾಲ್ಕು ದೈವಗಳ ಕೋಮರರಿರುತ್ತಾರೆ. (ಮೂತೆ ಭಗವತಿ, ಎಳೆಯ ಭಗವತಿ, ಪಿಲಿಚಾಮುಂಡಿ ಮತ್ತು ವಿಷ್ಣುಮೂರ್ತಿ)

ಇದರೊಂದಿಗೆ ವಿಷ್ಣುಮೂರ್ತಿ ದೈವದ ಕೋಲವೂ, ತುಲಾಭಾರ ಸೇವೆಯೂ, ಬಾಲಿಕೆಯರಿಂದ ತಾಲಪ್ಪೊಲಿಯೂ ನಡೆಯುತ್ತದೆ. 'ತಾಲಪ್ಪೊಲಿ' ಎಂದರೆ ಬಾಲಿಕೆಯರು ಹರಿವಾಣವೊಂದರಲ್ಲಿ ಅಕ್ಕಿ ಮತ್ತು ತೆಂಗಿನಕಾಯಿಯನ್ನು ಇರಿಸಿ ಹಣತೆಯನ್ನು ಹಚ್ಚಿ ಕೈಯಲ್ಲಿ ಹಿಡಿದು ಸಾಲಾಗಿ ದರ್ಶನ ಪಾತ್ರಿಗಳ ಹಾಗೂ ದೇವರನ್ನು ಹೊತ್ತವರಿಗಿಂತ ಮುಂದೆ ನಡೆಯುತ್ತಾ ಪ್ರದಕ್ಷಿಣೆ ಬರುವುದು. ಪೂರಕ್ಕಳಿಯಂತೆ ತಾಲಪ್ಪೊಲಿಯೂ ಭಗವತಿಗೆ ಪ್ರಿಯವಾದುದು ಎಂಬ ನಂಬಿಕೆ ಇದೆ. ತಾಲಪ್ಪೊಲಿಯ ಪ್ರದಕ್ಷಿಣೆ ಮುಗಿದ ಮೇಲೆ ಈ 'ಹರಿವಾಣ' ವನ್ನು ಬಾಲಿಕೆಯರ ಕೈಯಿಂದ ಕೋಮರರವರು ಪಡೆದುಕೊಂಡು ನಿಶ್ಚಿತ ಸ್ಥಳದಲ್ಲ ಇಡುತ್ತಾರೆ. ಅನಂತರ ತಾಳೆಗರಿಯ ಕೊಡೆಯೊಂದಿಗೆ ಪ್ರದಕ್ಷಿಣೆ. ತಾಳೆಗರಿಯ ಕೊಡೆಗಳಿಗೆ ನೀಳವಾದ ಬಿದಿರಿನ ಕೋಲುಗಳನ್ನು ಸಿಕ್ಕಿಸಿ, ಆ ಕೊಡೆಯನ್ನು ಸೊಂಟಕ್ಕೆ ಸುತ್ತಿದ ವಸ್ತ್ರಕ್ಕೆ , ಸಿಕ್ಕಿಸಿ ಓಡುತ್ತಾ ಮೂರು ಬಾರಿ ಪ್ರದಕ್ಷಿಣೆ ಬರಬೇಕು. ಈ ಸಂದರ್ಭದಲ್ಲಿ ಕೊಡೆಯವನಿಗೂ ಆವೇಶ ಬರುವುದಿದೆ. ಅನಂತರ ಮಧ್ಯಾಹ್ನದ ಭೋಜನ. ಸಾಯಂಕಾಲ ಆರು ಗಂಟೆಯ ಹೊತ್ತಿಗೆ ಗುಳಿಗನಿಗೆ ಕೋಲವನ್ನು ಕೊಡಲಾಗುತ್ತದೆ. ಈ ಕೋಲದ ಸಂದರ್ಭದಲ್ಲಿ ನಗರದ ಅಚ್ಚಮ್ಮಾರರೂ, ಮುಖ್ಯವಾಗಿ ಮೂತ್ತೆ ಚೆಟ್ಟ್ಯಾರ್‌ರವರೂ ಅಗತ್ಯವಾಗಿ ಹಾಜರಿರಬೇಕು. ಗುಳಿಗನ ಕೋಲ ಕಟ್ಟಿದವನು ಆಗಾಗ ಇವರನ್ನು ಕರೆದು ವಿಚಾರ ವಿನಿಮಯ ಮಾಡುವ ಕ್ರಮವಿದೆ. ಆ ಬಳಿಕ ರಾತ್ರೆ ಎಂಟು ಗಂಟೆಯ ನಂತರ ಭಂಡಾರದ ಮನೆಯಿಂದ ತಂದ ಭಂಡಾರವನ್ನು ವಿಜೃಂಭಣೆಯಿಂದ ಪುನಃ ಭಂಡಾರದ ಮನೆಗೆ ಕೊಂಡುಹೋಗಿ ಇಡಲಾಗುವುದು.

ಭೂತದ ಕೋಲ :- ಕೆಲವು 'ತಾನಂ' ಗಳಲ್ಲಿ ವರ್ಷಕ್ಕೊಮ್ಮೆ ಕೆಲವು ವಿಶೇಷವಾದ ಸಂದರ್ಭದಲ್ಲಿ ಹರಕೆಯ ರೂಪದಲ್ಲಿ, ನಡಾವಳಿಯ ಸಮಯದಲ್ಲಿ ಆರಾಧಿಸಲ್ಪಡುವ ದೈವಗಳನ್ನು ಕೋಲಗಳನ್ನು ಕಟ್ಟಿ ಆಡಿಸುವ ಸಂಪ್ರದಾಯವಿದೆ. ಇದನ್ನು ಕೆಲವು ಕುಟುಂಬದ ಮನೆಗಳಲ್ಲಿಯೂ ನಡೆಸುತ್ತಾರೆ. 'ಕೋಲ' ಎಂದರೆ 'ಅಲಂಕಾರ' ಎಂಬ ಅರ್ಥವಿದೆ. ವಿವಿಧ ದೈವಗಳ ರೂಪಗಳನ್ನು ತಮ್ಮ ಶರೀರದಲ್ಲಿ ಅಲಂಕರಿಸಿಕೊಂಡು ತಾವೇ ದೈವಗಳಾಗಿ ಆವೇಶಕ್ಕೆ ಒಳಗಾಗುವುದನ್ನು ಕೋಲ ಕಟ್ಟುವುದು ಎಂದು ಹೇಳಲಾಗುತ್ತದೆ. ಆಯಾ ದೈವಕ್ಕೆ ಕಟ್ಟುವ ಕೋಲವೇ ಆ ದೈವದ ಸಾತ್ವಿಕತೆಯನ್ನೂ, ಉಗ್ರತೆಯನ್ನೂ ಸಂಕೇತಿಸುತ್ತದೆ. ಭಯ ಭಕ್ತಿಯಿಂದ ದೈವೀಕ ಪ್ರಕ್ರಿಯೆಯಾಗಿ ಇದನ್ನು ಕಾಣಲಾಗುವುದು. ಆಯಾ ಸಮುದಾಯದವರ ಕ್ಷೇತ್ರಗಳಲ್ಲಿ ಆಯಾ ಸಮುದಾಯಕ್ಕಿಂತಲೂ ಕೆಳವರ್ಗದವರೇ ಈ ದೈವಗಳ 'ಕೋಲ' ವನ್ನು ಸಾಮಾನ್ಯವಾಗಿ ಕಟ್ಟುತ್ತಾರೆ. ಶಾಲಿಯ 'ತಾನಂ' ಗಳಲ್ಲಿ, ವಣ್ಣಾನ್, ಮಲಯ, ಕೋಪಾಳ, ಪರವ ಅಥವಾ ಪಂಬದ ಜಾತಿಯವರು ದೈವ (ತೈಯಂ) ಗಳನ್ನು ಕಟ್ಟುತ್ತಾರೆ. ಚಂದ್ರಗಿರಿಯ ದಕ್ಷಿಣ ಭಾಗದಲ್ಲಿ ತೈಯಂಗಳನ್ನು ಕಟ್ಟಿ ಕೋಲ ಕೊಡುವುದನ್ನು 'ಕಳಿಯಾಟಂ' ಎಂದು ಹೇಳುತ್ತಾರೆ. ವರ್ಷಕ್ಕೊಮ್ಮೆಯೋ, ೫, ೧೦, ೧೨, ೧೫, ೨೦ ವರ್ಷಗಳಿಗೊಮ್ಮೆಯೋ 'ಕಳಿಯಾಟಂ' ನಡೆಯುವ ಪದ್ಧತಿಯಿದೆ.

ಚಂದ್ರಗಿರಿಯ ಉತ್ತರ ಭಾಗದ ಶಾಲಿಯಾ ತೆರುಕ್ಷೇತ್ರಗಳಲ್ಲಿ 'ನಡಾವಳಿ'ಯ ಸಂದರ್ಭದಲ್ಲಿ ಭಗವತಿಯನ್ನು ಹೊರತು ಪಡಿಸಿ ಉಳಿದ ದೈವಗಳಾದ, ವಿಷ್ಣುಮೂರ್ತಿ, ಗುಳಿಗ, ಮಲರಾಯ, ಧೂಮಾವತಿ, ಮುಂಡತ್ತಾಯ ಈ ಮೊದಲಾದ ದೈವಗಳಿಗೆ ಕೋಲವನ್ನು ಕಟ್ಟಿ ಆಡಿಸಲಾಗುತ್ತದೆ.

ತೋಂಬ ಅಥವಾ ಪಾಡ್ದನ : ಭೂತಾರಾಧನೆಯ ಪ್ರಮುಖ ಅಂಗ ತುಳುವಿನಲ್ಲಿ ಪಾಡ್ದನ,

ಮಲಯಾಳದಲ್ಲಿ 'ತೋಃಜಂ', ಇವುಗಳನ್ನು 'ತೋಃಜಂ ಪಾಟು'ಗಳೆಂದೂ ಹೇಳುತ್ತಾರೆ. 'ತೋಃಜಂ'ಎನ್ನುವುದು 'ಸ್ತೋತ್ರ' ಎಂಬ ಸಂಸ್ಕೃತ ಶಬ್ದದ 'ತದ್ಭವ' ರೂಪವೆಂದೂ ಹೇಳಲಾಗುತ್ತದೆ. ಹಾಗೇ ತೋರು, ಪ್ರದರ್ಶಿಸು, ಅವತಾರ ಈ ಮೊದಲಾದ ಅರ್ಥಗಳಿವೆಯೆಂದು ಗುಂಡರ್ಟ್‌ನ ಶಬ್ದಕೋಶದಲ್ಲಿ ಹೇಳಲಾಗುತ್ತದೆ. ಈ 'ತೋಃಜಂ'ಗಳ ರಚನಾಕಾಲವನ್ನು ನಿರ್ದಿಷ್ಟವಾಗಿ ಗುರುತಿಸಿ ಹೇಳುವಂತಿಲ್ಲವಾದರೂ ಹಲವಾರು ದೈವಗಳ 'ತೋಃಜಂ ಪಾಟು'ಗಳು ೧೫ ಹಾಗೂ ೧೬ ನೇ ಶತಮಾನಗಳಲ್ಲಿ ರಚಿತವಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇವುಗಳಲ್ಲಿ ಅನೇಕ ಐತಿಹಾಸಿಕ ಅಂಶಗಳು ಅಂತರ್ಗತವಾಗಿದ್ದು, ಅವುಗಳು ದೈವಾರಾಧನಾ ವಿಧಿಗಳಿಗೆ ಹೆಣೆಯಲ್ಪಟ್ಟಿರುವುದರಿಂದ ಪರಂಪರೆಯ ಮುಂದುವರಿಕೆಗೆ ಪ್ರೇರಕವಾದ ಪೂರ್ವಸ್ಮೃತಿಗಳಾಗಿ ಅವು ಕ್ರಿಯಾಶೀಲಗಳಾಗುತ್ತವೆ" ( ಅಮೃತ ಸೋಮೇಶ್ವರ: ಭಗವತೀ ಆರಾಧನೆ: ಪುಟ ೧೮ ) ಬಾಯಿಂದ ಬಾಯಿಗೆ ಹರಿದು ಬಂದ ಈ ಹಾಡುಗಬ್ಬವು ಪ್ರತಿಯೊಂದು ಭೂತದ ಹುಟ್ಟು, ಹಿನ್ನೆಲೆ, ಪ್ರಕರಣ ಮತ್ತು ಮಹಿಮೆಗಳನ್ನು ಹೇಳುತ್ತದೆ.

'ತೆಯ್ಯಂ' ಅಥವಾ 'ಭೂತದ ಕೋಲದ ' ಸ್ವರೂಪ :- ತೆಯ್ಯಂ ಕಟ್ಟುವಿಕೆಯಲ್ಲಿ ತೆಂಗಿನ ಗರಿಗಳಿಗೆ ವಿಶೇಷ ಸ್ಥಾನವಿದೆ. ಕರಾವಳಿ ಪ್ರದೇಶದಲ್ಲಿ ತೆಂಗು ಸಮೃದ್ಧವಾಗಿ ಬೆಳೆಯುವುದೇ ಇದಕ್ಕೆ ಕಾರಣವಾಗಿರಬಹುದು. ಅಣಿ (ತಲೆಯ ಭಾಗದ ಪ್ರಭಾವಳಿ ) , ಸೊಂಟಕ್ಕೆ ಕಟ್ಟಿಕೊಳ್ಳುವ ಸಾಮಾಗ್ರಿ, ಮಣಿ, ಕಡ್ತಲೆ (ಖಡ್ಗದಂತಹ ಗೆಜ್ಜೆಗಳಿಂದ ಕೂಡಿದ ಸಣ್ಣ ಆಯುಧ), ಗಗ್ಗರ (ಕಾಲಿನ ದಪ್ಪವಾದ ಕಂಚಿನ ಕಡಗ) ಸಾಮಾನ್ಯವಾಗಿ ಎಲ್ಲಾ 'ತೆಯ್ಯಂ' ಕಟ್ಟುವಾಗಲೂ ಬಳಸಲ್ಪಡುತ್ತದೆ. ಕೋಲದಲ್ಲೇ (ವೇಷ) ಅಲ್ಪ ಸ್ವಲ್ಪ ವ್ಯತ್ಯಯಮಾಡಿ ಇನ್ನೊಂದು 'ತೆಯ್ಯಂ' ಅದೇ ಕಲಾವಿದನು ಕಟ್ಟುವುದೂ ಇದೆ.

'ತೆಯ್ಯಂ' ಕಟ್ಟುವಾಗ ಈ ಕೆಳಗಿನ ವಿಧಿಗಳನ್ನು ಅನುಕರಿಸಲಾಗುತ್ತದೆ.

೧ ) ನಿರ್ದಿಷ್ಟ ತೆಯ್ಯಂಗೆ ತಕ್ಕ ಮುಖವರ್ಣಿಕೆ ಹಾಕುವುದು.

೨) ಗುಡಿಯೊಳಗಿಂದ ಸ್ಥಾನಿಕರು ತುದಿ ಬಾಳೆಯ ಕೊನೆಯಲ್ಲಿ ಉರಿಸಿದ ಬತ್ತಿಯೊಡನೆ, ಎಲೆಯಡಿಕೆ, ಅಕ್ಕಿ, ಎಣ್ಣೆಗಳನ್ನು ತೆಯ್ಯಂ ಕಟ್ಟುವವರಿಗೆ ನೀಡುತ್ತಾರೆ. ಅದನ್ನು ಸ್ವೀಕರಿಸಿ, ಬತ್ತಿಯನ್ನು ನಂದಿಸುವುದು.

೩) ಸ್ಥಾನಿಕರಿಂದ ದೈವದ 'ಗಗ್ಗರ' ವನ್ನು ಪಡೆದುಕೊಳ್ಳುವುದು.

೪) ಆಯಾ ತೆಯ್ಯಂ (ದೈವ ) ಗೆ ಮೀಸಲಾದ ಅಣಿಯನ್ನು ತೆಯ್ಯಂ ಕಟ್ಟುವವನು ಕಟ್ಟಿಕೊಳ್ಳುತ್ತಾನೆ. ಹಾಗೇ ಕೆಲವು ತೆಯ್ಯಂಗಳಿಗೆ ಸೊಂಟಕ್ಕೆ ಕಟ್ಟಿಕೊಳ್ಳುವ ಅಣಿಯನ್ನು ಕಟ್ಟಲಾಗುತ್ತದೆ. ಸ್ತ್ರೀ ತೆಯ್ಯಂಗಳಾದರೆ 'ಮಾರ್‌ಮೊಲ' (ಎದೆಯ ಮೇಲೆ ಕಟ್ಟಲಾಗುವ ಕೃತಕ ಸ್ತನ) ಗಳನ್ನು ಧರಿಸಲಾಗುತ್ತದೆ.

೫) 'ತೆಯ್ಯಂ' ಹಿಡಿಯುವ ಗಂಟೆ (ಇದನ್ನು 'ಮಣಿ'ಎನ್ನುತ್ತಾರೆ. ) ಯನ್ನೂ ಕಡ್ತಲೆಯನ್ನೂ ಸ್ಥಾನಿಕರಿಂದ ಸ್ವೀಕರಿಸುವುದು.

೬) ಅಲ್ಲಿ ಸೇರಿದವರೂ ಸ್ಥಾನಿಕರೂ ಪ್ರಾರ್ಥನೆ ಮಾಡಿ ಅಕ್ಷತೆಯನ್ನು ಭೂತಕಟ್ಟಿದವನ ಮೇಲೆ ಹಾಕುವುದು.

ಈ ಕ್ರಿಯೆಗಳು ನಡೆಯುತ್ತಿರುವಂತೆ ಚೆಂಡೆಯನ್ನೂ, ಕೊಂಬು ಮೊದಲಾದ ವಾದ್ಯಗಳನ್ನೂ ಅಬ್ಬರದಿಂದ ಬಾರಿಸಲಾಗುತ್ತದೆ. 'ತೆಯ್ಯಂ'' ಕಟ್ಟುವವನ ಜತೆಗಿರುವವನು ನಿರ್ದಿಷ್ಟ 'ತೆಯ್ಯಂ' ತೋಟ್ಟಂ ಹಾಡುತ್ತಿರುತ್ತಾನೆ. 'ತೆಯ್ಯಂ' ಕಟ್ಟಿದವನಿಗೆ ಹಂತಹಂತವಾಗಿ ಆವೇಶವು ಬರುತ್ತದೆ. ಆತ ತಾನೇ 'ತೆಯ್ಯಂ' ಆಗಿ ತನ್ನ ಉದ್ಭವ ಹಾಗೂ ಮಹಾತ್ಮೆಗಳ ಕುರಿತು ಹೇಳಲು ಆರಂಭಿಸುತ್ತಾನೆ. ಸಂಬಂಧಪಟ್ಟವರನ್ನು ಹತ್ತಿರಕ್ಕೆ ಕರೆದು 'ಅರುಳಪ್ಪಾಟ್' (ತುಳುವಿನಲ್ಲಿ ಮದಿಪು ಎನ್ನುತ್ತಾರೆ. ಮದಿಪು ಎಂದರೆ ಭೂತದ ನುಡಿ ಎಂದರ್ಥವಿದೆ.) ಭಕ್ತಿಪೂರ್ವಕವಾಗಿ ಕೈ ಮುಗಿದು ನಿಂತ ಭಕ್ತರು ಅದನ್ನು ಕಿವಿಗೊಟ್ಟು ಆಲಿಸುತ್ತಾರೆ. ತಮಗೊದಗಿದ ಸಂಕಟಗಳಿಗೆ ಪರಿಹಾರವನ್ನು ಕೇಳಿಕೊಳ್ಳುತ್ತಾರೆ 'ತೆಯ್ಯಂ' ಪರಿಹಾರವನ್ನೂ ಸೂಚಿಸುತ್ತದೆ. ಕ್ರಮೇಣ ಆವೇಶವಿಳಿದು ಯಥಾಸ್ಥಿತಿಗೆ ಬರುತ್ತಾನೆ.

ಉತ್ತರ ಕೇರಳದ ಶಾಲಿಯಾ ಕ್ಷೇತ್ರಗಳಲ್ಲಿ ವಿಷ್ಣುಮೂರ್ತಿ ಮತ್ತು ಗುಳಿಗ ದೈವಗಳ ಕೋಲಗಳನ್ನು ನಡಾವಳಿಯ ಸಮಯದಲ್ಲಿ ಅಥವಾ ಕಳಿಯಾಟಂದ ಸಮಯದಲ್ಲಿ ನಡೆಸುತ್ತಾರೆ.

ವಿಷ್ಣುಮೂರ್ತಿ ದೈವವನ್ನು ಕಟ್ಟುವವನು ಮುಖಕ್ಕೆ ಅಂದಾಳ (ಅರಿಶಿನ ಮತ್ತು ಅಕ್ಕಿ ಹಿಟ್ಟು ಮಿಶ್ರಿತವಾದ ಬಣ್ಣ?)ವನ್ನು ಹಚ್ಚಿ ಅದರ ಮೇಲೆ ಮುಖದರ್ಶಿಕೆಯನ್ನು ಬರೆಯುತ್ತಾನೆ. ಕಣ್ಣಿನ ಸುತ್ತಲೂ ಕಪ್ಪು ಬಿಳಿ ಬಣ್ಣ ಬಳಿಯಲಾಗುತ್ತದೆ. ಎಳೆಯ ತೆಂಗಿನ ೨೧ ಗರಿಗಳನ್ನು ಈ ದೈವವನ್ನು ಕಟ್ಟಲು ಬಳಸಲಾಗುತ್ತದೆ. ಚಿಗುರು ಮಡಲಿನ (ತೆಂಗಿನ ಗರಿ) ಕಡ್ಡಿಗಳನ್ನು ಹೆಣೆದು ಎದೆಯ ಸುತ್ತಲೂ ಆವರಿಸುವ ಅಟ್ಟೆಯೊಂದನ್ನು ತಯಾರಿಸುತ್ತಾರೆ. ಸೊಂಟದ ತನಕವೂ ದಪ್ಪವಾದ 'ತಿರಿ'ಯನ್ನು ತೂಗಬಿಡುತ್ತಾರೆ. ಇದನ್ನು ಅರೆ-ಉಡಿ ಎಂದು ಕರೆಯುತ್ತಾರೆ. ಕೈಯಲ್ಲಿ ತೆಂಗಿನ ಗರಿಯಿಂದ ತಯಾರಿಸಿದ ಚೌರಿಯನ್ನು ಕೊಡಲಾಗುತ್ತದೆ. ತೆಂಗಿನ ಗರಿಯನ್ನು ಸೊಂಟದ ಸುತ್ತಲು ಇಳಿಬಿಟ್ಟು ಕಟ್ಟಲಾಗುತ್ತದೆ. ತಲೆಗೆ ನೆತ್ತಿಪಟ್ಟಿ ಹಾಗೂ ಕೇಪಳ ಹೂವಿನ ದಂಡೆ. ಅದರ ಹಿಂಬದಿಗೆ ತೆಂಗಿನ ಗರಿಯಿಂದ ತಯಾರಾದ ಅರ್ಧಚಂದ್ರಾಕೃತಿಯ ಕಿರೀಟ, ಕೆಲವೆಡೆ ಚಿನ್ನಬೆಳ್ಳಿಯಿಂದ ತಯಾರಿಸಿದ ಕಿರೀಟವನ್ನೂ ಬಳಸುತ್ತಾರೆ. ಸಿಂಹದ ಮುಖವಾಡವನ್ನೂ ಕೆಲವೊಮ್ಮೆ ಬಳಸುತ್ತಾರೆ.

ಗುಳಿಗ ದೈವವನ್ನು ಕಟ್ಟುವುದು ಬಹಳ ಸುಲಭ. ಇದರ ಅಲಂಕಾರವು ಬಹಳ ಸರಳ. ತೆಂಗಿನ ಎಳೆಯ. ಗರಿಯಿಂದ ಅಲಂಕೃತವಾದ, ಸರಳ ಉಡುಗೆಯನ್ನು ಸೊಂಟದ ತನಕ ಧರಿಸಲಾಗುತ್ತದೆ. ಅಡಿಕೆಯ ಹಾಳೆಯಿಂದ ತಯಾರಾದ ಮುಖವಾಡವನ್ನು ಹಾಕಿಕೊಂಡು, ಕೈಯಲ್ಲಿ ತ್ರಿಶೂಲ ಮತ್ತು ಗಂಟಾಮಣಿಯನ್ನು ಹಿಡಿಯಲಾಗುತ್ತದೆ. ಅರಳು, ಸೀಯಾಳ, ಕೋಳಿ ಮತ್ತು ಕಳ್ಳನ್ನು ನೀಡಲಾಗುತ್ತದೆ. ಗುಳಿಗನ ತೋಟ್ಟಂ ( ಪಾಡ್ದನ) ಹಾಡುತ್ತಿರುವಂತೆ ಗುಳಿಗನನ್ನು ಕಟ್ಟಿದವನಿಗೆ ಆವೇಶವಾಗುತ್ತದೆ. ದರ್ಶನ ಆರಂಭವಾಗುತ್ತದೆ. ಬಲಿಯ ಸಮರ್ಪಣೆಯೊಂದಿಗೆ ಸಮಾಪ್ತಿಯಾಗುತ್ತದೆ.

ಶಾಲಿಯಾ ಕ್ಷೇತ್ರಗಳಲ್ಲಿ ವಿಷ್ಣುಮೂರ್ತಿಯ ದರ್ಶನ ಪಾತ್ರಿಯನ್ನು 'ವಿಷ್ಣುಮೂರ್ತಿ' ಬೆಳ್ಚಪ್ಪಾಡ ಎನ್ನುವರು. ಉಳಿದ ಸಮುದಾಯದವರಲ್ಲಿ ಹರಿಜನ ಮತ್ತು ಬ್ರಾಹ್ಮಣ ವರ್ಗವನ್ನು ಬಿಟ್ಟು ಉಳಿದವರು 'ವಿಷ್ಣುಮೂರ್ತಿ'ಯ ಆವೇಶಕ್ಕೆ ಒಳಗಾಗುತ್ತಾರೆ.

### ೪. ಕ್ಷೇತ್ರದ ಸ್ಥಾನಿಕ ವರ್ಗ ಅಥವಾ ಆಚಾರ ವರ್ಗ.

ಪ್ರತಿಯೊಂದು ಸಮುದಾಯಕ್ಕೂ ಅದರದೇ ಆದ ಸಾಮಾಜಿಕ ವ್ಯವಸ್ಥೆಯೊಂದು ಇರುತ್ತದೆ. ಸಮಾಜವೆನ್ನುವ ಪ್ರವಾಹವನ್ನು ನಿಯಂತ್ರಿಸಿ ನಿರ್ದಿಷ್ಟವಾದ ದಾರಿಯಲ್ಲಿ ಸಾಗುವಂತೆ ಮಾಡಿ, ಸಾಮೂಹಿಕ ಜೀವನಕ್ಕೆ ಸುಸ್ಥಿರತೆಯನ್ನು ಉಂಟುಮಾಡಲು ಆ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವೊಂದು ನಿಯಂತ್ರಕರೂ ಇರುತ್ತಾರೆ. ಈ ನಿಯಂತ್ರಕರನ್ನು ಒಂದೊಂದು ಸಮುದಾಯದಲ್ಲಿ ಒಂದೊಂದು ಹೆಸರಿನಿಂದ ಕರೆಯುತ್ತಾರೆ. 'ಮುಖಂಡ, ಗುರಿಕಾರ, ಮೊಕ್ತೇಸರ, ಹಿರಿಯ, ಬುದ್ಧಿವಂತ, ಗೌಡ' ಎಂದು. ಕಾಸರಗೋಡು ಹಾಗೂ ದಕ್ಷಿಣ ಕನ್ನಡದ ಶಾಲಿಯಾ ಸಮುದಾಯದಲ್ಲಿ ಇವರನ್ನು 'ಅಚ್ಚಮ್ಮಾರರು' ಎಂದು ಕರೆಯುತ್ತಾರೆ. 'ಅಚ್ಚ' ಎನ್ನುವ ಪದಕ್ಕೆ ಮಲಯಾಳದಲ್ಲಿ ತಂದೆ ಎಂದರ್ಥವಿದೆ. 'ಅಚ್ಚ' ಎನ್ನುವುದು 'ಆಶಾನ್' ಎನ್ನುವುದರ ಅಪಭ್ರಂಶ ರೂಪವಾಗಿರಬೇಕು. 'ಆಶಾನ್' ಎಂದರೆ 'ಒಡೆಯ' ಎಂಬ ಅರ್ಥವಿದೆ. ಸಂಸ್ಕೃತದ "ಆಚಾರ್ಯ" (ಗುರು, ಹಿರಿಯ ಎಂಬ ಅರ್ಥದಲ್ಲಿ) ಎಂಬುದೇ ಮಲಯಾಳದ 'ಆಶಾನ್' ಆಗಿರುವ ಸಾಧ್ಯತೆಯಿದೆ. ಹೀಗೆ ಆಚಾರ್ಯ > ಆಶಾನ್ > ಅಚ್ಚನ್ ಎಂದಾಗಿರಬಹುದು. ಶಾಲಿಯಾ ಸಮಾಜದಲ್ಲಿ ಹಿರಿಯ ಹಾಗೂ ಗುರು ಸ್ಥಾನದಲ್ಲಿ ಈ ಅಚ್ಚಮ್ಮಾರರು ಇರುತ್ತಾರೆ. ಆದರೆ ಚಂದ್ರಗಿರಿ ಹೊಳೆಯ ಉತ್ತರಕ್ಕೆ ಕಾಸರಗೋಡು ಭಾಗದಲ್ಲಿ ಈ 'ಅಚ್ಚ' ಎನ್ನುವ ಪದವು 'ಮಾವ' ಎನ್ನುವ ಅರ್ಥದಲ್ಲಿ ಸಂಬೋಧನಾ ಪದವಾಗುತ್ತದೆ. "ಅಳಿಯಕಟ್ಟು" ಪ್ರಧಾನವಾದ ಈ ಕಡೆಯಲ್ಲಿ 'ಮಾವ' ನಿಗೆ ಸಂಬಂಧದಲ್ಲಿ ಪ್ರಥಮ ಸ್ಥಾನವಾದ ತಂದೆಯ ಸ್ಥಾನವನ್ನು ನೀಡಿರುವುದೇ ಈ ರೀತಿಯ ಸಂಬೋಧನೆಗೆ ಕಾರಣವಾಗಿರಬಹುದು. ಮಾವನನ್ನು ಸಂಬಂಧಸೂಚಕವಾಗಿ ಹೇಳುವಾಗ "ಕಾರ್ನೋರು" ಅಥವಾ 'ಕಾರ್ನವ' ಎಂದೂ ಹೇಳಲಾಗುತ್ತದೆ.

ಸಮುದಾಯದ ನಿಯಂತ್ರಕರ ಸಂಖ್ಯೆಯು ಒಂದೊಂದು ಸಮುದಾಯಕ್ಕೂ ವಿಭಿನ್ನವಾಗಿರುತ್ತದೆ. ಇದು ೩ ರಿಂದ ೧೦ ವರೆಗೂ ಹೋಗಬಹುದು. ಶಾಲಿಯಾ ಸಮುದಾಯದ ನಿಯಂತ್ರಕರ ಸಂಖ್ಯೆಯನ್ನು ಸೂಚಿಸುವಾಗ "ಆರವಾಕಾಶಿ" ಎನ್ನುವ ನುಡಿಗಟ್ಟು ಬಳಕೆಯಲ್ಲಿದೆ. ಈ ಪದವನ್ನು ಬಿಡಿಸಿದಾಗ 'ಆರು ಅವಕಾಶಿ' ಎಂದಾಗುತ್ತದೆ. 'ಅವಕಾಶಂ' ಎಂದರೆ 'ಹಕ್ಕು' ಎಂದರ್ಥ. 'ಆರು ಅವಕಾಶಿ' ಎನ್ನುವುದು ಸಮಾಜದಲ್ಲಿ "ನಿರ್ದಿಷ್ಟ ಹಕ್ಕುಗಳನ್ನು ಪಡೆದುಕೊಂಡ 'ಆರು' ಹಕ್ಕುದಾರರು" ಎಂಬ ಅರ್ಥದಲ್ಲಿ ಪ್ರಯೋಗಗೊಳ್ಳುತ್ತದೆ. ಆದರೆ 'ತಾನಂ' ಗಳಲ್ಲಿ ಈ ಅವಕಾಶಿಗಳ ಸಂಖ್ಯೆಯಲ್ಲಿ ಏರುಪೇರುಗಳು ಕಂಡುಬರುತ್ತದೆ. ನಾಲ್ಕು 'ಸ್ಥಾನನಾಮ' ಗಳು ಎಲ್ಲಕಡೆಯಲ್ಲೂ ಸಾಮಾನ್ಯವಾಗಿದೆ. 'ಚೆಟ್ಟಿಯಾರ್ , ಕಾರ್ನವ, ಮಡೆಯ, ಕೋಮರ.' ಇದರೊಂದಿಗೆ 'ಬೆಳ್ಚಪ್ಪಾಡ್ಚ' ಎಂದು ಕರೆಯಲ್ಪಡುವ ಸಣ್ಣ 'ದರ್ಶನಪಾತ್ರಿ' ಗಳೂ, 'ಪಯಕ್ಕೂ' ಎಂಬ ಸಹಾಯಕರೂ ಇದ್ದಾರೆ. ಇವರನ್ನು ಆರವಕಾಶಿಗಳ ಸ್ಥಾನಕ್ಕೆ ಸೇರಿಸಬೇಕೋ ಬೇಡವೋ ಎನ್ನುವುದು ನಿರ್ದಿಷ್ಟವಾಗಿಲ್ಲ. ಅವರನ್ನು ಸೇರಿಸಿದಾಗ ಈ ಸಂಖ್ಯೆ ಆರಾಗುತ್ತದೆ. ಆದರೆ ಹೆಚ್ಚಿನ ಕಡೆಗಳಲ್ಲಿ ಚೆಟ್ಟಿಯಾರ್‌ರ ಸಂಖ್ಯೆ ಎರಡಿರುತ್ತದೆ. 'ಮೂತೆ ( ಹಿರಿಯ) ಚೆಟ್ಟಿಯಾರ್' ಹಾಗೂ 'ಇಳಯ (ಕಿರಿಯ) ಚೆಟ್ಟಿಯಾರ್' ಎಂದು. ಆಗ ಸ್ಥಾನಿಕರ ಸಂಖ್ಯೆ ಏಳಾಗುತ್ತದೆ. ಇನ್ನು ಕೆಲವೆಡೆ ಕೋಮರರ ಹಾಗೂ ಕಾರ್ನವರ ಸಂಖ್ಯೆಯಲ್ಲೂ, ನಿರ್ದಿಷ್ಟತೆ ಇರುವುದಿಲ್ಲ. ಮೂರ್‍ನಾಲ್ಕು ಮಂದಿ ಕೋಮರರು ಇರುವುದೂ ಇದೆ. ಆಗ ಸಮಾಜದ ಸ್ಥಾನಿಕರ ಸಂಖ್ಯೆ ಆರನ್ನು ಮೀರುತ್ತದೆ. ("ಕೋಮರರು ಹಕ್ಕುದಾರರು ಅಲ್ಲ". ಎಂಬ ಹೇಳಿಕೆಯೂ ಕೆಲವೆಡೆ ಇದೆ.)

ಇಂತಹ ಸಂದರ್ಭದಲ್ಲಿ ಆರವಕಾಶಿ ಎನ್ನುವುದನ್ನು ಪ್ರಮುಖವಾದ ಈ ಕೆಳಗಿನ 'ಆರು ಸ್ಥಾನನಾಮ'ಗಳಾಗಿ ನಿರ್ದಿಷ್ಟ ಪಡಿಸಬಹುದು.

೧) ಮೂತೆ ಚೆಟ್ಟಿಯರ್

೨) ಇಳಯ ಚೆಟ್ಟಿಯರ್

೩) ಕಾರ್ನವರು

೪) ಮಡೆಯನ್

೫) ಕೋಮರ

೬) ಬೆಳ್ಚಪ್ಪಾಡ ಮತ್ತು ಪಯಕ್ಕೊ

'ಆರವಕಾಶಿ' ಎನ್ನುವುದನ್ನು 'ಆರು ಅವಕಾಶಗಳನ್ನು ಪಡೆದುಕೊಂಡವನು' ಎನ್ನುವ ಅರ್ಥದಲ್ಲಿ ಬಳಸಿರುವ ಸಾಧ್ಯತೆಯೂ ಇದೆ. ಆಯಾ ಸ್ಥಾನಿಕನಿಗೆ ನೀಡಲಾಗುವ ಆರು ಹಕ್ಕುಗಳನ್ನು ಇದು ಅಳವಡಿಸಿಕೊಂಡಿರಬಹುದು. ಆ ಪ್ರಮುಖವಾದ ಆರು ಹಕ್ಕುಗಳನ್ನು ಈ ರೀತಿ ಸಂಗ್ರಹಿಸಬಹುದು.

೧) ಆಯಾ ಕ್ಷೇತ್ರದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು.

೨) ಸಮುದಾಯದ ಯೋಗಕ್ಷೇಮದ ಹೊಣೆಯನ್ನು ಹೊರುವುದು.

೩) ಸಮಾಜದ ಹಿತಕ್ಕೆ ಕಾರಣವಾದ ತೀರ್ಮಾನಗಳನ್ನು ತೆಗೆದುಕೊಳ್ಳುವುದು.

೪) ತನ್ನ ಸ್ಥಾನಕ್ಕೆ ನಿರ್ದಿಷ್ಟಪಡಿಸಿದ ಅಧಿಕಾರವನ್ನು ಬಳಸಿಕೊಳ್ಳುವುದು.

೫) ಸಮಾಜದ ಯಾವುದೇ ಕಾರ್ಯಕ್ರಮದಲ್ಲೂ ಅತ್ಯುಚ್ಚ ಸ್ಥಾನದಲ್ಲಿ ನಿಂತು ಭಾಗವಹಿಸುವ ಹಕ್ಕನ್ನು ಪಡೆದುಕೊಳ್ಳುವುದು.

೬) ಸಮಾಜದ ಇತರ ಸ್ಥಾನಂ (ತಾನಂ) ಗಳಲ್ಲೂ ಗೌರವಾನ್ವಿತ ವ್ಯಕ್ತಿಯಾಗಿ ಗುರುತಿಸಲ್ಪಟ್ಟು ಮರ್ಯಾದೆಯನ್ನು ಪಡೆದುಕೊಳ್ಳುವುದು.

ಈ 'ಆರವಕಾಶಿ' ಗಳನ್ನು ಆಯ್ಕೆಮಾಡುವ ವಿಧಾನವೂ, ಅವರಿಗೆ ನೀಡುವ ಸ್ಥಾನಮಾನವೂ, ಅವರ ವೇಷಭೂಷಣವೂ, ಅವರಿಗೆ ನೀಡಲಾಗುವ ಅಧಿಕಾರವೂ ಸಮುದಾಯವು ಪಾರಂಪರಿಕವಾಗಿ ರೂಢಿಸಿಕೊಂಡು ಬಂದ ಸಂಪ್ರದಾಯದಲ್ಲಿಯೇ ಇರುತ್ತದೆ. ಪ್ರತಿಯೊಂದು 'ತಾನಂ' ನಲ್ಲಿಯೂ ನಿರ್ದಿಷ್ಟ ಸ್ಥಾನಿಕನು ನಿರ್ದಿಷ್ಟ 'ಇಲ್ಲಂ' ( ಕುಟುಂಬ)ದವನೇ ಆಗಿರಬೇಕು ಎಂಬ ನಿಯಮವೂ ಇದೆ. ಇದು ಆಯಾ "ಇಲ್ಲಂ" ನ ಹಕ್ಕು ಎಂದು ಪರಿಗಣಿಸಲ್ಪಟ್ಟಿರುತ್ತದೆ. 'ಅಳಿಯಕಟ್ಟು' ಸಂಪ್ರದಾಯದಂತೇ ಇದು ವಂಶಪಾರಂಪರ್ಯವಾಗಿ ಬರುತ್ತದೆ.

೧) ಮೂತೆ ಚೆಟ್ಟಿಯಾರ್ ಪದವಿ : ಕಾಲಿಯಾ 'ತಾನಂ' ಗಳಲ್ಲಿ ಪರಮಾಧಿಕಾರಿ ಈ ಚೆಟ್ಟಿಯಾರ್. ಇದು ಸಮಾಜದ ಅತ್ಯುಚ್ಚ ಹುದ್ದೆ. ಕಾಸರಗೋಡು ಭಾಗದಲ್ಲಿ ಇವರನ್ನು 'ಚೆಟ್ಟಿಯಾಚ್ಚ' ಎಂದು ಕರೆಯುತ್ತಾರೆ.

ಚಂದ್ರಗಿರಿಯ ದಕ್ಷಿಣಕ್ಕೆ ಮೂತೋದಿ 'ಚೆಟ್ಟಿಯಾರ್‌ಶನ್' ಸಂಬೋಧಿಸುತ್ತಾರೆ. ಈ ಆಚಾರ್ಯ ಸ್ಥಾನವು ಆಯಾ 'ತಾನಂ' ನ ಪರಿಧಿಗೆ ಒಳಪಟ್ಟ ಪ್ರದೇಶದಲ್ಲಿ ವಾಸವಾಗಿರುವ ನಿರ್ದಿಷ್ಟಗೋತ್ರದವರಿಗೆ ಪಾರಂಪರಿಕವಾಗಿ ಬರುತ್ತದೆ. ಈ ಸ್ಥಾನವು ತೆರವಾಯಿತು ಎಂದ ಕೂಡಲೇ ಆಯಾ ಸ್ಥಾನದವರು ಸಮಾಲೋಚಿಸಿ, ಆ ಗೋತ್ರ( ಇಲ್ಲಂ) ದಲ್ಲಿ ಯೋಗ್ಯರಾದವರನ್ನು ಆರಿಸುತ್ತಾರೆ. ಆದರೆ ಆ ಹುದ್ದೆಯನ್ನು ಪ್ರದಾನಮಾಡುವ ಹಕ್ಕು ಆಯಾಪ್ರದೇಶದ ರಾಜರದ್ದಾಗಿರುತ್ತದೆ. ಚಂದ್ರಗಿರಿ ಹೊಳೆಯ ದಕ್ಷಿಣದಲ್ಲಿ ನೀಲೇಶ್ವರ ಹಾಗೂ ಚಿರಕ್ಕಲ್‌ನ ಅರಸರು ಈ ಪದವಿಯನ್ನು ನೀಡಿದರೆ, ಕಾಸರಗೋಡು ಭಾಗದಲ್ಲಿ ಮಾಯಿಪ್ಪಾಡಿ ( ಕುಂಬಳೆ) ಅರಸರೂ, ಮಂಜೇಶ್ವರ ಹಾಗೂ ಪಣಂಬೂರುಗಳಲ್ಲಿ ಜೈನ ಬಂಗರಸರೂ ಈ ಪದವಿ ಪ್ರದಾನ ಮಾಡುವರು. ಚೆಟ್ಟಿಯಾರ್ ಪದವಿಯನ್ನು ಅಂಗೀಕರಿಸಲು ತಯಾರಾದ ವ್ಯಕ್ತಿಯು ತನ್ನ ಗೋತ್ರದ (ಇಲ್ಲಂ) ಕೆಲವರನ್ನೂ ಸ್ಥಾನದ ಪ್ರಕೃತ ಇದ್ದ ಅಚ್ಚಮ್ಮಾರ್ ಮತ್ತು ಸಮುದಾಯದ ಸದಸ್ಯರನ್ನೂ ಸೇರಿಸಿಕೊಂಡು ಆ ಪ್ರದೇಶದ ರಾಜರ ಅರಮನೆಗೆ ಹೋಗಬೇಕು. ಪದವಿಯ ಸೂಚಕವಾದ ಬಳೆ (ಬಂಗಾರದ ಕಡಗ) ಯನ್ನು ಜತೆಗೆ ಕೊಂಡೊಯ್ಯಬೇಕು. ಆ ಬಳೆಯನ್ನು ತೊಡಿಸುವ ಹಕ್ಕು ರಾಜನಿಗೇ ಮೀಸಲಾಗಿರುತ್ತದೆ. "ಕಂಕಣಂ ರಾಜಹಸ್ತೇನ" ಎಂಬ ಆರ್ಯೋಕ್ತಿಯಲ್ಲೇ ನಾವಿದನ್ನು ಕಾಣಬಹುದು. ತನ್ನ ರಾಜ್ಯದ ಪರಿಧಿಯೊಳಗಿನವರಿಗೆ ನಿರ್ದಿಷ್ಟ ಅಧಿಕಾರವನ್ನು "ಬಳೆ"ಗಳನ್ನು ತೊಡಿಸುವ ಮೂಲಕ ರಾಜರು ನೀಡುವ ಸಂಪ್ರದಾಯವು ಪ್ರಾಚೀನ ಕಾಲದಿಂದಲೇ ರೂಢಿಯಲ್ಲಿರಬೇಕು. ಪ್ರತೀ ಸಮುದಾಯವೂ ರಾಜ್ಯಾಡಳಿತಕ್ಕೆ ಬದ್ಧವಾಗಿದೆ ಎಂಬುದನ್ನು ಇದು ಸೂಚಿಸುತ್ತದೆ. ಹಿಂದಿನ ಕಾಲದಲ್ಲಿ ಎಲ್ಲಾ ಸಮುದಾಯದವರಲ್ಲೂ ಈ ಕ್ರಮವೂ ರೂಢಿಯಲ್ಲಿತ್ತು. ಈಗಲೂ ಕೆಲವೆಡೆ ಇದನ್ನು ಪಾಲಿಸಿಕೊಂಡು ಬರುತ್ತಾರೆ. ಆ ಬಳೆಯನ್ನು ಅರಸರು ಆತನಿಗೆ ತೊಡಿಸಿ, ಆತನಿಗೆ ಅಧಿಕಾರವನ್ನು ರಾಜನು ವಹಿಸಿಕೊಟ್ಟುದರ ಸೂಚಕವಾಗಿ 'ಬಿರುದು' ಎನ್ನುವ ಯೋಗ್ಯತಾಪತ್ರವನ್ನು ಕೊಡಲಾಗುತ್ತದೆ. ಅದನ್ನು ಪಡೆದುಕೊಂಡು ವೃಶ್ಚಿಕ ಮಾಸದ ೨ನೇ ಶನಿವಾರ ಕೀಬೂರಿಗೆ ಹೋಗಿ, ಅಲ್ಲಿ ಉಳಿದ ೧೩ (ಈಗ ಸಂಖ್ಯೆ ಹೆಚ್ಚಿದೆ) 'ನಗರಂ'ಗಳಿಂದ ಬಂದ ಅಚ್ಚಮ್ಮಾರರಿಗೂ ಹಿರಿಯರಿಗೂ ತಿಳಿಸಿ ಅವರಿಂದ ಅಂಗೀಕಾರವನ್ನು ಪಡೆಯಬೇಕು.

ಸ್ಥಾನ-ಮಾನ :- . "ತಾನಂ" ಹಾಗೂ ನಗರದ ಅತೀ ಶ್ರೇಷ್ಠವಾದ ಈ ಹುದ್ದೆಯು ದೊರಕಿದ ಮೇಲೆ ಆ ಸಮುದಾಯದಲ್ಲಿ ಆತ ವಯಸ್ಸಿನಲ್ಲಿ ಎಷ್ಟೇ ಕಿರಿಯನಾಗಿದ್ದರೂ 'ಹಿರಿಯ' ನೆಂದು ಪರಿಗಣಿಸಲ್ಪಡುತ್ತಾನೆ. ಆ ಸಮುದಾಯಕ್ಕೆ ಸೇರಿದ ಕ್ಷೇತ್ರದ ಎಲ್ಲಾ ಕಟ್ಟು ಕಟ್ಟಳೆಗಳನ್ನು ರೀತಿ-ರೀತಿ-ನಿಯಮಗಳನ್ನೂ ಸಾಂಗವಾಗಿ ನಿರ್ವಂಚನೆಯಿಂದಲೂ, ನಿರ್ದಾಕ್ಷಿಣ್ಯವಾಗಿಯೂ ನೆರವೇರಿಸುವ ಜವಾಬ್ದಾರಿ ಆತನದ್ದು. ಸಮುದಾಯದವರೂ ಗೌರವದಿಂದ ಆತನಲ್ಲಿ ನಡೆದುಕೊಳ್ಳಬೇಕು. ಯಾವುದೇ ಕಾರ್ಯಕ್ರಮದಲ್ಲೂ ಮೊದಲನೆಯ ಸ್ಥಾನವನ್ನು ಅವರಿಗೆ ನೀಡಬೇಕು. ಆ "ತಾನಂ" ನ "ನಗರ" ದಲ್ಲಿ ಖಾಲಿ ಬಿದ್ದಿರುವ ಇತರ (ಉದಾ : ಕಾರ್ನವ, ಮಡೆಯ ಮುಂತಾದವು) ಸ್ಥಾನವನ್ನು ಭರ್ತಿಮಾಡುವ ಸಂದರ್ಭದಲ್ಲಿ ನಿರ್ದಿಷ್ಟವ್ಯಕ್ತಿಗೆ ಆ ಹುದ್ದೆಯನ್ನು ಪ್ರದಾನಿಸಿ ಅಧಿಕಾರವನ್ನು ಕೊಡುವ ಹಕ್ಕು ' ಚೆಟ್ಯಾರ್' ನಿಗೆ ಇದೆ. ಆ ಸಮುದಾಯಕ್ಕೆ ಸಂಬಂಧಪಟ್ಟ ಯಾವುದೇ ತರ್ಕದಲ್ಲೂ ಕೊನೆಯ ತೀರ್ಮಾನ ಇವರದು. 'ಮದುವೆ, ಸೀಮಂತ ಮೊದಲಾದವುಗಳಿಗೆ ಸಮ್ಮತಿ (ಅನುವಾಸಂ) ನೀಡುವುದು. ಯುವಕರನ್ನು ಸಮಾಜದ ಸದಸ್ಯರನ್ನಾಗಿಸುವುದು. ಬಾಲಿಕೆಯರಿಗೆ ಚರಡ್ ಕಟ್ಟುವುದು (ನೂಲು ಕಟ್ಟುವುದು)' ಇತ್ಯಾದಿ ..

ವೇಷಭೂಷಣ :- ಸಮಾಜದಲ್ಲಿ ಅವರನ್ನು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಗುವಂತೆ ಅವರ

ವೇಷಭೂಷಣಗಳಿರುತ್ತವೆ. ಯಾವಾಗಲೂ ಬಿಳಿ ವಸ್ತ್ರವನ್ನೇ ಉಡಬೇಕು. ಇದನ್ನು 'ಮುಂಡು' ಎನ್ನುತ್ತಾರೆ. ಸೊಂಟಕ್ಕೆ ಒಂದು ರೇಶ್ಮೆಯ ಪಟ್ಟಿಯನ್ನು ಕಟ್ಟಿಕೊಳ್ಳಬೇಕು. ಆ ಪಟ್ಟಿಯಲ್ಲಿ "ಕಚ್ಚರ" ಎಂದು ಕರೆಯಲ್ಪಡುವ ಸಣ್ಣ ಖಡ್ಗ (ಚೂರಿ?) ವನ್ನು ಸಿಕ್ಕಿಸಿ ಕೊಂಡಿರಬೇಕು. ಕೈಯಲ್ಲಿ ಅರಸರಿಂದ ನೀಡಲ್ಪಟ್ಟ ಬಳೆಯನ್ನು ಯಾವತ್ತೂ ಧರಿಸಿಕೊಂಡಿರಬೇಕು. ಈ ಬಳೆಯನ್ನು 'ರಾಮಾಯಣಕ್ಕೊತ್ತು ಬಳೆ' ಎಂದೂ ಹೇಳುತ್ತಾರೆ. ಬಹುಶ : ಬಳೆಯಲ್ಲಿ ರಾಮಾಯಣಕ್ಕೆ ಸಂಬಂಧಪಟ್ಟ ಯಾವುದೋ ಒಂದನ್ನು ಕೆತ್ತಿರುವುದೇ ಇದಕ್ಕೆ ಕಾರಣವಿರಬಹುದು. ಶರೀರದ ಮೇಲೆ ಅಂಗಿ (Shirt) ಧರಿಸುವಂತಿಲ್ಲ. ಹೆಗಲಿಗೆ ಒಂದು ಶಾಲು ಹಾಗೂ ತಲೆಗೆ ಮುಂಡಾಸು ಸುತ್ತಿಕೊಂಡಿರಬೇಕು. ಭಸ್ಮವನ್ನು ದಿನನಿತ್ಯ ಲೇಪಿಸಿಕೊಳ್ಳಬೇಕು.

೨) ಎಳೆಯ ಅಥವಾ ಇಳಯ ಚೆಟ್ಟ್ಯಾರ್ :–ಇವರನ್ನು ಇಳಯೋದಿ ಚೆಟ್ಯಾರ್ಚನೆಂದೂ ಕರೆಯುತ್ತಾರೆ. ಇವರನ್ನು ಆರಿಸುವ ಹಕ್ಕು ಆಯಾ "ಇಲ್ಲಂ" ಗೆ ಇದೆ. ಆದರೆ ಇವರಿಗೆ ಅಧಿಕಾರವನ್ನು ನೀಡುವ ಹಕ್ಕು ಮೂತೆಚೆಟ್ಟಿಯಾರ್‌ರದ್ದು. ಇವರ ಕೈಗೂ ಬಳೆಯನ್ನು ತೊಡಿಸಿ ಅಧಿಕಾರ ಪ್ರದಾನ ಮಾಡಲಾಗುವುದು.

<u>ಸ್ಥಾನ</u> - <u>ಮಾನ</u> :- ಮೂತೆ ಚೆಟ್ಯಾರರ ಎಲ್ಲಾ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿಕೊಡಲು ಸಹಾಯ ಮಾಡುವುದು. ಚೆಟ್ಯಾರ್ಚನ ಅನುಪಸ್ಥಿತಿಯಲ್ಲಿ ಆತ ನಿರ್ವಹಿಸುವ ಎಲ್ಲಾ ಜವಾಬ್ದಾರಿಯನ್ನೂ ಚೆಟ್ಯಾರ್ಚನಂತೆಯೇ ನಿರ್ವಹಿಸುವುದು.

<u>ವೇಷಭೂಷಣ</u> : ಮೂತೆ ಚೆಟ್ಟಿಯಾರಂತೇ ಬಿಳಿ ವಸ್ತ್ರ ಧರಿಸಿರಬೇಕು. ಅಂಗಿ ಧರಿಸಬಾರದು. ಕೈಗೆ ಬಳೆಯನ್ನು ಇಟ್ಟುಕೊಳ್ಳಬೇಕು. ಹೆಗಲಿಗೆ ಶಾಲು ಹಾಕಿಕೊಳ್ಳಬೇಕು ನೀಲೇಶ್ವರದಲ್ಲಿ ಮೂತೆ ಚೆಟ್ಯಾರ್‌ರನ್ನು ನಂಬೂದಿರಿಚೆಟ್ಟ್ ಎಂದೂ ಇಳಯ ಚೆಟ್ಯಾರ್‌ನ್ನು ಕುಚ್ಚೇಟ್ಟ್ (ಕುಟ್ಟಿ ಚೆಟ್ಟ್ - 'ಕುಟ್ಟಿ' ಎಂದರೆ ಕಿರಿಯ ಎಂದರ್ಥ) ಎಂದೂ ಕರೆಯುತ್ತಾರೆ. ಈರ್ವರಿಗೂ ಅಲ್ಲಿ ಸಮಾನವಾದ ಸ್ಥಾನವಿದೆ.

<u>ಕಾರ್ನವರು</u> : - ಸ್ಥಾನಿಕ ವರ್ಗದಲ್ಲಿ ಎರಡನೆಯ ಸ್ಥಾನ ಇವರದು. ಕ್ಷೇತ್ರದಲ್ಲಿ ಅಧಿಕಾರವಿರುವ ಕುಟುಂಬದಿಂದ ಆರಿಸಲ್ಪಡುವ ವ್ಯಕ್ತಿ .'ಕಾರ್ನವ' ಎಂದರೆ ಸೋದರಮಾವ ಎಂರ್ಥವಿದೆ. 'ಕುಟುಂಬದ ಹಿರಿಯ' ಎಂದೂ ಹೇಳುತ್ತಾರೆ.ಮೂತೆ ಚೆಟ್ಯಾರ್ಚನೇ ಬಳೆಯನ್ನು ಕೊಟ್ಟು ಇವರಿಗೆ ಅಧಿಕಾರವನ್ನು ನೀಡುತ್ತಾನೆ. ಕೆಲವಡೆ ಇವರ ಸಂಖ್ಯೆ ಎರಡಕ್ಕಿಂತಲೂ ಹೆಚ್ಚು ಇರುವುದು. ಇವರನ್ನು ಸಮಾಜಬಾಂಧವರು ವಿಶೇಷ ಗೌರವದಿಂದ ಕಾಣುತ್ತಾರೆ.

ಸ್ಥಾನ-ಮಾನ :- ದೇವಸ್ಥಾನದ ಒಳಗೆ ಪೂಜೆ - ಇತ್ಯಾದಿಗಳನ್ನು ಮಾಡಲು ಮಡೆಯ (ಅರ್ಚಕ ) ನಿಗೆ ಸಹಕರಿಸುವುದು. ದೈವಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳ ಮೇಲುಸ್ತುವಾರಿಕೆಯನ್ನು ನೋಡಿಕೊಳ್ಳುವುದು. ಉತ್ಸವ ಕಾಲದಲ್ಲಿ ದೇವರ ಬಿಂಬಗಳನ್ನು ಹೊತ್ತು 'ಬಲಿ ಪ್ರದಕ್ಷಿಣೆ' ಬರುವುದು. ಇದನ್ನು "ತೆಡಂಬು ಎಡುಕ್ಕಲ್"ಎಂದೂ ಹೇಳುತ್ತಾರೆ. "ತೆಡಂಬು" ಎಂದರೆ ದೇವರ ಉತ್ಸವ ಮೂರ್ತಿ ಎಂದರ್ಥ. ಇದನ್ನು ಕಂಚಿನಿಂದ ಮಾಡಿರುತ್ತಾರೆ. ಚಿತ್ತಾಕರ್ಷಕವಾದ ಪ್ರಭಾವಳಿಯೂ ಇದಕ್ಕಿದೆ.

ವೇಷಭೂಷಣ :- ಈತ ಬಿಳಿ ವಸ್ತ್ರವನ್ನು ಧರಿಸಬೇಕು. ಅಂಗಿ ಹಾಕಬಾರದು. ಗಂಧವನ್ನು ಲೇಪಿಸಿಕೊಳ್ಳಬೇಕು. ಹೆಗಲಿಗೆ ಕೆಂಪನೆಯ ಶಾಲು ಹಾಕಿ ಮುಂಡಾಸನ್ನು ತಲೆಗೆ ಸುತ್ತಿಕೊಂಡಿರಬೇಕು.

೩) ಮಡೆಯನ್ :- "ಮಡೆಯ" ಎಂದರೆ "ಅರ್ಚಕ" ಅಥವಾ "ಪೂಜಾರಿ" ಎಂದರ್ಥ. ಶಾಲಿಯಾರ ಸ್ಥಾನಂಗಳಲ್ಲಿ ದೇವಿಯ ಪೂಜೆಯನ್ನು ಮಾಡುವವರನ್ನು ಈ ಹೆಸರಿನಿಂದಲೇ ಕರೆಯುತ್ತಾರೆ.ಇವರನ್ನು ಕ್ಷೇತ್ರದ ಸದಸ್ಯರಿಂದ ದೇವಿಯ ಸಮ್ಮತಿಯಂತೆ ರಾಶಿಪ್ರಶ್ನೆಯನ್ನು ಇಡಿಸಿ ಆರಿಸಲಾಗುತ್ತದೆ.ಇವರನ್ನು 'ಮಡೆಯಂಚ' ಎಂದೂ ಕರೆಯುವುದಿದೆ.ಈತನಿಗೂ ಚೆಟ್ಯಾರ್ಚನೆ ಈ ಪದವಿಯನ್ನು ನೀಡುತ್ತಾನೆ.ಕೆಲವೆಡೆ ಇವರನ್ನು 'ಅಂದಿತ್ತಿರಿಯನ್' ಎಂದೂ ಕರೆಯುತ್ತಾರೆ. ಎಂದರೆ "ಸಂಜೆಯ ದೀಪವನ್ನುರಿಸುವವನು" ಎಂದರ್ಥ.

ಸ್ಥಾನಮಾನ :- ಸ್ಥಾನದ ಗುಡಿಗಳನ್ನೂ,ವಠಾರವನ್ನೂ ಶುಚಿಗೊಳಿಸಿ ಸಂಜೆ ಆರು ಗಂಟೆಗೆ ನಿಶ್ಚಿತ ಸಮಯದಲ್ಲಿ ನಿಷ್ಠೆಯಿಂದ ಪ್ರತಿದಿನವೂ ದೇವರ ಮುಂದೆ ದೀಪವನ್ನು ಹಚ್ಚುವುದು. ಸಂಕ್ರಮಣ ಮತ್ತು ವಿಶೇಷ ದಿನಗಳಲ್ಲಿ ಗುಡಿಯ ಒಳಗೆ ಹೋಗಿ ಶುಚಿ ಮಾಡಿ ಎಲ್ಲಾ ದೇವದೇವತೆಗಳಿಗೂ, ಪೂಜೆ ಮಾಡುವುದು, ಅಗೆಲು ಇಡುವುದು ಈ ಮೊದಲಾದ ಕಾರ್ಯಗಳನ್ನು ಈತ ನಿರ್ವಹಿಸುತ್ತಾನೆ. ಸಮಾಜ ಬಾಂಧವರು ಈತನಿಗೆ ಪುರೋಹಿತ ಸ್ಥಾನವನ್ನು ನೀಡಿ ಗೌರವದಿಂದ ಕಾಣುತ್ತಾರೆ.

ವೇಷ ಭೂಷಣ:- ಬಿಳಿಯ ಧೋತಿಯನ್ನು ಉಟ್ಟು, ಹೆಗಲಿಗೆ ಕೆಂಪು ಪಟ್ಟೆಯ ಶಾಲನ್ನು ಹಾಕಿಕೊಂಡಿರುತ್ತಾನೆ.

೪) ಕೋಮರ:- ಕೋಮರ ಎಂದರೆ 'ದರ್ಶನ ಪಾತ್ರಿ' ಎಂದರ್ಥ. ಇವರನ್ನು 'ಕೋರಾಚನ್', 'ಕೋರಾಶನ್' ಎಂದೆಲ್ಲಾ ಕರೆಯುತ್ತಾರೆ. ಕೆಲವು 'ತಾನಂ' ಗಳಲ್ಲಿ ಇವರಿಗೆ ಆಚಾರ್ಯರ ಹಕ್ಕು ಇಲ್ಲ. ಇವರಲ್ಲಿ ಪ್ರಮುಖವಾಗಿ ಮೂತೋದಿ ಕೋಮರ ಮತ್ತು ಇಳಯೋದಿ ಕೋಮರ ಎಂದು ಇಬ್ಬರು ಇರುವುದು ವಾಡಿಕೆ. ಕೆಲವೆಡೆ ನಾಲ್ಕು ಕೋಮರರು ಇರುತ್ತಾರೆ.(ಕುಂಬಳೆ 'ತಾನಂ' ನಲ್ಲಿ ನಾಲ್ವರಿದ್ದಾರೆ) 'ತಾನಂ' ನಲ್ಲಿ ಇರುವ ದೈವಗಳ ಪ್ರತಿನಿಧಿಗಳಾಗಿ ಇವರನ್ನು ಕಾಣಲಾಗುತ್ತದೆ. ಆಯಾ 'ತಾನಂ' ನ ದೈವವೇ ಇವರ ಶರೀರದಲ್ಲಿ ದರ್ಶನದ ಮೂಲಕವಾಗಿ ಪ್ರಕಟವಾಗಿ ಇವರನ್ನು ದರ್ಶನಪಾತ್ರಿಗಳಾಗಿ ಆರಿಸಿಕೊಳ್ಳುತ್ತದೆ. 'ಕೊರ' ಎನ್ನುವ ಕತ್ತಿಯಂತಹ ಆಯುಧಗಳನ್ನು ಇವರು 'ದರ್ಶನ'ದ ಸಂದರ್ಭದಲ್ಲಿ ಧರಿಸುವುದರಿಂದಲೇ ಇವರಿಗೆ 'ಕೋರಾಶನ್' ಅಥವಾ 'ಕೋಮರ' ಎನ್ನುವ ಹೆಸರು ಬಂದಿರಬಹುದು.ಮೂಲ ದೈವವಾದ ಮೂತೆ ಭಗವತಿಯ ದರ್ಶನಪಾತ್ರಿ 'ಮೂತೋದಿ ಕೋಮರ' ( ಹಿರಿಯ ಪಾಲಿನ ಕೋಮರ) ಎಂದೂ ಇಳಯ ಭಗವತಿಯ ಕೋಮರನನ್ನು 'ಇಳಯೋದಿಕೋಮರ' ಹೇಳಲಾಗುತ್ತದೆ. ಹಾಗೇ ಪಿಲಿಚಾಮುಂಡಿ ಕೋಮರ ;ವಿಷ್ಣುಮೂರ್ತಿ ಕೋಮರ ಎಂದೂ ಉಳಿದ ದೈವಗಳಿಗೂ ಕೋಮರರಿರುತ್ತಾರೆ.( ಇವರನ್ನು ಬೆಳ್ಚಪ್ಪಾಡ ಎಂದೂ ಹೇಳುತ್ತಾರೆ.)

ಶಾಲಿಯಾರ 'ತಾನಂ'ನ ದರ್ಶನಪಾತ್ರಿಗಳಲ್ಲಿ ಎರಡು ವಿಧ. ಒಂದು ಕೋಮರ ಇನ್ನೊಂದು ಬೆಳ್ಚಪ್ಪಾಡ. 'ಬೆಳ್ಚಪ್ಪಾಡನ್' ರಿಗೆ ಆವೇಶವು ಸಾಮಾನ್ಯವಾಗಿ ಬರುತ್ತದೆ.ಆದರೆ, ಕೋಮರರಿಗೆ ಹಾಗಲ್ಲ.ಕೆಲವು ವಿಶೇಷ ಸಂಧರ್ಭಗಳಲ್ಲಿ ಮಾತ್ರ ಬರುತ್ತದೆ.ಈ ಸಂಧರ್ಭದಲ್ಲಿ ಅವರು ಹೇಳುವ ಮಾತುಗಳು 'ಅರುಳಪ್ಪಾಡ್' ಅಥವಾ 'ದೇವರ ಆಜ್ಞೆಯ ಮಾತುಗಳು' ಎಂದು ಪರಿಗಣಿಸಲಾಗುತ್ತದೆ.ಕ್ಷೇತ್ರಕ್ಕೆ ಸಂಬಂಧ ಪಟ್ಟ ಗುಣದೋಷಗಳನ್ನು ಈ ಮಾತುಗಳಿಂದ ತಿಳಿಯಲಾಗುತ್ತದೆ.ಆದುದರಿಂದ ಎಲ್ಲರಿಗೂ ಕೋಮರರಾಗಲು ಸಾಧ್ಯವಿಲ್ಲ. ಅಪಾರವಾದ ದೈವವಿಶ್ವಾಸವುಳ್ಳವರಿಗೆ ಮಾತ್ರ ಇದು ಸಾಧ್ಯ.ಯಾರು ಕೋಮರರಾಗಬೇಕು ಎಂದು ತೀರ್ಮಾನಿಸುವುದೂ ದೈವ ನಿರ್ಣಯದ ಮುಖಾಂತರವೇ. ಒಂದು ಕೋಮರನ ಸ್ಥಾನ ತೆರವಾದಾಗ ಮುಂದಿನ

ಕೋಮರ ಯಾರಾಗಬೇಕು ಎನ್ನುವುದನ್ನು ತಿಳಿಯಲು ತೆರುವಿನವರೂ, ಇತರ ಅಚ್ಚಮ್ಮಾರರೂ ಕ್ಷೇತ್ರಕ್ಕೆ ಬಂದು ಭಕ್ತಿನಿರ್ಭರರಾಗಿ ಪ್ರಾರ್ಥಿಸುತ್ತಾರೆ. ಆಗ ಅವರ ಮಧ್ಯೆಯೇ ಒಬ್ಬನಿಗೆ ಆವೇಶ ಬರುತ್ತದೆ. (ಕೆಲವೊಮ್ಮೆ ಇದು ತಡವಾಗುವುದೂ ಇದೆ.) ಆವೇಶ ಬಂದವನಿಗೆ ತನಗೇನಾಗಿದೆ ಎಂದೇ ಗೊತ್ತಿರುವುದಿಲ್ಲ. ತನ್ನಲ್ಲೇನೂ ಆವೇಶವುಂಟಾಯಿತು ಎಂದು ಮಾತ್ರ ತಿಳಿಯುತ್ತಾನಷ್ಟೇ. ಇನ್ನು ಕೆಲವೊಮ್ಮೆ ಆ ಪ್ರದೇಶದಿಂದ ಬಹಳಷ್ಟು ದೂರ ಅನ್ಯಪ್ರದೇಶದಲ್ಲಿ ಇರುವವನಿಗೂ ಆವೇಶ ಬಂದು ಆತ ದರ್ಶನ ಪಾತ್ರಿಯಾಗಬಹುದು. ಕಾಸರಗೋಡಿನ 'ತಾನಂ' ನಲ್ಲಿ ಇಂತಹ ಸಂಭವವೊಂದು ನಡೆದ ನಿದರ್ಶನವಿದೆ. ಆವೇಶ ಬಂದ ಸಮಯದಲ್ಲಿ ಕೋಮರರು ತಮ್ಮ ಕೈಯಲ್ಲಿರುವ 'ಕೊರ' ದಿಂದ ತಲೆಯ ಮೇಲೂ ಶರೀರದ ಮೇಲೂ ಹೊಡೆದುಕೊಂಡು ಆಳವಾದ ಗಾಯಗಳನ್ನು ಮಾಡಿಕೊಳ್ಳುವುದಿದೆ. ಅಂತಹ ಸಂದರ್ಭದಲ್ಲಿ ದೈವಪ್ರಸಾದವಾದ ಗಂಧ ಅರಿಸಿನ ಕುಂಕುಮಾದಿಗಳನ್ನು ಆ ಗಾಯಗಳಿಗೆ ಹಚ್ಚಲಾಗುತ್ತದೆ. ಗಾಯದ ಕುರುಹೂ ಇಲ್ಲದಂತೆ ಅದು ವಾಸಿಯಾಗುತ್ತದೆ. (ಸಾಮಾನ್ಯ ಪ್ರಜ್ಞೆಗೂ ನಿಲುಕದ ಇದರ ಹಿಂದೆ ಆತ್ಮ ಶಕ್ತಿಯ ಬಲವೋ, ದೈವಶಕ್ತಿಯ ಬಲವೋ ಯಾವುದಿದೆಯೋ ಅರ್ಥವಾಗುವುದಿಲ್ಲ.) ಈ ದರ್ಶನ ಪಾತ್ರಿಗಳು ಅತ್ಯಂತ ಶುದ್ಧಾಚಾರಗಳನ್ನು ಒಳಗೊಂಡವರಾಗಿರಬೇಕು.

ವೇಷ – ಭೂಷಣ :– ಆಯಾ ದೈವದ 'ದರ್ಶನ ಪಾತ್ರಿ'ಗೆ ಅವರದ್ದೇ ಆದ ವೇಷ – ಭೂಷಣಗಳಿರುತ್ತವೆ.

೧) ಮೂತೋದಿ ಕೋಮರ :– ಗಂಧದ ಅಡ್ಡನಾಮವನ್ನು ಹಾಕಿ ಕುಂಕುಮದ ತಿಲಕವನ್ನು ಹಣೆಯಲ್ಲಿ ಇವರು ಧರಿಸಿಕೊಳ್ಳುತ್ತಾರೆ. ಕೆಂಪು ರೇಶ್ಮೆಯ ಧೋತಿ, ಕೆಂಪು ಮುಂಡಾಸು ಮತ್ತು ಕೆಂಪು ಶಾಲನ್ನು ಧರಿಸುತ್ತಾರೆ.

೨) ಇಳಯೋದಿ ಕೋಮರ :– ಗಂಧದ ನಾಮವನ್ನು ಹಾಕಿ ಕುಂಕುಮದ ಬೊಟ್ಟು ಹಾಕಿರುತ್ತಾರೆ. ಬಿಳಿಯ ಧೋತಿ, ಬಿಳಿಯ ಮುಂಡಾಸು ಮತ್ತು ಬಿಳಿಯ ಶಾಲು ಧರಿಸುತ್ತಾರೆ. ಇವರಿಗೆ ಬಿಳಿಯ ಬಣ್ಣದ ವಸ್ತುವಲ್ಲದೆ ಇತರ ಬಣ್ಣಗಳು ನಿಷಿದ್ಧ.

೩) ಪಿಲಿಚಾಮುಂಡಿ ಕೋಮರ :– ಕೆಂಪು ಧೋತಿ, ಕೆಂಪು ಮುಂಡಾಸು ಮತ್ತು ಕೆಂಪು ಶಾಲು, ಚಂದನ ಮತ್ತು ಕುಂಕುಮದ ನಾಮ ಮತ್ತು ಬೊಟ್ಟು

೪) ವಿಷ್ಣುಮೂರ್ತಿ ಕೋಮರ :– ಚಂದನ ಹಾಗೂ ಕುಂಕುಮದ ನಾಮ ಹಾಗೂ ತಿಲಕ, ಬಿಳಿ ಧೋತಿ, ಅದರ ಮೇಲೆ ಕೆಂಪು ಬೈರಾಸು ಮತ್ತು ಶಾಲು.

ಇಳಯೋದಿ ಕೋಮರ ಸಾತ್ತ್ವಿಕ ಪ್ರಕೃತಿಯ ಇಳಯ ಭಗವತಿ (ಲಕ್ಷ್ಮಿಯ) ಯ ದರ್ಶನ ಪಾತ್ರಿಯಾಗಿರುವುದನ್ನು ಅವರ ಬಿಳಿಯ ಉಡುಗೆ ಸೂಚಿಸಿಕೊಡುತ್ತದೆ.ಕೆಂಪು ವಸ್ತುಗಳು ಪ್ರಧಾನವಾಗಿರುವ ಮೂತೆ ಭಗವತಿ ಮತ್ತು ಪಿಲಿಚಾಮುಂಡಿಯ ಕೋಮರರು ದೈವದ ತಾಮಸ ಪ್ರಕೃತಿಯ ಪ್ರತೀಕವಾಗುತ್ತಾರೆ. ವಿಷ್ಣುಮೂರ್ತಿ ಕೋಮರರು ಬಿಳಿ ಮತ್ತು ಕೆಂಪು ಮಿಶ್ರಿತವಾದ ತೊಡುಗೆಗಳನ್ನು ಧರಿಸುವುದು ವಿಷ್ಣುಮೂರ್ತಿ ದೈವದಲ್ಲಿ ಸಾತ್ತ್ವಿಕ ಮತ್ತು ತಾಮಸವು ಮಿಶ್ರವಾಗಿರುವುದನ್ನು ಸೂಚಿಸುತ್ತದೆ.

೫) ಪಯ್ಯಕೆನ್ನ: ಚೆಟ್ಟಿಯಾರರಿಗೆ ಸಹಾಯಕನಾಗಿ ಇರುವವನನ್ನು ಈ ಹೆಸರಿನಿಂದ ಕರೆಯುತ್ತಾರೆ. ಸ್ಥಾನದ ಕೆಲವೊಂದು ಕಾರ್ಯಕ್ರಮಗಳನ್ನು ಚೆಟ್ಟಿಯಾರ್‌ರ ನಿರ್ದೇಶನದಂತೆ ಈತ ನಿರ್ವಹಿಸುತ್ತಾನೆ. ಈತ ಕ್ಷೇತ್ರದೊಳಗಡೆ ಮಾತ್ರ ಅಂಗಿಯನ್ನು ಕಳಚಿರುತ್ತಾನೆ. ಬಿಳಿಯ ಮುಂಡು ಧರಿಸಿ ಶಾಲು ಹಾಕಿಕೊಳ್ಳುತ್ತಾನೆ.

## ಆಚಾರ ವರ್ಗ ಅಥವಾ ಸ್ಥಾನಿಕ ವರ್ಗದವರು ಅನುಸರಿಸಬೇಕಾದ ರೀತಿ-ನೀತಿ-ನಿಯಮಗಳು

ನಿರ್ದಿಷ್ಟ ಆಚಾರವನ್ನು 'ಸ್ಥಾನಂ'ನಲ್ಲಿ ವಹಿಸಿಕೊಂಡಾತನು ಅದಕ್ಕೆ ತಕ್ಕಂತಹ ಆಚಾರಾನುಷ್ಠಾನಗಳನ್ನು ಪಾಲಿಸಿಕೊಂಡು ಬರಬೇಕಾದುದು ಆದ್ಯ ಕರ್ತವ್ಯವೆಂದು ಪರಿಗಣಿಸಲಾಗಿದೆ.

1) ಪ್ರತಿಯೋರ್ವ ಸ್ಥಾನಿಕನೂ ನಿತ್ಯಸ್ನಾನ, ಪ್ರಾತರ್ವಿಧಿ, ಸಂಧ್ಯಾವಂದನೆಗಳನ್ನು ತಪ್ಪದೇ ಮಾಡಬೇಕು. ಚಂದನಾದಿ ಭಸ್ಮಲೇಪನಗಳನ್ನು ಹಾಕಿಕೊಳ್ಳಬೇಕು. 'ಅಶುದ್ಧ' ಎನ್ನುವಂತಹ ಯಾವುದರ ಸಂಪರ್ಕವನ್ನೂ ಮಾಡಬಾರದು. ಮುಟ್ಟಾದ ಹೆಂಗಸರು ಇರುವ ಕಡೆಯಲ್ಲಿ ನಿಲ್ಲಲೂಬಾರದು. ಅವರನ್ನು ನೋಡಲೂಬಾರದು.

2) ಸಮಾಜ ಬಾಂಧವರಲ್ಲಿ ನಡೆಯುವ ಶುಭಾಶುಭ ಕಾರ್ಯಗಳಿಗೆ ಹೋಗಿ ಅವುಗಳನ್ನು ಯೋಗ್ಯರೀತಿಯಿಂದ ನಡೆಯಿಸಿಕೊಡಬೇಕು. ಮಾರ್ಗದರ್ಶನ ನೀಡಬೇಕು. ಸಮಾಜದ ರೀತಿ-ನೀತಿ-ನಿಯಮಗಳನ್ನು ತಪ್ಪದಂತೆ ತಾವೂ ಅನುಸರಿಸಿ, ಇತರರೂ ಅನುಸರಿಸುವಂತೆ ಮಾಡಬೇಕು.

3) ಸಮಾಜದ ಶುಭಾಶುಭ ಸಮಾರಂಭಗಳಿಗೆ ಅಚ್ಚಮ್ಮಾರರು ಆಗಮಿಸಿದರೆ, ಸಮಾಜ ಬಾಂಧವರು ಅವರನ್ನು ಗೌರವದಿಂದ ಕಂಡು , ಯೋಗ್ಯರೀತಿಯಲ್ಲಿ ಪ್ರತ್ಯೇಕವಾಗಿ ಕುಳ್ಳಿರಿಸಿ , ಉಪಚರಿಸಬೇಕು. ಅಚ್ಚಮ್ಮಾರರ ಸಹಪಂಕ್ತಿಯಲ್ಲಿ ಇತರರು ಯಾರೂ ಕುಳಿತುಕೊಳ್ಳಬಾರದು. ಅವರಿಗೆ ಪ್ರತ್ಯೇಕವಾದ ಊಟೋಪಚಾರದ ವ್ಯವಸ್ಥೆಯನ್ನು ಮಾಡುವುದರೊಂದಿಗೆ, ಮದುವೆ, ಸೀಮಂತದ ಕಾರ್ಯಕ್ರಮವಾದರೆ 'ಅಕ್ಷತೆ' ಕಾಳುಗಳನ್ನು ಆದ್ಯವಾಗಿ ಅವರಿಂದಲೇ ಹಾಕಿಸಬೇಕು.

4) ಅಚ್ಚಮ್ಮಾರರು ಗದ್ದೆ ಉಳುವುದು, ಗೊಬ್ಬರ ಹೊರುವುದು, ತಲೆಯಲ್ಲಿ ಹೊರೆ ಹೊರುವುದು ಇತ್ಯಾದಿ ಕೆಲಸಗಳನ್ನು ಮಾಡುವುದು ನಿಷಿದ್ಧ.

5) ತಂಗಳಾದ ಆಹಾರವನ್ನು ಯಾವತ್ತೂ ಸೇವಿಸಬಾರದು.

6) ಬಸ್ಸು, ರೈಲು ಮುಂತಾದ ಸಾರ್ವಜನಿಕ ವಾಹನಗಳಲ್ಲಿ ಸಂಚರಿಸಬಾರದು. ಆದರೆ ಈ ನಿಯಮ ಈಗ ಸಡಿಲವಾಗಿದೆ.

7) ಕೂದಲುಗಳನ್ನು ಕತ್ತರಿಸಬಾರದು, ಜುಟ್ಟು ಬಿಟ್ಟಿರಬೇಕು, ಅಂಗಿ ಧರಿಸಬಾರದು. (ಈ ನಿಯಮವೂ ಈಗ ಸಡಿಲವಾಗಿದೆ.)

'ಸ್ಥಾನಂ'ನ ಅಧಿಕಾರವನ್ನು ಪಡೆದುಕೊಂಡ ಈ ಸ್ಥಾನಿಕರ ಸ್ಥಾನಕ್ಕಾಗಿ ಕೆಲವು ವರ್ಷಗಳ ಹಿಂದೆ ಒಂದು ರೀತಿಯ ಪೈಪೋಟಿಯೇ ಇತ್ತು. ಇದನ್ನು ಸಮಾಜದ ಒಂದು 'ಗೌರವಾನ್ವಿತ ಪದವಿ' ಎಂದು ಪರಿಗಣಿಸಲಾಗಿತ್ತು. ಆದುದರಿಂದಲೇ ನಿರ್ದಿಷ್ಟ ಪ್ರದೇಶದ "ತಾನಂ"ನಲ್ಲಿ ನಿರ್ದಿಷ್ಟ 'ಇಲ್ಲಂ' ನವರೇ ನಿರ್ದಿಷ್ಟ 'ಆಚಾರಸ್ಥಾನ' ವನ್ನು ನಿರ್ವಹಿಸಬೇಕು ಎನ್ನುವುದು ರೂಢಿಗೆ ಬಂತು. ಜಾತಿ- ಸಮುದಾಯ-ಕ್ಷೇತ್ರ ಸಾಮಾಜಿಕ ಇವುಗಳೊಳಗಿನ ಸಂಬಂಧಗಳು ಶಿಥಿಲಗೊಳ್ಳುತ್ತಿರುವ ಈ ಕಾಲಘಟ್ಟದಲ್ಲಿ ಆ ಸ್ಥಾನಿಕರ ಸ್ಥಾನವನ್ನು ತುಂಬಲು ಈಗ ಮುಂದಾಗುವವರು ಕಡಿಮೆಯಾಗುತ್ತಿದ್ದಾರೆ. ಜಾತಿ ವ್ಯವಸ್ಥೆಯು ಶಿಥಿಲಗೊಂಡು, ಎಲ್ಲರೂ ಒಂದೇ ಎಂಬ ಸಾಮಾಜಿಕ ವ್ಯವಸ್ಥೆಯು ರೂಪುಗೊಂಡಿರುವ ಹಿನ್ನೆಲೆಯಲ್ಲಿ, ಸಮಾಜದಿಂದ ಗೌರವವನ್ನು ಸಂಪಾದಿಸುವ ಅವಕಾಶಕ್ಕಿಂತಲೂ ಮಿಗಿಲಾದ ಉದ್ಯೋಗ ಸ್ಥಾನಗಳು ಬೇರೆಡೆ ಲಭ್ಯವಾಗುವುದರಿಂದ, ಇಂತಹ ಸಂಘಟನೆಗಳಲ್ಲಿ,

ರಾಜಕೀಯ ಆಡಳಿತದಲ್ಲಿ ಸೇರಿಕೊಳ್ಳುವುದರ ಕಡೆಗೆ ಅಲ್ಲಿ ಅಧಿಕಾರವನ್ನು ಪಡೆದುಕೊಳ್ಳುವುದರ ಕಡೆಗೆ ಜನರ ಗಮನ ಹರಿಯುತ್ತಿದೆ. ನಿರ್ಧಿಷ್ಟ ಸಮುದಾಯದ ಸ್ಥಾನಿಕನಾಗಿ ಅಧಿಕಾರವನ್ನು ಪಡೆದುಕೊಳ್ಳುವಾಗ ಕೆಲವು ರೀತಿ ನೀತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗಿ ಬರುವುದೂ, ಇಂದಿನ ಆಧುನಿಕ ಯುಗದಲ್ಲಿ ಅದು ಸುಲಭಸಾಧ್ಯವಲ್ಲದ ವಿಚಾರವಲ್ಲದಿರುವುದೂ ಈ ಹಿಂಜರಿತದ ಹಿಂದಿನ ಬಹುಮುಖ್ಯ ಕಾರಣಗಳಲ್ಲೊಂದಿಗಿದೆ. ಹಳೆಯ ರೀತಿ ನೀತಿ ಸಂಪ್ರದಾಯಗಳನ್ನು ಅನುಸರಿಸುವವರನ್ನು ಆಧುನಿಕ ಸಮಾಜವು 'ಅನಾಗರಿಕ' ಎಂದು ವಿವೇಚನಾಶೂನ್ಯವಾದ ದೃಷ್ಟಿಯಿಂದ ಕಾಣುತ್ತದೆ. ಆಗ ಅದನ್ನು ಅನುಸರಿಸಲು ಮನಸ್ಸುಳ್ಳವನೂ ಹಿಂಜರಿಯುತ್ತಾನೆ. ಇದರಿಂದ ದಿನದಿಂದ ದಿನಕ್ಕೆ ಪ್ರತಿಯೊಬ್ಬ ಮಾನವನು ಸಂಸ್ಕೃತಿಗೆ ವಿಮುಖನಾಗಿ ಆಡಂಬರಯುಕ್ತವಾದ ನಾಗರಿಕ ಜೀವನದ ಕಡೆಗೆ ಇಡೀ ಸಮುದಾಯದ ಮುಖವನ್ನು ತಿರುಗಿಸುವ ಪ್ರಯತ್ನ ಮಾಡುತ್ತಿದ್ದಾನೆ ಎನ್ನಬಹುದು. ಶ್ರೀಮಂತವಾದ ಅದೆಷ್ಟೋ ಭಾರತೀಯ ಸಂಸ್ಕೃತಿಗಳು ವಿನಾಶದ ಅಂಚಿಗೆ ತಳ್ಳಲ್ಪಡಲು ಇದುವೇ ಮೂಲಕಾರಣವಲ್ಲವೇ?

## ೫ ಕ್ಷೇತ್ರದ ಜತೆಗಿನ ಸಾಮಾಜಿಕನ ಸಂಬಂಧ

ಪ್ರತೀ ಸಮುದಾಯಕ್ಕೂ ಅದಕ್ಕೆ ಸಂಬಂಧಪಟ್ಟ ಕ್ಷೇತ್ರಕ್ಕೂ ಒಂದು ರೀತಿಯ ನಿಕಟವಾದ ಸಂಬಂಧವಿದೆ. ಸಂಸ್ಕೃತದ "ಘಟಕ" (ಸಭೆ) ಎನ್ನುವ ಪದವೇ ತಮಿಳು ಮತ್ತು ಮಲಯಾಳದಲ್ಲಿ "ಕಟಿಗಂ". ಇದನ್ನೇ "ತಾನಂ", "ಸ್ಥಾನಂ" ಎಂದು ಹೇಳಲಾಗುತ್ತದೆ. ಆರಂಭದಲ್ಲಿ ಸಮುದಾಯವು ಸೇರುವಂತಹ ಕೇಂದ್ರ ಸ್ಥಳಗಳಾಗಿದ್ದ ಇವು ಕ್ರಮೇಣ ಆರಾಧನಾಲಯಗಳಾಗಿ ಪರಿವರ್ತಿತವಾದುವು. ಇದು ಸಮಾಜಬಾಂಧವರಿಗೆ ಕ್ಷೇತ್ರದ ಜತೆಗಿರುವ ಸಂಬಂಧವನ್ನು ಇನ್ನಷ್ಟು ಬಲಪಡಿಸಿತು ಎಂದು ಹೇಳಬಹುದು. ಆಧುನಿಕ ಕಾಲದಂತೆ ಜಾತಿ ಸಂಘಗಳೋ, ವೃತ್ತಿ ಸಂಘಟನೆಗಳೋ (Trade Union) ಇಲ್ಲದ್ದಿದ ಆ ಕಾಲದಲ್ಲಿ ಇಂತಹ ಸ್ಥಾಪನೆಗಳು ಸಮುದಾಯದ ಕ್ಷೇಮಚಿಂತನೆಗಳನ್ನು ಮಾಡುತ್ತಿದ್ದವು. ರಾಜರ ಆಳ್ವಿಕೆಯು ಪ್ರಚಲಿತವಾಗಿದ್ದ ಆ ಕಾಲದಲ್ಲಿ ಆಯಾ ರಾಜರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿರುವ ಆಯಾ ಜಾತಿಯವರ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಈ ಕ್ಷೇತ್ರಗಳು ರಾಜರಿಗೆ ಪರೋಕ್ಷವಾಗಿ ಸಹಕಾರಿಗಳಾಗುತ್ತಿದ್ದವು. ಆದುದರಿಂದ ರಾಜರುಗಳೂ ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಆಯಾ ಜಾತಿಯವರು ನಿರ್ದಿಷ್ಟವಾದ ಸ್ಥಳಗಳಲ್ಲಿ ಸ್ಥಾನಗಳನ್ನು ಕಟ್ಟಿಕೊಳ್ಳಲು ಸಹಾಯವನ್ನು ನೀಡಿ ಅವಕಾಶಗಳನ್ನು ಕಲ್ಪಿಸಿ ಕೊಡುತ್ತಿದ್ದರು. ಇದು ರಾಜರ ಸುಗಮವಾದ ಆಡಳಿತಕ್ಕೆ ಸಹಾಯಕವಾಗುತ್ತಿತ್ತು. ಆದುದರಿಂದ ರಾಜರ ಆಡಳಿತದ ಒಂದು ಭಾಗವಾಗಿ ಈ ಕ್ಷೇತ್ರಾಡಳಿತವನ್ನು ಪರಿಗಣಿಸಬಹುದು. ಜಾತಿ ದೈವಭೀರುತ್ವವನ್ನು ಜನರಲ್ಲಿ ಹುಟ್ಟಿಸಿ ನೀತಿಪರರನ್ನಾಗಿ ಅವರನ್ನು ಮಾಡುವುದು ಈ ತೆರನಾದ ಆಡಳಿತ ಸೂತ್ರಗಳಲ್ಲಿ ಕಾಣಬಹುದು.

ತಮ್ಮ ತಮ್ಮ ದೈವದ ಮುಂದೆ ತಪ್ಪು ಒಪ್ಪಿಕೊಳ್ಳುವ, ತಮ್ಮ ಜಾತಿಯ ಹಿರಿಯರ ಮಾತಿಗೆ ಗೌರವ ಕೊಡುವ, "ಜಾತಿಮೋಹ" ಎನ್ನುವುದು ಪ್ರತಿಯೊಬ್ಬನಲ್ಲೂ ಇರುವ ಒಂದು ಮಾನಸಿಕ ಸ್ಥಿತಿಯಾಗಿದೆ. ತಮ್ಮತಮ್ಮ ಜಾತಿ ಮತ್ತು ತಮ್ಮ ದೈವದ ಬಗ್ಗೆ ಅಚಲವಾದ ನಂಬಿಕೆ ಪ್ರತಿಯೋರ್ವನಿಗೂ ಇದೆ. ಇಂತಹ ಸಂದರ್ಭದಲ್ಲಿ ನಾಡಿನ ರಾಜನಿಗೂ ಅಧಿಕಾರಿಗಳಿಗೂ ಸಾಧ್ಯವಾಗದ ತಪ್ಪೊಪ್ಪಿಗೆಗಳನ್ನೂ ಸಮಸ್ಯೆಗಳಿಗೆ ಪರಿಹಾರಗಳನ್ನೂ ರಾಜಿಸೂತ್ರಗಳನ್ನೂ ಈ ಜಾತಿ ದೇವಾಲಯಗಳು ಬಹುಸುಲಭವಾಗಿ ನಡೆಸಿಕೊಡುತ್ತಿದ್ದವು. "ತಮ್ಮವರು" "ತಮ್ಮ ದೇವರು" ಎಂಬ ಅಭಿಮಾನ ತಪ್ಪು ಒಪ್ಪಿಕೊಳ್ಳುವುದರಲ್ಲೂ, ಸತ್ಯಪ್ರತಿಜ್ಞೆಗಳನ್ನು ಮಾಡುವುದರಲ್ಲೂ

ಬಹುಮುಖ್ಯ ಪಾತ್ರವಹಿಸುತ್ತವೆ. ಕುಲದೇವತೆಗಳ ಬಗ್ಗೆ ಅಭಿಮಾನದೊಂದಿಗೆ ಭಯ ಮಿಶ್ರಿತ ಭಕ್ತಿ ಉಳಿದ ದೇವತೆಗಳ ಮೇಲಿರುವುದಕ್ಕಿಂತಲೂ ಸ್ವಲ್ಪ ಹೆಚ್ಚೇ ಇದೆ ಎಂದು ಹೇಳಬಹುದು. ಆದುದರಿಂದಲೇ ಜಾತಿಯ ಒಳಗೆ ಯಾವ ಸಮಸ್ಯೆ ಎದುರಾದರೂ ದೇವರ ಮುಂದೆ, ಜಾತಿಯ ಹಿರಿಯ ಆಚಾರವರ್ಗದವರ ಮುಂದೆ ಅದು ಸುಲಭದಲ್ಲಿ ಇತ್ಯರ್ಥವಾಗುತ್ತಿತ್ತು. ದೈವಭೀರುಗಳಾಗಿ ಅಲ್ಲಿ ಸಮಾಜಬಾಂಧವರು ಸತ್ಯವನ್ನೇ ನುಡಿದುಬಿಡುತ್ತಿದ್ದರು.

ಮೇಲುವರ್ಗದ ಸಮುದಾಯವು ಆರಾಧನೆಗೆ ಸಂಬಂಧಪಟ್ಟ ದೇವಾಲಯಗಳೊಳಗಿನ ಪ್ರವೇಶಗಳನ್ನು ನಿಷೇಧಿಸಿದಾಗ, ಸ್ವತಂತ್ರವಾದ ಭಕ್ತ್ಯಾಚರಣೆಗಳಿಗೆ ಅವಕಾಶ ಸಿಗದಾಗ ತಮಗೆ ಸರಿಯೆನ್ನಿಸಿದ ರೀತಿಯಲ್ಲಿ ತಮ್ಮದೇ ದೈವಗಳನ್ನು ನಿರ್ದಿಷ್ಟ ಸ್ಥಳದಲ್ಲಿ ಸ್ಥಾಪಿಸಿ, ಪೂಜಿಸಲು ಆರಂಭಿಸಿದ್ದೇ ಇಂತಹ ಕ್ಷೇತ್ರಗಳ ಅಥವಾ "ತಾನಂ"ಗಳ ಹುಟ್ಟಿಗೆ ಕಾರಣವಾಗಿರುವಾಗ, ಆ ಕ್ಷೇತ್ರದ ಜತೆಗೆ ಸಮುದಾಯಕ್ಕೆ ಒಂದು ರೀತಿಯ ಮಾನಸಿಕ ಸಾಮೀಪ್ಯತೆ ತಾನಾಗಿಯೇ ಬೆಳೆಯುತ್ತದೆ. ದಿನನಿತ್ಯದ ಕರ್ಮಾನುಷ್ಠಾನಗಳನ್ನು ಆರಂಭಿಸುವುದಕ್ಕಿಂತಲೂ ಮುನ್ನ ದೇವಾಲಯದಲ್ಲಿ ದೇವದರ್ಶನವನ್ನು ಪಡೆದು ಬರುತ್ತಾರೆ. ಸಂಕ್ರಾಂತಿಯ ದಿನಗಳಲ್ಲಿ ಸಾಧ್ಯವಾದಷ್ಟೂ ಸಮಾಜಬಾಂಧವರು ಇಲ್ಲಿ ಸೇರಿಕೊಳ್ಳುತ್ತಾರೆ. ಕ್ಷೇತ್ರದ ಆಚಾರವರ್ಗದವರೊಂದಿಗೆ ಗೌರವದಿಂದ ನಡೆದುಕೊಳ್ಳುತ್ತಾರೆ. ತಮ್ಮ ಯಾವುದೇ ಸಮಸ್ಯೆಗಳನ್ನು ಅವರ ಮುಂದೆ ಇಟ್ಟು ಪರಿಹಾರವನ್ನು ಕೇಳಿಕೊಳ್ಳುತ್ತಾರೆ. ತಮ್ಮದೇ ಸಮುದಾಯದ ಕೋಮರರಿಗೆ ದರ್ಶನ ಬಂದಾಗಲಂತೂ ಅವರನ್ನು ದೇವರ ಪ್ರತಿರೂಪಗಳೆಂದೇ ಭಾವಿಸಲಾಗುತ್ತದೆ. ದೈವಗಳ ಹಾಗೂ ಮನುಷ್ಯರ ನಡುವಿನ ಮಾಧ್ಯಮಗಳಾಗಿ ಅವರನ್ನು ಕಾಣುವ ಸಮಾಜಬಾಂಧವರು ಆವೇಶಕ್ಕೊಳಗಾಗಿ ಮಾತನಾಡುವ ಕೋಮರರ ಮುಂದೆ ತಮ್ಮ ದುಃಖಗಳನ್ನೂ ಸಮಸ್ಯೆಗಳನ್ನೂ ಹೇಳಿಕೊಳ್ಳುತ್ತಾರೆ. ಅವರು ಆ ಸಂದರ್ಭದಲ್ಲಿ ಸೂಚಿಸಿದ ಪರಿಹಾರಗಳನ್ನು ಶಿರಸಾವಹಿಸಿ ಪಾಲಿಸುತ್ತಾರೆ.

"ತಾನಂ"ನಲ್ಲಿ ಯಾವುದೇ ಕಾರ್ಯ ನಡೆಯುವುದಿದ್ದರೂ ಅದರ ಖರ್ಚು—ವೆಚ್ಚಗಳಿಗೆ ಸಮಾಜಬಾಂಧವರಿಂದ ಚಂದಾ ಎತ್ತಲಾಗುತ್ತದೆ. ವರ್ಷಂಪ್ರತಿ ಸಮಾಜದ ಪ್ರತಿಯೋರ್ವ ಸದಸ್ಯನೂ "ಕಾಲ್‌ವರ" ಎಂಬ ಸದಸ್ಯತನದ ಶುಲ್ಕವನ್ನು ಕ್ಷೇತ್ರಕ್ಕೆ ಸಲ್ಲಿಸಲೇಬೇಕು. ಇದನ್ನು "ತಲವರಿ" ಎಂದು ದಕ್ಷಿಣ ತೆರುಗಳಲ್ಲಿ ಹೇಳುತ್ತಾರೆ. ಇದನ್ನು "ತಾನಂ"ನ ಸಾಮಾನ್ಯ ಖರ್ಚು ವೆಚ್ಚಗಳಿಗೆ ಉಪಯೋಗಿಸಲಾಗುತ್ತದೆ. ವಿಶೇಷ ಸಂದರ್ಭಗಳಲ್ಲಿ ವಿಶೇಷ ಚಂದಾ ಎತ್ತಲಾಗುತ್ತದೆ. "ತಾನಂ"ನಲ್ಲಿ ಯಾವುದೇ ಕಾರ್ಯಕ್ರಮದಲ್ಲೂ ಸಮುದಾಯದವರೆಲ್ಲರೂ ಹಿರಿಕಿರಿಯ ಭೇದವಿಲ್ಲದೆ ಒಟ್ಟಾಗಿ ಭಾಗವಹಿಸುತ್ತಾರೆ. ಆರ್ಥಿಕ ಬೆಂಬಲವನ್ನು ನೀಡುವುದರಿಂದ ಆರಂಭಗೊಂಡು ದೈಹಿಕ ಶ್ರಮದ ಯಾವ ಕೆಲಸಕ್ಕೂ ಯಾರೂ ಹಿಂಜರಿಯುವುದಿಲ್ಲ. ಉತ್ಸವದ ಕಾಲದಲ್ಲಿ ೪—೫ ದಿನಗಳ ಕಾಲ ಎಡೆಬಿಡದೆ ಸ್ವಯಂ ಸೇವಕರಂತೆ,"ದೈವಕಾಯ" ಎಂದು ಭಯ ಭಕ್ತಿ ಮತ್ತು ಸೇವಾಮನೋಭಾವದಿಂದ ದುಡಿಯುತ್ತಾರೆ.

"ತಾನಂ"ಗೆ ಸಂಬಂಧಪಟ್ಟ ಪ್ರತಿಯೊಂದೂ ತಮಗೆ ಸೇರಿದ್ದು ಎಂಬ ಅಭಿಮಾನ ಸಮಾಜದ ಪ್ರತಿಯೋರ್ವನಿಗೂ ಇದೆ. ಅದನ್ನು ಆತ ದೈವಿಕ ದೃಷ್ಟಿಯಿಂದ ಗೌರವಪೂರ್ವಕವಾಗಿ ನೋಡಿಕೊಂಡು, ಅದನ್ನು ರಕ್ಷಿಸಿಕೊಂಡು ಬರುವುದು ತನ್ನ ಕರ್ತವ್ಯ ಎಂದು ಭಾವಿಸುತ್ತಾನೆ.

"ತಾನಂ"ನಲ್ಲಿ ನಡೆಯುವ ಹುತ್ತಂ, ವಿಷು, ಚೆವ್ವಿಳಕ್ಕೂ, ಸಂಕ್ರಮಣ, ನಿರ ಈ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಸಮುದಾಯದವರು ಸೇರಿಕೊಳ್ಳುತ್ತಾರೆ. ದೂರದ ಊರಿನಲ್ಲಿರುವವರು ಹುಟ್ಟೂರಿನ ತಮ್ಮ ತೆರುವಿಗೆ ಬಂದಾಗ "ತಾನಂ"ಗೆ ಬಂದು ದೈವದ ದರ್ಶನವನ್ನು ಮಾಡಿಕೊಂಡು ಹೋಗುವುದು ಸಾಮಾನ್ಯ ಸಂಪ್ರದಾಯ. ವಾರ್ಷಿಕವಾಗಿ ನಡೆಯುವ "ನಡಾವಳಿ"ಯಂತಹ ಉತ್ಸವ ಸಂದರ್ಭದಲ್ಲಿ ಎಲ್ಲಿದ್ದರೂ ಬರುತ್ತಾರೆ. ಮೊದಮೊದಲು ಮದುವೆ ಮೊದಲಾದ ಶುಭ ಕಾರ್ಯಕ್ರಮಗಳು "ತಾನಂ"ಗಳಲ್ಲೇ ದೈವದ ಸಮ್ಮುಖದಲ್ಲೇ ನಡೆಯುತ್ತಿದ್ದುವು. ಇತ್ತೀಚೆಗೆ ಮದುವೆಗಳನ್ನು ಬೇರೆಡೆ ನಡೆಸಿದರೂ, "ನವವಧೂವರರು ಕ್ಷೇತ್ರಕ್ಕೆ ಬಂದು ದೈವದರ್ಶನವನ್ನು ಪಡೆದುಕೊಳ್ಳಬೇಕು" ಎನ್ನುವುದನ್ನು ಕಡ್ಡಾಯವಾಗಿ ಪಾಲಿಸಿಕೊಂಡು ಬರುತ್ತಾರೆ.

ಬಾಲ್ಯದಿಂದ ಆರಂಭಗೊಂಡು ವೃದ್ಧಾಪ್ಯರವರೆಗೂ ಸಮುದಾಯದ ಪ್ರತಿಯೋರ್ವನಿಗೂ ಕ್ಷೇತ್ರದ ಜತೆಗೆ ಸಂಬಂಧವಿದ್ದೇ ಇರುತ್ತದೆ. ಸ್ತ್ರೀ ಗರ್ಭಿಣಿಯಾದಾಗ ಅವಳಿಗೆ ಸೀಮಂತ ಮಾಡಬೇಕಿದ್ದರೆ, ಕ್ಷೇತ್ರದ ಆಚಾರವರ್ಗದವರ ಸಮ್ಮತಿಬೇಕು. ಮುಂದೆ ಮಗು ಜನಿಸಿದಾಗ ೪೦ ದಿನಗಳು ಕಳೆದ ಮೇಲೆ ಮಗುವನ್ನು ಕರೆದುಕೊಂಡು ಬಂದು ಮಗುವಿಗೆ ಕ್ಷೇತ್ರದರ್ಶನ ಮಾಡಿಸಬೇಕು. ಹಿಂದೆ ಅಚ್ಚಮ್ಮಾರರ ಕೈಯಲ್ಲಿ ಮಗುವನ್ನು ಕೊಡುವ ಸಂಪ್ರದಾಯವೂ ಇತ್ತು ಎನ್ನಲಾಗಿದೆ. ಮಗು ಬೆಳೆದಂತೆ ಅದು ಹೆಣ್ಣು ಮಗುವಾಗಿದ್ದರೆ ಕ್ಷೇತ್ರಕ್ಕೆ ತಂದು "ಚೆಟ್ಟಿಯಾರ್‌ಚ"ನ ಕೈಯಿಂದ "ಚರಡ್ ಕಟ್ಟಿಸಿ" ವೀಳ್ಯ ಕೊಡಿಸಿ ಚಪ್ಪರ ಮದುವೆ ಮಾಡಿಸಬೇಕು. ಗಂಡಾಗಿದ್ದರೆ ಅವನು "ಚೆಟ್ಟಿಯಾರ್‌ಚ"ನ ಕೈಯಿಂದ ವೀಳ್ಯ ಪಡೆದುಕೊಂಡು ಸಮಾಜದ ಸದಸ್ಯತ್ವವನ್ನು ಪಡೆದುಕೊಳ್ಳಬೇಕು. ಅನಂತರ ಸಾವಿನವರೆಗೂ ಕ್ಷೇತ್ರಕ್ಕೆ ವರ್ಷಂಪ್ರತಿ ಸಲ್ಲಿಸಬೇಕಾದ ಸದಸ್ಯತನದ ಶುಲ್ಕವನ್ನು ಆತ ಎಲ್ಲಿದ್ದರೂ ಸಲ್ಲಿಸಲೇಬೇಕು. ಒಂದು ವೇಳೆ ಸದಸ್ಯತನದ ಶುಲ್ಕವನ್ನು ಆ ಬಾಕಿಯಿರಿಸಿಕೊಂಡು ಸತ್ತರೆ ಅದು ಸಂದಾಯವಾಗುವವರೆಗೂ ಆತನ ಉತ್ತರಕ್ರಿಯೆಗೆ ಕ್ಷೇತ್ರದಿಂದ ಸಮ್ಮತಿಯು ದೊರಕುವುದಿಲ್ಲ. ಮನೆಯಲ್ಲಿ ಯಾವುದೇ ಸಮಾರಂಭವಾಗುವುದಿದ್ದರೂ ಕ್ಷೇತ್ರಕ್ಕೆ ಸಲ್ಲಿಸಬೇಕಾದ ಶುಲ್ಕವನ್ನು ಸಲ್ಲಿಸಿ ಅನುಮತಿಯನ್ನು ಪಡೆದುಕೊಳ್ಳಲೇಬೇಕು. ಅದನ್ನು ಪಡೆಯದೇ ಸಮಾರಂಭವನ್ನು ನಡೆಸುವ ಹಾಗಿಲ್ಲ. ಕ್ಷೇತ್ರದ ಆಚಾರವರ್ಗಕ್ಕೆ ಮೊದಲು ಆಮಂತ್ರಣವನ್ನು ಕೊಡಬೇಕು. ಕಾರ್ಯಕ್ರಮಕ್ಕೆ ಅವರು ಬಂದಾಗ ಮೊದಲು

ಅವರನ್ನು ಸ್ವಾಗತಿಸಬೇಕು. ಪ್ರತ್ಯೇಕವಾದ ಪೀಠಗಳಲ್ಲಿ ಅವರನ್ನು ಕುಳಿತುಕೊಳ್ಳಿಸಬೇಕು. ಎಲ್ಲರಿಗಿಂತಲೂ ಮುನ್ನ ಅವರಿಗೆ ಪ್ರತ್ಯೇಕವಾಗಿಯೇ ಊಟೋಪಚಾರವಾಗಬೇಕು. ಅವರ ಮೇಲ್ವಿಚಾರಣೆಯಲ್ಲಿ ಪ್ರತಿಯೊಂದು ಕಾರ್ಯವನ್ನು ನಡೆಸಬೇಕು. ಸಮಾರಂಭ ಸಾಂಗವಾಗಿ ನೆರವೇರಿದಾಗ ಕ್ಷೇತ್ರಕ್ಕೆ ಪ್ರತ್ಯೇಕವಾದ ಹರಕೆಗಳನ್ನು ಸಲ್ಲಿಸಬೇಕು.

ಶಾಲಿಯಾ ಸಮುದಾಯದ "ನಗರಂ" ಬಗ್ಗೆ ಥರ್ಸ್ಟನ್ ಹೀಗನ್ನುತ್ತಾನೆ. "ಸಮಾಜದಲ್ಲಿ ಯಾರಾದರೂ ತಪ್ಪಿತಸ್ಥರೆಂದು ಕಂಡು ಬಂದರೆ ಗ್ರಾಮದ ದೇವಾಲಯದಲ್ಲಿ "ಸಭೆ" ನೆರೆದು ( ಇಲ್ಲಿ "ಸಭೆ" ಎಂದು ಉಲ್ಲೇಖಿಸಿದ್ದು "ನಗರಂ"ನ ಬಗ್ಗೆಯೇ ಇರಬೇಕು) ವಿಚಾರಣೆಗಳನ್ನು ನಡೆಸಲಾಗುತ್ತದೆ. ತಪ್ಪಿತಸ್ಥರೆಂದು ತೀರ್ಮಾನವಾದವರಿಂದ ಬಂದ ತಪ್ಪು ಕಾಣಿಕೆ (fine)ಗಳನ್ನು ಕ್ಷೇತ್ರದ ಪೂಜೆಗಾಗಿ ವಿನಿಯೋಗಿಸಲಾಗುತ್ತಿತ್ತು. (Edger Thurston : Castes and Tribes of Southern India, Vol. II, Page 13).

# ಅಧ್ಯಾಯ – ೭

## ಜಾನಪದ ಲೋಕ

೧) ಶಾಲಿಯಾ ಪೊರಾಟ್

೨) ಪೂರಕ್ಕಳಿ

೩) ಇತರ ಜಾನಪದ ಕಲೆಗಳು

೪) ಚಾಲಿಯಕ್ಕೆಣಿ : ಶಾಲಿಯರಿಗೆ ಸಂಬಂಧಿಸಿದ ಕತೆಗಳು

# ಅಧ್ಯಾಯ ೭
## ಜಾನಪದ ಲೋಕ
### ೧ ಶಾಲಿಯಾ ಪೊರಾಟ್

ಮಾನವ ಸಂಸ್ಕೃತಿಯನ್ನು ಜನಪದ ವಿದ್ವಾಂಸರು, ಶುದ್ಧ ಜನಪದ ಸಂಸ್ಕೃತಿ (Pure Folk culture), ಮಧ್ಯಮ ಸಂಸ್ಕೃತಿ (Intermediate Culture), ಪ್ರೌಢ ಸಂಸ್ಕೃತಿ (Learned Culture) ಎಂದು ಮೂರು ಹಂತಗಳಲ್ಲಿ ಗುರುತಿಸುತ್ತಾರೆ. ಪರಿಮಿತವಾದ ವ್ಯಾಪ್ತಿಯಲ್ಲಿ ಗೊತ್ತಾದ ಕೆಲವು ಪುರೋಹಿತ ವರ್ಗದವರಿಂದ, ರಾಜನೀತಿಜ್ಞರಿಂದ, ವಿಜ್ಞಾನಿಗಳಿಂದ ಧಾರ್ಮಿಕ ಪುರುಷರಿಂದ, ಕವಿಗಳಿಂದ, ಕಲಾವಿದರಿಂದ ನಿರ್ಮಿತವಾಗುವ ಸಂಸ್ಕೃತಿಯನ್ನು ಪ್ರೌಢ ಸಂಸ್ಕೃತಿ ಎಂದು ಕರೆಯಲಾಗಿದೆ. ಆದರೆ ಇದಕ್ಕಿಂತ ಭಿನ್ನವಾದ ಸಂಸ್ಕೃತಿ ಮತ್ತೊಂದಿದೆ. ತನ್ನ ಗುಂಪಿನಿಂದ ಸ್ವೀಕರಿಸಲ್ಪಟ್ಟ ಸಂಪ್ರದಾಯ ನಂಬಿಕೆ, ಹಾಡು, ಕುಶಲ ಕೈಗಾರಿಕೆ ಮುಂತಾದವುಗಳ ತಿಳಿವು ಅಥವಾ ಜ್ಞಾನಕ್ಕೆ ಬದ್ಧವಾಗುವಾಗ ಅವನು ಜನಪದ ಸಂಸ್ಕೃತಿಯ ವ್ಯಾಪ್ತಿಗೆ ಒಳಪಟ್ಟವನಾಗುತ್ತಾನೆ. ಅನೇಕ ಸಂದರ್ಭಗಳಲ್ಲಿ ಜನಪದ ಸಂಸ್ಕೃತಿ ಹಾಗೂ ಶಿಷ್ಟ ಸಂಸ್ಕೃತಿಗಳ ನಡುವೆ ಗೆರೆಯೆಳೆಯಲು ಸಾಧ್ಯವಾಗದಷ್ಟು ರೀತಿಯ ಸಮ್ಮಿಶ್ರ ಸಂಸ್ಕೃತಿಯನ್ನು ಕಾಣಲು ಸಾಧ್ಯ. ಇಲ್ಲಿ "ಮಧ್ಯಮ ಸಂಸ್ಕೃತಿ"ಯೊಂದು ಕಾಣುತ್ತದೆ. (ಜೀ.ಶಂ. ಪರಮಶಿವಯ್ಯ:೧೯೭೫ : ಪುಟ:೪) ಈ ಮಾತು ಶಾಲಿಯಾ ಸಮುದಾಯದ ಜಾನಪದಕ್ಕೆ ಅನ್ವಯಿಸುತ್ತದೆ.

"ಮಾನವನ ಬದುಕಿನ ಬೇರುಗಳು ಜಾನಪದದಲ್ಲಿದೆ. ಶಿಷ್ಟ ಸಾಹಿತ್ಯವು ಅಭಿವ್ಯಕ್ತಿಗಾಗಿ ಸೋತಾಗ ಜಾನಪದ ಅದರ ನೆರವಿಗೆ ಬರುತ್ತದೆ ಎಂಬ ಅಂಶವನ್ನು ಪ್ರಾಸಂಗಿಕವಾಗಿ ಸ್ಮರಿಸಬಹುದು. ಆದ್ದರಿಂದ ಜಾನಪದ ಮೌಲ್ಯಗಳು ಅಜರಾಮರವಾಗಿರುತ್ತವೆ. ಹೊದಿಕೆ ಭಿನ್ನವಾದರೂ ತಿರುಳು ಬದಲಾಗುವುದು ಕಠಿಣ".(ಶ್ರೀ ಮಹೇಶ ತಿಪ್ಪಸೆಟ್ಟಿ, ಪುಣ್ಯಕೋಟಿ ಒಂದು ಸಾಂಸ್ಕೃತಿಕ ಅಧ್ಯಯನ: ಪು.ನಿ.) ಈ ಮಾತು ಶಾಲಿಯರ ಜಾನಪದ ಕಲೆಯೆಂದೇ ಪ್ರಸಿದ್ಧವಾದ "ಶಾಲಿಯಾ ಪೊರಾಟ್"ಗೆ ಅನ್ವಯಿಸುತ್ತದೆ. ಆದಿಮ ಮಾನವನ ಸಂತೋಷದ ಸೂಚಕವಾದ ಕುಣಿತವು "ಜಾನಪದ ಕುಣಿತ" ವೆಂದು ಕರೆಯಲ್ಪಟ್ಟು ಕ್ರಮೇಣ ಸಾಮಾಜಿಕ ವಿಡಂಬನೆಯು ಸಾಂಕೇತಿಕವಾಗಿ ಅದರಲ್ಲಿ ಸೇರಲ್ಪಟ್ಟು, ರೂಪಾಂತರವನ್ನು ಪಡೆದುಕೊಳ್ಳುತ್ತಾ ಬಂದಿರುವುದನ್ನು ತುಳುನಾಡಿನ ಹಲವಾರು ಜಾನಪದ ಕುಣಿತಗಳು ನಮಗೆ ಬೆಟ್ಟು ಮಾಡಿತೋರಿಸುತ್ತವೆ. ಪ್ರತಿಯೊಂದು ಜಾನಪದ ಕುಣಿತದ ಹಿಂದೆಯೂ ಊಳಿಗಮಾನ್ಯ ಪದ್ಧತಿಗೆ ಒಳಗಾದ ಮಾನವನ ಅಂತರಂಗದ ನೋವು, ನಿರಾಶೆ, ರೋಷ, ಅಸಹಾಯಕತೆ ಅಡಗಿಕೊಂಡಿರುವುದನ್ನು ಶೋಧನೆಯ ಮೂಲಕವಾಗಿ ತಿಳಿದುಕೊಳ್ಳಲು ಸಾಧ್ಯವಿದೆ.

ಜಾನಪದ ಕುಣಿತಗಳಂತೇ ಜಾನಪದ ವೇಷಗಳೂ ಸಮಾಜದ ಹಲವು ಮುಖಗಳನ್ನು ಸಾಂಕೇತಿಕವಾಗಿ ಪ್ರತಿಬಿಂಬಿಸುತ್ತವೆ. ಶಿಷ್ಟ ಸಾಹಿತ್ಯ ಹಾಗೂ ಕಲೆಗಳು ಸಮಕಾಲೀನ ಬದುಕಿನ ಕೈಗನ್ನಡಿಗಳು ಎಂದರೂ ಅದು ಹೆಚ್ಚಾಗಿ ಆದರ್ಶೀಕೃತ ಮೌಲ್ಯಗಳನ್ನು ಪ್ರತಿಪಾದಿಸಲು ಪ್ರಯತ್ನಿಸುತ್ತವೆ. ಆದರೆ ಜಾನಪದ ಕಲೆಗಳು ಬದುಕಿಗೆ ತೀರ ಸಮೀಪವಾಗಿ ಹೆಚ್ಚು ವಾಸ್ತವಿಕತೆಯನ್ನು ಒಳಗೊಂಡವುಗಳಾಗಿರುತ್ತವೆ ಎಂಬುದನ್ನು "ಶಾಲಿಯಾ ಮೊರಾಟ್" ಸೂಚಿಸಿಕೊಡುತ್ತದೆ.

ವಿಧವಿಧದ ವೇಷಗಳನ್ನು ಕಟ್ಟಿ ಜನಸಮುದಾಯವನ್ನು ನಗಿಸುವ ಕಲೆಯು ಮಾನವನಲ್ಲಿ ಅತೀ ಪ್ರಾಚೀನ ಕಾಲದಿಂದಲೇ ರೂಢಿಯಲ್ಲಿದೆ. "ವಡ್ಡಾರಾಧನೆ" ಎನ್ನುವ ಕನ್ನಡದ ಆದ್ಯಗ್ರಂಥದಲ್ಲಿ ಕಾರ್ತಿಕ ಋಷಿಯ ಕತೆಯಲ್ಲಿ ಬರುವ "ಪಗರಣಿಗರು" ಎಂಬ ಪದವು ರಾಣಿಯನ್ನು ನಗುವಂತೆ ಮಾಡಲು ಪ್ರಯತ್ನಿಸಿದ ಜನರನ್ನು ಕುರಿತು ಹೇಳಿದುದಾಗಿದೆ. "ಲೋಗರ್ ಪಗರಣಿಗರಾಗಿ ಎನಿತಾನುಂ ತೆರದ ರೂಪುಗಳಂ ಕೈಗೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಂ ಎಂತುಂ..... ಒರ್ವಂ ಕರಿಯ ಕಚ್ಚುಟಮನುಟ್ಟು ಮೈಯೆಲ್ಲಮಸಿಯಂ ಪೂಸಿ ಬೋಳದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಪಾಡಿ ಕುಂಚಮುಂ ಗುಂಡಿಗೆಯುಮಂ ಪಿಡಿದು ಬರ್ಪೋನನ್..."(ಡಿ.ಎಲ್. ನರಸಿಂಹಾಚಾರ್(ಸಂ).ವಡ್ಡಾರಾಧನೆ (೧೯೪೦) ಪು.೧೧೩)

ಇದರಿಂದ ಪಗರಣಗಳಲ್ಲಿ ಸಾಮಾನ್ಯ ಜನರು (ಲೋಗರ್) ವಿಚಿತ್ರ ವೇಷಗಳನ್ನು ಧರಿಸಿ ಜನರನ್ನು ನಗಿಸುತ್ತಿದ್ದರು ಎನ್ನುವುದು ಅರಿವಾಗುತ್ತದೆ. ನಯಸೇನನ ಧರ್ಮಾಮೃತಪುರಾಣದಲ್ಲಿ "ಮೂರು ದಿನದ ಪಗರಣಕ್ಕೆ ಗಡ್ಡ ಮೀಸೆಯಂ ಮಂಡೆಯಂ ಬೋಳಿಸಿಕೊಂಡಂತೆ" ಎಂಬ ಮಾತು ಬಂದಿದೆ. ಹೆಂಗಸರ ವೇಷವನ್ನು ಗಂಡಸರು ಹಿಂದೆ ಧರಿಸಿ, ಆ ಮೂಲಕ ಜನರನ್ನು ನಗಿಸುವ ಪ್ರಯತ್ನ ಮಾಡುತ್ತಿದ್ದರು ಎನ್ನುವ ವಿಚಾರ ಇದರಿಂದ ತಿಳಿದು ಬರುತ್ತದೆ.

"ಶಾಲಿಯಾ ಮೊರಾಟ್" ಎನ್ನುವ ಕಲೆಯು ತುಳುನಾಡಿನ ಶಾಲಿಯಾ ಸಮುದಾಯದಲ್ಲಿ ಮಾತ್ರ ಆಚರಣೆಯಲ್ಲಿರುವ ಒಂದು ಕಲಾ ಮಾಧ್ಯಮ. ಅನ್ಯರ ವೇಷವನ್ನು ಧರಿಸಿದಾಗ ಹಾಸ್ಯಾಸ್ಪದವಾಗಿ ಕಾಣುವುದು ಸಹಜ. ಈ ರೀತಿಯಲ್ಲಿ ಧರಿಸುವುದರಿಂದ ಜನರನ್ನು ನಗೆಗಡಲಲ್ಲಿ ಮುಳುಗಿಸಲು ಸಾಧ್ಯವಾಗುತ್ತದೆ. ವಿಚಿತ್ರವಾಗಿ ಕಾಣುವ ವೇಷಗಳನ್ನು ರಂಗದ ಮೇಲೆ ಪ್ರದರ್ಶಿಸುವ ಕಲೆಯೊಂದು ಧಾರ್ಮಿಕ ಆಚರಣೆಯ ಹಿನ್ನೆಲೆಯನ್ನು ಇಲ್ಲಿ ಪಡೆದುಕೊಂಡಿದೆ.

ತುಳುನಾಡಿನ ನಲಿಕೆ ಜನಾಂಗದವರಲ್ಲಿ ಹಿಂದೆ ಆಚರಣೆಯಲ್ಲಿದ್ದ ಭೂತಾರಾಧನೆಯ ಒಂದು ಪ್ರಭೇದವಾದ ಜಾಲಾಟ ಎನ್ನುವುದಕ್ಕೂ "ಶಾಲಿಯಾ ಮೊರಾಟ್"ಗೂ ಸ್ವಲ್ಪ ಮಟ್ಟಿಗೆ ಸಾದೃಶ್ಯವಿದೆ. ಜಾಲಾಟವು ಭೂತಾರಾಧನೆಯ ಹಿನ್ನೆಲೆಯಲ್ಲಿ ಮೊರಾಟ್ ನಡೆದರೆ, ಮೊರಾಟ್ ಲೌಕಿಕ ಆಚರಣೆಯ ಹಿಂದೆ ಧಾರ್ಮಿಕ ವಿಷಯಗಳನ್ನು ಸೇರಿಸಿಕೊಂಡಿದೆ.

ಜಾಲಾಟಕ್ಕೂ ಶಾಲಿಯಾ ಪೊರಾಟ್‌ಗೂ ಇರುವ ಸಾದೃಶ್ಯ ವೈದೃಶ್ಯವನ್ನು ಹೀಗೆ ತಿಳಿದುಕೊಳ್ಳಬಹುದು.

| | ಜಾಲಾಟ | ಶಾಲಿಯಾ ಪೊರಾಟ್ |
|---|---|---|
| ೧. | ಜಾಲಾಟದಲ್ಲಿ ನಲಿಕೆ ಜನಾಂಗದವರು ಮಾತ್ರ ಕಲಾವಿದರಾಗಿರುತ್ತಾರೆ. | ಪೊರಾಟ್‌ನ್ನು ಶಾಲಿಯಾ ಜನಾಂಗದವರು ಮಾತ್ರ ಆಡುತ್ತಾರೆ. |
| ೨. | ಲೌಕಿಕವಾಗಿರುವ ಕುಣಿತದ ಕೆಲವು ಪ್ರಕಾರಗಳು ಜಾಲಾಟದಲ್ಲಿದೆ. | ಇಲ್ಲಿ ಕುಣಿತ ಮುಖ್ಯವಲ್ಲ. ವೇಷ ಮುಖ್ಯ. |
| ೩. | ಜಾಲಾಟದಲ್ಲಿ ಆರಾಧನೆ ಹೊಂದುವ ಭೂತಗಳ ಪಾಡ್ದನಗಳಲ್ಲಿ ಚಾರಿತ್ರಿಕ ವಿವರಣೆಗಳಿರುತ್ತವೆ. ಪೌರಾಣಿಕ ಅಂಶಕ್ಕಿಂತ ಚಾರಿತ್ರಿಕ ಅಂಶವೇ ಹೆಚ್ಚಾಗಿರುತ್ತದೆ. | ಶಾಲಿಯಾ ಪೊರಾಟ್‌ಗೂ ಇದು ಅನ್ವಯಿಸುತ್ತದೆ. |
| ೪. | ತಿರಿ, ಹಾಳೆ ಇಂತಹ ವಸ್ತುಗಳಿಂದಲೇ ಮಾಡಿದ ಅಲಂಕಾರ ಸಾಮಾಗ್ರಿಗಳನ್ನು ಬಳಸಲಾಗುತ್ತದೆ. | ಯಾವುದನ್ನೂ ಬಳಸಬಹುದು |
| ೫. | ಇದರಲ್ಲಿ ಎಲ್ಲ ರಸಗಳೂ ಪ್ರಯೋಗಗೊಳ್ಳುತ್ತದೆ. | ಇದರಲ್ಲಿ ಹಾಸ್ಯವೇ ಪ್ರಧಾನವಾಗಿದೆ. |
| ೬. | ತುಳುನಾಡಿನ ಮೂಲನಿವಾಸಿಗಳ ಜಾನಾಂಗಿಕ ಮತ್ತು ಸಾಮಾಜಿಕವಾದ ಕೆಲವು ಸೂಕ್ಷ್ಮ ವಿಚಾರಗಳು ಇದರಲ್ಲಿವೆ. | ಶಾಲಿಯಾ ಪೊರಾಟ್‌ಗೂ ಇದು ಅನ್ವಯಿಸುತ್ತದೆ. |
| ೭. | "ಜಾಲಾಟ"ವು ಭೂತಾರಾಧನೆಯ ಒಂದು ಭಾಗ | ಶಾಲಿಯಾ ಪೊರಾಟ್ ಭೂತಾರಾಧನೆ ಅಲ್ಲ. ಅಲ್ಲಿ "ತೆಯ್ಯಂ" ಇಲ್ಲ. |
| ೮. | ಸದ್ದು, ಗದ್ದಲ, ಜಗಳ, ಅಶ್ಲೀಲ ಮಾತು, ವ್ಯಂಗ್ಯ ಇವು ಜಾಲಾಟದ ಪ್ರಹಸನ ಭಾಗದಲ್ಲಿದೆ. | ಶಾಲಿಯಾ ಪೊರಾಟಿನಲ್ಲೂ ಇವೆಲ್ಲವೂ ಇವೆ. |

(ಚಿನ್ನಪ್ಪ ಗೌಡ : ೧೯೮೫ : ಪುಟ : ೭೩).

"ಜಾಲಾಟ"ದ "ಪ್ರಹಸನ" ಭಾಗಕ್ಕೂ ಪೊರಾಟ್‌ಗೂ ಸಂಬಂಧವಿದೆ. ನಾಟಕೀಯ ಪ್ರಹಸನದ ರೂಪದಲ್ಲಿರುವ ಈ ಭಾಗದಲ್ಲಿ ಪಾತ್ರಗಳು ಹಾಸ್ಯದ ಮಾತುಗಳ ಮೂಲಕ ಪ್ರೇಕ್ಷಕರನ್ನು ನಗಿಸುತ್ತವೆ. ಜಾಲಾಟದ ಕೋಲದ ಭಾಗವನ್ನು "ಅತಿಮಾನುಷ"ವೆಂದು ಮತ್ತು ಮನೋರಂಜನೆಯ ಲೌಕಿಕ ಭಾಗವನ್ನು "ಮಾನುಷ" ಎಂದು ಕರೆಯಬಹುದು. ಇದರಲ್ಲಿ ಕಲಾವಿದರ ಲೋಕಜ್ಞಾನ, ವ್ಯವಹಾರ, ಕುಶಲತೆ, ಹಾಸ್ಯಪ್ರಜ್ಞೆ ಇವು ಅಭಿವ್ಯಕ್ತಿಗೊಳ್ಳುತ್ತವೆ. ಜಾಲಾಟದ "ಮಾನುಷ" ಭಾಗಕ್ಕೂ ಪೊರಾಟಿಗೂ ಸಂಬಂಧವಿದೆ.

ಉಗಮ : ಮಾಣಿಕ್ಯಕಲ್ ಎನ್ನುವ ಸ್ಥಳಕ್ಕಾಗಿ ಇಳಂಗುಟ್ಟಿ ಸ್ವರೂಪಂ (ಸಾಮ್ರಾಜ್ಯ) ಹಾಗೂ ಅಳ್ಳಡ ಸ್ವರೂಪಗಳ ನಡುವೆ ಉಂಟಾದ ಉಗ್ರಸ್ವರೂಪದ ಹೋರಾಟದ ಕಥೆಯಿಂದಲೇ ಪೊರಾಟಿನ ಚರಿತ್ರೆ ಪ್ರಾರಂಭವಾಗುತ್ತದೆ. ಹಲವಾರು ದಿನಗಳವರೆಗೂ ನಡೆದಂತಹ ಈ ಯುದ್ಧವು ಮಾನವರಿಂದ ಮುಕ್ತಾಯವಾಗಲಾರದು ಎಂದು ತಿಳಿದ ದೇವಿ ಚಾಮುಂಡಿಯು ಪಡವೀರನ್, ವೇಟ್ಟಕ್ಕೊರುಮಗನ್ ಮೊದಲಾದ ದೇವಿ ದೇವತೆಗಳನ್ನು ಸೇರಿಸಿ ಸೈನಿಕರ ವೇಷದಲ್ಲಿ ಯುದ್ಧ ಭೂಮಿಗೆ ಬಂದು ಇಳಂಗುಟ್ಟಿ ಸ್ವರೂಪಕ್ಕೆ ಯುದ್ಧದಲ್ಲಿ ಸಹಾಯವನ್ನು ಮಾಡಿದಳು. ಯುದ್ಧವು ನಡೆಯುತ್ತಿರುವಂತಹ ಸಂದರ್ಭದ ಒಂದು ನಿರ್ಣಾಯಕ ಘಟ್ಟದಲ್ಲಿ ವೇಟ್ಟಕೋರುಮಗನ್ ಅಳ್ಳಡ ಸ್ವರೂಪದವರು ತೋರಿಸಿದ ಪ್ರಲೋಭನೆಗಳಿಗೆ ಒಳಗಾಗಿ ರಹಸ್ಯವಾಗಿ ಅವರಿಗೆ ಸಹಾಯವನ್ನು ಮಾಡಿದನು. ಈ ವಿಷಯವನ್ನು ಅರಿತಂತಹ ಮುಸ್ಲಿಂ ಯುವಕನೊಬ್ಬನು ಚಾಮುಂಡಿಯ ಬಳಿಗೆ ಬಂದು ವೇಟ್ಟಕೊರುಮಗನ್ "ಪಕ್ಷಾಂತರ ಮಾಡಿದನು" ಎಂದು ಜೋರಾಗಿ ಕೂಗಿ ಹೇಳಿದನು. ಇದನ್ನು ಕೇಳಿದ ಚಾಮುಂಡಿಯು ವೇಟ್ಟಕೊರುಮಗನನ್ನು ಹಿಡಿದಳು. "ನನ್ನ ದೃಷ್ಟಿಯ ಪರಿಧಿಗಿಂತಲೂ ದೂರಕ್ಕೆ ಪ್ರಾಣವನ್ನು ರಕ್ಷಿಸಿಕೊಂಡು ಓಡಿಹೋಗು" ಎಂದು ಆತನಿಗೆ ಆದೇಶಿಸಿ ಅವನನ್ನು ಓಡಿಸಿದಳು. ಮತ್ತೆ ಉಂಟಾದ ಅತಿಘೋರವಾದ ಯುದ್ಧದಲ್ಲಿ ಶಕ್ತಿಸ್ವರೂಪಿಣಿಯಾದ ಚಾಮುಂಡಿಯ ಯುದ್ಧತಂತ್ರದಿಂದ ಇಳಂಗುಟ್ಟಿ ಸ್ವರೂಪಕ್ಕೆ ಜಯವು ಲಭಿಸಿತು. ಈ ಯುದ್ಧದ ಕಥೆಯನ್ನು ಚಾಮುಂಡಿಯು ಶ್ರೀ ಪೋರ್ಕಲಿ ಭಗವತಿಗೆ ಹೇಳಿದಾಗ ಆಕೆಯು ತನಗದನ್ನು ಪರಿಚಯಾತ್ಮಕವಾಗಿ ತೋರಿಸಿಕೊಡಬೇಕು ಎಂದು ಕೇಳಿಕೊಂಡಳು. ಚಾಮುಂಡಿಯು ಈ ಪೋರಾಟನ್ನು (ಹೋರಾಟವನ್ನು) ಅವಳ ಮುಂದೆ ಪ್ರದರ್ಶಿಸಿದ್ದೇ ಶಾಲಿಯಾ ಪೊರಾಟಿಗೆ ಮೂಲವಾಯಿತು ಎನ್ನಲಾಗಿದೆ. ಈ ಶಬ್ದದ ಉತ್ಪತ್ತಿಯಲ್ಲಿಯೇ ಇದರ ಅರ್ಥವೂ ಅಡಗಿದೆ. "ಪೋರ್ ಎಂದರೆ "ಹೋರಾಡು" ಎಂದರ್ಥ. ಪೋರ್ + ಆಟ = ಪೋರಾಟ ಎಂದಾಗ "ಪೋರ್ (ಹೋರಾಟ)ವನ್ನು ಆಟದ ಮೂಲಕವಾಗಿ ತೋರಿಸುವುದು" ಎಂದರ್ಥ. ಈ ಆಟದ ಮೂಲಕವಾಗಿ ಪೋರ್ಕಲಿ ಭಗವತಿಗೆ ಚಾಮುಂಡಿಯು ಸಂತಸವನ್ನು ಉಂಟುಮಾಡಿದುದರ ಸ್ಮರಣಾರ್ಥವಾಗಿ ಇದನ್ನು ಆಡಲಾಗುತ್ತದೆ. ಈ ಪೋರಾಟ್ ಭಗವತಿಗೆ ಬಹಳ ಇಷ್ಟ ಎಂಬ ನಂಬಿಕೆಯಿದೆ. ಭಗವತಿಗೆ ಪ್ರಿಯವಾದ ಇನ್ನೊಂದು ಕಲೆ "ಪೂರಕ್ಕಳಿ" ಇದನ್ನೂ ಹೆಚ್ಚಾಗಿ ಶಾಲಿಯರೇ ಆಡುತ್ತಾರೆ. ಭಗವತೀ ದೇವಾಲಯಗಳಲ್ಲಿ "ಪೊರಾಟ್"ನ್ನು ಶಾಲಿಯಾ ಸಮುದಾಯ ಮಾತ್ರ ಆಡುತ್ತದೆ. ಪೂರಕ್ಕಳಿಯನ್ನು ಕೆಲವೊಮ್ಮೆ ಇತರ ಸಮುದಾಯದವರು ಆಡುವುದೂ ಇದೆ. ಆದುದರಿಂದ ಇದು ಹೋರಾಟವೊಂದನ್ನು ಅಭಿನಯಪೂರ್ವಕವಾಗಿ ಹಾಸ್ಯವನ್ನು ಬೆರೆಸಿ ತೋರಿಸಿಕೊಡುವ ಒಂದು ಜಾನಪದ ಕಲೆಯಾಗಿ ರೂಪು ತಾಳಿದೆ. "ಆಟ" ಎಂದರೆ "ತಮಾಷೆ" ಎಂಬ ಅರ್ಥವೂ ಜನ ಬಳಕೆಯ ಮಾತಿನಲ್ಲಿದೆ. ಹೋರಾಟವನ್ನು ತಮಾಷೆಯಾಗಿ (ಮಾಡಿ) ತೋರಿಸುವುದು ಎಂಬ ಅರ್ಥವನ್ನೂ ಇದು ಕೊಡುತ್ತದೆ.

ಕಾಸರಗೋಡು ಭಾಗದಲ್ಲಿ ಯಾರಾದರೂ ತಮಾಷೆ ಮಾತನಾಡಿದಾಗ "ಇವನದ್ದೊಂದು ಚಾಲ್ಯಪ್ಪೊರಾಟ್" ಎಂದು ಟೀಕಿಸುವ ಜನಸಾಮಾನ್ಯವಾದ ಮಾತೊಂದು ಪ್ರಯೋಗದಲ್ಲಿದೆ. ಆದುದರಿಂದ ಹಾಸ್ಯ ಅಥವಾ ತಮಾಷೆಯೇ "ಪೊರಾಟ್"ನ ಮೂಲ ಉದ್ದೇಶ. ಇಲ್ಲಿ ವಿಧವಿಧವಾದ ವೇಷಗಳು ರಂಗಭೂಮಿಗೆ ಬರುತ್ತವೆ. ಅದರಲ್ಲಿ ದೇವಿದೇವತೆಗಳ ವೇಷದೊಂದಿಗೆ ಸೈನಿಕರ ವೇಷಗಳೂ ಜನಸಾಮಾನ್ಯರ ವೇಷಗಳೂ ಕಂಡುಬರುತ್ತವೆ. ಚಾಮುಂಡಿಯ ಜೊತೆಗೆ ಹೋರಾಟದಲ್ಲಿ ಶಾಲಿಯಾ ಸಮುದಾಯದವರು ಸೇರಿಕೊಂಡಿದ್ದರು ಎನ್ನುವ ಕಾರಣಕ್ಕಾಗಿ ಶಾಲಿಯಾ ಪೊರಾಟನ್ನು ಈ ಸಮುದಾಯದವರೇ ಆಡಬೇಕು ಎನ್ನುವ ಪದ್ಧತಿಯು ರೂಢಿಗೆ ಬಂತು ಎನ್ನಲಾಗಿದೆ. ಚಂದ್ರಗಿರಿಯಿಂದ ದಕ್ಷಿಣಕ್ಕಿರುವ ಶಾಲಿಯಾ ಕ್ಷೇತ್ರಗಳಲ್ಲಿ ಈ ಪೋರಾಟ್ ಕಲೆಯು ಇಂದೂ ಜೀವಂತವಾಗಿ ಉಳಿದಿವೆ. ಉತ್ತರ ಮಲಬಾರಿನ ಪ್ರದೇಶಗಳಲ್ಲಿ ಪೋರಾಟ್ ಪ್ರಾರಂಭವಾದುದು ಶಾಲಿಯರ ಪಿಲಿಕೋಡು ಎನ್ನುವ ತೆರುವಿನಿಂದ ಎಂದು ಹೇಳುತ್ತಾರೆ. ಅಲ್ಲಿನ ಪೋರಾಟ್ ವೈಶಿಷ್ಟ್ಯಪೂರ್ಣ ವಾಗಿರುವುದನ್ನು ಕಾಣಬಹುದು. ಕಾಸರಗೋಡಿನ ಭಾಗದಲ್ಲಿ ಬೆದ್ರಡ್ಕ ಎನ್ನುವಲ್ಲಿನ ದೇವಾಲಯದಲ್ಲಿ "ಪೋರಾಟ್" ಆಡುವ ಹಕ್ಕು "ಕಾಸರಗೋಡು ನಗರಂ"ನ ಶಾಲಿಯರಿಗಿತ್ತು. ಕುಂಬಳೆಯ ಸಮೀಪದ ಅಂಬಲಡ್ಕ ದೇವಾಲಯದಲ್ಲಿ ಪೋರಾಟನ್ನು ನಡೆಸುವ ಹಕ್ಕು ಕುಂಬಳೆ ನಗರದ ಶಾಲಿಯರಿಗೆ ನೀಡಲಾಗಿತ್ತು. ಕಾಸರಗೋಡಿನ ಪೂರ್ವದಲ್ಲಿರುವ "ಪೈಕಾ" ಎನ್ನುವಲ್ಲಿನ ದೇವಾಲಯದಲ್ಲಿ ಪೋರಾಟ್ ನಡೆಸುವವರು ಕಾರಡ್ಕ ನಗರದ ಶಾಲಿಯರಾಗಿದ್ದರು. ಆದರೆ ಇತ್ತೀಚೆಗೆ ಸುಮಾರು ಮೂವತ್ತು ವರ್ಷಗಳಿಂದ ಕಾಸರಗೋಡು ಭಾಗದಲ್ಲಿ ಶಾಲಿಯರು ಪೋರಾಟ್ ಆಡುವ ಸಂಪ್ರದಾಯವಿಲ್ಲ. ಕಾಸರಗೋಡಿನ ದಕ್ಷಿಣ ಭಾಗದಲ್ಲಿ ಚಂದ್ರಗಿರಿಯ ಹೊಳೆಯಾಚೆ ಶಾಲಿಯರ ದೇವಾಲಯಗಳಲ್ಲಿ ಮಾತ್ರ ಇದು ಆಡಲ್ಪಡುತ್ತದೆ. ಈ ಪೋರಾಟನ್ನು ಸಾಮಾನ್ಯವಾಗಿ ಮೀನಮಾಸ ದಲ್ಲಿ ಬರುವ ಪೂರಂ ಉತ್ಸವದ ಕಾಲದಲ್ಲಿ ಆಚರಿಸಲಾಗುತ್ತದೆ. ಪೂರೋತ್ಸವದೊಂದಿಗೆ ಸಂಬಂಧಪಡಿಸಿಕೊಂಡ ಶಾಲಿಯಾ ಪೋರಾಟ್ ಪೂರಂ ಉತ್ಸವದ ವೈಭವದೊಂದಿಗೆ ಪ್ರಾರಂಭವಾಗುತ್ತದೆ. ಪೂರಂ ಉತ್ಸವವು ಮೀನಮಾಸದ ಕಾರ್ತಿಕ ನಕ್ಷತ್ರದಿಂದ ಆರಂಭವಾಗಿ ಪೂರಂ (ಉತ್ತರಾ) ನಕ್ಷತ್ರದವರೆಗೆ ಮುಂದುವರಿಯುತ್ತದೆ. "ಶಾಲಿಯಾ ಪೊರಾಟ್" ಕಾರ್ತಿಕ ನಕ್ಷತ್ರದ ದಿನ ಪಿಲಿಕೋಡ್ ತೆರುವಿನ ಕ್ಷೇತ್ರದಲ್ಲಿಯೂ, ನೀಲೇಶ್ವರ ಮತ್ತು ಕರಿವೆಳ್ಳೂರ್‌ಗಳಲ್ಲಿ ಪೂರಂಕಳಿಯ ಹಿಂದಿನ ದಿನವೂ, ವೆಳ್ಳೂರು ಕಾಞಂಗಾಡು, ವೆಳ್ಳಿಕೋತ್, ಉದುಮ ಮೊದಲಾದ ಪ್ರದೇಶಗಳಲ್ಲೂ ಪೂರಕ್ಕಳಿಯು ಆರಂಭವಾಗುವ ದಿನವೂ, ಪಯ್ಯನ್ನೂರಿನಲ್ಲಿ "ಪೂರಂ" ಕಳೆದ ಮೂರುದಿನವೂ ಆಡಲಾಗುತ್ತದೆ.(ಡಾಃ ರಾಜ್ ಮೋಹನ್ : ಕಾಸರಗೋಡು ಚರಿತ್ರವುಂ ಸಮೂಹವುಂ :ಪುಟ ೨೬೦).

ಪೋರಾಟಿನ ಉಗಮದ ಬಗ್ಗೆ ಇರುವ ಐತಿಹ್ಯವು ಜಾನಪದ ಕಲೆಯೊಂದಕ್ಕೆ ದೈವಿಕ ಹಿನ್ನೆಲೆಯನ್ನು ಒದಗಿಸಿಕೊಡುವ ಜನಪದರ ಸಹಜ ಪ್ರವೃತ್ತಿಗೆ ನಿದರ್ಶನವಾಗಿದೆ. ವಿವಿಧ ವೇಷಗಳಿಂದ

ಸಮಾಜವನ್ನು ವಿಡಂಬಿಸುವ ಈ ಕಲೆಗೆ ದೈವಿಕ ಹಿನ್ನೆಲೆಯನ್ನು ಒದಗಿಸಿಕೊಟ್ಟರೆ, ಸಮಾಜದಿಂದ ಎದುರಾಗುವ ಸಮಸ್ಯೆಗಳಿಂದ ಪಾರಾಗಬಹುದು ಎಂಬ ದೂರದೃಷ್ಟಿ ಇದರಲ್ಲಿ ಅಡಗಿಕೊಂಡಿದೆ.

ಪ್ರಯೋಗ : ಪೊರಾಟಿನ ದಿನ ಯುದ್ಧಸನ್ನಾಹ ಎನ್ನುವ ನೆಲೆಯಲ್ಲಿ ಮೊದಲಿಗೆ ಕ್ಷೇತ್ರದ ಒಳಗಿನಿಂದ ಪಡವೀರನ್ ದೈವದ "ಕಡ್ತಲೆ"[ದೈವದ ಖಡ್ಗ (ಕತ್ತಿ) ]ಯನ್ನು ಹೊರಕ್ಕೆ ತೆಗೆಯುತ್ತಾರೆ. "ಕೇಳಿಕೊಟ್ಟು"ನ ಮೂಲಕ (ಚೆಂಡೆಯನ್ನು ಜೋರಾಗಿ ಹೊಡೆಯುವುದು) ಪೋರಾಟ್ ನಡೆಯಲಿದೆ ಎಂಬ ವಿಚಾರವನ್ನು ಸಮುದಾಯ ಬಂಧುಗಳಿಗೂ, ಊರವರಿಗೂ ತಿಳಿಸಲಾಗುತ್ತದೆ. ಅಟ್ಟಕ್ಕಣಂ ಪೊದಿ ಎಂಬ ವೇಷವನ್ನು ಕಟ್ಟುವವನು "ಚೆಟ್ಟಿಯಾರ್‌ಶ"ನಿಂದ ಎಣ್ಣೆಯನ್ನು ಕೇಳಿ ಪಡೆದುಕೊಂಡು ಸ್ನಾನವನ್ನು ಪೂರೈಸಿ ಮೊದಲು ವೇಷವನ್ನು ಕಟ್ಟಲು ಆರಂಭಿಸುತ್ತಾನೆ. ಈ ಹೊತ್ತಿಗೆ ಚೆಂಡೆ ಬಾರಿಸುವವನು ತೆರುವಿನ ಮೂಲಕವಾಗಿ ಓಡಿ, ಸ್ಥಾನದ ಮುಂದೆ ಇರುವ, ಅಶ್ವತ್ಥ ಕಟ್ಟೆಯ ಬಳಿಗೆ ಬಂದು ಜೋರಾಗಿ ಬಡಿದು ಪೋರಾಟ್ ಆರಂಭಗೊಳ್ಳಲಿದೆ ಎಂದು ಸೂಚಿಸಿದಾಗ ಒಂದೊಂದೇ ವೇಷಗಳು ಹಲವಾರು ಮನೆಗಳಿಂದ ಅಲಂಕೃತವಾಗಿ ಪ್ರತ್ಯಕ್ಷವಾಗುತ್ತವೆ. ಚಿದಂಬರ ಶಾಸ್ತ್ರವನ್ನು ಹೇಳಿ ನಾಟಕ ಶಾಲೆಯನ್ನು ನಿರ್ಮಾಣ ಮಾಡಿ ಅನಂತರ ಅದರಲ್ಲಿ "ಶಾಲ್ಯ ಪೋರಾಟ್ ಪ್ರದರ್ಶಿಸುತ್ತಾರೆ.

ವೇಷಗಳಲ್ಲಿ ಬಹಳ ಪ್ರಮುಖವಾದ ವೇಷ "ವಾಲಿಪೊದಿ" (ಮನುಷ್ಯನೊಬ್ಬನನ್ನು ಬಾಳೆಯ ಎಲೆಗಳಿಂದ ಸುತ್ತಿ ಅವನ ಕೈಯಲ್ಲಿ ಖಡ್ಗ ಎಂದು ಮುಂಡಿ ಗಿಡದ ಎಲೆಯ ಕೈಯೊಂದನ್ನು ಕೊಡಲಾಗುತ್ತದೆ. ಬಾಳೆಯಲ್ಲಿ ಸುತ್ತಿದವನು ಯುದ್ಧ ಮಾಡುತ್ತಿರುವಂತೆ ಅಭಿನಯಿಸುವಾಗ ಮಾಪ್ಪಿಳ್ಳೆಯ (ಮುಸ್ಲಿಂ) ವೇಷವನ್ನು ಹಾಕಿದ ಯುವಕನೊಬ್ಬನು ಓಡಿ ಹೋಗಿ ಬಾಳೆಯೆಲೆಗಳನ್ನು ಸೀಳಿ ಅದರ ಒಳಗೆ ಅಡಗಿರುವವನನ್ನು ಬೆಳಕಿಗೆ ತರುತ್ತಾನೆ. ಪ್ರತಿಮಾತ್ಮಕವಾದ ಈ ವೇಷ ಹಾಗೂ ಸನ್ನಿವೇಶವು ಯುದ್ಧರಂಗದಲ್ಲಿ ಪ್ರತಿಪಕ್ಷವನ್ನು ಸೇರಿ ಮೋಸ ಮಾಡಲು ಹವಣಿಸುವವನ ತಂತ್ರವು ಬಯಲಾದುದನ್ನು ತಿಳಿಸುತ್ತದೆ. (ಆತ ವೇಟ್ಟಕ್ಕೊರುಮಗನ್ ಎಂಬ (ದೈವ) ಎನ್ನುವುದು ಅನಂತರದ ಸೇರ್ಪಡೆಯಾಗಿರಬೇಕು).

ವಿವಿಧ ವೇಷಗಳನ್ನು ಧರಿಸಿದವರು ಯುವಕರ ನಾಯಕತ್ವದಲ್ಲಿ ಕ್ಷೇತ್ರದ ಸ್ಥಾನಿಕ ವರ್ಗವನ್ನು ಗೌರವಪೂರ್ವಕವಾಗಿ ಕರೆದು ತಂದು ಪೋರಾಟ್ ನಡೆಯುವಲ್ಲಿ ಎತ್ತರದ ಪೀಠಗಳಲ್ಲಿ ಕುಳಿತುಕೊಳ್ಳಿಸುತ್ತಾರೆ. ಹತ್ತಿರದ ಇತರ ಸಮುದಾಯದ ಆಚಾರ ವರ್ಗದವರೂ ಅವರೊಂದಿಗೆ ಇರುತ್ತಾರೆ. ಇವರಿಗೆ ಪ್ರತ್ಯೇಕವಾದ ಪೀಠಗಳನ್ನು ನೀಡಲಾಗುತ್ತದೆ. ಚೇಗವನ್‌ಮಾರ್‌ಗಳ (ಯುದ್ಧ ನಾಯಕರು) ವೇಷದವರು ಹೋರಾಟವನ್ನು ಅಭಿನಯಿಸುವಾಗ, ಆಳುವ ದೊರೆಗಳ ಕ್ರೂರತೆಗಳ ಕತೆಗಳನ್ನು "ಅಚ್ಚ" (ಓಲಯ)ನ ವೇಷವನ್ನು ಕಟ್ಟಿದವನು ಹೇಳುತ್ತಾನೆ. ನಿಂದಾಸ್ತುತಿ ರೂಪವಾದ ಇದರಲ್ಲಿ ವಿರೋಧಾಭಾಸ ರೂಪಕ ಮೊದಲಾದವು ಅಡಗಿರುತ್ತದೆ. ಮೇಲ್ವರ್ಗದವರ

ಅಹಂಭಾವವನ್ನೂ ಅವರ ಕೈಕೆಳಗಿನ ಶೋಷಿತರ ಅಸಹಾಯಕತೆಯನ್ನೂ, ದುಃಖ, ನೋವು, ಸಂಕಟಗಳನ್ನೂ ಈ ಸಂದರ್ಭದಲ್ಲಿ ಹಾಡಿನ ಮೂಲಕ ಅಭಿವ್ಯಕ್ತಿಸುತ್ತಾರೆ. ಇದೇ ವೇಳೆಯಲ್ಲಿ ಬಾಳೆ ಹೊದಿಕೆಯ ವೇಷವು ಹೋರಾಟವನ್ನಾರಂಬಭಿಸುತ್ತದೆ. ಯುವಕರ ಅಬ್ಬರದ ಗಲಭೆಯೊಂದಿಗೆ ಮಾಪ್ಪಿಳ್ಳೆಯು ಓಡಿ ಬಂದು ಬಾಳೆ ಹೊದಿಕೆಯೊಳಗಿನ ಯಥಾರ್ಥ ರೂಪವನ್ನು ಹೊರಗೆ ತರುತ್ತಾನೆ. ಹೊರಬಂದ ರೂಪವು ಜನರ ಮಧ್ಯದಲ್ಲೆ ಓಡಿ ತಲೆತಪ್ಪಿಸಿಕೊಳ್ಳುತ್ತದೆ. ಕೆಂಪು ಪಂಚೆಯನ್ನುಟ್ಟು ಚೆಪ್ಪಿನ ಅಲಂಕಾರವನ್ನು ಮಾಡಿಕೊಂಡ ವೇಷಗಳು ಹಳೆಯ ಬುಟ್ಟಿಯಿಂದ ಭಸ್ಮವನ್ನು ಜನರ ಕಡೆಗೆ ಎಸೆದು "ಬರುವುದು ಬರುವಂತೆ ಬರಲಿ, ಅನುಭವಿಸು" ಎಂದು ಹೇಳುತ್ತಾರೆ. ಕ್ರಮೇಣ ಒಂದೊಂದೇ ವೇಷಗಳು ಹೊರಬಂದು ಜನರನ್ನು ನಗಿಸುತ್ತವೆ. ಅಂದು ಮಾಣಿಕ್ಯಕಲ್ಲ್ ಸ್ಥಳಕ್ಕೆ ಬೇಕಾಗಿ ನಡೆದ ಹೋರಾಟದಲ್ಲಿ ಭಾಗವಹಿಸಿದವರು ಎನ್ನಲಾದ ಬೇರೆ ಬೇರೆ ಜನಾಂಗಗಳ ವೇಷಗಳು ಸ್ತ್ರೀ ವೇಷಗಳು (ಗಂಡಸರೇ ಸ್ತ್ರೀಯರ ವೇಷ ಹಾಕುತ್ತಾರೆ) ಇಲ್ಲಿ ಹಾಕಲಾಗುವ ವೇಷಗಳು. ಎಲ್ಲರೂ ಇಲ್ಲಿ ಪರಿಹಾಸ್ಯಕ್ಕೆ ಒಳಗಾಗುವವರೇ. ಸಮಾಜದ ಕೆಲವು ದೋಷಗಳ ಕಡೆಗೆ ಹಾಸ್ಯದ ಮೂಲಕ ಜನರ ಗಮನವನ್ನು ಸೆಳೆಯುವುದೇ ಇವುಗಳ ಉದ್ದೇಶ.

ಈ ವೇಷಗಳ ಮೂಲ ಉದ್ದೇಶ ಜನರನ್ನು ನಗಿಸುವುದೇ ಆಗಿದೆ. ಶೀಲ ಅಶ್ಲೀಲಗಳ ಮಧ್ಯೆ ಇಲ್ಲಿ ತಡೆಗೋಡೆ ಇಲ್ಲ. ಪವಿತ್ರವಾದ ಅರಳಿಕಟ್ಟೆಯ ಮುಂದೆ ನಿಂತು ಬಾಯಿಗೆ ಬಂದುದನ್ನು ಹೇಳುತ್ತಾರೆ. ವೇಷಗಳೆನ್ನುವ ಮುಖವಾಡಗಳ ಮೂಲಕ ಜೀವನದ ಸತ್ಯದ ಹಲವು ಮುಖಗಳ ದರ್ಶನ ಮಾಡಿಕೊಡುತ್ತವೆ. ನೋಡುವವರಿಗೆ ಅದು ಅಪ್ರಿಯವೆನಿಸಿದರೂ, ಆ ಬಣ್ಣ ಹಚ್ಚಿದ ಮುಖಗಳನ್ನು ಎದುರಿಸುವ ಧೈರ್ಯ ಯಾರಿಗೂ ಇಲ್ಲ. ಪುರಾಣದ ದೇವ ದೇವತೆಗಳನ್ನೇ ಪರಿಹಾಸ್ಯಕ್ಕೆ ಒಳಪಡಿಸಿ, ವರ್ತಮಾನದ ಯಾಜಮಾನ್ಯತೆಯ ವಿವಿಧ ಮುಖಗಳನ್ನು ವಿಡಂಬಿಸಿ, ಎಲ್ಲಾ ವರ್ಗಗಳನ್ನೂ ಪರಿಹಾಸ್ಯಕ್ಕೆ ಒಳಪಡಿಸುವುದೇ ಪೊರಾಟ್‌ನ ಕೇಂದ್ರ ವಿಷಯ. ಚರಿತಾರ್ಥವಾದ ಈ ಪೋರಾಟವನ್ನು ಕಾಣಲು ಸಾವಿರಾರು ಮಂದಿ ಶಾಲಿಯಾ ಕ್ಷೇತ್ರಗಳಲ್ಲಿ ಬಂದು ನೆರೆಯುತ್ತಾರೆ.

ಸಮಾಜದ ದೋಷಿಗಳನ್ನು ಬೆಳಕಿಗೆ ತರುವುದನ್ನೇ ಪೊರಾಟ್ ತನ್ನ ಮೂಲಉದ್ದೇಶ ವನ್ನಾಗಿಸಿಕೊಂಡಿದೆ ಎಂಬುದು ಅದರ ಪ್ರಮುಖ ವೇಷವಾದ "ಬಾಳೆಯ ಹೊದಿಕೆ"ಯ ವೇಷದಿಂದ ತಿಳಿದುಬರುತ್ತದೆ. ಇಂದಿನ ರಾಜಕೀಯಕ್ಕೆ ಇದು ಒಂದು ಒಳ್ಳೆಯ ಪಾಠ. ಪಕ್ಷದೊಳಗೇ ಇದ್ದುಕೊಂಡು ಪಕ್ಷಾಂತರ ಮಾಡುವ ರಾಜಕೀಯ ಪುಡಾರಿಗಳ ದುರ್ಗುಣಗಳನ್ನು ಜನರಿಗೆ ತೋರಿಸುವ ಪ್ರಯತ್ನವಿದು. ಅದೊಂದನ್ನೇ ಆಧಾರವನ್ನಾಗಿಟ್ಟುಕೊಂಡು ಸಮಾಜದ ಹಲವು ಮುಖವಾಡಗಳನ್ನು ಕಿತ್ತು ಬಿಸಾಡುವ ಈ ಪೋರಾಟ್ ಸಾಮಾಜಿಕ ದೋಷಗಳನ್ನು ಆರಾಧನೆಯ ಹಿನ್ನೆಲೆಯಿಂದ ಕಲಾರೂಪದಲ್ಲಿ ಪ್ರಸ್ತುತಪಡಿಸುತ್ತದೆ. ಸಮಾಜದ ಕೆಳವರ್ಗದವರಿಗೆ ಮೇಲುವರ್ಗದವರ ದೋಷಗಳನ್ನು ನೇರವಾಗಿ ಸೂಚಿಸಲು ಸಾಧ್ಯವಾಗದಾಗ ಈ ರೀತಿಯ ಕಲಾಮಾಧ್ಯಮಗಳು

ಅಭಿವ್ಯಕ್ತಿಗೆ ಸಹಾಯಕವಾಗುತ್ತವೆ. ತುಳುನಾಡಿನ ದೈವಕ್ಕೆ ಕಟ್ಟಿದವನು ಎಷ್ಟೇ ನಿಮ್ನ ವರ್ಗದವನಾಗಲೀ ಆ ಸಂದರ್ಭದಲ್ಲಿ ಅವನೇ ಪ್ರಮುಖನಾಗುತ್ತಾನೆ. ಗುಣೀಭೂತ ವ್ಯಂಗ್ಯಕ್ಕೆ ಡಾಃ ರಂ. ಶ್ರೀ ಮುಗಳಿಯವರು ಭಾರತೀಯ "ಕಾವ್ಯಮಿಮಾಂಸೆ"ಯಲ್ಲಿ ಕೊಟ್ಟಿರುವ "ಸೇವಕನ ಮದುವೆಗೆ ಬಂದ ರಾಜನಂತೆ" ಎಂಬ ಹೋಲಿಕೆಯನ್ನು ಇಲ್ಲಿ ಜ್ಞಾಪಿಸಬಹುದು. ಭೂತ ಕಟ್ಟುವ ದಿನ ರಾಜನೇ ಬಂದಿದ್ದರೂ ಮೊದಲನೆಯ ಸ್ಥಾನ ಕಟ್ಟಿದ ನಿಮ್ನ ವರ್ಗದವನಿಗೆ. ಅಂದಿನ ಆಕರ್ಷಣೆ ಅವನೇ. ಈ ಸಂದರ್ಭದಲ್ಲಿ ಭೂತ ಕಟ್ಟಿದವನು ನುಡಿಯುವ ನುಡಿಗಳು ಕೆಲವೊಮ್ಮೆ ಮೇಲುವರ್ಗದ ಕೌರ್ಯವನ್ನು ನೇರವಾಗಿ ಟೀಕಿಸುವುದೂ ಆಗಿರುತ್ತದೆ. ಭೂತವು "ನನಗೆ ಕೊಡಬೇಕಾದುದನ್ನು ಕೊಡದೇ ಇದ್ದರೆ ನಾನು ನಿಮಗೆಲ್ಲ ತೊಂದರೆಗಳನ್ನು ಉಂಟುಮಾಡುತ್ತೇನೆ" ಎಂದು ಕೇಳುವುದೂ, "ಕೋಲಕ್ಕಾಗಿ ಬೇಡಿಕೆಯನ್ನು ಮುಂದಿಡುವುದೂ" ನಿಮ್ನ ವರ್ಗದವರು ಪರೋಕ್ಷವಾಗಿ ಮೇಲು ವರ್ಗದವರಿಂದ ತಮಗೆ ಬೇಕಾದುದನ್ನು ಹಕ್ಕಿನ ಮೂಲಕ ಪಡೆದುಕೊಳ್ಳುವ ಪ್ರಯತ್ನವಾಗಿ ಕಾಣುತ್ತದೆ. ಆ ಸಂದರ್ಭದಲ್ಲಿ ಭೂತ ಏನು ಹೇಳಿದರೂ ಅದು ಭೂತದ ನುಡಿಯಾಗುವುದರಿಂದ ಅದನ್ನು ಮೀರುವ, ಎದುರಿಸುವ ಧೈರ್ಯ ಮೇಲ್ವರ್ಗದವರಿಗಿಲ್ಲ. ತುಳಿತಕ್ಕೆ ಒಳಗಾದ ನಿಮ್ನ ವರ್ಗದವನಿಗೆ ತನ್ನ ಮನಸ್ಸಿನೊಳಗಿರುವ
ಆಕ್ರೋಶವನ್ನು ಅಭಿವ್ಯಕ್ತಿಸಲು ಇದಕ್ಕಿಂತ ಉತ್ತಮ ಮಾಧ್ಯಮ ಹಾಗೂ ಅವಕಾಶ ಬೇರೆ ಇಲ್ಲ. ಅಲ್ಲದಿದ್ದರೆ "ಬಡವನ ಕೋಪ ದವಡೆಗೆ ಮೂಲವಲ್ಲವೆ".

ಶಾಲಿಯಾ "ಪೊರಾಟ್"ನ ಮೂಲ ಉದ್ದೇಶವೂ ಇದೇ ಎನ್ನುವುದು ಸ್ಪಷ್ಟ. ಆಚರಣೆಯ ಮುಖವಾಡ ಹಾಕಿ, ತಮ್ಮೊಳಗಿನ ದೋಷಗಳನ್ನೂ, ಮೇಲ್ವರ್ಗದವರ ಎಡಬಿಡಂಗಿತನವನ್ನೂ ಸೂಚಿಸಿ, ಅವರನ್ನು ಎಚ್ಚರಿಸುವ ಪ್ರಯತ್ನವಿದು. ಇಲ್ಲಿ ಮುಸ್ಲಿಂ ವೇಷ ಧರಿಸಿದವನು ದೇವಾಲಯಕ್ಕೆ ಬಂದು ವಂದಿಸುತ್ತಾನೆ ! ಹಿಂದುವೊಬ್ಬನು ವೇಷದ ಮೂಲಕ ದೈವವನ್ನು ವಿಡಂಬಿಸುತ್ತಾನೆ !

ಶಾಲಿಯಾ ಕ್ಷೇತ್ರಗಳಲ್ಲಿ ಆಬಾಲ ವೃದ್ಧರು "ಶಾಲಿಯಾ ಪೊರಾಟ್"ನ ದಿನ ವೇಷವನ್ನು ಹಾಕುತ್ತಾರೆ. ಹಳೆಯ ತಲೆಮಾರುಗಳು ಹಳೆಯ ವೇಷಗಳ ಮೂಲಕ ಹಳೆಯ ವಿಷಯವನ್ನು ವಿಡಂಬನೆ ಮಾಡಿದರೆ, ಹೊಸ ತಲೆಮಾರು ಹೊಸ ಹೊಸ ವೇಷಗಳನ್ನು ಹಾಕಿ ವರ್ತಮಾನವನ್ನು ವಿಡಂಬಿಸುತ್ತದೆ. ಇತ್ತೀಚೆಗೆ ಸಾಮಾಜಿಕ ವಿಡಂಬನೆಯನ್ನೇ ಕೇಂದ್ರವನ್ನಾಗಿಸಿಕೊಂಡು ಕೆಲವೊಮ್ಮೆ ಶೀಲದ ಗಡಿಯನ್ನೂ ಇದು ದಾಟಿ ಹೋಗುವುದೂ ಇದೆ. ಜನಾಕರ್ಷಣೆಯನ್ನೇ ಪ್ರಧಾನ ದೃಷ್ಟಿಯಲ್ಲಿ ಇಟ್ಟುಕೊಂಡು ಕಲೆಯ ಪಾವಿತ್ರ್ಯಕ್ಕೆ ಭಂಗವುಂಟಾಗುವಂತೆ ಇತ್ತೀಚೆಗೆ ಪೊರಾಟ್ ಕೆಲವು ಕಡೆ ಪ್ರದರ್ಶಿಸಲ್ಪಡುತ್ತದೆ ಎನ್ನುವುದು ದುಃಖದ ವಿಚಾರ. ಆಚಾರಾನುಷ್ಠಾನಗಳಿಂದ ಆರಂಭಗೊಳ್ಳುವ ಪ್ರಾಚೀನ ಕಲಾರೂಪವೊಂದು ವಿಕಾಸವನ್ನು ಹೊಂದುತ್ತಾ, ರೂಪಾಂತರವನ್ನು ಹೇಗೆ ಪಡೆದುಕೊಳ್ಳುತ್ತದೆ ಎನ್ನುವುದಕ್ಕೆ "ಶಾಲಿಯಾ ಪೊರಾಟ್" ಉತ್ತಮ ಉದಾಹರಣೆಯಾಗಿದೆ.

## ೨. ಪೂರಕ್ಕಳಿ

ಉತ್ತರ ಕೇರಳದ ಭಗವತೀ ದೇವಾಲಯಗಳಲ್ಲಿ ಆಡಲ್ಪಡುವ ಒಂದು ಜಾನಪದ ನೃತ್ಯರೂಪದ ಕಲೆಯು ಪೂರಕ್ಕಳಿ. ಶಾಲಿಯಾ ಸಮುದಾಯವೂ ಭಗವತಿಯನ್ನು ಆರಾಧಿಸುವುದರಿಂದ ಅವರಿಗೂ ಪೂರಕ್ಕಳಿಗೂ ನಿಕಟ ಸಂಬಂಧವಿದೆ. ಶಾಲಿಯಾರ ಕ್ಷೇತ್ರ ಅಥವಾ "ತಾನಂ"ಗಳಲ್ಲಿ ಈ ಪೂರಕ್ಕಳಿಯು ಹೆಚ್ಚಾಗಿ ಮೀನಮಾಸದಲ್ಲಿ ನಡೆಯುತ್ತದೆ. ಹೋಳಿ ಹುಣ್ಣಿಮೆಗಿಂತ ಕೆಲವು ದಿನಗಳಿಂದ ಮೊದಲು ಈ ಪೂರಕ್ಕಳಿ ಆರಂಭವಾಗುತ್ತದೆ. ಹೋಳಿಯಂತೆಯೇ ಇದಕ್ಕೂ ಕಾಮನಾರಾಧನೆಯೇ ಮೂಲ. ಕೊಡುಂಗಲ್ಲೂರು ಭಗವತೀ ಕ್ಷೇತ್ರದಲ್ಲಿ ಭರಣಿ ಉತ್ಸವಕ್ಕೆ ಪೂರಪ್ಪಾಟ್ಟುಗಳನ್ನು ಹಾಡುವುದೂ ಕೆಲವು ಅಶ್ಲೀಲ ಅಂಶಗಳನ್ನು ಅದು ಒಳಗೊಂಡಿರುವುದೂ "ಕಾಮನ" ಹಿನ್ನೆಲೆಯಿಂದಲೇ ಎಂದು ಹೇಳಬಹುದು. ಎಡ್ಗರ್ ಥರ್ಸ್ಟನ್‌ನ ಪುಸ್ತಕದಲ್ಲಿ (Castes & Tribes of Southern India) ಈ ಪಾಟ್ಟುಗಳನ್ನು "ಶಾಲಿಯಾ" ಜನಾಂಗದವರೇ ಹಾಡುತ್ತಾರೆ ಎನ್ನುವುದನ್ನು, "ಕೊಡುಂಗಲ್ಲೂರು ಕ್ಷೇತ್ರದ ಪ್ರಮುಖ ಕೀರ್ತನಕಾರರು ಇವರೇ" ಎನ್ನುವ ಮಾತಿನಲ್ಲಿ ದಾಖಲಿಸಿದ್ದಾನೆ. ಭಗವತಿಗೂ "ಪೂರಕ್ಕಳಿ"ಗೂ ನಿಕಟ ಸಂಬಂಧವಿದೆ. ಆ ದೇವಿಗೆ ಪೂರಕ್ಕಳಿಯೆಂದರೆ ತುಂಬಾ ಪ್ರೀತಿ ಎಂದು ತಿಳಿದುಬರುತ್ತದೆ. ಕುಪಿತಳಾದ ಆ ತಾಯಿಯನ್ನು ಪ್ರೀತಿ ಪಡಿಸಲೆಂದೇ ಪೂರಕ್ಕಳಿಯನ್ನು ಆಡುತ್ತಾರೆ.

ಹೋಳಿ ಹುಣ್ಣಿಮೆಯನ್ನು "ಬಣ್ಣವನ್ನೆರಚುವ ಹಬ್ಬ"ವನ್ನಾಗಿ ಆಚರಿಸುವ ಪದ್ಧತಿಯಿದೆ. "ಬಣ್ಣ"ವು ಜೀವನಾಸಕ್ತಿಗೆ ಸಂಕೇತ. ಇದರಿಂದಲೇ ಲೈಂಗಿಕಾಸಕ್ತಿಯೂ ಉಂಟಾಗುತ್ತದೆ. ಸೃಷ್ಟಿಚಕ್ರವು ಸರಿಯಾಗಿ ತಿರುಗಬೇಕಿದ್ದರೆ ಹೆಣ್ಣು ಗಂಡು ಒಂದಾಗಬೇಕು. ಮೀನಮಾಸದಲ್ಲಿ (ಮಾರ್ಚ್— ಏಪ್ರಿಲ್) ಪ್ರಕೃತಿಯು ಬಣ್ಣ (ಸೃಷ್ಟಿಸುವ ಆಸಕ್ತಿ) ಕಳೆದುಕೊಂಡಾಗ, ಉರಿವ ಬಿಸಿಲಿಗೆ ಆಕೆ ಒಣಗಿ ಹೋದಾಗ ಮರುಸೃಷ್ಟಿಯ ಆಸಕ್ತಿ ಜೀವಿಗಳಲ್ಲೂ ಕುಂಠಿತವಾಗುತ್ತದೆ. ಪುನರ್‌ಸೃಷ್ಟಿಗೆ ಅವಳಿಗೆ ಉತ್ತೇಜನ ಕೊಡಲೆಂದೇ ಪ್ರಕೃತಿಯ ಸೃಷ್ಟಿಶಕ್ತಿಯ ಪ್ರತೀಕಳಾದ "ದೇವಿ"ಯನ್ನು ಈ ರೀತಿಯಲ್ಲಿ ಆರಾಧಿಸುವ ಕ್ರಮವು ಬಂದಿರಬೇಕು. ಸೃಷ್ಟಿಗೆ ಮೂಲಕಾರಣಳಾದ ಅವಳ ಈ ರೀತಿಯ ಆರಾಧನೆಯೇ ಜೀವಿಗಳ ಸೃಷ್ಟಿಕ್ರಿಯೆಗೆ ಉತ್ತೇಜನವನ್ನು ಕೊಟ್ಟು ಜೀವಚಕ್ರವು ಸಮರ್ಪಕವಾಗಿ ತಿರುಗಲು ಕಾರಣವಾಗುತ್ತದೆ. ಆದುದರಿಂದಲೇ ಇದನ್ನು ಕಾಮನ ಆರಾಧನೆ ಎಂದು ಹೇಳಲಾಗುತ್ತದೆ.

ಪೂರೋತ್ಸವವನ್ನು ಮೀನಮಾಸದ ಕಾರ್ತೀಕ (ಕೃತಿಕಾ) ನಕ್ಷತ್ರದಿಂದ ಪೂರಂ (ಉತ್ತರಾ) ನಕ್ಷತ್ರದವರೆಗೆ ೯ ದಿನ ಆಚರಿಸಲಾಗುತ್ತದೆ. ದೇವೀ ಕ್ಷೇತ್ರಗಳು, ಗುಡಿಗಳು ಹಾಗೂ ಕೆಲವು ಮನೆಗಳಲ್ಲಿ ಇದನ್ನು ಪೂರಕ್ಕಳಿಯೊಂದಿಗೆ ನಡೆಸುತ್ತಾರೆ. ಪೂರಕ್ಕಾಲವು ಹುಡುಗಿ (ಕನ್ಯೆ)ಯರಿಗೆ ವ್ರತಾನುಷ್ಠಾನ ಕಾಲವೆಂದು ಹೇಳುತ್ತಾರೆ. ಕಾಮನ ಪೂಜೆ ಅದರ ಮುಖ್ಯ ಆಚರಣೆ. ಪೂರಂ ದಿನ ಕಾಮನ ಪೂಜೆಯನ್ನು ಇನ್ನೂ ಋತುಮತಿಯಾಗದ ಹುಡುಗಿಯರು ಮಾಡುತ್ತಾರೆ. ಕಾಮನ ರೂಪ

ವನ್ನು ನೆಲದಲ್ಲಿ ಬರೆದು ಅದಕ್ಕೆ ಹೂವಿಟ್ಟು ಪೂಜಿಸುವುದು ಇದರ ಮೂಲೋದ್ದೇಶ. ಸುಟ್ಟು ಹೋದ ಕಾಮನನ್ನು(ಸೃಷ್ಟಿಯ ಆಸಕ್ತಿಯನ್ನು) ಪುನರ್‌ಸೃಷ್ಟಿಗೆ ಉತ್ತೇಜಿಸುವರೇ ಇದರ ಆಶಯ. ಭಗವತಿಯ ಸ್ಥಾನಂಗಳಲ್ಲಿ ಪೂರಂ ದಿನಗಳಲ್ಲಿ ಕಳಿ ಎಂಬ ಒಂದು ಪದ್ಧತಿಯಿದೆ. ಆಗ ದೇವತಾ ಸಾಮಾಗ್ರಿಗಳನ್ನೂ ವಿಗ್ರಹಗಳನ್ನೂ ಮೆರವಣಿಗೆಯಲ್ಲಿ ಕೊಂಡೊಯ್ದು ತೊಳೆಯುತ್ತಾರೆ. ಕೆಲವು ಸ್ಥಾನಂಗಳಲ್ಲಿ ಕೋಮರರು ಆಯುಧಗಳನ್ನೆತ್ತಿಕೊಂಡು ಬಲಿ ಪ್ರದಕ್ಷಿಣೆ ಬರುವುದೂ ಇದೆ.

<u>ಉಗಮ</u> : ಕಾಮದಹನದ ಕಥೆಯೇ ಪೂರಂಗೆ ಮೂಲ. ಶಿವನ ಮೂರನೇ ಕಣ್ಣಿನಿಂದ ಕಾಮನು ಸುಟ್ಟುಹೋದಾಗ ಅಪ್ಸರೆಯರು ಪರಮೇಶ್ವರನನ್ನು ಅವನಿಗೆ ಪುನರ್ಜೀವ ನೀಡಬೇಕೆಂದು ಪ್ರಾರ್ಥಿಸಿದವರು. ಆಗ ಪರಮೇಶ್ವರನು ಅವರಲ್ಲಿ ಕಾಮನ ರೂಪವನ್ನು ಹೂಗಳಿಂದ ಅರ್ಚಿಸಲು ನಿರ್ದೇಶಿಸಿದನು. ಅಂತೆಯೇ ಅವರು ಕಾಮನ ರೂಪವನ್ನು ಹೂಗಳಿಂದ ತಯಾರಿಸಿ ಪೂಜಿಸಿ ವಾಸುದೇವ (ವಿಷ್ಣು)ನನ್ನು. ಅವನನ್ನು ಪುನರ್ ಸೃಷ್ಟಿಸಬೇಕೆಂದು ಪ್ರಾರ್ಥಿಸಿದರು. ಭೂಮಿಯಲ್ಲಿರುವ ತರುಣಿಯರೂ ಇದನ್ನೇ ಅನುಸರಿಸತೊಡಗಿದರು. ಅವರ ಪ್ರಾರ್ಥನೆಯನ್ನು ಕೇಳಿದ ವಿಷ್ಣುವು ಕಾಮನು ತನ್ನ ಮಗನಾಗಿ ದ್ವಾಪರಯುಗದಲ್ಲಿ ಹುಟ್ಟುವನೆಂದು ಅಭಯವಿತ್ತನು. ಹೀಗೆ ಶ್ರೀ ಕೃಷ್ಣನ ಮಗನಾದ ಪ್ರದ್ಯುಮ್ನನಾಗಿ ಕಾಮನು ಮೀನಮಾಸದ "ಪೂರಂ" (ಹೋಳಿ ಹುಣ್ಣಿಮೆ)ನ ದಿನ ಹುಟ್ಟಿದನು. ಶ್ರೀ ಕೃಷ್ಣನು ದೇವತಾ ಕನ್ಯೆಯರಿಗೂ, ಭೂಕನ್ಯೆಯರಿಗೂ ಆತನನ್ನು ಆರಾಧಿಸಬೇಕೆಂದು ನಿರ್ದೇಶಿಸಿದನು. ಅಂದಿನಿಂದ ಪೂರೋತ್ಸವವು ಆರಂಭವಾಯಿತು.

ಕಾಮನ ಆರಾಧನೆಯಾದ ಇದರೊಂದಿಗೆ ದೇವೀ ಆರಾಧನೆಯು ಬಂದಿರುವ ಬಗ್ಗೆ ಪುರಾಣದಲ್ಲಿ ಕತೆಯೊಂದು ಬರುತ್ತದೆ. ಶ್ರೀ ಕೃಷ್ಣನೂ ಗೋಪಾಲರೂ ವೃಂದಾವನದಲ್ಲಿ ಆಡಿಕೊಂಡಿರುವ ಸಮಯದಲ್ಲಿ, ಬ್ರಹ್ಮಲೋಕದಲ್ಲಿ "ಪೂರ" ಎನ್ನುವ ಕನ್ನಿಕೆಯು (ನಾಗಕನ್ನಿಕೆ ಎನ್ನುವ ಪಾಠಾಂತರವೂ ಇದೆ) ನಾಲ್ಕು ವೇದಗಳಲ್ಲಿರುವ ಪರಮಾತ್ಮನ ನಾಮಸಂಕೀರ್ತನೆಯನ್ನು ಹಾಡುತ್ತಾ ತನ್ನ ಕೆಲಸವನ್ನಾರಂಭಿಸುತ್ತಿದ್ದಳು. ಅದರಿಂದ ಸಂತೃಪ್ತನಾದ ಕೃಷ್ಣನು ಅಲ್ಲಿಗೆ ಹೋಗಿ ತನ್ನ ಮಧುರವಾದ ವೇಣುನಾದದಿಂದ ಅವಳ ಮನಸ್ಸಿಗೆ ಆನಂದವನ್ನುಂಟು ಮಾಡಿದನು. ಮಾತ್ರವಲ್ಲದೆ, ಪರಮಭಕ್ತೆಯಾದ ಆಕೆಗೆ ಪ್ರದಕ್ಷಿಣೆ ಹಾಕಿ ವಂದಿಸಿದನು. ಅವಳನ್ನು ನೇರವಾಗಿ ವೃಂದಾವನಕ್ಕೆ ಕರೆತಂದು ಆಕೆಯನ್ನು ದುರ್ಗೆಯಾಗಿ ಆರಾಧಿಸಬೇಕೆಂದು ವೃಂದಾವನದ ಗೋಪರಿಗೆ ಆದೇಶಿದನು. ಅಲ್ಲೇ ಒಂದು ಆಲಯವನ್ನು ಅವಳಿಗಾಗಿ ನಿರ್ಮಿಸಿದನು.

ಪೂರಂ ಕೇವಲ ಕಾಮನ ಆರಾಧನೆಯಾಗಿ ಆರಂಭದಲ್ಲಿ ಹುಟ್ಟಿ ಕ್ರಮೇಣ ವಿವಿಧ ಕಾಲಘಟ್ಟಗಳಲ್ಲಿ ಅದಕ್ಕೆ ಬೇರೆ ಬೇರೆ ಕಥೆಗಳು ಸೇರಿಕೊಂಡು, ಅವಸ್ಥಾಂತರಗಳನ್ನು ಪಡೆದು ಇಂದಿನ ಪೂರೋತ್ಸವದ ರೂಪವನ್ನು ಪಡೆದಿರಬಹುದು. ಪೂರಕ್ಕಳಿಯೂ ಸಂತೋಷ ಸೂಚಕವಾದ ಸಾಮೂಹಿಕವಾದ ಆಟ ಹಾಗೂ ಕುಣಿತವಾಗಿ ಆರಂಭಗೊಂಡು ಇಂದೀಗ ಅದೊಂದು ಕಲಾರೂಪವಾಗಿ

ಪರಿವರ್ತಿತವಾಗಿರಬೇಕು. ಆದುದರಿಂದಲೇ ಇದಕ್ಕೆ "ಕಳಿ" (ಆಟ) ಎನ್ನುವ ಪದವು ಸೇರಿಕೊಂಡಿರಬಹುದು. ಈಗ ಪೂರಕ್ಕಳಿ ಕೇವಲ ಒಂದು ಆಟವಲ್ಲ. ಅದರಲ್ಲಿ ಆಟ, ನೃತ್ಯ, ಶಾಸ್ತ್ರ, ನಾಟಕ, ಕಳರಿ (ವ್ಯಾಯಾಮ), ಆರಾಧನೆ, ವಿನೋದ ಎಲ್ಲವೂ ಸೇರಿದ ಸಮಗ್ರ ಕಲೆಯಾಗಿ ರೂಪು ತಾಳಿದೆ. ಉತ್ತರ ಕೇರಳದಲ್ಲಿ ಮಣಿಯಾಣಿ, ಶಾಲಿಯಾರ್, ತೀಯರ್, ಕಮ್ಮಳರ್, ಮುಕಯರ್ ಎನ್ನುವ ಸಮುದಾಯದವರು ಇದನ್ನು ಆಡುತ್ತಾರೆ. (ಇವರೆಲ್ಲರೂ ಭಗವತಿಯ ಆರಾಧಕರು.) ಮಣಿಯಾಣಿ, ತೀಯಾ ಹಾಗೂ ಶಾಲಿಯಾ ಸಮುದಾಯಕ್ಕೆ ಇದರಲ್ಲಿ ವಿಶೇಷವಾದ ಅಭಿರುಚಿಯಿದೆ. ಪ್ರಾವೀಣ್ಯತೆಯೂ ಇದೆ. ಮುಕಯರ್ ಅಥವಾ ಮೋಯರ್ ಸಮುದಾಯದ ಭಗವತೀ ಸ್ಥಾನಂಗಳಲ್ಲಿ ಶಾಲಿಯರೇ ಈ ನೃತ್ಯವನ್ನು ಆಡುವ ಪದ್ಧತಿಯಿದೆ.

ಪ್ರಯೋಗ : ಪೂರಕ್ಕಳಿಯ ಪ್ರಧಾನ ನೃತ್ಯಗಾರ (ಗುರು)ನನ್ನು "ಪಣಿಕ್ಕರ್" ಎಂದು ಕರೆಯುತ್ತಾರೆ. ಈತನನ್ನು ನೃತ್ಯಗುರುವೆಂದು ಪ್ರದೇಶದ ರಾಜರು ಗುರುತಿಸಿ ರೇಶ್ಮೆವಲ್ಲಿಯನ್ನು ಚಿನ್ನದ ಬಳೆಯನ್ನು ಕೊಟ್ಟು ಪೂರಕ್ಕಳಿಯನ್ನು ಆಡಿಸುವ ಹಕ್ಕನ್ನು ನೀಡುತ್ತಿದ್ದರು. ಚಂದ್ರಗಿರಿ (ಪಯಸ್ವಿನಿ) ಹೊಳೆಯ ದಕ್ಷಿಣ ತೀರದಿಂದ ವಳಪಟ್ಟಣಂ ಹೊಳೆಯ ಉತ್ತರ ತೀರದವರೆಗೆ ಪೂರಕ್ಕಳಿಯು ಪ್ರಧಾನವಾಗಿ ಆಡಲ್ಪಡುತ್ತದೆ. (ದೇವೀ ಆರಾಧನೆಯು ಇಲ್ಲಿನ ಪ್ರಧಾನ ಆರಾಧನೆಯಾದುದರಿಂದ ಆಗಿರಬಹುದು) ವಿನೋದ ಹಾಗೂ ಭಕ್ತಿ ಎರಡೂ ಮೇಳವಿಸಿಕೊಂಡ ಪೂರಕ್ಕಳಿ ಶೈವ ಮತ್ತು ವೈಷ್ಣವ ಪಂಥಗಳ ಮಿಶ್ರವಾಗಿ ಕಾಣುತ್ತದೆ.

ಇಲ್ಲಿಯೂ ಚಿದಂಬರ ಶಾಸ್ತ್ರವನ್ನು ಪಣಿಕ್ಕರ್ ಹೇಳಿ ನೃತ್ಯ ಶಾಲೆ ನಿರ್ಮಾಣ ಮಾಡಿದ ಮೇಲೆಯೇ ಪೂರಕ್ಕಳಿ ಆರಂಭ. ಪಣಿಕ್ಕರ್‌ನ ಪ್ರವೇಶದೊಂದಿಗೆ ಅದಕ್ಕೆ ಚಾಲನೆ ಸಿಗುತ್ತದೆ. "ಸ್ಥಾನಂ"ನ ಒಳಗಿನಿಂದ ದೇವಿಯ ಮುಂದಿರುವ ದೀಪದಿಂದ ಉರಿಸಲಾದ ಆಳೆತ್ತರದ ದೀಪವನ್ನು ತಂದು ಪೂರಕ್ಕಳಿ ಆಡುವ ಸ್ಥಳದಲ್ಲಿ ಇಡುತ್ತಾರೆ. ಎಷ್ಟು ದಿನ ಆಟವಾಡುತ್ತಾರೋ ಅಷ್ಟು ದಿನ ಆ ದೀಪ ಅಲ್ಲೇ ಇರಬೇಕು. ಕೊನೆಯ ದಿನ ಅಚ್ಚಮ್ಮಾರರ ಹಾಗೂ ಉಳಿದವರ ಸಮ್ಮತಿಯೊಂದಿಗೆ ಆ ದೀಪವನ್ನು ತೆಗೆದು ಒಳಗೆ ಕೊಂಡೊಯ್ಯುತ್ತಾರೆ. ಕೆಲವೆಡೆ ಹಲವು ಹಂತಗಳಿರುವ ದೀಪಗಳನ್ನೂ ಬಳಸುತ್ತಾರೆ. ಬಿಳಿಯ ಪಂಚೆಯನ್ನು ಉಟ್ಟ ಪುರುಷರು ಅದರ ಮೇಲೆ ನೀಲಿ ಅಥವಾ ಕೆಂಪು ಶಾಲನ್ನು ಸುತ್ತಿ ಕಟ್ಟಿ ಅನಂತರ "ಸ್ಥಾನಂ"ನ ಒಳಗೆ ಪಣಿಕ್ಕರೊಂದಿಗೆ ಪ್ರವೇಶಿಸುತ್ತಾರೆ. ಇದನ್ನು "ಕಟಿಗಂ ಕಯರಲ್" (ಸ್ಥಾನವನ್ನೇರುವುದು) ಎನ್ನುತ್ತಾರೆ. ಸ್ಥಾನದೊಳಗಿನ ದೈವಕ್ಕೆ ಕಳರಿ ವಿದ್ಯೆಯ ವಿಧಾನದಂತೆ ವಂದನೆಯನ್ನು ಸಲ್ಲಿಸಲಾಗುತ್ತದೆ. ಅನಂತರವೇ ಪೂರಕ್ಕಳಿ ಚಪ್ಪರ ಪ್ರವೇಶ, ಇತರ ಇಷ್ಟ ದೇವತೆಗಳ ವಂದನೆ.

ಪೂರಕ್ಕಳಿಯಲ್ಲಿ ಶಾಸ್ತ್ರ, ಆಟ, ನಾಟಕ ಎಂದು ಮೂರು ಭಾಗಗಳಿವೆ. ಶಾಸ್ತ್ರದಲ್ಲಿ ವಂದನಶಾಸ್ತ್ರ, ಅರಂಜಾಶಾಸ್ತ್ರ, (ಪ್ರವೇಶ) ನಾಟಕಶಾಸ್ತ್ರ, (ಕೂತ್ತು ಶಾಸ್ತ್ರ), ಯೋಗಿಶಾಸ್ತ್ರ,

ಮುಂತಾದ ಶಾಸ್ತ್ರಗಳನ್ನು ಹೇಳಲಾಗುವುದು. ಗಣಪತಿ ಪಾಟ್ಟ್, ಪೂರಮಾಲ, ರಾಮಾಯಣ ಪಾಟ್, ಅಂಗಪಾಟ್, ಪಡಪ್ಪಾಟ್, ಕಾಮನ್ ಪಾಟ್ (ಪಾಟ್ ಎಂದರೆ "ಹಾಡು" ಎಂದರ್ಥ) ಮೊದಲಾದವುಗಳನ್ನು ಹಾಡಿಕೊಂಡು ನೃತ್ಯವಾಡಲಾಗುವುದು. ಇದನ್ನು "ಕಳಿ" ಎನ್ನುತ್ತಾರೆ. ಶೈವ ನಾಟಕ, ಶಕ್ತಿ ನಾಟಕ ಮತ್ತು ಯೋಗಿ ನಾಟಕಗಳು ನಾಟಕ ವಿಭಾಗದಲ್ಲಿ ಸೇರುತ್ತವೆ.

ಸ್ತುತಿ ಮತ್ತು ವಂದನೆ : ಗಣಪತಿ, ಸರಸ್ವತಿ, ಶ್ರೀ ಕೃಷ್ಣನ ಕುರಿತಾದ ಸ್ತುತಿಗಳು ಮೂಲಸ್ತುತಿಗಳು. ಅನಂತರ ನವವಂದನೆಗಳು ದೇವವಂದನ, ಆಚಾರ್ಯವಂದನ, ಅಂಡಜವಂದನ, ಆಸ್ಥಾನವಂದನ, ಅರಂಜುವಂದನ, ವಿತಾನವಂದನ, ದಿಕ್‌ವಂದನ, ಲೋಕವಂದನ, ಪೂದಿವಂದನಗಳನ್ನು ವಂದನೆಗಳ ಸಾಲಿಗೆ ಸೇರಿಸಲಾಗುವುದು. ಇವುಗಳನ್ನು "ವಂದನಶಾಸ್ತ್ರ" ಎನ್ನುವರು. ನವವಂದನಗಳ ಅನಂತರ ನವಾಕ್ಷರ ವಂದನವನ್ನು ಕೆಲವೆಡೆ ನಡೆಸುತ್ತಾರೆ.

ಅರಂಜುಶಾಸ್ತ್ರ : ವಂದನೆಯ ಅನಂತರ ಪೂರೋತ್ಸವಕ್ಕೂ ಪೂರಕ್ಕಳಿಗೂ ಮೂಲವಾದ ಕೆಲವು ಪುರಾತನ ಕಥೆಗಳನ್ನು ಗದ್ಯದಲ್ಲೂ ಪದ್ಯದಲ್ಲೂ ಹೇಳಿಕೊಂಡು ಪಣಿಕ್ಕರ್ ಶಾಸ್ತ್ರಗಳನ್ನು ಮುಂದಿಡುತ್ತಾರೆ. ಪಳ್ಳಿಯರ (ವಿದ್ಯೆಯ ಕೇಂದ್ರ) ಶಾಸ್ತ್ರಂ, ವಸಂತ ಪೂಜಾರಿಶಾಸ್ತ್ರಂ, ಕಳಿಯರಜುಶಾಸ್ತ್ರಂ, ರೂಪಶಾಸ್ತ್ರಂ ಮೊದಲಾದ ಶಾಸ್ತ್ರಗಳು ಇದರಲ್ಲಡಗಿರುತ್ತವೆ. ಪೂರಕ್ಕಳಿಯಲ್ಲಿ ಪ್ರಧಾನವಾದುದು ಪೂರಮೂಲ. ಪೂರಕ್ಕಳಿಯುಳ್ಳ ಎಲ್ಲಾ ದಿನವೂ ಇದನ್ನು ಪ್ರದರ್ಶಿಸಬೇಕು. ನಾಲ್ಕು ವೇದ, ಆರುಶಾಸ್ತ್ರ, ಅರುವತ್ತನಾಲ್ಕು ಕಲಾಜ್ಞಾನ, ತೊಂಬತ್ತಾರು ತತ್ವ ಮೊದಲಾದವುಗಳಡಗಿದ ಚತುರಶ್ರಂ, ತಿಶ್ರಂ, ಮಿಶ್ರಂ, ಝಂಪೆ ಮೊದಲಾದ ಸಂಗೀತದ ತಾಳಗಳನ್ನೂ, ಸಪ್ತಸ್ವರಗಳನ್ನೂ ಸೇರಿಸಿಕೊಂಡು ಮನ್ಮಥನ ಲೀಲೆಗಳನ್ನು ಸ್ತುತಿಸುವುದೇ ಪೂರಮಾಲ, ಸಪ್ತಕನ್ನಿಕೆಯರು ಏಳು ವಿಧದ ಹೂವುಗಳನ್ನು ಕೊಯ್ದು ದೇವಲೋಕದಲ್ಲಿಯೂ, ಪಂಚಕನ್ಯೆಯರು ಐದು ವಿಧದ ಹೂವುಗಳನ್ನು ಕೊಯ್ದು ಭೂಲೋಕದಲ್ಲೂ, ಷಟ್‌ಕನ್ನಿಕೆಯರು ಆರು ವಿಧದ ಹೂವುಗಳನ್ನು ಕೊಯ್ದು ಪಾತಾಳ ಲೋಕದಲ್ಲೂ ಕಾಮನನ್ನು ಪೂಜಿಸಿದರು ಎಂದು ಪ್ರಾಚೀನ ನಂಬಿಕೆ. ಈ ಹದಿನೆಂಟು ಬಣ್ಣಗಳೇ ಪೂರಮಾಲ. ಇದನ್ನು "ನಾರಾಯಣ ಸ್ತುತಿಮಾಲ" ಎಂದೂ ಹೇಳುತ್ತಾರೆ. ಪ್ರತಿ ಪದ್ಯದ ಆದಿ ಮತ್ತು ಅಂತ್ಯದಲ್ಲಿ "ನಾರಾಯಣ" ಎಂಬ ಶಬ್ದವನ್ನು ಇಲ್ಲಿ ಬಳಸಲಾಗುತ್ತದೆ. ಒಂದೊಂದು ಬಣ್ಣಗಳಿಗೆ ನಿರ್ದಿಷ್ಟ ಅಕ್ಷರ ಸಂಖ್ಯೆಯನ್ನು ಗುರುತಿಸುವುದನ್ನು ಪ್ರಾಸ ಎನ್ನುತ್ತಾರೆ. ಹದಿನೆಂಟು ಬಣ್ಣಗಳಿಗೆ ಅನುಷ್ಟುಪ್ರಾಸ, ಅಗ್ನಿಪ್ರಾಸ, ಸೂರ್ಯಪ್ರಾಸ, ಮನುಪ್ರಾಸ, ತಿಥಿಪ್ರಾಸ, ಇಂದುಪ್ರಾಸ, ಪುರಾಣ ಪ್ರಾಸವೆಂದು ಏಳು ಪ್ರಾಸಗಳಿವೆ. ಇವುಗಳಿಗೆ ಕ್ರಮವಾಗಿ ೮,೧೦,೧೨,೧೪, ೧೫, ೧೬,೧೮ ಅಕ್ಷರಗಳಿವೆ. ಪ್ರತಿ ಪೂರಮೂಲಕ್ಕೂ ಈ ೧೮ ಬಣ್ಣಗಳನ್ನೂ ಹಾಡಿ ಮುಗಿಸಬೇಕು.

ಮಲ್ಲವಿದ್ಯೆಯೇ ಪ್ರಧಾನವಾಗಿರುವ ಪೂರಕ್ಕಳಿಯನ್ನು ವನ್‌ಕಳಿ (ದೊಡ್ಡ ಆಟ) ಎಂದು ಹೇಳುತ್ತಾರೆ. ರಾಗ, ತಾಳಬದ್ಧವಾದ ಹಾಡುಗಳಿಗೆ ಹೆಜ್ಜೆಗಳನ್ನಿಡುತ್ತಾ, ಕೈತಟ್ಟಿಕೊಂಡು ಇದನ್ನು

ಆಡಲಾಗುತ್ತದೆ. ರಾಮಾಯಣ ಕಳಿ ಇದರಲ್ಲಿ ಪ್ರಮುಖವಾದುದು. ವನ್‌ಕಳಿ ಗಣಪತಿ ಪಾಟ್‌ನೊಂದಿಗೆ ಆರಂಭವಾಗುತ್ತದೆ. ಮಾರನ್‌ಪಾಟ್, ಭಾರತಪಾಟ್, ಅಂತಂ, ಚಾಡ, ಚಾಯಲ್ ಈ ಮೊದಲಾದವು ಇದರಲ್ಲಿ ಸೇರುತ್ತದೆ.

ನಾಟಕಗಳು : ದೇವತೆಗಳ ಹಾಗೂ ಋಷಿಗಳ ಅಪೇಕ್ಷೆಯಂತೆ ಶಿವ ಪಾರ್ವತಿಯರು ನಾಟ್ಯವಾಡಿದುದನ್ನು ಸಂಕೇತಿಸಿ ಶೈವ ನಾಟಕ ಮತ್ತು ಶಕ್ತಿ ನಾಟಕವನ್ನು ಪೂರಕ್ಕಳಿಯಲ್ಲಿ ಆಡಲಾಗುತ್ತದೆ. ಸಂಜೆಯಾಗುತ್ತಲೇ ಇದು ಆರಂಭವಾಗುತ್ತದೆ. ಶಿವ ಶಕ್ತಿ ನಾಟಕದ ಪಾಟು(ಹಾಡು)ಗಳನ್ನು ಹಾಡುವುದಕ್ಕಿಂತ ಮುನ್ನ ಗಣಪತಿ, ಸರಸ್ವತಿ, ಶ್ರೀ ಕೃಷ್ಣ ಇವರನ್ನು ಸ್ತುತಿ ನಾಟಕದ ಮುಖಾಂತರ ಸ್ತುತಿಸಲಾಗುತ್ತದೆ.

ಶಿವಶಕ್ತಿಯರ ನಾಟಕ (ನಾಟ್ಯ) ಉತ್ಪತ್ತಿಗೆ ಕಾರಣವಾದ ಕಥೆಗಳನ್ನು ಹೇಳುವ ಭರತಸೂತ್ರ, ಚಿದಂಬರ ಶಾಸ್ತ್ರ, ಭರತಚರಿತ್ರ ಮೊದಲಾದವುಗಳನ್ನು ಪಣಿಕ್ಕರುಗಳು ಹೇಳಿ ಆರಂಭಿಸುತ್ತಾರೆ. ನಾಟ್ಯೋತ್ಪತ್ತಿಯ ಕಥೆಯನ್ನು ಭರತಸೂತ್ರವು ಹೇಳುತ್ತದೆ. ಇದರ ಶ್ಲೋಕವನ್ನು ಸಂಸ್ಕೃತದಲ್ಲಿ ಹೇಳುವುದರಲ್ಲಿಯೇ ಪಣಿಕ್ಕರ್‌ಗಳಿಗೆ ಆಸಕ್ತಿ (ಭರತನ ನಾಟ್ಯಶಾಸ್ತ್ರವು ಇದಕ್ಕೆ ಮೂಲವಾಗಿರಬೇಕು) ವ್ಯಾಘ್ರಪಾದ, ಪತಂಜಲಿ ಎನ್ನುವ ಇಬ್ಬರು ಋಷಿಗಳು ನಟರಾಜನಾದ ಪರಮೇಶ್ವರನ ತಾಂಡವವನ್ನು ಕಾಣಲು ಬಯಸಿ, ಕೊಳ್ಳಿಡ ನದಿಯ ತೀರದಲ್ಲಿ ತಪವನ್ನಾಚರಿಸಲು, ಅವರ ಇಚ್ಛೆಯನ್ನು ಈಶ್ವರ ಪೂರೈಸಿಕೊಡುವ ಕಥೆಯು ಚಿದಂಬರ ಚರಿತೆಯಲ್ಲಿದೆ.

ಶೈವ ನಾಟಕ : ತಿಲ್ಲಾರಣ್ಯದ ಕೂತ್ತಂಬಲದಲ್ಲಿ ಪರಮೇಶ್ವರನೂ, ದೇವತೆಗಳೂ ಋಷಿಗಳ ಮುಂದೆ ಪ್ರದರ್ಶಿಸಿದ ನರ್ತನವೇ ಶೈವಕೂತ್ತು (ಶೈವ ನಾಟಕ). ಶಿವಭ್ರಾಂತಿ, ಪಂಚಕೋಲಂ, ಶಿವಂಪರಂ, ಒರುಮುಖನ್, ಪರವ, ವೆಳ್ಳುರುಟ್ಟಿ, ಮಾರಾರಿ, ಮಾರ್ಕಾಂಡೇಯಂ, ಕುನ್ನಿಬೆಚ್ಚಿ, ಕಣ್ಣಪ್ಪನ್, ತಿಣ್ಣನ್, ಮರುಮುಖನ್, ಕವಚಿಗಂ ಮುಂತಾದ ಹೆಸರುಗಳಲ್ಲಿ ಅವು ಕರೆಯಲ್ಪಡುತ್ತವೆ. ತಮಿಳು ಕೃತಿಗಳ ಹಾಗೂ ಶೈವಶಕ್ತಿಯ ಪ್ರಸ್ಥಾನದ ವಿಚಾರಗಳು ಇವುಗಳಲ್ಲಿ ಪ್ರತಿಫಲಿಸುತ್ತವೆ. ಕೋಯಿಲ್‌ಪುರಾಣಂ, ಪೆರಿಯಪುರಾಣಂ ಮೊದಲಾದ ಶೈವ ಕೃತಿಗಳು ಇದಕ್ಕೆ ಆಧಾರವಾಗಿರಬೇಕು ಎಂದು ಊಹಿಸಬಹುದು.

ಶಕ್ತಿ ನಾಟಕ : ಶಕ್ತಿ (ಶ್ರೀ ಪಾರ್ವತಿ) ಅಭಿನಯಿಸಿದ ನಲವತ್ತೊಂಬತ್ತು ನಾಟಕಗಳೆನ್ನುವ ರೀತಿಯಲ್ಲಿ ಪೂರಕ್ಕಳಿಯಲ್ಲಿ ಶಕ್ತಿ ಕೂತ್ತು (ನಾಟಕ) ಪ್ರದರ್ಶಿಸಲಾಗುತ್ತದೆ. 15 ಶೈವ ಕೂತ್ತುಗಳನ್ನು ಶಿವನ ನಿರ್ದೇಶನದಂತೆ ಪಾರ್ವತಿ ನಟಿಸಿದಳು ಎಂದು ಪುರಾತನ ನಂಬಿಕೆ. ವಲ್ಲಿ, ರಂಭೆ, ಊರ್ವಶಿ, ಮಲಹುರು, ಮೇನಕ, ತಿಲೋತ್ತಮ, ಮಾತಂಗಿ, ಆರುಂಧತಿ, ಮೊದಲಾದವರ ವೇಷ ಹಾಕಿ ಪಾರ್ವತಿ ಇದನ್ನು ಅಭಿನಯಿಸಿದಳಂತೆ. ವಲ್ಲಿ ಕೂತ್, ರಂಭ ಕೂತ್, ಊರ್ವಶಿ ಕೂತ್, ಮಲಹುರು ಕೂತ್, ತಿಲೋತ್ತಮ ಕೂತ್, ಮಾತಂಗಿ ಕೂತ, ಆರುಂಧತಿ ನಾಟಕಂ,

ಚಿತ್ರಲೇಖ ಕೂತ್, ಕಾಮಾಕ್ಷಿ ನಾಟಕಂ, ಪೂರ್ಣಾಂಗಿ ನಾಟಕಂ, ಚಂಡಿಕಾ ನಾಟಕಂ, ತಿರುದೇವಿ ಕೂತ್, ಈ ಮೊದಲಾದ ಹೆಸರುಗಳಲ್ಲಿ ಶಕ್ತಿ ಕೂತ್ ಗುರುತಿಸಲ್ಪಡುತ್ತದೆ.

ಯೋಗಿ : ಶಿವ—ಶಕ್ತಿ ನಾಟಕಗಳ ಪ್ರದರ್ಶನದ ಅನಂತರ ಯೋಗಿ ಎನ್ನುವ ಭಾಗವನ್ನು ಅಭಿನಯಿಸುತ್ತಾರೆ. ಶಿವನು ಬ್ರಹ್ಮ ಕಪಾಲದೊಂದಿಗೆ ಭಿಕ್ಷಾಟನೆ ನಡೆಸಿದ್ದೆ ಇದರ ಮೂಲ. ಎರಡು ವಿಭಾಗಗಳ ಪಣಿಕರ್‌ಗಳು ಪದ್ಯ ಹೇಳಿ ವಾದ ಪ್ರತಿವಾದದ ರೀತಿಯಲ್ಲಿ "ಯೋಗಿ ಚರಿತೆ"ಯನ್ನು ಪ್ರದರ್ಶಿಸುತ್ತಾರೆ. ಯೋಗಿಯ ಉದ್ಭವವನ್ನು ಹೇಳಿದ ಮೇಲೆ ಯೋಗಿಯ ವೇಷ ಭೂಷಣಗಳನ್ನು ವರ್ಣಿಸುತ್ತಾರೆ. ಅನಂತರ ಯೋಗಿಯ ಆಟ, ತಾಳಬದ್ಧವಾದ ಹೆಜ್ಜೆಗಳನ್ನಿಟ್ಟು ಹಾಡುಗಳನ್ನು ಹಾಡುತ್ತಾ ಇದನ್ನು ಹಾಡಲಾಗುತ್ತದೆ. ಯೋಗಿಯು ಭಿಕ್ಷಾಟನೆಗಾಗಿ ಹೊರಡುವುದು, ಸಂಚಾರ ನಡೆಸಿದ ದೇಶಗಳು ಈ ಮೊದಲಾದುವು ಹಾಡಿನಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ದೇಶಾಟನೆ ಮಾಡುವ ಯೋಗಿಗೆ ಹಲವು ಭಾಷೆಗಳು ಬರುತ್ತವೆಯಷ್ಟೆ! ಅದನ್ನು ದೃಷ್ಟಿಯಲ್ಲಿರಿಸಿಕೊಂಡು ವಿವಿಧ ಭಾಷೆಗಳ ಹಾಡುಗಳನ್ನು ಹಾಡಲಾಗುತ್ತವೆ. ಅನಂತರ ಎರಡು ವಿಭಾಗದ ಪಣಿಕ್ಕರ್‌ಗಳು ಎದುರು ಬದುರಾಗಿ ನಿಂತು "ಯೋಗ ಶಾಸ್ತ್ರ" ಹಾಗೂ ವೇದಾಂತ ಪರವಾದ ಚರ್ಚೆಗಳನ್ನು ನಡೆಸುತ್ತಾರೆ. "ಯೋಗಿಯಿಲ್ ನಿಲ್ಪ್" (ಯೋಗಿಯಲ್ಲಿ ನಿಲ್ಲುವುದು) ಎಂದು ಇದನ್ನು ಕರೆಯುತ್ತಾರೆ. ಮತ್ತೆ ಅವರು ಪದ್ಮಾಸನದಲ್ಲಿ ಕುಳಿತುಕೊಳುವಂತೆ ಪ್ರತ್ಯೇಕ ಪೀಠಗಳಲ್ಲಿ ಕುಳಿತುಕೊಳ್ಳುತ್ತಾರೆ. ಆಟಗಾರರು ಈಗ ಅವರ ಪಕ್ಕ ನಿಲ್ಲುವರು. ನೃತ್ಯ ಗುರುಗಳು ಈ ರೀತಿ ಕುಳಿತುಕೊಳ್ಳುವುದನ್ನು "ಯೋಗಿಯಿರಿಪ್ಪ್" ಎಂದು ಕರೆಯುತ್ತಾರೆ. ಪರಮಾನಂದ ಅನುಭವಿಸುವ ಪರಮ ಯೋಗಿಯಂತೆ ಇವರು ಕುಳಿತುಕೊಳ್ಳುತ್ತಾರೆ. ಹಾಗೂ ತಂತನಾ, ತನಂತಾ, ತನತ್ತನಾ, ತನತ್ತನ್ನೆ ಎಂದು ಆರಂಭವಾಗುವ ಆನಂದ ಗಾನವನ್ನು ಪಣಿಕ್ಕರ್‌ಗಳು ಆಲಾಪಿಸುತ್ತಾರೆ. ಉಳಿದವರು ಅದನ್ನು ಎತ್ತಿ ಹಾಡುತ್ತಾರೆ. ಅನಂತರ ಎದ್ದು ಪರಸ್ಪರ ಕೈ ಹಿಡಿಯುವುದರೊಂದಿಗೆ ಇದು ಮುಕ್ತಾಯವಾಗುತ್ತದೆ.

ಅಂಡುಂ ಪಳ್ಳುಂ : ಪೂರಕ್ಕಳಿಯ ಸಮಾಪನ ದಿನ ಬೆಳಿಗ್ಗೆ ವಂದನೆಯನ್ನೂ ಪೂರಮಾಲೆಯನ್ನೂ ಪ್ರದರ್ಶಿಸಿದ ಮೇಲೆ ಈ ಅಂಡುಂ ಪಳ್ಳುಂ. ಬ್ರಹ್ಮನ ಶಿರಚ್ಛೇದ ಮಾಡಿದ ಪಾಪವನ್ನು ಪರಿಹರಿಸಲಿಕ್ಕಾಗಿ ಶಿವ ಪಾರ್ವತಿಯವರು ಅಂಡಾರು ಹಾಗೂ ಅಂಡಿಚ್ಚಿ ವೇಷ ಹಾಕಿ ಭಿಕ್ಷಾಟನೆ ನಡೆಸಿದ ಕತೆಯ ಸಂಕೇತವಾಗಿ "ಅಂಡಾರ್ ಕೂತ್" ಪ್ರದರ್ಶಿಸಲ್ಪಡುತ್ತದೆ.

"ಪಳ್ಳು"ವನ್ನು "ಪಳ್ಳನಾರಾಟಂ ಕೂತ್" ಎಂದು ವಿಶೇಷಿಸಲಾಗಿದೆ. ಶಿವನು ಪಾರ್ವತಿಯೂ ಭೂತ ಗಣಗಳೂ, ಪಳ್ಳರಾಗಿ ಕೃಷಿ ಮಾಡುತ್ತಿದ್ದರು. ಎನ್ನುವ ಪುರಾತನ ಕಥೆಯ ಹಿನ್ನೆಲೆಯಿಂದ ಈ ಪಳ್ಳ್ ಪ್ರದರ್ಶಿಸಲ್ಪಡುತ್ತದೆ. ಚೇರ, ಚೋಳ, ಪಾಂಡ್ಯ ರಾಜರ ಕೈಕೆಳಗೆ ಕೃಷಿಯಲ್ಲಿ ನಿರತರಾದ ಪಳ್ಳ ಮತ್ತು ಪಳ್ಳಿಯರಾಗಿ ಶಿವನೂ ಪಾರ್ವತಿಯೂ ಪ್ರತ್ಯಕ್ಷರಾಗುತ್ತಾರೆ. ಕೃಷಿಯ

ವಿವಿಧ ಘಟ್ಟಗಳು ಪಳ್ಳಪ್ಪಾಟಿಯಲ್ಲಿ ವರ್ಣಿತವಾಗುತ್ತವೆ. ಬೇರೆ ಬೇರೆ ಧಾನ್ಯಗಳ ಹೆಸರುಗಳು ಅದರಲ್ಲಿ ಬರುತ್ತವೆ. ಎತ್ತುಗಳನ್ನು ಖರೀದಿಸುವುದು, ಉಳುವುದು, ಮಳೆ ಬಂದು ಗದ್ದೆಯಲ್ಲಿ ನೀರು ತುಂಬಿದಾಗ ಮೇಲಕ್ಕೆ ಹಾರಿ ಆಡುವ ಮೀನುಗಳನ್ನು ಹಿಡಿಯುವುದು, ಕಟ್ಟೆ ಕಟ್ಟುವುದು, ಬಿತ್ತುವುದು, ಕಳೆ ಕೀಳುವುದು, ಬೆಳೆ ಕೊಯ್ಯುವುದು, ಬಡಿಯುವುದು ಈ ಮೊದಲಾದ ಕೃಷಿಯ ಬೇರೆ ಬೇರೆ ಕ್ರಿಯೆಗಳು ಈ ಹಾಡಿನಲ್ಲಿ ಯಥಾವತ್ತಾಗಿ ವರ್ಣಿಸಲ್ಪಡುತ್ತವೆ. ಪೊಲಿ ಹಾಡಿನೊಂದಿಗೆ ಪಳ್ಳ್ ಮುಗಿಯುತ್ತದೆ. ಪಳ್ಳ್ ಒಂದು ಕೃಷಿಗೆ ಸಂಬಂಧಪಟ್ಟ ನೃತ್ಯವಾಗಿದೆ. ಪಳ್ಳ್ ಹಾಡನ್ನು ಕೆಲವು ಕಡೆ "ಕದಿರ್‌ಪಾಟ್" ಎಂದು ಕರೆಯುತ್ತಾರೆ.

ತೊಮಿನ್ನ ಪಾಟ್ಟ್ (ವಂದಿಸುವ ಹಾಡು) : ಪೂರಕ್ಕಳಿಯನ್ನು ಸಾಧಾರಣ ದಿನಗಳಲ್ಲಿ ಪೂರಮಾಲ ಮತ್ತು ಹಿರಿಯ ಆಟ ಕಳೆದ ಮೇಲೆ ವಂದಿಸುವ ಹಾಡು ಹಾಡಿ ನಿಲ್ಲಿಸುತ್ತಾರೆ. ಮರತ್ತುಕಳಿ ಇರುವ ದಿನ ಯೋಗಿ ಎನ್ನುವ ರಂಗದ ಮೇಲೆ ಈ ತೊಮಿನ್ನ ಪಾಟ್ಟ್. ದೇವತಾ ಸ್ತುತಿ ಪರವಾದ ಗಾನವೇ ತೊಮಿನ್ನ ಪಾಟ್ಟ್. ಇದರಲ್ಲಿ ದೇವಾಲಯದ ದೇವರ ಬಗ್ಗೆ ಹಾಡುಗಳಿರುತ್ತವೆ. ದೇವತೆಗಳ ಉದ್ಭವ, ಸಂಚಾರ, ಪರಾಕ್ರಮ ಮೊದಲಾದ ಕಾರ್ಯಗಳನ್ನು ಅದರಲ್ಲಿ ಹೇಳುತ್ತಾರೆ. ಈ ಹಾಡುಗಳಲ್ಲಿ ಕೀರ್ತಿಸುವ ದೇವತೆಗಳಲ್ಲಿ ಪ್ರಮುಖ ದೇವತೆ ಆರ್ಯ ಪೂಮಾಲ. ತೀಯಾ ಸಮುದಾಯದ ದೇವಾಲಯಗಳಲ್ಲಿ ಆರ್ಯ ಪೂಮಾಲ ದೇವತೆಗೆ ವಿಶೇಷ ಸ್ಥಾನವಿದೆ. ಚೀರುಂಬ, ಪಡಕ್ಕತ್ತಿ ಭಗವತಿ, ಪುದಿಯ ಭಗವತಿ, ಐವರು ಹುಲಿ ದೇವತೆಗಳು ಮೊದಲಾದ ದೇವತೆಗಳನ್ನು ವಂದಿಸುವ ಹಾಡಿನಲ್ಲಿ ಸ್ತುತಿಸುತ್ತಾರೆ. ಮಣಿಯಾಣಿಗಳು ಹಾಡುವ ಹಾಡುಗಳಲ್ಲಿ ಕಣ್ಣಂಗಾಟ್ ಭಗವತಿ, ಪಣಯಕ್ಕಾಟ್ ಭಗವತಿ, ಮೊದಲಾದ ದೇವತೆಗಳ ಚರಿತ್ರೆಗಳು ಬಹಳ ಮುಖ್ಯ. ಮುಕ್ಕುವರ ಹಾಡುಗಳಲ್ಲಿ ಆಯಿತ್ತಿ ಭಗವತಿಯ ಕುರಿತು ವಿವರಣೆಗಳಿವೆ. ಮೂಶಾರಿಗಳ ಹಾಡಿನಲ್ಲಿ ರಕ್ತ ಚಾಮುಂಡಿಯನ್ನು ಹೆಚ್ಚಾಗಿ ಸ್ತುತಿಸಲಾಗುತ್ತದೆ. ಈ ವಂದಿಸುವ ಹಾಡುಗಳಲ್ಲಿ ಸಾಮಾನ್ಯವಾಗಿ ವಿಷ್ಣುಮೂರ್ತಿ, ಗುಳಿಗ, ಶೂಲ ಕುಟಾರಿಯಮ್ಮ, ಕನ್ನಿಕೊರುಮಗನ್ ಮೊದಲಾದ ದೇವತೆಗಳ ಬಗ್ಗೆ ಸೂಚನೆಗಳು ಇವೆ.

ಮರತ್ತುಕಳಿ : ದೇವಾಲಯಗಳಲ್ಲಿ ಎರಡು ಪೂರ ಸಂಘಗಳ ಪೂರಕಳಿ ಸಾಮರ್ಥ್ಯವನ್ನು ಸ್ಪರ್ಧಾತ್ಮಕವಾಗಿ ಪ್ರಕಟಿಸುವುದನ್ನು ಮರತ್ತುಕಳಿ ಎಂದು ಹೇಳುತ್ತಾರೆ.

ಎರಡು ದೇವಾಲಯಗಳನ್ನು ಕೇಂದ್ರೀಕರಸಿ ಇದನ್ನು ನಡೆಸಲಾಗುತ್ತದೆ. ಯಾವ ಪೂರ ಸಂಘದ ಕೇಂದ್ರಗಳಲ್ಲಿ ಆಡಬೇಕು ಎನ್ನುವುದನ್ನು ಮೊದಲು ತೀರ್ಮಾನಿಸಲಾಗುತ್ತದೆ. ಆಟ ನಡೆಯುವ ದೇವಾಲಯದ ಸಂಘವು ಮೊದಲು ಆಡುತ್ತವೆ. ಅತಿಥಿ ಸಂಘವು ಮತ್ತೆ ಆಡುತ್ತದೆ. "ಮರತ್ತುಕಳಿ" ಪೂರಂಕಾಲದಲ್ಲಿ ಎಲ್ಲಾ ದಿವಸವೂ ಆಡಲ್ಪಡುವುದಿಲ್ಲ. ಅದಕ್ಕಾಗಿ ದಿನವನ್ನು ಮೊದಲೇ ನಿರ್ಧರಿಸಲಾಗುತ್ತದೆ. ಮರುತ್ತುಕಳಿಗೆ ಅತಿಥಿ ಸಂಘದ ಮುಖ್ಯಸ್ಥರನ್ನು ವೈಭವದಿಂದ

ಬರಮಾಡಿಕೊಳ್ಳಬೇಕು. ಅತಿಥಿಯನ್ನು ಕಂಡ ಕೂಡಲೇ ಆತಿಥೇಯನಾದ ಪಣಿಕ್ಕರ್ ಮಂಗಳ ಶ್ಲೋಕ ಹಾಡಬೇಕು. ಅನಂತರ ಪರಸ್ಪರ ತಾಂಬೂಲವನ್ನು ಕೊಡಬೇಕು. ಪಣಿಕ್ಕರ್ ಹಾಗೂ ಶಿಷ್ಯರು ಬಿಳಿಯ ಬಟ್ಟೆಯನ್ನು ಉಟ್ಟು ಅದರ ಮೇಲೆ ಕೆಂಪು ಅಥವಾ ಕಪ್ಪು ಸುತ್ತಿರಬೇಕು. ಅವರ ಚಪ್ಪರ ಪ್ರವೇಶದ ಅನಂತರ ಆ ದಿನದ ರಾಶಿಗಳ ಬಗ್ಗೆ, ಶಿಲ್ಪ ಶಾಸ್ತ್ರಗಳ ಬಗ್ಗೆ ವಾದ ಪ್ರತಿವಾದ ನಡೆಯುತ್ತದೆ. ಮುಂದೆ ದೀಪ ವಂದನ ನಡೆಯುವಾಗಲೂ ಪ್ರಶ್ನೋತ್ತರಗಳು ನಡೆಯುತ್ತವೆ. ಮುಂದಿನ ಎಲ್ಲಾ ರಂಗಗಳಲ್ಲೂ ಎರಡೂ ಸಂಘದವರೂ ಎರಡು ಕಡೆಯ ಪಣಿಕ್ಕರ್‌ಗಳೂ ಚರ್ಚೆ ಮಾಡುತ್ತಾರೆ. ತೀಯಾ ಸಮುದಾಯದವರು ಈ ಮರತ್ತುಕಳಿಗೆ ವಿಶೇಷ ಪ್ರಾಧಾನ್ಯತೆಯನ್ನು ನೀಡುತ್ತಾರೆ.

ಮರುತ್ತುಕಳಿಯಲ್ಲಿ ಈಗ ಹಲವಾರು ಪರಿವರ್ತನೆಗಳು ಸಂಭವಿಸಿವೆ. ಹಿಂದಿನ ಕಾಲದಲ್ಲಿ ಎರಡು ಸಂಘದ ಮುಖ್ಯಸ್ಥರು ವಾದ ಪ್ರತಿವಾದಗಳನ್ನು ಹಾಡಿನಲ್ಲೇ ಪ್ರಸ್ತುತ ಪಡಿಸುತ್ತಿದ್ದರು. ಪೂರಕ್ಕಳಿಯ ಎಲ್ಲಾ ರಂಗಗಳಲ್ಲಿಯೂ ಈ ವಿಧದ ಪ್ರಶ್ನೋತ್ತರಗಳಿದ್ದವು. ಆದರೆ ಈಗ ಅದು ಮಾಯವಾಗಿದೆ. ಮಲೆಯಾಳ ಭಾಷೆಯ ಪದ್ಯಗಳ ಬದಲಿಗೆ ಸಂಸ್ಕೃತ ಪದ್ಯಗಳೇ ಹೆಚ್ಚಾಗಿವೆ. (ಡಾ. ಎಂ.ವಿ. ವಿಷ್ಣುನಂಬೂದಿರಿ : ಕಾಸರಗೋಡು ಚರಿತ್ರವುಂ ಸಮೂಹವುಂ : ಪುಟ. ೨೫೩)

ಪೂರಕ್ಕಳಿ ಪಾಟ್‌ಗಳು : (ಪೂರಕ್ಕಳಿಯ ಹಾಡುಗಳು) :

ಪೂರಕ್ಕಳಿಯ ಹಾಡುಗಳು ಹಲವು ಕಾಲಘಟ್ಟಗಳಲ್ಲಿ ನಿರ್ಮಾಣವಾದವುಗಳು. ನೂರಾರು ವರ್ಷಗಳ ಪಾಚೀನತೆ ಅವುಗಳಿಗೆ ಇವೆ. ಹಾಗೆ ಇತ್ತೀಚಿನವುಗಳೂ ಅದರೊಂದಿಗೆ ಸೇರಿಕೊಂಡಿವೆ. ಮಲೆಯಾಳ ಭಾಷೆಯ ಉತ್ಪತ್ತಿ ವಿಕಾಸಗಳನ್ನು ಅದರಿಂದ ನಮಗೆ ತಿಳಿದುಕೊಳ್ಳಬಹುದು. ಆರಂಭದ ಪೂರಪ್ಪಾಟ್‌ಗಳಲ್ಲಿ ತಮಿಳು ಹೆಚ್ಚು ಪ್ರಭಾವ ಬೀರಿವೆ. ಆದರೆ ಅನಂತರ ಸಂಸ್ಕೃತದ ಪ್ರಭಾವ ಹೆಚ್ಚಾದುದನ್ನು ಕಾಣಬಹುದು. ಶಾಸ್ತ್ರ ಲಯ ಬದ್ಧವಾದ ಭಾಷೆ ಪೂರಪ್ಪಾಟಿನ ಪ್ರಮುಖ ಲಕ್ಷಣ. ಕಾಲಾನುಕಾಲಕ್ಕೆ ಬಾಯಿಂದ ಬಾಯಿಗೆ ಹರಿದು ಬಂದ ಪೂರಕ್ಕಳಿಯ ಪಾಟುಗಳು ಕ್ರಮೇಣ ತಮ್ಮ ಆರಂಭದ ರೂಪವನ್ನು ಕಳೆದುಕೊಳ್ಳುತ್ತವೆ. ಹಳೆಯ ಹಾಡುಗಳು ಮರೆಯಾಗಿ ಹೊಸ ಹಾಡುಗಳು ಹುಟ್ಟಿಕೊಳ್ಳುತ್ತವೆ.

ಕೆಲವು ಪೂರಕ್ಕಳಿ ಪ್ಪಾಟುಗಳು : ೧) ನಾರಾಯಣ ವಂದನೆಯ ಹಾಡಿನ ಕೆಲವು ಸಾಲುಗಳು :

ನಾರಾಯಣಾ ನಾರಾಯಣಾ
ವಾಸುದೇವಾ ಕೈತೋದಿನ್ನೇನ್
ಮಮನಾಮಂಜಳ್ ಪಾಡಿಯಾಡುವಾನ್
ವಾಸುದೇವಾ ನೀ ವರಮರುಳ್

"ನಾರಾಯಣ ವಂದಿಸುತ್ತೇನೆ. ನಿನ್ನ ನಾಮವನ್ನು ಹಾಡಲು ವರಗಳನ್ನು ನೀಡು."

೨) ದೇವಿಯನ್ನು ಸ್ತುತಿಸಿ, ದಾರುಕಾಸುರನ ಸಂಹಾರ ಮಾಡಿದ ಕಥೆಯನ್ನು ಹೇಳುವ ವಂದನೆಯ ಹಾಡುಃ

ಅಮ್ಮೇ ತಿರುವರ್ ಕಾಡಂಬುಂ ದೇವೀ
ಕಲ್ಮಷ ನಾಶಿನೀ ಕಾತ್ಯಾಯಿನೀ
ಅಸುರತಪೆರುಕಿಯ ದಾರುಕವೀರನೆ
ಅಡರ್‌ಪೊರುತವನೆ ವಧಿಚ್ಚುಡಲ್‌ಕೀರಿ
ಕುಡಿಕುಡಿ ಸನ್ನಾಯ್ ಚೋರಕುಡಿಚ್ಚು
ಕುಡಲ್ ಮಾಲಗಳುಂ ಮಾರಿಲಣಿಞು
ವಟ್ಟಕವಾಳುಂ ಕರತ್ತಿಲೇಂದಿ
ವಟ್ಟತ್ತಿಲಾಡುನ್ನ ಭದ್ರಕಾಳೀ
ನೀಯೇ ಗಗನಂ ನಿರಞೂರಮ್ಮೆ
ಎನ್ನಿಲುಂ ನಿನ್ ಕೃಪ ತೋನ್ನೀಡಣಂ
ಚೇಲೋತ್ತುಳ್ಳೊರು ಕೋಲ ಸ್ವರೂಪನೆ
ಪಾಲಿಪ್ಪದಿನಾಯಿಬಿನ್ನಳ್ಳಿಚ್ಚು
ಕೊಲೋತ್ತುಳ್ಳೊರು ಸ್ಥಳಮಿನ್ನಬಿಗಿಲ್
ಪಾರಪ್ಪುರ ಮದಿಲಮರುಮೊರಮ್ಮೇ
ಅಮ್ಮೇ ಅಖಿಲಂ ನಿರಞವಳೇ
ಎನ್ನಿಲುಂ ನಿನ್ ಕೃಪ ತೋನ್ನೀಡಣಂ

ತಾಯೇ ಕಲ್ಮಷನಾಶಿನೀ ಕಾತ್ಯಾಯನೀ, ಅಸುರನಾದ ದಾರುಕಾಸುರನು ಅಹಂಕಾರದಿಂದ ಕೂಡಿದಾಗ ಅವನನ್ನು ವಧಿಸಿ ದೇಹವನ್ನು ಸೀಳಿದೆ. ರಕ್ತವನ್ನು ಚೆನ್ನಾಗಿ ಮತ್ತೆ ಮತ್ತೆ ಕುಡಿದೆ. ಕರುಳ ಮಾಲೆಗಳನ್ನು ಕೊರಳಿಗೆ ಹಾಕಿಕೊಂಡೆ, ಖಡ್ಗವನ್ನು ಕೈಯಲ್ಲೆತ್ತಿ ಸುತ್ತಲ್ಲೂ ಬೀಸಿ ಆಡುತ್ತಿರುವೆ. ಭದ್ರಕಾಳಿ, ನೀನೇ ಗಗನವನ್ನೂ ತುಂಬಿರುವೆ ನನ್ನಲ್ಲಿ ಕೃಪೆ ತೋರಬೇಕು. ಸುಂದರವಾದ ಕೋಲ ಸ್ವರೂಪನನ್ನು ಪಾಲಿಸಲಿಕ್ಕಾಗಿ ಬಂದವಳು ನೀನು. ನಿನ್ನಿಂದ ಅರಮನೆಯ ಸ್ಥಳದಲ್ಲಿರುವ ಕ್ಷೇತ್ರವು ಕಂಗೊಳಿಸುತ್ತಿದೆ. ವಿಶ್ವವನ್ನು ತುಂಬಿರುವ ತಾಯೇ, ನನ್ನಲ್ಲೂ ನೀನು ಕೃಪೆ ತೋರಬೇಕೆಂದು ಪ್ರಾರ್ಥಿಸುತ್ತಾ ವಂದಿಸುತ್ತೇನೆ.

೩. ಕಾಮದೇವನಿಗೆ ಸಂಬಂಧಿಸಿದ ಹಾಡು :

ಓಮನಮಾಯೆ ತೋಬಿಗಳ್ ಕಾಮ
ದೇವನ್ ಪೋಯದ್ ಮೂಲಮಾಯಿ
ಓಣಂವನ್ನೆತ್ತೀಡುಂಬೋಳ್ ಪಂಚ
ಬಾಣನೆ ಪಾರಾದೆ ಕೇಬಿನ್ನು
ಕೇಬಿನ್ನದ್ ಕೇಟ್ಟು ಪರನ್ನುವನ್ನು
ಪೈಂಗಿಳಿ
ಪೈಂಗಿಳಿಯೋಡೆನ್ ಸಂಕಟ ಓಲೆನ್
ತಂಕಂ ಕೂಡಾದೆ ಚೊಲ್ಲುನ್ನು

"ಸುಂದರಿಯಾರಾದ ಸಖಿಯರು ಕಾಮದೇವನು ಹೋದುದನ್ನೇ ಉದ್ದೇಶವಾಗಿಟ್ಟುಕೊಂಡು ಓಣಂ ಬರುವಾಗ ಪಂಚ ಬಾಣನನ್ನು ಮರೆಯದೆ ಪ್ರಾರ್ಥಿಸುವುದನ್ನು ಕೇಳಿ ಗಿಳಿ ಹಾರಿ ಬಂತು. ಆ ಗಿಳಿಯಲ್ಲಿ ತಮ್ಮ ಸಂಕಟವನ್ನು ಒಂದೇ ಸವನೆ ಅವರು ಹೇಳಿ ಕೊಂಡರು".

ಈ ಹಾಡಿನಲ್ಲಿ ದೇವಿಯೊಂದಿಗೆ, ಕೋಲ ಸ್ವರೂಪದ ರಾಜನ ಹೆಸರೂ ಬರುತ್ತದೆ.

ಕಾರ್ತೀಕ (ಕೃತ್ತಿಕಾ) ನಕ್ಷತ್ರದಿಂದ ಪೂರಂ ನಕ್ಷತ್ರದವರೆಗೆ ಕಾಮನನ್ನು ಆರಾಧಿಸಿ, ಹಾಕುವ ಹೂವುಗಳೆಲ್ಲಾ ಸೇರ "ಪೂರಂ" ದಿನಕ್ಕೆ ಕಾಮದೇವನ ರೂಪವನ್ನು ತಾಳುತ್ತವೆ. ಆ ದಿನ "ಪೂರಂಗಂಜಿ" ಹಾಗೂ "ಪೂರಂ ಅಡೆ" (ಅಕ್ಕಿಯ ತಿಂಡಿ)ಯನ್ನು ತಯಾರಿಸಿ ನೈವೇದ್ಯವನ್ನು ಕಾಮನಿಗರ್ಪಿಸಲಾಗುತ್ತದೆ. ಕಾಮನ ರೂಪವಾದ ಹೂವುಗಳನ್ನು "ಬರಿಕ್ಕೆ ಹಲಸಿ"ನ (ಹಲಸಿನ ಮರದ ಒಂದು ಜಾತಿ) ಮರದ ಬುಡದಲ್ಲಿ ಕೊಂಡು ಹೋಗಿ ಇಡುತ್ತಾರೆ. ಮುಂದಿನ ವರ್ಷ ಮುಂಜಾನೇ ಬೇಗನೇ ಬರಬೇಕೆಂದು ಕಾಮನಿಗೆ ಆಮಂತ್ರಣವನ್ನು ನೀಡಿ ಬೀಳ್ಕೊಡುತ್ತಾರೆ.

ಪೂರಕ್ಕಳಿಯು ಉತ್ತರ ಕೇರಳದ ಹಿಂದುಳಿದ ವರ್ಗಗಳ ಜೀವನದಲ್ಲಿ ಅತ್ಯಂತ ಪ್ರಧಾನ ಪಾತ್ರವಹಿಸುತ್ತದೆ. ಸಾಮೂಹಿಕ ಜೀವನದ ಯಥಾರ್ಥವಾದ ಪ್ರತಿಫಲನಗಳು ಪೂರಕ್ಕಳಿಯಿಂದ ಲಭಿಸುತ್ತವೆ.

ಜನಸಾಮಾನ್ಯರಿಗೆ ಮನರಂಜನೆಯೊಂದಿಗೆ ಪುರಾಣಗಳ ಪುಣ್ಯಕತೆಗಳನ್ನು ತಲುಪಿಸುವ ಮಾಧ್ಯಮವಾಗಿ ಇದಕ್ಕೆ ಪ್ರಮುಖ ಪಾತ್ರವಿದೆ.

ಕಾಸರಗೋಡು ಭಾಗದಲ್ಲಿ ಸುಮಾರು ಮೂವತ್ತು ವರ್ಷಗಳ ಹಿಂದಿನವರೆಗೂ ಶಾಲಿಯಾ ಪೊರಾಟ್‌ನೊಂದಿಗೆ ಪೂರಕ್ಕಳಿಯೂ ಆಡಲ್ಪಡುತ್ತಿತ್ತು. ಕುಂಬಳೆಯ ನಗರದವರು ಅಂಬಲಡ್ಕ ದೇವಾಲಯದಲ್ಲಿ ಶಿವರಾತ್ರಿಯಂದು ಪೂರಕ್ಕಳಿ ಆಡುತ್ತಿದ್ದರು. ಆದರೆ ಈಗ ಕಾಸರಗೋಡಿನವರಿಗೆ ಪೂರಕ್ಕಳಿ ಎಂದರೇನೆಂದೇ ಗೊತ್ತಿಲ್ಲದಂತಹ ಸ್ಥಿತಿಗೆ ಬಂದಿದೆ.

ಕೀಳೂರಿನಲ್ಲಿ "ನಿಟಿಲ್ ವಿರಿಕ್ಕಲ್" ದಿನ ಎಂದರೆ ವೃಶ್ಚಿಕ ಮಾಸದ ೨ನೇ ಶನಿವಾರ ರಾತ್ರಿಯಂತೂ ಆಡಲೇಬೇಕು. ಇದು ಶಾಲಿಯರಿಗೂ ಪೂರಕ್ಕಳಿಗೂ ಇರುವ ನಿಕಟವಾದ ಸಂಬಂಧವನ್ನು ಸೂಚಿಸುತ್ತದೆ.

ಆಂಡವನು ಸೃಷ್ಟಿ ಮಾಡಿದ ೧೮,೦೦೦ ಗ್ರಂಥಗಳಲ್ಲಿ ಸಿಕ್ಕಿದ ಸಣ್ಣ ಒಂದು ಅಂಶವೇ "ಪೂರಪ್ಪಾಟ್" ಎಂದೂ, ಅದು ಶಾಲಿಯಾ ಸಮುದಾಯಕ್ಕೆ ದೊರಕಿತೆಂದೂ ಅಭಿಪ್ರಾಯವಿದೆ.

ಇದನ್ನು "ಪವಿತ್ರ ಕಲೆ" ಎಂದು ಪರಿಗಣಿಸಲಾಗಿದೆ. ಪೂರಕ್ಕಳಿಯನ್ನು ಆಡುವ ಹದಿನಾಲ್ಕು ಜನರು ೧೪ ದಿನ ದೇವಾಲಯದಲ್ಲಿಯೇ ಮಲಗಬೇಕು. ಅಲ್ಲೇ ಅಡಿಗೆ ಮಾಡಿ ಉಣ್ಣಬೇಕು. ಶುದ್ಧತೆಯನ್ನು ಪಾಲಿಸಬೇಕು. ಆರು ದಿನ ರಾತ್ರಿ, ಒಂದು ದಿನ ಹಗಲು ಎಲ್ಲರೂ ಪೂರಕ್ಕಳಿ ಆಡಬೇಕು. ಅದರಲ್ಲಿ ಪ್ರಧಾನನಾದವನು ದೀಪವನ್ನು ಉರಿಸಬೇಕು. ಒಬ್ಬರು ಕೊಡೆ ಹಿಡಿದು ದರ್ಶನದಿಂದ ದೇವರಿಗೆ ಪ್ರದಕ್ಷಿಣೆ ಬರಬೇಕು. ಅನಂತರವೇ ಪೂರಕ್ಕಳಿಯನ್ನು ಆಡಬೇಕು. ಕಲೆಯೊಂದನ್ನು ಪಾವಿತ್ರ್ಯದ ದೃಷ್ಟಿಯಿಂದ ಕಾಣುವ ಮಾನವನ ಧಾರ್ಮಿಕ ಪ್ರವೃತ್ತಿಗೆ ಇದು ಸಾಕ್ಷಿಯಾಗಿದೆ.

# ಇತರ ಜಾನಪದ ಕಲೆಗಳು

## ಕೋಲ್ಕಳಿ

ಕುಣಿತಕ್ಕೂ ಸಂತಸಕ್ಕೂ ಹತ್ತಿರದ ಸಂಬಂಧ. ಮನಸ್ಸು ಪ್ರಫುಲ್ಲಿತವಾದಾಗ ಕೈಕಾಲುಗಳು ತಮಗರಿವಿಲ್ಲದೇ ಲಯಬದ್ಧವಾಗಿ ಚಲಿಸತೊಡಗುತ್ತವೆ. ಕೈಕಾಲುಗಳ ಚಲನೆಯ ಮೂಲಕ ಮನಸ್ಸಿನ ಸಂತಸವು ಅಭಿವ್ಯಕ್ತವಾಗುವುದೇ ಕುಣಿತಕ್ಕೆ ಮೂಲ. ಪ್ರತಿಯೊಂದು ಚಲನಶೀಲವಾದ ಪ್ರಾಣಿಯೂ ತನ್ನ ಸಂತಸವನ್ನು ಕೈಕಾಲುಗಳ ಚಲನೆಯಿಂದ ಅಭಿವ್ಯಕ್ತಿಸುತ್ತದೆ. ಅನಾಗರಿಕನಾಗಿ ಕಾಡಿನಲ್ಲಿ ವಾಸಿಸುತ್ತಿದ್ದ ಮಾನವನು ಮನಸ್ಸಿಗೆ ಹರ್ಷವುಂಟಾದಾಗ ಕುಣಿಯುವ ಕಾಲುಗಳಿಗೆ ತಕ್ಕ ಜತೆಯಾಗಿ ಇನ್ನೊಂದು ದನಿಯನ್ನೂ ಹುಡುಕುವ ಪ್ರಯತ್ನದಲ್ಲಿ ಕಾಡಿನ ಮರದ ಕೋಲುಗಳನ್ನು ಪರಸ್ಪರ ಬಡಿದು ಸೇರಿಸಿರಬಹುದು. ಹಲವರು ಒಟ್ಟಾದಾಗ, ಹಲವು ಹೆಜ್ಜೆಗಳೊಂದಿಗೆ, ಹಲವು ಕೋಲುಗಳು ದನಿಗೂಡಿಸಿದಾಗ, ಮನಸ್ಸಿಗೆ ಇನ್ನಷ್ಟು ಹರ್ಷವಾಗಿ ಸಾಮೂಹಿಕ ಕೋಲಾಟವು ರೂಪು ತಾಳಿರಬಹುದು. ಯಾದವರ "ವಿನೋದ ನರ್ತನ" ಕೋಲ್ಕಳಿ ಎಂಬ ಪ್ರಾಚೀನ ನಂಬಿಕೆಯಿದೆ. ಈ ಕಲೆಯನ್ನು ದ್ರೋಣಾಚಾರ್ಯರು ಸಂವಿಧಾನ ಮಾಡಿದರು ಎಂದು ಹೇಳುತ್ತಾರೆ.

ಭಾರತೀಯರ ಅತ್ಯಂತ ಪ್ರಾಚೀನ ಕಲೆಗಳಲ್ಲೂ ಕೋಲಾಟಕ್ಕೆ ವಿಶೇಷವಾದ ಸ್ಥಾನವಿದೆ. ಮಾನವನು ಕಾಡಿನಲ್ಲಿ ಜೀವಿಸುವಂತಹ ಕಾಲದಲ್ಲಿಯೇ ಕಾಡಿನ ಮರದಿಂದ ಕೋಲುಗಳನ್ನು ತಯಾರಿಸಿ ಒಂದಕ್ಕೊಂದು ಹೊಡೆದು ಅದಕ್ಕೆ ತಕ್ಕಂತೆ ಹೆಜ್ಜೆ ಹಾಕುವ ಪರಿಪಾಠವನ್ನು ಇಟ್ಟುಕೊಂಡಿರಬಹುದು. ನರ್ತನಕ್ಕೆ ಮೊದಲನೆಯ ಹಿಮ್ಮೇಳವು ಕೋಲೇ ಆಗಿರುವ ಸಾಧ್ಯತೆಗಳು ಇರುವುದರಿಂದ, ಕೋಲಾಟವೇ ಆರಂಭಿಕ ನೃತ್ಯರೂಪವಾಗಿರುವ ಸಾಧ್ಯತೆಯಿದೆ. ತಾಳ—ಲಯದ ಅರಿವಿಲ್ಲದ ಸಮಯದಲ್ಲಿ ಕೋಲಿನ ನಿಯಮಿತವಾದ ಬಡಿತವೇ ಹೆಜ್ಜೆಯ ಗತಿಯನ್ನು ನಿಯಂತ್ರಿಸಿ ಕೋಲಾಟವು ಹುಟ್ಟಿಕೊಂಡಿರಬಹುದು. ಭಾರತೀಯ ಪ್ರತಿಯೊಂದು ಮೂಲ ಜನಾಂಗದಲ್ಲಿ ಕೋಲಾಟ ಒಂದಲ್ಲ ಒಂದು ರೀತಿಯಿಂದ ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ. ಬೇಸರವನ್ನು ಕಳೆಯಲು ಸಂಧ್ಯಾಕಾಲದಲ್ಲಿ, ಪವನಕಾಲದಲ್ಲಿ ಹಾಗೂ ಬಂಧು ಬಾಂಧವರು ಒಂದಾಗಿ ಸೇರುವಸಂದರ್ಭದಲ್ಲಿ ಸಂತೋಷವನ್ನೂ ವ್ಯಕ್ತಪಡಿಸಲು ಈ ಕುಣಿತ ಪ್ರಾರಂಭವಾಗಿರಬೇಕು.

ಕೇರಳದುದ್ದಕ್ಕೂ ವಿಭಿನ್ನ ಶೈಲಿಗಳಲ್ಲಿ ಈ ಕೋಲಾಟವು ಪ್ರಚಲಿತವಾಗಿರುವುದನ್ನು ಕಾಣಬಹುದು. ಒಂದೊಂದು ಪ್ರದೇಶಕ್ಕೆ, ಒಂದೊಂದು ವರ್ಗಕ್ಕೆ ವಿಭಿನ್ನವಾಗಿ ಈ ಕೋಲಾಟವು ಪ್ರಚಲಿತವಾಗಿದೆ. ಕೋಲಾಟದ ರೀತಿಯಿಂದಲೇ ಅವರು ಯಾವ ವರ್ಗದವರು ಎಂಬುದನ್ನು ನಿಚ್ಚಳವಾಗಿ ತಿಳಿಯಲು ಸಾಧ್ಯವಾಗುವಂತಹ ರೀತಿಯಲ್ಲಿ ಪ್ರಾಚೀನ ಕೇರಳದಲ್ಲಿ ಪ್ರತಿಯೊಂದು ವರ್ಗದಲ್ಲಿ ಕೋಲಾಟವು ಅಸ್ತಿತ್ವದಲ್ಲಿತ್ತು.

ಈ ಕೋಲಾಟವು ಕೋಲಡಿಕ್ಕಳಿ, ಕಂಬಡಿಕ್ಕಳಿ, ಕೋಲಾಟ್ಟಂ, ವಡಿತ್ತಲ್ಲ್, ವಡಿಪ್ಪಯಟ್ಟ್ ಈ ಮೊದಲಾದ ಹೆಸರುಗಳಿಂದ ಕರೆಯಲ್ಪಡುತ್ತದೆ. ಹೆಂಗಸರೂ, ಮಕ್ಕಳೂ, ಗಂಡಸರೂ ವಿಭಿನ್ನ ಶೈಲಿಗಳಿಂದ ಈ ಕೋಲಾಟವನ್ನು ನಡೆಸುತ್ತಿದ್ದರು. ಸಣ್ಣಸಣ್ಣ ಮಣಿಗಳನ್ನು ಅಂಟಿಸಿದ, ಬಣ್ಣ ಹಚ್ಚಿದ ಸಣ್ಣಕೋಲುಗಳನ್ನು ಪರಸ್ಪರ ಬಡಿದು, ಹಾಡಿ ತಾಳಕ್ಕೆ ತಕ್ಕ ಹೆಜ್ಜೆ ಹಾಕುತ್ತಾ ಕುಣಿಯುವ ಕೋಲಾಟವನ್ನು "ಕಂಬಡಕಳಿ" ಎಂದು ಕರೆಯುತ್ತಾರೆ.

ಇಬ್ಬರು ತಾಳಬದ್ಧವಾಗಿ ಹೆಜ್ಜೆಹಾಕುತ್ತ ಐದಡಿಗಿಂತಲೂ ಉದ್ದದ ಬಡಿಗೆಯಿಂದ ಬಡಿಯುತ್ತಾ, ತಡೆಯುತ್ತಾ, 'ಪಯಟ್ಟ್' (ಹೊಡೆತ) ನಡೆಸುವುದನ್ನು 'ವಡಿಪಯಟ್ಟ್' ಎಂದು ಕರೆಯುತ್ತಾರೆ.

ಕಾಸರಗೋಡು ಪ್ರದೇಶದಲ್ಲಿ ಕೋಲ್ಕಳಿಗೆ ವಿಶೇಷ ಪ್ರಾಶಸ್ತ್ಯವಿದೆ. ಇಲ್ಲಿ ಪ್ರಚಲಿತವಿರುವ ಕೋಲ್ಕಳಿಗೆ 'ವಡಕ್ಕನ್ ಶೈಲಿ' ಎಂದು ಕರೆಯುತ್ತಾರೆ. ವಂದನ ಶ್ಲೋಕದೊಂದಿಗೆ ಕೋಲ್ಕಳಿ ಆರಂಭವಾಗುತ್ತದೆ. ಇದಕ್ಕೆ 'ವಟ್ಟಕ್ಕೋ' ಎಂದು ಕರೆಯುತ್ತಾರೆ. ಸುಬ್ರಹ್ಮಣ್ಯ, ಗಣಪತಿ ಮೊದಲಾದ ದೇವತೆಗಳನ್ನು ಇಲ್ಲಿ ಸ್ತುತಿಸಲಾಗುತ್ತದೆ. ಚುಟ್ಟಿಕೋಲ್, ತೆಟ್ಟಿಕೋಲ್, ಇರುನ್ನುಕಳಿ, ತಡುತ್ತುಕಳಿ, ತಾಳಕ್ಕಳಿ, ಕೊಡುತ್ತೊ ಪೋನ್ನೋ ಕಳಿ, ತಟ್ಟಿತ್ ತೆಟ್ಟಿಕೋಲ್, ಚವಿಟ್ಟಿಚುಟ್ಟಲ್, ಚುರಙಾಚುಟ್ಟಲ್, ಒತ್ತಕೊಟ್ಟ್, ರಂಡ್‌ಕೊಟ್ಟ್, ಚೇಂದ್, ಒಳವುಂ ಪುರವುಂ, ಒರು ಮಣಿಮುತ್ತ್ ಈ ಮೊದಲಾದ ಐವತ್ತರವರೆಗಿನ ಕೋಲ್ಕಳಿ ವಿಧಾನಗಳಿವೆ. ಒಂದೊಂದು ತಾಳಕ್ಕೂ ಒಂದೊಂದು ವಿದದ ಹಾಡುಗಳಿವೆ. ಆಟಗಾರರನ್ನು ಒಳಗೆ ಹೊರಗೆ ಎಂದು ಎರಡು ಭಾಗಗಳಾಗಿ ವಿಭಾಗಿಸಲಾಗುತ್ತದೆ. ಆರಂಭದಲ್ಲಿ ಒಳಗೂ ಹೊರಗೂ ಆಟ ಪ್ರಾರಂಭ. ಅನಂತರ ಸ್ಥಾನವನ್ನು ಬದಲಾಯಿಸಿ ಆಡಲಾಗುತ್ತದೆ. ಅದನ್ನು 'ಕೋರ್ಕಲ್' ಎಂದು ಕರೆಯುತ್ತಾರೆ. ಒಂದೊಂದು ಆಟದ ಅವಸಾನದಲ್ಲೂ ಆಡುವವನು ತನ್ನ ನಿರ್ಧಿಷ್ಟ ಸ್ಥಾನವನ್ನು ಸೇರಬೇಕು.

'ಕಳರಿ' ಸಂಸ್ಕಾರವು ಒಂದು ರೀತಿಯಲ್ಲಿ ಈ ಕೋಲ್ಕಳಿಗೆ ಕಾರಣವಾಗಿರಬೇಕು ಎಂಬ ಒಂದು ಅಭಿಪ್ರಾಯವಿದೆ. (ಕಾಸರಗೋಡು ಚರಿತ್ರೆ, ಹಾಗೂ ಸಮೂಹ–ಸಂಸ್ಕಾರವೂ ಕಲೆಯೂ ಸಂ : ಸಿ. ಬಾಲನ್) ಹಿಂದೆ ಕಳರಿಗಳಲ್ಲಿ ಇದನ್ನು ಮೊದಲು ಅಭ್ಯಾಸ ಮಾಡಿ ಅನಂತರ ಕಳರಿಪಯಟ್ಟ್ ಕಲಿಸುತ್ತಿದ್ದರು. ಪೂರಕ್ಕಳಿಯೂ ಈ ಕೋಲ್ಕಳಿಯಿಂದಲೇ ಬಂದಿರಬೇಕು.

ಪೂರಕ್ಕಳಿ, ಕೋಲ್ಕಳಿ, ಕಳರಿಪಯಟ್ಟ್ ಈ ಮೂರಕ್ಕೂ ಕೇರಳದಲ್ಲಿ ಪರಸ್ಪರ ಸಂಬಂಧವಿದೆ. ಯಾವುದರಿಂದ ಯಾವುದು ಹುಟ್ಟಿಕೊಂಡಿತು ಎಂಬುದನ್ನು ನಿರ್ಧಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಸ್ವರಕ್ಷಣೆಗಾಗಿ ಹಾಗೂ ಯುದ್ಧ ಸಂದರ್ಭದಲ್ಲಿ ಬಳಸುವ ಯುದ್ಧತಂತ್ರದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ 'ಕಳರಿಪಯಟ್ಟ್' ಕಲಾರೂಪವನ್ನು ತಾಳುವಾಗ 'ಕೋಲ್ಕಳಿ' ಮತ್ತು 'ಪೂರಕ್ಕಳಿ'ಯಾಗಿ ಪರಿವರ್ತಿತವಾಗಿರಬಹುದು. ಕಳರಿ ಕಲಿತವರೇ ವಿನೋದಕ್ಕಾಗಿ ಆಡುವಾಗ

ಅದು 'ಕೋಲ್ಕಳಿ' ಅಥವಾ 'ಪೂರಕ್ಕಳಿ'ಯಾಗಿ ರೂಪಾಂತರವಾಗಿರುವ ಸಾಧ್ಯತೆಯಿದೆ. ಅಲ್ಲಿಯೂ ಇಲ್ಲಿಯೂ ಇಡುವಂತ ಹೆಜ್ಜೆಗಳಲ್ಲಿ ಮತ್ತು ಕುಣಿತಗಳಲ್ಲಿ ಸಾಮ್ಯತೆಯನ್ನು ಸಾಧಾರಣವಾಗಿ ಗುರುತಿಸಬಹುದು. ಎದುರಾಳಿಯನ್ನು ತಡೆಯುವ ತಂತ್ರ, ಎದುರಾಗುವ ತಂತ್ರ, ಹೋರಾಡುವ ತಂತ್ರವನ್ನು ಕೋಲ್ಕಳಿ ಎಂದು ಕಾಣಲು ಸಾಧ್ಯವಿದೆ. ಆದುದರಿಂದ ಕೇರಳದ ಕಳರಿಪಯಟ್ಟ್ ಸಂಸ್ಕಾರವು ಒಂದಲ್ಲ ಒಂದು ರೀತಿಯಿಂದ ಈ ಜನಪದ ಕಲೆಯೊಂದಿಗೆ ತನ್ನ ನೇರ ಪ್ರಭಾವವನ್ನು ಬೀರಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಪೂರಕ್ಕಳಿ ಮತ್ತು ಕೋಲ್ಕಳಿಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದುಕೊಂಡಿರುವ 'ಶಾಲಿಯ'ರು ಒಂದು ಕಾಲದಲ್ಲಿ ತಮ್ಮ ವೃತ್ತಿಯೊಂದಿಗೆ ಯುದ್ಧಾಭ್ಯಾಸದಲ್ಲೂ ತೊಡಗಿದ್ದರು ಎನ್ನುವುದರ ಕಡೆಗೆ ಇದು ಬೆಳಕು ಚೆಲ್ಲುತ್ತದೆ. 'ಶಲ್ಯ'ವನ್ನು ಅಥವಾ 'ಈಟಿ'ಯನ್ನು ಹಿಡಿದು ಯುದ್ಧ ಮಾಡುವವನೇ 'ಶಾಲಿಯ' ಎಂದು ಊಹಿಸಲ್ಪಟ್ಟಾಗ 'ಶಲ್ಯ'ವನ್ನು ಯಾವ ರೀತಿಯಲ್ಲಿ ವೈರಿಗೆದುರಾಗಿ ಪ್ರಯೋಗಿಸಬಹುದು ಎನ್ನುವುದನ್ನು ಕೋಲ್ಕಳಿಯ ಮೂಲಕವಾಗಿ ಅವರು ತೋರಿಸಿಕೊಟ್ಟಿರುವ ಸಾಧ್ಯತೆಯಿದೆ. ಆದುದರಿಂದಲೇ 'ಕೋಲ್ಕಳಿ' ಮತ್ತು 'ಪೂರಕ್ಕಳಿ' ಈ ಜನ ಸಮೂಹದಲ್ಲಿ ಇಷ್ಟೊಂದು ಪ್ರಚಾರತೆಯನ್ನು ಪಡೆದುಕೊಳ್ಳಲು ಸಾಧ್ಯವಾಗಿರುವುದು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡರೆ 'ಬಿಲ್ಲು' ಹಿಡಿದವನು 'ಬಿಲ್ಲವ'ನಾದಂತೆಯೇ 'ಶಲ್ಯ' ಹಿಡಿದವನು 'ಶಾಲಿಯಾ' ಆಗುತ್ತಾನೆ ಎನ್ನಬಹುದು.

ಕಾಸರಗೋಡು ಪ್ರದೇಶದಲ್ಲಿ ಕೋಲ್ಕಳಿಯನ್ನು ಶಾಲಿಯರು ಮುಖ್ಯವಾಗಿ ತಮ್ಮ ದೇವಾಲಯಗಳಲ್ಲಿ ಆರಾಧನೆಯ ಅಂಗವಾಗಿ ಹಿಂದೆ ನಡೆಸುತ್ತಿದ್ದರು. ಮಂಜೇಶ್ವರ ನಗರದಲ್ಲಿ ಸುಮಾರು ಹತ್ತಿಪ್ಪತ್ತು ವರ್ಷಗಳ ಕೆಳಗಿನವರೆಗೂ ಇದು ಪ್ರಚಾರವಾಗಿತ್ತು. ಯುವಕರು, ಮುದುಕರೆನ್ನದೆ ಇವರು ಕೋಲಾಟ ನಡೆಸುತ್ತಿದ್ದರು. ಕೋಲಾಟದಲ್ಲಿ ಹೆಚ್ಚಾಗಿ ದೇವಸ್ತುತಿಗಳನ್ನೇ ಬಳಸುತ್ತಾರೆ. 'ನಾರಾಯಣಾ ನಾರಾಯಣಾ' ಎನ್ನುವ ನುಡಿಗಳು ಸಾಮಾನ್ಯವಾಗಿರುತ್ತದೆ.

ಹಿಂದೆಲ್ಲಾ ಒಂದು ಸಮುದಾಯಕ್ಕೆ ಸಂಬಂಧಪಟ್ಟ ದೇವಾಲಯದಲ್ಲಿ ಇನ್ನೊಂದು ಸಮುದಾಯದವರೂ ಸೇರಿಕೊಂಡು ಕೋಲಾಟವಾಡುವ ಸಂಪ್ರದಾಯವೂ ಇತ್ತು. ಈ ಕೋಲಾಟವು ಒಂದು ರೀತಿಯಲ್ಲಿ ಸೌಹಾರ್ದತೆಯನ್ನು ಬೆಳೆಸುವ ಒಂದು ಮಾಧ್ಯಮವೂ ಆಗಿತ್ತು. ಪೂರಕ್ಕಳಿ ಕೋಲಾಟದಂತಹ ಜನಪದ ನೃತ್ಯಗಳ ಮೂಲಕವಾಗಿ ಸಮುದಾಯ ಸೌಹಾರ್ದತೆಯನ್ನು ಅವರು ತಿಳಿಸಿಕೊಡುತ್ತಿದ್ದರು.

ಕೆಲವೊಮ್ಮೆ ಮದುವೆ ಮೊದಲಾದ ಸಮಾರಂಭಗಳಲ್ಲೂ ಕೋಲಾಟಗಳು ನಡೆಯುತ್ತಿದ್ದವು. ಕೋಲಾಟವಾಡುವ ನಿರ್ದಿಷ್ಟ ಸಂಘಗಳು ನಿರ್ದಿಷ್ಟ ಜಾತಿಗಳಲ್ಲಿ ಸಾಮಾನ್ಯವಾಗಿ ಇರುತ್ತಿತ್ತು. ಉಳಿದವರು ಅವರೊಂದಿಗೆ ಸೇರುತ್ತಿದ್ದವು.

# ಪಡಯೋಟ್ಟಂ

ದಕ್ಷಿಣದ ಕೆಲವು ಶಾಲಿಯಾ ತೆರುಗಳಲ್ಲಿ ಕಂಡು ಬರುವ ಜಾನಪದ ಕಲೆಗಳಲ್ಲೊಂದು ಪಡಯೋಟ್ಟಂ. ಇದನ್ನು "ಶಾಲಿಯಾ ರೂಟ್ಟ್" ಎಂದೂ ಹೇಳುತ್ತಾರೆ. ಯಾವುದೋ ಯುದ್ಧ ಕಾಲದಲ್ಲಿ ಸೈನ್ಯವೊಂದು ಓಡಿಹೋಗಿ ಯುದ್ಧಮಾಡಿ ಶತ್ರುಗಳನ್ನು ಓಡಿಸಿದುದರ ಸ್ಮರಣಾರ್ಥವಾಗಿ ಇದನ್ನು ಆಚರಿಸಲಾಗುತ್ತದೆ. (ಪಡ ಎಂದರೆ ಸೈನ್ಯ ಎಂದರ್ಥ. ಓಟ ಎಂದರೆ ಓಡುವುದು). ಶಾಲಿಯಾ ತೆರುಗಳನ್ನು ಆಕ್ರಮಿಸಲು ಬಂದ ಯಾವುದೋ ಶತ್ರುಗಳನ್ನು ತೆರುವಿನ ಜನರೆಲ್ಲರೂ ಸೇರಿಕೊಂಡು ಓಡಿಸಿದ್ದೇ ಈ ಕಲೆಗೆ ಮೂಲವಾಗಿರಬೇಕು. ಎಡಂಗ ಶಾಲಿಯರ ಕೆಲವು ತೆರುಗಳಲ್ಲಿ ಮಾತ್ರ ಇದನ್ನು ಆಡಲಾಗುತ್ತದೆ. ಆಬಾಲ ವೃದ್ಧರು ಇದರಲ್ಲಿ ಭಾಗವಹಿಸುವುದು ಒಂದು ವಿಶೇಷ.

ಕುಂಬಾರ ಸಮುದಾಯದವರೊಂದಿಗೆ ಯಾವುದೋ ಒಂದು ವಿಷಯದಲ್ಲಿ ನಡೆದ ಅಭಿಪ್ರಾಯ ವ್ಯತ್ಯಾಸವು ಘರ್ಷಣೆಯಲ್ಲಿ ಪರ್ಯವಸಾನವಾಯಿತೆಂದೂ, ಕುಂಬಾರರನ್ನೆದುರಿಸಿ ಪಡೆದುಕೊಂಡ ಜಯದ ಸಂಕೇತವಾಗಿ ಈ ಪಡಯೋಟ್ಟಂನ್ನು ನಡೆಸುತ್ತಾರೆ ಎಂದೂ ಐತಿಹ್ಯವಿದೆ.

ಈ "ಪಡಯೋಟ್ಟಂ"ನ್ನು ನಡೆಸುವ ರೀತಿ ವಿಶಿಷ್ಟವಾಗಿದೆ. ವಿವಿಧ ವೇಷಗಳನ್ನು ಹಾಕಿದ ಪುರುಷರು ಆಯಾ ಕ್ಷೇತ್ರದ ತೆರುವಿನ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಬಡಿಗೆಗಳನ್ನು ಹಿಡಿದು ಓಡುತ್ತಾರೆ. ಮಾಂಜಾಡ್ ಎರಿಂಞಿಕಲ್ ತೆರುಕ್ಷೇತ್ರದಲ್ಲಿ, ಆ ಕ್ಷೇತ್ರದಿಂದ ಆರಂಭಗೊಂಡು ನೀಲಿಯಾರ್ ಕೋಟೆಯವರೆಗೆ ಓಡುತ್ತಾರೆ. ಅಲ್ಲಿಂದ ಮರಳಿ ಬರುವಾಗ ಕ್ಷೇತ್ರದ ಬಳಿಯಿರುವ ನೀರ್ಕಾಲುವೆಯ ಬಳಿಯಿಂದ ಸಣ್ಣ ಹುಡುಗಿಯರು ಮಂಗಳದ್ರವ್ಯಗಳಿಂದ ಕೂಡಿದ ತಟ್ಟೆಗಳನ್ನು ಹಿಡಿದು (ತಾಲಿಪ್ಪೊಲಿ) ಅವರನ್ನು ಮೆರವಣಿಗೆಯಲ್ಲಿ ವೈಭವದಿಂದ ಕರೆತರುತ್ತಾರೆ. ತಳಿಪ್ಪರಂಬದ ಶಾಲಿಯಾ ಕ್ಷೇತ್ರದಲ್ಲಿ ವಿವಿಧ ವೇಷಗಳನ್ನು ಕಟ್ಟಿದ ಶಾಲಿಯರು ಆ ಕ್ಷೇತ್ರದಿಂದ ಮಾನೇಂಗಾವು ಕ್ಷೇತ್ರ (ತಳಿಪ್ಪರಂಬ ಕ್ಷೇತ್ರದ ಉಪಕ್ಷೇತ್ರ)ದ ವರೆಗೆ ಓಡುತ್ತಾರೆ. ಪೊರಾಟಿನಂತೆ ಇದೂ ಕೂಡಾ ಇತಿಹಾಸವೊಂದರ ಪುನರಭಿನಯ ಎಂದು ಹೇಳಬಹುದು. ಹಿಂದಿನ ಕಾಲದಲ್ಲಿ ಯುದ್ಧಗಳೂ, ಆಕ್ರಮಣಗಳೂ ಸಾಮಾನ್ಯವಾಗಿದ್ದವು ತಾನೇ ?

# ತ್ರಿಕ್ಕೂಟ್ಟಂ

ಬಲಂಗ ಶಾಲಿಯಾ ಕ್ಷೇತ್ರಗಳಲ್ಲಿ ಮಾತ್ರ ಆಚರಣೆಯಲ್ಲಿರುವ ಇನ್ನೊಂದು ಜಾನಪದ ಕಲೆ ತ್ರಿಕ್ಕೂಟ್ಟಂ. ಹಿಂದೆ ಶಾಲಿಯಾ ಕ್ಷೇತ್ರಗಳಲ್ಲಿ ತ್ರಿಕ್ಕೂಟಯಾಗ ಎನ್ನುವ ಮಹಾಯಾಗಗಳು ನಡೆಯುತ್ತಿದ್ದವು. ಈ ಯಾಗೋತ್ಪತ್ತಿಯ ಹಿಂದೆ ಕಥೆಯೊಂದು ಪ್ರಚಲಿತವಾಗಿದೆ. "ತ್ರಿಕ್ಕೂಟ ರಾಮಾಯಣ" ಎಂಬ ಗ್ರಂಥದಲ್ಲಿ ಇದು ಲಭ್ಯವಿದೆ ಎಂದು ಹೇಳಲಾಗಿದೆ. ಇದನ್ನು ಬರೆದ ಕವಿ ಯಾರೆಂದು ಇನ್ನೂ ತಿಳಿದುಬಂದಿಲ್ಲ. ಶಾಲಿಯಾರಿಗೇ ಈ "ಕಾವ್ಯ" ಪ್ರಧಾನವಾದುದರಿಂದ ಇದನ್ನು ಬರೆದವನು ಯಾರೋ ಶಾಲಿಯನೇ ಆಗಿರಬೇಕು ಎಂದು ಊಹಿಸಲಾಗುತ್ತದೆ.

ತ್ರಿಕ್ಕೂಟಯಾಗದ ಹಿಂದೆ ಪ್ರಚಲಿತವಿರುವ ಕಥೆಯು ತಮಿಳಿನ "ಪೆರಿಯ ಪುರಾಣ"ದಲ್ಲಿ ಬರುವ "ಭಕ್ತಸಿರಿಯಾಳ"ನ ಕಥೆಯನ್ನು ಬಹುಮಟ್ಟಿಗೆ ಹೋಲುತ್ತದೆ. "ಚೆರುತೊಂಡನ್" ಎನ್ನುವವನ ಹೆಸರಿನ ಮಗ "ಚೀರಾಳ" (ಸಿರಿಯಾಳನೇ ಚೀರಾಳನಾಗಿರಬೇಕು)ನೆಂದೂ, ಮಹಾಭಕ್ತನಾದ "ಚೆರುತೊಂಡನ್" ತನ್ನ ಮಗನಾದ "ಚೀರಾಳ"ನನ್ನು ಈಶ್ವರನಿಗೆ ಬೇಯಿಸಿ ಉಣಬಡಿಸಿದನೆಂದೂ, ಚೆರುತೊಂಡನ್‌ನ ಭಕ್ತಿಯಿಂದ ಸುಪ್ರೀತನಾದ ಈಶ್ವರನು ಆತನನ್ನು ಪುನಃ ಬದುಕಿಸಿದನೆಂದೂ ಈ ಕಥೆ ಹೇಳುತ್ತದೆ. ಈ ಸಂಭವದ ಪುನಃಸ್ಮರಣೆಗಾಗಿ ತ್ರಿಕೂಟಯಾಗವನ್ನು ನಡೆಸುತ್ತಿದ್ದರು ಎನ್ನಲಾಗಿದೆ. ಈ ಯಾಗದ ಸಂದರ್ಭದಲ್ಲಿ ಆರು ವಯಸ್ಸಿನ ಹುಡುಗನೊಬ್ಬನನ್ನು ಎಷ್ಟು ದಿನ ಯಾಗ ನಡೆಯವುದೋ ಅಷ್ಟು ದಿನ ಶಿವಲಿಂಗವನ್ನು ಹಿಡಿದು ಕುಳಿತುಕೊಳ್ಳಿಸಿ, ಅವನ ಕೈಯಲ್ಲಿ ಬೆತ್ತವನ್ನು ಕೊಡಲಾಗುತ್ತಿತ್ತಂತೆ. ಶಿವನನ್ನು ಪೂಜಿಸುವಂತೆ ಹುಡುಗನನ್ನೂ ಪೂಜಿಸುತ್ತಿದ್ದರಂತೆ. ಅರ್ಧ ಬೋಧಾವಸ್ಥೆಯಲ್ಲಿರುವ ಹುಡುಗನನ್ನು ಯಾಗದ ಕೊನೆಯಲ್ಲಿ ಬಲಿಕೊಡಲಾಗುತ್ತಿತ್ತೆಂದೂ, ಯಾಗವು ಫಲಿಸಿದರೆ ಹುಡುಗ ಮರುಜೀವಿಸುತ್ತಿದ್ದ ಎಂದೂ ಐತಿಹ್ಯವಿದೆ. ಯಾವುದೋ ಒಂದು ಯಾಗದಲ್ಲಿ ಹುಡುಗ ಯಾಗಾಂತ್ಯದ ಬಲಿಯ ನಂತರ ಪುನರ್ಜೀವಿಸಲಿಲ್ಲವಾದ ಕಾರಣ, ಆನಂತರ ಮಕ್ಕಳನ್ನು ಬಲಿಕೊಡುವುದು ನಿಂತುಹೋಯಿತೆಂದೂ, ಮಗುವಿನ ಬದಲಿಗೆ ಕುಂಬಳಕಾಯಿಯನ್ನು ಕಡಿಯುವ ಪದ್ಧತಿ ಬಂತೆಂದೂ ಹೇಳಲಾಗುತ್ತದೆ. (ಡಾಃ ಕೃಷ್ಣನ್ ಪಾತ್ಕಂ, ಕೇರಳ ಪದ್ಮಶಾಲಿಯಾ ಸಮುದಾಯಂ ಪುಟ ೮೪).

ಯಾಗ ಸಂದರ್ಭದಲ್ಲಿ ವಿವಿಧ ಪೌರಾಣಿಕ ವೇಷಗಳನ್ನು ಕಟ್ಟಿ ಅಭಿನಯಿಸಲಾಗುತ್ತಿತ್ತು. ಯಾಗಾಂತ್ಯದಲ್ಲಿ ಸಾಕ್ಷಾತ್ ಶಿವ ಪಾರ್ವತಿಯರೇ ಬಂದು ಅನುಗ್ರಹಿಸುತ್ತಾರೆ ಎಂದು ನಂಬಲಾಗಿತ್ತು. ಸುಮಾರು ಐವತ್ತು ವರ್ಷಗಳಿಂದ ಇದು ನಡೆಯುತ್ತಿಲ್ಲ. ಇದಕ್ಕಾಗಿ ಹಿಂದೆ ಬಹಳಷ್ಟು ವೆಚ್ಚ ತಗಲುತ್ತಿತ್ತೆಂದೂ, ಅದಕ್ಕಾಗಿಯೇ ಈ ಯಾಗ ನಡೆಸುವುದನ್ನು ನಿಲ್ಲಿಸಲಾಯಿತೆಂದೂ ಅಭಿಪ್ರಾಯವಿದೆ.

ಈ ಯಾಗದ ಸಂದರ್ಭದಲ್ಲಿ ವಿವಿಧ ಪೌರಾಣಿಕ ವೇಷಗಳನ್ನು ಕಟ್ಟಿ ಅಭಿನಯಿಸಲಾಗುತ್ತಿತ್ತಂತೆ. ಹಿಂದೆ ವೇಷ ಕಟ್ಟಲು ಉಪಯೋಗಿಸುತ್ತಿದ್ದ ವೇಷಭೂಷಣಗಳು ಈಗಲೂ ಅಟಿಕೋಕ್ಕಡು ಎನ್ನುವ ಶಾಲಿಯಾ ಕ್ಷೇತ್ರದಲ್ಲಿದೆ ಎನ್ನಲಾಗಿದೆ. ಕೇರಳದಲ್ಲಿ ಮರೆಯಾಗುತ್ತಿರುವ ಜಾನಪದ ಕಲೆಗಳಲ್ಲಿ ಇದು ಬಹಳ ಪ್ರಮುಖವಾದುದು. ಇಲ್ಲಿ ವೇಷ ಕಟ್ಟುವವರೂ, ಹಾಡುವವರೂ, ನಿರ್ದೇಶಿಸುವವರೂ, ಶಾಲಿಯರೇ, ಎನ್ನುವುದು ಗಮನಾರ್ಹ. ವಿವಿಧ ವೇಷಗಳು ರಂಗಕ್ಕೆ ಬರುವ ಮುನ್ನ ದೊಡ್ಡದಾದ ಕಾಲು ದೀಪವೊಂದನ್ನು ಸ್ಥಾನಿಕನು ಉರಿಸಿಡುತ್ತಾನೆ. ಅನಂತರ ದೀರ್ಘವಾದ ಸ್ತುತಿಗೀತೆಯನ್ನು ಹಾಡಲಾಗುತ್ತದೆ. ಇದಾದ ಮೇಲೆ ಯಾವುದಾದರೂ ಪುರಾಣಕಥೆ ಯೊಂದನ್ನು ಆರಿಸಿ ಹಾಡಲಾಗುತ್ತದೆ. ಮುಂದೆ ವಿವಿಧ ವೇಷ ಭೂಷಣಗಳೊಂದಿಗೆ ಪೌರಾಣಿಕ ಪಾತ್ರಗಳು ರಂಗದ ಮೇಲೆ ಬಂದು ಅಭಿನಯಿಸ ತೊಡಗುತ್ತವೆ. ಅದಕ್ಕೆ ತಕ್ಕಂತೆ ಹಿಂದಿನಿಂದ ಹಾಡಿನ ರೂಪದಲ್ಲಿ ಕಥೆಯನ್ನು ಹೇಳಲಾಗುತ್ತದೆ. ಕೃಷ್ಣಾವತಾರ, ರಾಮಾವತಾರ, ಕಿರಾತಾರ್ಜುನ, ಮಹಾಭಾರತದ ಭೀಮ, ಅರ್ಜುನ, ಚೇರಾಳ ಹೀಗೆ ಪಾತ್ರಗಳಿಗೆ ತಕ್ಕ ಕಥೆ ಹಾಡುಗಳು ಬರುತ್ತವೆ.

ಇದಕ್ಕೆ "ತ್ರಿಕೂಟ" ಎನ್ನುವ ಹೆಸರು ಬಂದಿರುವ ಬಗ್ಗೆ ಹಲವಾರು ಅಭಿಪ್ರಾಯಗಳಿವೆ. ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸಮಾನವಾಗಿ ಪರಿಭಾವಿಸುವ ಕಾರಣದಿಂದ ಈ ಹೆಸರು ಬಂತೆಂದೂ, ನೃತ್ಯ, ಸಂಗೀತ, ವಾದ್ಯ ಈ ಮೂರೂ ಸೇರಿದ ಕತೆ ಎನ್ನುವ ಅರ್ಥದಲ್ಲಿಯೂ ಈ ಹೆಸರನ್ನು ಬಳಸಲಾಗಿದೆ ಎಂದೂ ಅಭಿಪ್ರಾಯವಿದೆ.

ಶಾಲಿಯಾರ ಈ ಜಾನಪದ ಕಲೆಗಳನ್ನು ಅವಲೋಕಿಸಿದಾಗ, ವೇಷ ಕಟ್ಟುವುದು ಇವರಿಗೆ ಪ್ರಮುಖವಾದ ಮನರಂಜನೆಯಾಗಿತ್ತು ಎನ್ನುವುದರ ಅರಿವಾಗುತ್ತದೆ. ಶಾಲಿಯಾ ಪೊರಾಟ್, ಪಡಯೊಟ್ಟಂ, ತ್ರಿಕೂಟ್ಟಂ ಇಲ್ಲೆಲ್ಲಾ ವಿವಿಧ ವೇಷಗಳೇ ಪ್ರಧಾನವಾದುದು. "ಆಟವೇ" ಪ್ರಧಾನವಾಗಿರುವ ಈ ಜಾನಪದ ಕಲೆಗಳನ್ನು ಪಾವಿತ್ರ್ಯದ ದೃಷ್ಟಿಯಿಂದ ನೋಡಿದ್ದಾರೆ. ಎಲ್ಲಾ ಕಲೆಗಳೂ ಉದ್ಭವಿಸಿದ್ದೂ, ರೂಪುತಾಳಿದ್ದೂ, ಪ್ರದರ್ಶಿತಗೊಳ್ಳುತ್ತಿದ್ದದ್ದೂ ಕ್ಷೇತ್ರ ಪರಿಸರದಲ್ಲಿಯೇ ಎನ್ನುವುದು ಇದರ ವೈಶಿಷ್ಟ್ಯ. ಕ್ಷೇತ್ರಕ್ಕೂ ಶಾಲಿಯಾ ಸಮುದಾಯಕ್ಕೂ ಇರುವ ನಿಕಟ ಸಂಬಂಧ ಇದರಿಂದ ಸ್ಪಷ್ಟವಾಗುತ್ತದೆ.

ಹಿಂದಿನ ಕಾಲದಲ್ಲಿ ಆರಾಧನಾಲಯಗಳೇ ಮನರಂಜನಾ ಕೇಂದ್ರಗಳೂ ಆಗಿದ್ದವು. ದೈವೀಕತೆಯ ಬಣ್ಣವನ್ನು ಮನರಂಜನೆಗೆ ಹಚ್ಚಿ ಜನರನ್ನು ಕಲೋಪಾಸಕರಾಗಿ ಮಾಡುವ ಈ ತಂತ್ರವು ಜಾನಪದ ಕಲೆಗಾರರಲ್ಲಿ ಮಾತ್ರ ಕಂಡುಬರುತ್ತದೆ. ದೇವಾಲಯಕ್ಕೆ ಬರುವವರು ದೈವೋಪಾಸಕರಾಗುವುದರೊಂದಿಗೆ ಕಲಾರಾಧಕರೂ ಆಗಿ ಬೆಳೆದು ಬರಲು ಇದರಿಂದ ಸಾಧ್ಯವಾಗುತ್ತದೆ.

## ೪. ಚಾಲಿಯಕೆಣೆ — ಶಾಲಿಯರಿಗೆ ಸಂಬಂಧಿಸಿದ ಕಥೆಗಳು

ತೊಂದರೆಗಳಿಗೆ ಸಿಕ್ಕಿಕೊಂಡಾಗ ಬುದ್ಧಿವಂತನಾದವನು ಅದರಿಂದ ಏನಾದರೂ ಉಪಾಯವನ್ನು ಹೂಡಿ ತಪ್ಪಿಸಿಕೊಳ್ಳುವುದು ಸಹಜ. ಆದರೆ ಈ ಬುದ್ಧಿವಂತಿಕೆ ಎಲ್ಲರಲ್ಲೂ ಇರುವುದಿಲ್ಲ. ಕೆಲವರು ತಮಗೆ ಸಮಸ್ಯೆಗಳು ಎದುರಾದಾಗ ಅದನ್ನು ಮೌನವಾಗಿ ಸಹಿಸಿಕೊಂಡು ಹೋಗುತ್ತಾರೆ. ಅದರಿಂದ ಪಾರಾಗುವ ಆಲೋಚನೆಗಳು ಅವರಿಗೆ ಹೊಳೆಯದಿರುವುದೇ ಇದಕ್ಕೆ ಕಾರಣ. "ಜೀವನ" ಎನ್ನುವಾಗ ಅದು ಸಮಸ್ಯೆಗಳ ಆಗರವೆಂದೇ ಹೇಳಬೇಕು. ಅವುಗಳನ್ನೆದುರಿಸುತ್ತಾ ಅವುಗಳಿಂದ ಪಾರಾಗುವ ಬಗ್ಗೆ ಯೋಚಿಸುವುದರಲ್ಲೇ ಜೀವನವು ಕಳೆದುಹೋಗುತ್ತದೆ. ಆರ್ಥಿಕವಾಗಿ ಪ್ರಬಲರಾದ ಹಾಗೂ ಜಾತಿಯಿಂದ ಮೇಲ್ತರಗತಿಯಲ್ಲಿರುವವರಿಗಿಂತಲೂ, ಆರ್ಥಿಕವಾಗಿ ದುರ್ಬಲ ಹಾಗೂ ಜಾತಿಯಿಂದ ಕೆಳಸ್ತರದಲ್ಲಿರುವವನಿಗೆ ಇಂತಹ ಸಮಸ್ಯೆಗಳು ಅಧಿಕ ಎಂದೇ ಹೇಳಬೇಕು. ಅಂತಹ ಸಂದರ್ಭದಲ್ಲಿ ಆತ ಅದರಿಂದ ತಪ್ಪಿಸಿಕೊಳ್ಳುವ ಬಗ್ಗೆ ಹೆಚ್ಚು ಹೆಚ್ಚು ಜಾಗರೂಕನಾಗುತ್ತಾನೆ. ಇದೂ ಒಂದು ರೀತಿಯ ಪ್ರತಿಭೆ. ಈ ಸಮಯಬುದ್ಧಿ ಕೆಲವರಿಗೆ ಪರಂಪರಾಗತವಾಗಿ ಬರುವುದೂ ಇದೆ. ಬಹುಸೂಕ್ಷ್ಮವಾದ ಕೆಲಸ ಮಾಡುವವರ ಬುದ್ಧಿಯೂ ಚುರುಕಾಗಿರುತ್ತದೆ. ನೇಯ್ಗೆಯಂತಹ ಕಾಯಕದಲ್ಲಿ ಕಣ್ಣು, ಕೈ, ಕಾಲು ಎಲ್ಲವೂ ಚುರುಕಾಗಿಯೇ ಇರುವುದರಿಂದ ಸಹಜವಾಗಿಯೇ ಬುದ್ಧಿಯೂ ಚುರುಕಾಗಿಯೇ ಇರುತ್ತದೆ. ಈ ಚುರುಕಾದ ಸಮಯಬುದ್ಧಿಯನ್ನು ಗುರುತಿಸಿದಂತಹ ಅನ್ಯ ಸಮುದಾಯದವರು ಅದನ್ನೇ "ಚಾಲ್ಯಬುದ್ಧಿ", "ಚಾಲ್ಯಕ್ಕೆಣೆ", "ಶಾಲ್ಯಕ್ಕೆಣೆ" ಎಂದು ಹೇಳಿದ್ದಾರೆ. "ಕೆಣೆ" ಎಂದರೆ ಉಪಾಯ ಎಂದೇ ಅರ್ಥ. ಅದಕ್ಕೆ ಇನ್ನೊಂದು ಪರ್ಯಾಯ ನಾಮವಾಗಿ "ನರಿಬುದ್ಧಿ" ಎನ್ನುವುದು ಬಳಕೆಯಾಗುತ್ತದೆ. ಪ್ರಾಣಿಗಳಲ್ಲಿ ನರಿಯು ಉಪಾಯಕ್ಕೆ ಹೆಸರಾದುದು. ಜಾನಪದಲೋಕದಲ್ಲಿ "ನರಿಯ ಉಪಾಯ"ಕ್ಕೆ ವಿಶೇಷವಾದ ಸ್ಥಾನವಿದೆ. ಕಾಸರಗೋಡು ಭಾಗದಲ್ಲಿ ಶಾಲಿಯರಿಗೆ ಸಂಬಂಧಿಸಿದ ಇಂತಹ ಹಲವು ಕಥೆಗಳು ಪ್ರಚಾರದಲ್ಲಿವೆ. ಇವುಗಳಲ್ಲಿ ಬಹಳ ಪ್ರಸಿದ್ಧವಾದ ಕತೆಯೊಂದು ಹೀಗಿದೆ.

ಒಂದು ಬಾರಿ ಒಬ್ಬ ಶಾಲಿಯನು ಬಟ್ಟೆ ಮಾರಿ ಹಿಂದಿರುಗಿ ಬರುವಾಗ ದಾರಿಯಲ್ಲಿ ಕೆಲವು ಆಂಗ್ಲರು ಎದುರಾದರು. ಅದು ಆಂಗ್ಲರ ಅಧಿಕಾರದ ಕಾಲ. ಭಾರತೀಯರನ್ನು ಅಡಿಯಾಳುಗಳೆಂದೇ ಬಗೆದಿದ್ದ ಆಂಗ್ಲರು ಭಾರತೀಯರನ್ನು ಎಲ್ಲಿ ಕಂಡರೂ ಏನಾದರೊಂದು ಕೆಲಸವನ್ನು ಅವರಿಗೆ ಅಂಟಿಸುತ್ತಿದ್ದರು. ಇವನನ್ನು ಕಂಡಕೂಡಲೇ ಅವರು ತಮ್ಮ ಕೈಯಲ್ಲಿರುವ ಪೆಟ್ಟಿಗೆಗಳನ್ನು ಅವನ ಕೈಯಲ್ಲಿ ಹೊತ್ತು ಕೊಳ್ಳಲು ಕೊಟ್ಟರು. ಅದನ್ನು ಹೊತ್ತು ಸ್ವಲ್ಪ ದೂರ ನಡೆಯುವಾಗ ಅವನಿಗೆ ಆಯಾಸವಾಯಿತು. ಈ ತೊಂದರೆಯಿಂದ ಹೇಗಾದರೂ ತಪ್ಪಿಸಿಕೊಳ್ಳಬೇಕೆಂದು ಮನಸ್ಸಿನಲ್ಲಿಯೇ ಒಂದು ಉಪಾಯವನ್ನು ಆಲೋಚಿಸಿದನು. ಅಷ್ಟು

ಹೊತ್ತಿಗೆ ಅವರು ಒಂದು ವಿಶಾಲವಾದ ಮೈದಾನದ ಬಳಿಗೆ ಬಂದಿದ್ದರು. ಕೂಡಲೇ ಶಾಲಿಯನು ತನ್ನ ತಲೆಯಲ್ಲಿದ್ದ ಪೆಟ್ಟಿಗೆಯನ್ನು ಕೆಳಗಿಟ್ಟು, "ಸ್ವಾಮಿ, ಇದೊಂದು ವಿಶೇಷವಾದ ಸ್ಥಳ. ಹಿಂದೂಗಳಾದ ನಮಗೆ ಇಲ್ಲಿ ಒಂದು ಪದ್ಧತಿಯಿದೆ. ಅದೇನೆಂದರೆ ಈ ಸ್ಥಳಕ್ಕೆ ಬಂದವರು ಇಲ್ಲೊಂದು ಆಟವನ್ನಾಡಬೇಕು. ಅದಕ್ಕೆ ವಟ್ಟಕ್ಕಳಿ, ನೀಟ್ಟಕ್ಕಳಿ ಮತ್ತು ನಿಡುನೀಟ್ಟಂಕಳಿ ಎಂದು ಹೆಸರು. (ವಟ್ಟಂಕಳಿ ಎಂದರೆ ಸುತ್ತಲೂ ತಿರುಗುವ ಆಟ, ನೀಟ್ಟಕ್ಕಳಿ ಎಂದರೆ ಉದ್ದಕ್ಕೂ ಓಡುವ ಆಟ, ನಿಡುನೀಟ್ಟಕ್ಕಳಿ ಎಂದರೆ ಬಹಳ ದೂರಕ್ಕೆ ಓಡುವ ಆಟ) ಅದನ್ನು ಆಡದೇ ಇದ್ದರೆ ದೋಷವು ಪ್ರಾಪ್ತವಾಗುತ್ತದೆ. ದಯವಿಟ್ಟು ನೀವಿಲ್ಲಿ ಕುಳಿತುಕೊಳ್ಳಿ. ನಾನದನ್ನು ಆಡಿಬಿಡುತ್ತೇನೆ. ಮತ್ತೆ ನಾವು ಮುಂದಕ್ಕೆ ಹೋಗೋಣ" ಎಂದನು. ಇಂಗ್ಲೀಷರಿಗೂ ಸಂತೋಷವಾಯಿತು. ತಮಗೊಂದು ಪುಕ್ಕಟೆ ಮನರಂಜನೆ ಎಂದು ಭಾವಿಸಿದ ಅವರು ಅಲ್ಲೇ ಕುಳಿತರು. ಆತ ಆ ಬಯಲಿನಲ್ಲಿ ಸುತ್ತಲೂ ಓಡತೊಡಗಿದನು. ನಾಲ್ಕೈದು ಸುತ್ತು ಓಡಿದ ಮೇಲೆ, "ಸ್ವಾಮಿ ವಟ್ಟಕ್ಕಳಿ ಆಯಿತು ಇನ್ನು ನೀಟ್ಟಕಳಿ" ಎಂದು ಬಯಲಿನ ಉದ್ದಕ್ಕೆ ಸ್ವಲ್ಪ ಸ್ವಲ್ಪ ದೂರ ಓಡುತ್ತಾ ಐದಾರು ಬಾರಿ ಓಡಿ ಹಿಂದಿರುಗಿ ಬಂದನು. ಅನಂತರ, "ಸ್ವಾಮಿ ನೀಟ್ಟಕ್ಕಳಿ ಆಯಿತು ಇನ್ನು ನಿಡುನೀಟ್ಟಂಕಳಿ. ಇದಕ್ಕೆ ಇನ್ನೂ ದೂರ ಓಡಿ ಹಿಂದಿರುಗಿ ಬರಬೇಕು" ಎಂದು ಅವರ ಕಣ್ಣಿಗೆ ಕಾಣುವಷ್ಟು ದೂರ ಓಡಿ ಹಿಂದಿರುಗಿ ಬಂದನು. ಅನಂತರ ಓಡಿ ಹೋದವನು ಮರಳಿ ಬರಲೇ ಇಲ್ಲ. ಆತ ಬರುವನೆಂದು ಕಾದು ಸೋತು ಹೋದ ಬ್ರಿಟಿಷರು ಕೊನೆಗೊಮ್ಮೆ ತಾವು ಮೋಸ ಹೋದೆವು ಎಂದು ತಿಳಿದಾಗ, ತಮ್ಮ ಪೆಟ್ಟಿಗೆಯನ್ನು ತಾವೇ ಹೊತ್ತುಕೊಂಡು ನಡೆಯತೊಡಗಿದರು.

ಈ ಕತೆಯು ಅಲ್ಪಸ್ವಲ್ಪ ಪಾಠಾಂತರಗಳೊಂದಿಗೆ ಶಾಲಿಯಾ ಸಮುದಾಯದೆಡೆಯಲ್ಲೂ ಇತರ ಸಮುದಾಯಗಳಲ್ಲೂ ಪ್ರಚಲಿತವಿದೆ. ಅಂದಿನ ಆಂಗ್ಲರ ಅಹಂಕಾರಕ್ಕೆ ತಕ್ಕ ಶಾಸ್ತಿ ಮಾಡಿದ ಆತ ಸಮೂಹದ ಮಧ್ಯೆ ಒಬ್ಬ ವೀರನೆಂದೇ ಗುರುತಿಸಲ್ಪಟ್ಟಿರಬಹುದು.

ಕಥೆ ಎರಡು : ಹಿಂದಿನ ಕಾಲದ ಶಾಲಿಯರು ಹೆಚ್ಚಿನವರೂ ಬಡವರಾಗಿದ್ದರು. ಒಂದು ಹೊತ್ತಿನ ಊಟಕ್ಕೂ ಅವರಿಗೆ ಗತಿಯಿರಲಿಲ್ಲ. ಅಲ್ಲಿ ಇಲ್ಲಿ ಸಾಲ ತೆಗೆದುಕೊಂಡು ಜೀವಿಸುತ್ತಿದ್ದ ಆತ ನಿಜವಾದ ಅರ್ಥದಲ್ಲಿ "ಸಾಲಿಗ"ನೇ ಆಗಿದ್ದ. ಒಂದು ಬಾರಿ ಒಬ್ಬ ಶಾಲಿಯನು ಆ ಊರಿನ ಜಮೀನ್ದಾರನೊಬ್ಬನಿಂದ ಸಾಲವಾಗಿ ಸ್ವಲ್ಪ ಹಣ ಪಡೆದುಕೊಂಡನು. ಆದರೆ ಅವನಿಗೆ ಅದನ್ನು ಹಿಂತಿರುಗಿಸಲು ಸಾಧ್ಯವಾಗಲಿಲ್ಲ. ಜಮೀನುದಾರ ಅವನನ್ನು ಸಾಲ ಹಿಂತಿರುಗಿಸಲು ಎಲ್ಲಿ ಕಂಡರೂ ಒತ್ತಾಯಿಸುತ್ತಲೇ ಇದ್ದ. ಆಗೆಲ್ಲಾ ಯಾವುದಾದರೂ ಕಾರಣ ಹೇಳಿ, ಉಪಾಯದಿಂದ ಇವನು ತಪ್ಪಿಸಿಕೊಳ್ಳುತ್ತಿದ್ದ. ಕೋಪಗೊಂಡ ಜಮೀನುದಾರ "ಇನ್ನು ಇವನ ಕೈಯಿಂದ ನನಗೆ ಹಣ ಬರುವುದಿಲ್ಲ ಖಂಡಿತ. ಇವನ ಮನೆಯಲ್ಲಿಗುವ ಅಮೂಲ್ಯವಾದ

ಯಾವುದಾದರೂ ವಸ್ತುವನ್ನಾದರೂ ತರುವೆನೆಂದು" ನೇರವಾಗಿ ಶಾಲಿಯನ್ ಮನೆಗೆ ಬಂದ. ಅಲ್ಲಿ ಇಲ್ಲಿ ಹುಡುಕಿದ. ಅಲ್ಲಿ ಅಮೂಲ್ಯವಾದ ಯಾವ ವಸ್ತುವೂ ಅವನಿಗೆ ಕಾಣಲಿಲ್ಲ. ಶಾಲಿಯನು ಸುಮ್ಮನೇ ಕುಳಿತುಕೊಂಡು ಎಲ್ಲಾ ವಿದ್ಯಮಾನಗಳನ್ನು ಅವಲೋಕಿಸುತ್ತಾ, ಜಮೀನ್ದಾರನ ಉದ್ದೇಶವನ್ನರಿತು ಏನೂ ಅರಿಯದವನಂತೆ ಲಾಳಿಗೆ ಕರವೀರದ ಕಡ್ಡಿಯೊಂದನ್ನು ಸಿಕ್ಕಿಸುತ್ತಿದ್ದ. ಕೋಪಗೊಂಡ ಜಮೀನ್ದಾರನು, "ಇದೇನು ಮಾಡುತ್ತೀಯಾ" ಎಂದು ಕೇಳಿದಾಗ, "ನನ್ನ ಹೊಟ್ಟೆಪಾಡಿಗಾಗಿರುವ ಸಂಪಾದನೆಯ ಕೆಲಸ ಮಾಡುತ್ತಿರುವೆ" ಎಂದನು. ಜಮೀನ್ದಾರ ಮನಸ್ಸಿನಲ್ಲಿಯೇ, "ಬಹುಶಃ ಈ ಕಡ್ಡಿಯೇ ಇವನ ಜೀವನ ಮಾರ್ಗಕ್ಕೆ ಬಹಳ ಮುಖ್ಯವಾದ ವಸ್ತುವಾಗಿರಬಹುದು. ಅವನಿಗೆ ಅಮೂಲ್ಯವಾದ ಇದನ್ನು ಕೊಂಡೊಯ್ದರೆ, ಅನ್ಯದಾರಿಯಿಲ್ಲದೆ, ನನ್ನ ಹಣವನ್ನು ತಂದು ಕೊಡದೆ ಇರಲಾರ" ಎಂದು ಭಾವಿಸಿ, ಕೂಡಲೇ ಅವನ ಕೈಯಿಂದ ಆ ಕಡ್ಡಿಯನ್ನು ಸೆಳೆದುಕೊಂಡನು. ಶಾಲಿಯನು, "ಅಯ್ಯೋ ಸ್ವಾಮಿ, ನನ್ನ ಹೊಟ್ಟೆಗೆ ಹೊಡೆಯಬೇಡಿ. ಅದಿಲ್ಲದೆ ನನ್ನಿಂದೇನೂ ಆಗದು" ಎಂದು ಹೇಳಿದಾಗ, "ನನ್ನ ಹಣವನ್ನು ಹಿಂತಿರುಗಿಸುವವರೆಗೂ ನಾನಿದನ್ನು ನಿನಗೆ ಕೊಡುವುದಿಲ್ಲ" ಎಂದು ಹೇಳಿದವನೇ ಹಿಂದಿರುಗಿಯೂ ನೋಡದೆ ನಡೆದುಬಿಟ್ಟನು. ಜಮೀನ್ದಾರ ಕಣ್ಮರೆಯಾದ ಕೂಡಲೇ ಶಾಲಿಯನು ಮನಸ್ಸಿನಲ್ಲೇ ನಗುತ್ತಾ ಕರವೀರದ ಗಿಡದ ಇನ್ನೊಂದು ದಂಟನ್ನು ತೆಗೆದು ಲಾಳಿಗೆ ಸಿಕ್ಕಿಸಿ ನೇಯತೊಡಗಿದನು.

ಕಥೆ ಮೂರು : ನಾಯರ್ ಸಮುದಾಯದಲ್ಲಿ "ಎಡ ಇಲ್ಯಂ" ಎಂದು ಒಂದು ವಿಭಾಗವಿದೆ. ಅವರ ಕುಟುಂಬದವರು "ಶಾಲಿಯರು" ಎಂದು ಅಭಿಪ್ರಾಯವಿದೆ. ಅವರಿಗೆ ಮದುವೆಯ ಸಂದರ್ಭದಲ್ಲಿ ಶಾಲಿಯಾ ಸಮುದಾಯದವರು ಜತೆಗೇ ಬೇಕು. ನಾಯರ್ ಸಮುದಾಯದಲ್ಲಿ ಬಹಳ ಹಿಂದೆ ಬೀಗರ ಮನೆಗೆ ಮದುವೆ ನಿಶ್ಚಿತಾರ್ಥಕ್ಕೆ ಹೋದರೆ "ಅವರು ಕೊಟ್ಟದ್ದನ್ನೆಲ್ಲಾ ತಿನ್ನಲೇಬೇಕು" ಎಂಬ ಪದ್ಧತಿಯಿತ್ತು. ಇಂತಹ ಸಂದರ್ಭದಲ್ಲಿ ಈ "ಎಡಇಲ್ಯಂ" ನಾಯರ್‌ಗಳೊಂದಿಗೆ ಶಾಲಿಯರೂ ಹೋಗುತ್ತಿದ್ದರು. (ಶಾಲಿಯರು "ಹೊಟ್ಟೆಬಾಕರು" ಎಂದೂ ಅಭಿಪ್ರಾಯವಿದೆ) ಒಂದು ಬಾರಿ ಒಂದು ನಾಯರ್ ಕುಟುಂಬದವರು ನಿಶ್ಚಿತಾರ್ಥಕ್ಕೆ ಹೋಗುವಾಗ ಅವರೊಂದಿಗೆ ಶಾಲಿಯನೂ ಹೋಗಿದ್ದ. ಬೀಗರು ಎಲ್ಲಾ ತಿಂಡಿ ತಿನಿಸುಗಳೊಂದಿಗೆ ಒಂದು ದೊಡ್ಡ ಕುಂಬಳಕಾಯಿಯನ್ನೂ ತಂದಿಟ್ಟರು. ಇವರಿಗೆ ಏನು ಮಾಡಬೇಕೆಂದೇ ತೋಚಲಿಲ್ಲ. ಕೂಡಲೇ ಅವರೊಂದಿಗೆ ಬಂದಿದ್ದ ಶಾಲಿಯನಿಗೆ ಒಂದು ಉಪಾಯ ಹೊಳೆಯಿತು. ಅವನು ಕೂಡಲೇ ಆ ಮನೆಯವರಲ್ಲಿ "ಸ್ವಾಮಿ, ಕುಂಬಳಕಾಯಿಯ ಒಂದು ತುಂಡು ತಿಂದರೆ ಬುದ್ಧಿ ಹತ್ತು ಪಟ್ಟು ಹೆಚ್ಚುವುದಂತೆ. ನಿಮಗೆ ಈ ವಿಷಯ ಹೇಗೆ ಗೊತ್ತಾಯಿತು. ಬೇಗ ಒಂದು ಕತ್ತಿ ತನ್ನಿ, ನಮ್ಮ ಬುದ್ಧಿಯನ್ನು ನಾವು ಹೆಚ್ಚಿಸಿಕೊಳ್ಳುತ್ತೇವೆ. ಅನಂತರವೇ ಮುಂದಿನ ಯೋಚನೆ" ಎಂದನಂತೆ. ಕೂಡಲೇ ಒಳಗಿನಿಂದ ಕತ್ತಿ ತಂದುಕೊಟ್ಟ ಅವರು, "ಸರಿ, ಎಲ್ಲವನ್ನೂ

ನೀವೇ ತಿನ್ನಬೇಡಿ ನಮಗೂ ಕೊಡಿ" ಎಂದರಂತೆ. ಶಾಲಿಯನು ಕುಂಬಳಕಾಯಿಯನ್ನು ತುಂಡರಿಸಿ ಇಡುವುದಕ್ಕಿಂತಲೂ ಮೊದಲೇ ಅಲ್ಲಿದ್ದವರೆಲ್ಲಾ ನಾನು ಮುಂದೆ, ನಾನು ಮುಂದೆ... ಎಂದು ಆ ತುಂಡುಗಳನ್ನು ತೆಗೆದು ತಿಂದರಂತೆ. ಇವನಿಗೇನೂ ಉಳಿಯಲಿಲ್ಲ. ಆಗ ಅವನು, "ಕುಂಬಳಕಾಯಿಯ ಬುದ್ಧಿ ನಿಮ್ಮದಾಯಿತು. ನನ್ನ ಬುದ್ಧಿ ನನ್ನಲ್ಲೇ ಉಳಿಯಿತು" ಎಂದನಂತೆ. ಕುಂಬಳಕಾಯಿ ತಿಂದವರ ಮುಖ ಚೆಳ್ಳೇಹಣ್ಣು ತಿಂದ ಹಾಗಾಯಿತಂತೆ.

ಕಥೆ ನಾಲ್ಕು : ಓರ್ವ ದೊಡ್ಡ ಕತೆಗಾರನಿದ್ದನಂತೆ. ಅವನು ಹೇಳುವ ಕಥೆಯನ್ನು ಎಲ್ಲರೂ ನಂಬುತ್ತಿದ್ದರಂತೆ. ಅವನು ಹೇಳುವ ಕತೆಗಳನ್ನು ಪ್ರಶ್ನಿಸುವವರೇ ಇರಲಿಲ್ಲವಂತೆ. ಆದರೆ ತಾನು ಕತೆ ಹೇಳುವ ಸಮಯದಲ್ಲಿ ಶಾಲಿಯರು ಯಾರೂ ಇಲ್ಲ ಎನ್ನುವುದನ್ನು ಖಾತ್ರಿ ಪಡಿಸಿಕೊಂಡೇ ಕತೆ ಹೇಳುತ್ತಿದ್ದನಂತೆ. ಹೀಗಿರಲು ಒಂದು ಬಾರಿ ಆತ ಹಲವರನ್ನು ಸೇರಿಸಿ "ನಿಮಗೆಲ್ಲಾ ನಾನೊಂದು ಕತೆ ಹೇಳುತ್ತೇನೆ. ಇಲ್ಲಿ ಯಾರೂ ಶಾಲಿಯರು ಇಲ್ಲವಲ್ಲಾ" ಎಂದು ಕೇಳಿದ. ಯಾರೂ ಮಾತನಾಡಲಿಲ್ಲ. ಕತೆಗಾರ ಕತೆ ಹೇಳಲಾರಂಭಿಸಿದ. "ಒಂದು ದೊಡ್ಡ ಹೊಳೆ. ಆ ಹೊಳೆಗೆ ಮಡಿವಾಳನೊಬ್ಬ ತನ್ನ ಕತ್ತೆಯೊಂದಿಗೆ ಬಟ್ಟೆ ಒಗೆಯಲು ಹೋಗುತ್ತಿದ್ದ. ಆ ಹೊಳೆಯಲ್ಲೊಂದು ದೊಡ್ಡ ಮೀನು. ಆ ಮೀನು ಆಗಾಗ ಮೇಲೆ ಬರುವುದನ್ನು ಕಂಡ ಕತ್ತೆಗೆ ಅದನ್ನು ಹತ್ತಿರದಿಂದ ನೋಡಬೇಕೆಂದಾಯಿತು. ಕತ್ತೆ ನೀರಿನೊಳಗೆ ಹೋಯಿತು. ಮೀನನ್ನು ಕಂಡು ಹೊರಗೆ ಬಂದು ಅಗಸನಿಗೆ ವಿಷಯ ತಿಳಿಸಿತು. ಅಗಸ ಅದನ್ನು ಸತ್ಯವೆಂದೇ ನಂಬಿದ ... ಈಗ ನೀವೇನೆನ್ನುತ್ತೀರಿ" ಕಥೆಗಾರ ಪ್ರಶ್ನಿಸಿದ. ಯಾರೂ ಮಾತನಾಡಲಿಲ್ಲ. ಕೂಡಲೇ ಆ ಗುಂಪಿನ ಮಧ್ಯದಲ್ಲಿದ್ದವನು ಹೇಳಿದ, "ಈ ಸುಳ್ಳು ಕತೆಯನ್ನು ಹೇಳಿದವನು ಅದಕ್ಕಿಂತಲೂ ದೊಡ್ಡದೊಂದು ಕತ್ತೆ ಎನ್ನುತ್ತೇನೆ. ಅದನ್ನು ಕೇಳಿದ ಇಲ್ಲಿ ಇದ್ದವರಲ್ಲಿ ನನ್ನನ್ನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಕತ್ತೆಗಳು. ಯಾಕೆಂದರೆ ದೊಡ್ಡ ಕತ್ತೆ ಮಾತನಾಡುವಾಗ... ಉಳಿದ ಸಣ್ಣ ಕತ್ತೆ ಮಾತಾನಾಡುವುದಿಲ್ಲವಲ್ಲ. ನಾನೊಬ್ಬ ಮಾತ್ರ ಇಲ್ಲಿ ಮನುಷ್ಯ" ಎಂದ. ಕೂಡಲೇ ಕತೆಗಾರ, "ನಾನು ಮೊದಲೇ ಕೇಳಿದೆ, ಇಲ್ಲಿ ಯಾರಾದರೂ ಶಾಲಿಯರು ಇದ್ದಾರೆಯೇ ಎಂದು. ಈಗ ಗೊತ್ತಾಯಿತು. ಇಷ್ಟು ದಿನ ಇಲ್ಲಿ ಶಾಲಿಯರಿರಲಿಲ್ಲ. ಈಗ ಇಲ್ಲೊಬ್ಬ ಶಾಲಿಯಾ ಇದ್ದಾನೆ" ಎಂದು ಹೇಳಿದವನೇ ಅಲ್ಲಿಂದ ಹೊರಟು ಹೋದ.

ಸಮುದಾಯ (ಜಾತಿ) ವ್ಯವಸ್ಥೆಯಲ್ಲಿ ಒಂದು ಜಾತಿ ಇನ್ನೊಂದು ಜಾತಿಯನ್ನು ಅಪಹಾಸ್ಯ ಮಾಡುವಂತಹ ಮನೋವೃತ್ತಿ ಸಹಜವಾಗಿ ಇರುವಂತಹುದು. ಈ ಮನೋಭಾವದ ಹಿಂದಿನಿಂದಲೇ ಹಲವು ಕತೆಗಳು ಹುಟ್ಟಿಕೊಳ್ಳುತ್ತವೆ. ಅಂತೆಯೇ ಶಾಲಿಯರ ಉಪಾಯಕ್ಕೆ ಸಂಬಂಧಿಸಿದ ಕತೆಗಳೊಂದಿಗೆ, ಅವರನ್ನು ಪರಿಹಾಸ್ಯ ಮಾಡುವ ಕಥೆಗಳೂ ಕಾಸರಗೋಡು ಭಾಗದಲ್ಲಿ ಲಭ್ಯವಾಗುತ್ತವೆ.

೧)     ಶಾಲಿಯರ ಬಡತನಕ್ಕೆ ಒಂದು ಕಾರಣ, ಅದರ ಕಚ್ಚಾ ಸಾಮಾಗ್ರಿಯಾದ ನೂಲಿನ ಬೆಲೆ ಏರಿಕೆ. ದುಬಾರಿಯಾದ ನೂಲನ್ನು ತಂದು ಬಟ್ಟೆ ನೇಯ್ದು ಮಾರಾಟ ಮಾಡುವಾಗ ಬಟ್ಟೆಗಳ ಬೆಲೆಯನ್ನೂ ಏರಿಸಬೇಕು. ಅಂದಿನ ಕಾಲದಲ್ಲಿ ಸಮಾಜದಲ್ಲಿ ಬಡವರ ಸಂಖ್ಯೆಯೇ ಅಧಿಕವಾದುದರಿಂದ ದುಬಾರಿ ಬೆಲೆ ತೆತ್ತು ಬಟ್ಟೆ ಕೊಳ್ಳುವವರು ತೀರಾ ಕಡಿಮೆ. ಆಗ ಇವರು ನೇಯ್ದ ಬಟ್ಟೆ ಮಾರಾಟವಾಗದೆ ಉಳಿದುಬಿಟ್ಟು, ಹಸಿವಿನಿಂದ ಕಂಗಾಲಾಗಿ ಬಿಡುತ್ತಾರೆ. ಅಂತಹ ಸಂದರ್ಭದಲ್ಲಿ ತಾವು ನಂಬಿದ ದೈವಗಳ ನೆನಪು ಬರುತ್ತದೆ. ದೈವಗಳನ್ನು ತೃಪ್ತಿ ಪಡಿಸಿದರೆ, ನೂಲಿನ ಬೆಲೆ ಕಡಿಮೆಯಾಗಬಹುದು. ತಾವು ಬೆಳೆದ ಅಡಿಕೆಯನ್ನು ಮಾರಿ ನೂಲು ತರಬಹುದು ಎಂದು ಅವರು ಸಹಜವಾಗಿಯೇ ಭಾವಿಸುತ್ತಿದ್ದರು. ಹೀಗಿರಲು ಒಂದು ಬಾರಿ ಶಾಲಿಯರೆಲ್ಲಾ ಸೇರಿ ದೈವಗಳನ್ನು ಪ್ರೀತಿ ಪಡಿಸಲು "ಬೆಳಂಬು" (ದೈವಗಳಿಗೆ ಮಾಂಸಾಹಾರದ ಅಡಿಗೆ ಮಾಡಿ ಬಡಿಸುವುದು) ಮಾಡಿ, ಎಲ್ಲವನ್ನೂ ಬಡಿಸಿ, ಬಾಗಿಲು ಹಾಕಿ ಹೊರಗೆ ಬಂದು ಕುಳಿತರು. ತೆಂಗಿನ ಗರಿಗಳ ಚಾಪೆಯಿಂದ ತಯಾರಿಸಿದ ಮನೆಯಾಗಿತ್ತು ಅದು. ಸ್ವಲ್ಪ ಹೊತ್ತಿನಲ್ಲಿ ನಾಯಿಯೊಂದು ಮಾಂಸದ ವಾಸನೆ ಬಡಿದು ಮಡಲಿನ ಚಾಪೆಯನ್ನು ತೂರಿ ಒಳಬಂದು ಮಾಂಸವನ್ನು ತಿನ್ನತೊಡಗಿತು. ಹೊರಗೆ ಕುಳಿತ ಶಾಲಿಯರಿಗೆ ಒಳಗಿನಿಂದ ಎಲುಬು ತಿನ್ನುವ "ಕರುಮುರು" ಶಬ್ದ ಕೇಳತೊಡಗಿತು. ನಮ್ಮ ಮೇಲಿನ ಪ್ರೀತಿಯಿಂದ ನಮ್ಮ ಭಕ್ತಿಗೆ ಒಲಿದು ದೈವವೇ ಬಂದು ತಿನ್ನುತ್ತಿದೆ ಎಂದು ಬಗೆದ ಶಾಲಿಯರು, ಕುತೂಹಲದಿಂದ ದೈವವನ್ನೊಮ್ಮೆ ನೋಡಿಬಿಡೋಣವೆಂದು ತೆಂಗಿನ ಗರಿಗಳ ಮಧ್ಯದಿಂದ ಮೆಲ್ಲನೆ ಇಣುಕಿ ನೋಡಿದರು. ನಾಯಿಯನ್ನು ಕಂಡಂತಹ ಅವರು, ದೇವರೇ ನಾಯಿಯ ರೂಪದಿಂದ ಬಂದಿದೆ ಎಂದು ಭಾವಿಸಿ ಸಂಭ್ರಮಾತಿರೇಕದಿಂದ ಎಲ್ಲರೂ ಒಟ್ಟಾಗಿ ಈ ರೀತಿ ಪ್ರಾರ್ಥಿಸಿದರು :

"ನಾಲ್ಕು ಕಾಲುಗಳೂ ಒಂದು ಬಾಲವೂ ಇರುವ ದೈವಗಳೇ .....
ಅಡಿಕೆಗೆ ಬೆಲೆ ಕಡಿಮೆಯಾಗಲಿ
ನೂಲಿಗೆ ಬೆಲೆ ಏರಿ ಬಿಡಲಿ"

ಪ್ರಾರ್ಥಿಸುವ ಸಂಭ್ರಮದಲ್ಲಿ ಬಾಯಿತಪ್ಪಿ ದೈವದಲ್ಲಿ ಕೇಳಬೇಕಾದುದನ್ನು ತಿರುಗುಮುರುಗಾಗಿ ಕೇಳಿದ ಶಾಲಿಯರ "ಹೆಡ್ಡತನ"ವನ್ನು ಇಲ್ಲಿ ಅಪಹಾಸ್ಯ ಮಾಡಿದ್ದಾರೆ. ಶಾಲಿಯರು ಬುದ್ಧಿವಂತರು ಎನ್ನುವುದಕ್ಕೆ ವಿರೋಧವಾಗಿ ಈ ಕತೆ ಹುಟ್ಟಿರಬಹುದು. ಅದನ್ನು ಕೇಳಿದ ಶಾಲಿಯರು "ಅದು ನಮಗೆ ಹೇಳಿದ್ದಲ್ಲ ಪದ್ಮಶಾಲಿಯರಿಗೆ ಹೇಳಿದ್ದು "ಬೆಳಂಬು" ಕೊಟ್ಟದ್ದು ನಾವಲ್ಲ" ಎಂದು ತಪ್ಪಿಸಿಕೊಳ್ಳುತ್ತಾರೆ. ಇದೂ ಒಂದು ಶಾಲಿಯಾ ಬುದ್ಧಿ. ಒಳ್ಳೆಯದು ಏನಿದ್ದರೂ ಅದು ತನ್ನದು, ಕೆಟ್ಟದು ಏನಿದ್ದರೂ ಅದು ಪರರದು" ಎಂಬ ಭಾವನೆ ಮಾನವನಿಗೆ ಸಹಜ ತಾನೇ. ಈ ಕತೆಯು ಕೆಲವು ವರ್ಷಗಳ ಹಿಂದೆ ಸಮಾಜದಲ್ಲಿ ಬಹಳಷ್ಟು ಪ್ರಚಲಿತವಾಗಿತ್ತು.

ಈ ರೀತಿ ಮಾತನಾಡುವಾಗ ಬಾಯಿ ತಪ್ಪಿ ಬೇರೇನೋ ಹೇಳಿ ನಗೆಗೀಡಾಗುವುದು ಶಾಲಿಯರಲ್ಲಿ ಸಾಮಾನ್ಯ ಎನ್ನುವ ಹಾಗೇ ಇನ್ನೆರಡು ಕತೆಗಳೂ ಇವೆ. ಇವುಗಳಲ್ಲಿ ವಾಸ್ತವವೂ ಅಡಗಿವೆ ಎಂಬುದನ್ನು ಮರೆಯಬಾರದು.

೨) ಒಬ್ಬ ಶಾಲಿಯನಿಗೆ ಹಲವಾರು ತೊಂದರೆಗಳು ಎದುರಾದಂತೆ, "ಇದಕ್ಕೇನು ಪರಿಹಾರ" ಎಂದು ಆತ ಜ್ಯೋತಿಷಿಗಳಲ್ಲಿ ಕೇಳಿದನಂತೆ. ಜ್ಯೋತಿಷಿ ಎಲ್ಲವನ್ನೂ ಗುಣಿಸಿ ಲೆಕ್ಕಾಚಾರ ಹಾಕಿ, "ನಿನಗೆ ಭೂತದ ಉಪಟಳವಿದೆ. ಅದನ್ನು ತೃಪ್ತಿ ಪಡಿಸಲು ಕೋಲ ಕೊಡಬೇಕು" ಎಂದು ಹೇಳಿದ. ಅನ್ಯಮಾರ್ಗವಿಲ್ಲದೆ ಅಲ್ಲಿ ಇಲ್ಲಿ ಸಾಲ ಮಾಡಿ, ಕೋಲವನ್ನು ಕೊಡಿಸಿದ. ಕೋಲ ಕಟ್ಟಿ ಭೂತವನ್ನು ಆಡಿಸಲು, ಆ ಭೂತ ಸಹಜವಾಗಿಯೋ ಅವನಲ್ಲಿ, "ನನ್ನನ್ನೇಕೆ ಬರಮಾಡಿಕೊಂಡೆ" (ಕೋಲವನ್ನೇಕೆ ಕೊಟ್ಟೆ ಎಂಬರ್ಥದಲ್ಲಿ) ಎಂದು ಕೇಳಿತು. ತಲೆಯಲ್ಲಿ ಭೂತ ಕಟ್ಟಿಸಲು ತಾನು ಪಟ್ಟ ಕಷ್ಟಗಳೇ ತಿರುಗುತ್ತಿದ್ದಂತಹ ಶಾಲಿಯನು "ನನ್ನ ಕಷ್ಟ ಕಾಲದ ಪರಿಹಾರವಾಗಲಿಕ್ಕಾಗಿ" ಎನ್ನುವುದರ ಬದಲು, "ನನಗೆ ಕಷ್ಟಕಾಲಕ್ಕಾಗಿ ..." ಎಂದನಂತೆ....

೩) ಇದು ಸುಮಾರು ಐವತ್ತು ವರ್ಷಗಳ ಹಿಂದಿನ ಕತೆ. ಆಗಿನ ಕಾಲದಲ್ಲಿ ಕಾಸರಗೋಡಿನ ಶಾಲಿಯರನೇಕರು ಯಕ್ಷಗಾನದಲ್ಲಿ ಪ್ರಾವೀಣ್ಯತೆಯನ್ನು ಪಡೆದುಕೊಂಡವರಾಗಿದ್ದರು. ಆರಂಭದಲ್ಲಿ ಯಕ್ಷಗಾನ ತಂಡದ ಪೆಟ್ಟಿಗೆಯನ್ನು ಹೊರಲು ಸೇರುತ್ತಿದ್ದ ಅವರು ಸಹಜವಾಗಿಯೇ ಕಲೋಪಾಸಕರಾಗಿದ್ದ ಕಾರಣ ಹಾಗೂ "ಪೂರಕ್ಕಳಿ", "ಕೋಲ್ಕಳಿ"ಗಳನ್ನು ಆಡುತ್ತಿದ್ದುದರಿಂದ ಬಹಳ ಬೇಗ ಯಕ್ಷಗಾನದ ಹೆಜ್ಜೆಗಳನ್ನು ಕಲಿತು ದೊಡ್ಡ ಕಲಾವಿದರೂ ಆಗಿದ್ದರು. ಬಣ್ಣದ ಕುಟ್ಯಪ್ಪು, ಹಾಸ್ಯಗಾರ ಕುಞಂಬು, ಅಮರಖಂಡ ಅಯ್ಯಪ್ಪ ಅಂದಿನ ಯಕ್ಷಗಾನದ ದಿಗ್ಗಜರು. ಇವರಲ್ಲಿ "ಅಯ್ಯಪ್ಪ" ಎಂಬವರಿಗೆ "ಅಮರಖಂಡ" ಎಂಬುವ ಉಪನಾಮ ಸೇರಿಕೊಂಡದ್ದೂ ಒಂದು ಸ್ವಾರಸ್ಯಪೂರ್ಣ ಕತೆ. ಇದೂ ಬಾಯಿತಪ್ಪಿ ಬಂದ ಮಾತಿನಿಂದಲೇ ಬಂದಿದೆ. ಒಂದು ಬಾರಿ ರಂಗದ ಮೇಲೆ "ಅಯ್ಯಪ್ಪ" ದೇವೇಂದ್ರನ ಪಾತ್ರವನ್ನು ಹಾಕಿದ್ದರು. ಅದುವರೆಗೆ ಅವರು ಆ ಪಾತ್ರವನ್ನು ಮಾಡಿಯೂ ಇರಲಿಲ್ಲ. ಸಣ್ಣ ಪುಟ್ಟ ಇತರ ಪಾತ್ರಗಳನ್ನು ಮಾಡುತ್ತಿದ್ದರಷ್ಟೆ. ಇವರ ಪ್ರತಿಭೆಯನ್ನರಿತ ಯಕ್ಷಗಾನ ಮೇಳದ ನಾಯಕ ಅವರಿಗೆ ದೇವೇಂದ್ರನ ಪಾತ್ರವನ್ನು ಕೊಟ್ಟಿದ್ದರು. ಹಿರಿಯ ಪಾತ್ರವೊಂದು ದೊರೆತ ಸಂತೋಷ, ಸಂಭ್ರಮದಿಂದ ಅಯ್ಯಪ್ಪ ದೇವೇಂದ್ರನ ಓಲಗದಲ್ಲಿ ಕುಳಿತು "ಅಮರಾವತಿಗೆ ಯಾರೆಂದು ಹೇಳಬಲ್ಲಿರಾ" ಎಂದು ಹೇಳುವುದರ ಬದಲು, "ಅಮರಖಂಡಕ್ಕೆ ಯಾರೆಂದು ಹೇಳಬಲ್ಲಿರಾ" ಎಂದು ಹೇಳಿದರಂತೆ. ಅಂದಿನಿಂದ ಅವರಿಗೆ ಅದುವೇ ಉಪನಾಮವಾಗಿ ಸೇರಿಕೊಂಡಿತು ಎನ್ನುತ್ತಾರೆ.

ಇವುಗಳೊಂದಿಗೆ ಸಾಹಸದ ಕಥೆಗಳಾಗಿ ಶಾಲಿಯರ ಚರಿತ್ರೆಗಳಲ್ಲಿ ಸೇರಿ ಹೋದ ಕೆಲವರ ಕಥೆಗಳೂ ಶಾಲಿಯಾ ಸಮುದಾಯದ ನಡುವೆ ಇದೆ. ಸಾಮಾನ್ಯನಾದ ಓರ್ವ ಶಾಲಿಯ

ಇಡೀ ಪ್ರದೇಶವನ್ನೇ ಗಡಗಡ ನಡುಗಿಸುತ್ತಿದ್ದ ಮುಸ್ಲಿಂ ಪುಂಡನನ್ನು ಕಡಿದು ಕೊಂದು ಹಾಕಿ "ಜೀಮಂಕೊಲ್ಲಿ" (ಜೀವವನ್ನು ಕೊಲ್ಲುವವನು)ಯಾದ ಕತೆ. ಮನೆಯವರನ್ನೂ ಊರವರನ್ನೂ ನಡುಗಿಸುತ್ತಿದ್ದ ಪುಂಡನೂ ಕ್ರೂರನೂ ಆದ "ಕೋಲಾರ್ ಕೃಷ್ಣ"ನ ಕಥೆ. ಒಂದು ಕಠಾರ ಪಾಯಸವನ್ನೂ ಒಂದು ಮಣ ಬೆಲ್ಲವನ್ನೂ ತಿಂದು ಪಾರಿತೋಷಕವನ್ನು ಪಡೆದವನ ಕಥೆ. ಹೀಗೆ ಹಲವು ಕಥೆಗಳು ಇಲ್ಲಿ ಜಾನಪದ ಕಥೆಗಳ ರೂಪವನ್ನು ತಾಳುತ್ತಿವೆ. ನೂರು ವರ್ಷಗಳ ಕೆಳಗೆ ಕಾಸರಗೋಡಿನ ಉಳಿಯತ್ತಡ್ಕ ಬಾವುನ್ನೋರು ಎನ್ನುವ ಮಹಾನ್ ಮಾಂತ್ರಿಕನನ್ನು "ಗುಳಿಗನ" ಪರಮಭಕ್ತನಾಗಿದ್ದ ಕುಂಬಳೆಯ ಚೆಟ್ಯಾರ್ಚನೊಬ್ಬನು ಮಂತ್ರಸಕ್ತಿಯಿಂದ ಸೋಲಿಸಿದ ಕತೆಯೊಂದು ಜನರ ಬಾಯಿಯಲ್ಲಿ ಈ ರೀತಿಯಿದೆ :—

ಕುಂಬಳೆಯ ಶಾಲಿಯಾ ಕ್ಷೇತ್ರದ ಗುಳಿಗನಿಗೆ ಕಾರಣೀಕ ಜಾಸ್ತಿಯೆಂದು ನಂಬಿಕೆ. ನೂರು ವರ್ಷಗಳ ಕೆಳಗೆ "ಚೆಟ್ಯಾರ್ಚ" ಸ್ಥಾನದಲ್ಲಿದ್ದವರೊಬ್ಬರಿಗೂ ಗುಳಿಗನಿಗೂ ಅತ್ಯಂತ ನಿಕಟವಾದ ಸಂಬಂಧವಿತ್ತು. (ಆಗ ಸ್ಥಾನವು ಕುಂಬಳೆಯ ಪೇಟೆಯ ಬದಿಯಲ್ಲಿತ್ತು). ಚೆಟ್ಯಾರ್ಚ ಗುಳಿಗನನ್ನು ಸ್ಮರಿಸಿ ಏನನ್ನು ಪ್ರಾರ್ಥಿಸಿದರೂ ಅದನ್ನು ನಡೆಸಿಕೊಡುತ್ತಿದ್ದನಂತೆ. ಈಗ ಈ ಗುಳಿಗನನ್ನು "ಚೆಟ್ಯಾರ್ಚನ ಗುಳಿಗ" ಎಂದು ಹೇಳುವುದೂ ಇದೆ. ಆ ಕಾಲದಲ್ಲಿ ಕುಂಬಳೆಯ ಬಳಿಯ ಉಳಿಯತ್ತಡ್ಕ ಎಂಬಲ್ಲಿ "ಬಾವುನ್ನೋರು (ತಂತ್ರಿ) ಕುಟುಂಬದಲ್ಲಿ ಓರ್ವ ಮಂತ್ರವಾದಿ ಇದ್ದರಂತೆ. ಈ ಬಾವುನ್ನೋರಿಗೂ, ಚೆಟ್ಯಾರ್ಚನಿಗೂ "ನಾನು ಮೇಲು ತಾನು ಮೇಲು"ಎಂದು ಆಗಾಗ ಸ್ಪರ್ಧೆಯು ನಡೆಯುತ್ತಿತ್ತು. ಒಂದು ದಿನ ಬಾವುನ್ನೋರು ಚೆಟ್ಯಾರ್ಚನನ್ನು ವಿಚಾರಿಸಿಕೊಂಡು ಮನೆಗೆ ಬಂದಾಗ ಚೆಟ್ಯಾರ್ಚ ಇರಲಿಲ್ಲ. ಚೆಟ್ಯಾರ್ಚನ ಹೆಂಡತಿ ಕಲ್ಲಿನ ಮುಂದೆ ಕುಳಿತು ಅರೆಯುತ್ತಿದ್ದಳು. ಬಾವುನ್ನೋರು "ನೀನೇನು ಮಾಡುತ್ತೀಯಾ ?" ಎಂದು ಕೇಳಿದಾಗ "ನಾನು ಅರೆಯುತ್ತಿದ್ದೇನೆ" ಎಂದಾಕೆ ಒಳಗಿನಿಂದಲೇ ಉತ್ತರಿಸಿದಳು. ಅದಕ್ಕೆ ಆ ತಂತ್ರಿ "ಹಾಗಾದರೆ ನೀನು ಅರೆಯುತ್ತಾ ಇರು" ಎಂದು ಹೇಳಿ ಹೋದರು. ಮನೆಯೊಡತಿ ಚೆಟ್ಯಾರ್ಚ ಬರುವವರೆಗೂ ಅರೆಯುತ್ತಲೇ ಇದ್ದರು. ತುಂಬ ತಡವಾಗಿ ಬಂದ ಚೆಟ್ಯಾರ್ಚ "ನಾನು ಹೋಗುವಾಗಲೇ ನೀನು ಅರೆಯುತ್ತಿದ್ದೆ, ಏನಾಯಿತು?. ಇಲ್ಲಿಗೆ ಯಾರು ಬಂದಿದ್ದರು?" ಎಂದು ಪ್ರಸ್ನಿಸಿದಾಗ "ಬಾವುನ್ನೋರು ಬಂದಿದ್ದರು" ಎಂದಾಕೆ ಉತ್ತರಿಸಿದಳು. ಚೆಟ್ಯಾರ್ಚನಿಗೆ ಎಲ್ಲವೂ ಅರ್ಥವಾಯಿತು. "ಸಾಕು ಇನ್ನು ಏಳು" ಎಂದ ಕೂಡಲೇ ಮನೆಯಾಕೆ ಅರೆಯುವ ಕಲ್ಲನ್ನು ಬಿಟ್ಟು ಎದ್ದಳು.

ಮಾರನೆಯ ದಿನ ಚೆಟ್ಯಾರ್ಚ ಬಾವುನ್ನೋರರ ಮನೆಗೆ ಹೋದಾಗ ಬಾವುನ್ನೋರರ ಪತ್ನಿ ಹಾಲು ಕರೆಯುತ್ತಾ ಇದ್ದಳು. ಚೆಟ್ಯಾರ್ಚ ಬಾವುನ್ನೋರರನ್ನು ವಿಚಾರಿಸಿ, ಇಲ್ಲ ಎಂದು ತಿಳಿದು "ನೀವೇನು ಮಾಡುತ್ತೀರಿ?" ಎಂದು ಪ್ರಸ್ನಿಸಲು "ನಾನು ಹಾಲು ಕರೆಯುತ್ತೇನೆ" ಎಂಬ ಉತ್ತರವನ್ನು ಆಕೆ ಕೊಟ್ಟಳು. "ಹಾಗಾದರೆ ಅದನ್ನೇ ಮಾಡುತ್ತೀರಿ" ಎಂದು ಹೇಳಿ ಚೆಟ್ಯಾರ್ಚ

ಹೋದರು. ಆಕೆ ಬಾವುನ್ನೋರ್ ಬರುವವರೆಗೂ ಹಾಲು ಕರೆಯುತ್ತಲೇ ಇದ್ದಳು. ಈ ರೀತಿ ಆಗಾಗ ಇವರ ಮಧ್ಯೆ ನಡೆಯುತ್ತಲೇ ಇತ್ತು. ಮತ್ಸರ ಬೆಳೆಯಿತು. ಈ ಗುಳಿಗನಿಂದಾಗಿ ಚೆಟ್ಟ್ಯಾರ್ಚ ಸೊಕ್ಕಿದ್ದಾನೆ. ಆದುದರಿಂದ "ಈ ಗುಳಿಗನಿಗೆ ಮಂತ್ರವಾದದ ಮೂಲಕ ಶಕ್ತಿ ಕಡಿಮೆ ಮಾಡಬೇಕು" ಎಂದು ಬಾವುನ್ನೋರು ಮಂತ್ರಶಕ್ತಿಯಿಂದ ಅದನ್ನು ಕಡಿಮೆ ಮಾಡಲು ಪ್ರಯತ್ನಿಸಿದರು. ಚೆಟ್ಟ್ಯಾರ್ಚನಿಗೆ ಇದು ಗೊತ್ತಾಗಿ, ಅದಕ್ಕೆ ಪ್ರತಿಯಾಗಿ ಗುಳಿಗನನ್ನು ಪ್ರಾರ್ಥಿಸಿ ತಂತ್ರಿಗಳನ್ನು ಹುಲಿ ಹಿಡಿಯುವಂತೆ ಪ್ರಾರ್ಥಿಸಿದರು. ಹಾಗಾಗಿ ಬಾವುನ್ನೋರು ಹುಲಿಯಿಂದಾಗಿ ಸಾಯಬೇಕಾಗಿ ಬಂತು.

ಈ ಕತೆಯನ್ನು ಪುಷ್ಟೀಕರಿಸುವಂತೆ, ಸತ್ತು ಹೋದ ಆ ಬ್ರಾಹ್ಮಣನು ಬ್ರಹ್ಮ ರಾಕ್ಷಸನಾಗಿದ್ದಾನೆ ಎಂದು ಹೇಳುವ ಬ್ರಹ್ಮರಾಕ್ಷಸನ ಕಟ್ಟೆಯೊಂದು ಕುಂಬಳೆಯ ಸಾನದಲ್ಲಿದೆ. ಶಕ್ತಿ ಕಡಿಮೆಯಾದ ಗುಳಿಗನಿಗೆ ಪುನಃ ಶಕ್ತಿಯನ್ನು ತುಂಬಿಸಲಾಯಿತೆಂದೂ ವರ್ಷಂಪ್ರತಿ ಗುಳಿಗನ ಕೋಲವು ಈಗಿರುವ ನಾರಾಯಣ ಮಂಗಲದಲ್ಲಿ ನಡೆಯುವಾಗ ಕೋಲ ಕಟ್ಟಿದಾತನು ಆವೇಶದಿಂದ ಕುಂಬಳೆಯ ಕಡೆಗೆ ಓಡುವುದಿದೆಯೆಂದೂ, ಚೆಟ್ಟ್ಯಾರ್ಚ ಪದವಿಯವರು ಬಂದು ಪ್ರಾರ್ಥಿಸಿದರೆ ಮಾತ್ರ ಗುಳಿಗ ಶಾಂತನಾಗುತ್ತಾನೆಂದೂ ಸ್ಥಳೀಯರು ಹೇಳುತ್ತಾರೆ.

ಸಾಮಾನ್ಯ ಕತೆಯೊಂದು ಅಮಾನುಷ ರೂಪವನ್ನು ತಾಳಲು ಹೆಚ್ಚು ಕಾಲ ಬೇಡ. ಬಾಯಿಂದ ಬಾಯಿಗೆ ಹರಿದು ಬರುವಂತಹ ಇಂತಹ ದೈವಕ್ಕೆ ಸಂಬಂಧಿಸಿದ ಕತೆಗಳಂತೂ ಬಹಳ ಬೇಗ ಅಮಾನುಷತೆಯ ರೂಪವನ್ನು ತಾಳುತ್ತವೆ. ಹಾಗೇ ಈ ಕಥೆಯೂ ಈ ರೀತಿ ರೂಪಾಂತರವಾಗಿರಬಹುದು.

ಒಂದು ಸಮುದಾಯಕ್ಕೆ ಸಂಬಂಧಪಟ್ಟ ಹಾಗೆ ಒಳಗೂ ಹೊರಗೂ ಕತೆಗಳು ಸೃಷ್ಟಿಯಾಗುವಾಗ ಒಳಗಿನ ಕತೆಗಳು ವೈಭವೀಕರಣಗೊಂಡರೆ ಹೊರಗಿನ ಕತೆಗಳು ಸಾಧಾರಣೀಕರಣಗೊಳ್ಳುತ್ತವೆ. ಜಾನಪದ ಕತೆಗಳಲ್ಲಿ ಪಾಠಾಂತರಗಳು ದೊರಕಲು ಇದೇ ಮೂಲಕಾರಣವೆನ್ನಬಹುದು. ಸಮುದಾಯದ ಅಧ್ಯಯನವನ್ನು ಕೈಗೊಳ್ಳುವಾಗ ಅವುಗಳ ಹಿಂದಿನ ವಾಸ್ತವವನ್ನು ಮಧ್ಯಮ ಸ್ಥಿತಿಯಲ್ಲಿ ನಿಂತುಕೊಂಡು ನೋಡಬೇಕು. ಆ ಹಿನ್ನೆಲೆಯಲ್ಲಿ ಈ ಕತೆಗಳಿಂದ ಶಾಲಿಯಾ ಸಮುದಾಯದಲ್ಲೂ ಎಲ್ಲಾ ಸಮುದಾಯದಲ್ಲಿರುವಂತೆ ಕೆಲವರು ಬುದ್ಧಿವಂತರಿದ್ದರೆ, ಕೆಲವರು ಸಾಮಾನ್ಯರೂ ಇದ್ದರು ಎನ್ನುವುದರ ಅರಿವಾಗುತ್ತದೆ. ಕೆಳವರ್ಗದ ಕುಶಲ ವೃತ್ತಿಪರರಾದ ಜಾತಿಗಳೆಲ್ಲವೂ ಸಾಮಾನ್ಯವಾಗಿ ಚುರುಕು ಬುದ್ಧಿಯುಳ್ಳವರೇ ಎನ್ನುವುದು ಸ್ಪಷ್ಟವಾಗುತ್ತದೆ. ಸಮಾಜದಲ್ಲಿ ಯಾವುದೇ ಸಮುದಾಯವು ಪರಿಪೂರ್ಣ ಅಲ್ಲ. ಯಾವುದೇ ಸಮುದಾಯ ದೋಷವಿಲ್ಲದೆಯೂ ಇಲ್ಲ. ಮನುಷ್ಯ ನಿರ್ಮಿತವಾದ ಸಮುದಾಯವು ಮನುಷ್ಯನಂತೇ ದೋಷಪೂರ್ಣ. ಮೇಲು ಕೀಳು ಎಂಬ ಜಾತಿ ಭಾವನೆ ಎಲ್ಲಿಯವರೆಗೆ ಈ ಸಮಾಜದಲ್ಲಿ

ಬೇರು ಬಿಟ್ಟಿರುತ್ತದೋ ಅಲ್ಲಿಯವರೆಗೆ ದೋಷಗಳನ್ನು ಬೆಟ್ಟು ಮಾಡಿ ತೋರಿಸುವ, ತಮ್ಮನ್ನು ವೈಭವೀಕರಿಸುವ ಪ್ರಕ್ರಿಯೆ ಮುಂದುವರೆಯುತ್ತಲೇ ಇರುತ್ತವೆ. ನೂತನ ಕತೆಗಳು ಎರಡೂ ಕಡೆಯಿಂದಲೂ ಸೃಷ್ಟಿಯಾಗುತ್ತಲೇ ಇರುತ್ತವೆ. ಪ್ರತಿಯೊಂದು ಸಮುದಾಯವನ್ನೂ ಒಳಹೊಕ್ಕು ನೋಡಿದರೆ, ಅದೆಷ್ಟು ಇಂತಹ ಸ್ವಾರಸ್ಯವಾದ ಕತೆಗಳು ಹೊರಬೀಳಬಹುದೋ ಏನೋ. ಸಮುದಾಯದ ಅಧ್ಯಯನದೊಂದಿಗೆ ಅವುಗಳಿಗೆ ಸಂಬಂಧಿಸಿದ ಕತೆಗಳ ಅಧ್ಯಯನವೂ ಈ ದೃಷ್ಟಿಯಿಂದ ಅಗತ್ಯ ಎನ್ನಿಸುತ್ತದೆ. "ಜಾನಪದ ಕೋಶ"ದ ಬೆಳವಣಿಗೆಗೆ ಇವೂ ಪೂರಕವಾಗಬಹುದು.

# ಅಧ್ಯಾಯ - ೮

## ವೃತ್ತಿ ಜಾನಪದ

೧) ನೇಯ್ಗೆ ವೃತ್ತಿಯ ಪ್ರಾಚೀನತೆ

೨) ನೇಯ್ಗೆ ವೃತ್ತಿ ಹಾಗೂ ವಸ್ತ್ರ ಮಾರಾಟದ ವಿಧಿ ವಿಧಾನಗಳು

೩) ಇತ್ತೀಚೆಗಿನ ನೇಕಾರರ ಸಮಸ್ಯೆಗಳು ಹಾಗೂ ಪರಿಹಾರಗಳು

೪) ಕಾಸರಗೋಡು ಪ್ರದೇಶದಲ್ಲಿ ಬಳಕೆಯಾಗುವ ನೇಯ್ಗೆ ಸಾಮಾಗ್ರಿಗಳು

# ಅಧ್ಯಾಯ-೮

## ೧. ನೇಯ್ಗೆ ವೃತ್ತಿಯ ಪ್ರಾಚೀನತೆ

ಆದಿ ಮಾನವನು ತನ್ನ ನಗ್ನತೆಯನ್ನು ನಿವಾರಿಸಲು, ಎಲೆಗಳನ್ನೂ, ತೊಗಟೆಗಳನ್ನೂ ಬಳಸಿಕೊಂಡಿದ್ದನು ಎನ್ನುವುದನ್ನು ನಾವು ತಿಳಿದುಕೊಂಡಿದ್ದೇವೆ. ಈ ಎಲೆಗಳನ್ನೂ, ತೊಗಟೆಗಳನ್ನೂ, ಒಂದಕ್ಕೊಂದು ಹೆಣೆಯುವುದರಲ್ಲಿ ಆರಂಭಗೊಂಡ 'ಜೋಡಣಾ ಪ್ರಕ್ರಿಯೆಯು ನೇಯ್ಗೆ ಎಂದು ಕರೆಯಲ್ಪಟ್ಟು ಕ್ರಮೇಣ ನಾರುಗಳನ್ನು ಹೆಣೆದು ನಾರುಬಟ್ಟೆಯನ್ನು ತಯಾರಿಸುವ ಹಂತಕ್ಕೆ ಬಂತು. ಅಲ್ಲಿಂದ ಇಲ್ಲಿನ ಭೂಗುಣಕ್ಕೆ ಅನುಗುಣವಾಗಿ ಹತ್ತಿಯಿಂದ ನೂಲು ತಯಾರಿಸಿ, ಅದನ್ನು ಪರಸ್ಪರ ಜೋಡಿಸಿ ನೇಯುವಲ್ಲಿಯವರೆಗಿನ ನೇಯ್ಗೆ ಕಾಯಕದ ಪಥಕ್ರಮಣವು ಬಹಳ ದೀರ್ಘ ಕಾಲವನ್ನು ಹಿಡಿದುಕೊಂಡಿರುವ ಸಾಧ್ಯತೆಯಿದೆ. ಮುಂದೆ ರೇಶ್ಮೆ ಎಳೆಗಳನ್ನು ಬಳಸಿಕೊಂಡು ನಯವಾದ ರೇಶಿಮೆಯ ವಸ್ತ್ರ ಉತ್ಪಾದನೆಯು ಆರಂಭಗೊಂಡು ಕಾಲಕ್ರಮೇಣ ನೇಯ್ಗೆ ಉದ್ಯಮವು ಹಲವು ಹಂತಗಳನ್ನು ದಾಟಿ ಬಂದಿರುವುದನ್ನು ಕಾಣಬಹುದು. ಜೇಡ ಬಲೆ ನೇಯುವುದೂ, ಹಕ್ಕಿಗಳು ಗೂಡುಕಟ್ಟುವುದೂ ಮನುಷ್ಯನ ವಸ್ತ್ರ ನಿರ್ಮಾಣಕ್ಕೆ ಪ್ರೇರಣೆಯಾಗಿರಬಹುದು. ಒಂದೊಂದೇ ಎಳೆಗಳನ್ನು ಜೋಡಿಸಿ ನೇಯುವ ನೇಕಾರನಿಗೆ ಆರಂಭಕಾಲದಲ್ಲಿ ಒಂದು ಸೀರೆಯನ್ನು ನೇಯಬೇಕಿದ್ದರೆ ದಿನಗಟ್ಟಲೆ ಹಿಡಿದಿರಬಹುದು. ಅತಿಯಾದ ಸಹನೆ ಸೌಮ್ಯ ವ್ಯಕ್ತಿತ್ವಕ್ಕೆ ಮೂಲವಾದುದರಿಂದ ಆತನ ಉದ್ಯೋಗವು ಅವನನ್ನು ಸಹನಾಮೂರ್ತಿಯನ್ನಾಗಿಸಿತು ಎನ್ನಬಹುದು.

ಭಾರತದ ನೇಯ್ಗೆ ಉದ್ಯಮದ ಬೆಳವಣಿಗೆಯು ಸಿಂಧೂನದಿಯ ಸಂಸ್ಕೃತಿಯಷ್ಟೇ ಪುರಾತನವಾದುದಾಗಿದೆ. ಸಿಂಧೂ ಕಣಿವೆಯ ಉತ್ಖನನದ ಸಂದರ್ಭದಲ್ಲಿ ತಕಲಿಯಂತಹ ಸಾಮಾಗ್ರಿಯೊಂದು ದೊರೆತಿರುವುದು ಇದಕ್ಕೆ ಸಾಕ್ಷಿಯಾಗಿದೆ. ಇತಿಹಾಸಕಾರರಿಗೆ ದೊರೆತ ಕೆಲವು ಅವಶೇಷಗಳಿಂದ ಕಂಡು ಬರುವುದೇನೆಂದರೆ, ಅತೀ ಪ್ರಾಚೀನ ಸಂಸ್ಕೃತಿಯಾದ ಮೆಸೊಪೊಟೇಮಿಯಾದ ಉತ್ಕೃಷ್ಟ ಉಣ್ಣೆ ಬಟ್ಟೆಗಳಿಗೆ ಸಿಂಧೂನದಿ ತೀರದ ನೇಕಾರರು ಉತ್ತಮ ಹತ್ತಿ ಬಟ್ಟೆಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಪ್ರಾಚೀನ ಹಿಂದೂ ಧರ್ಮಶಾಸ್ತ್ರಗಳಲ್ಲಿ ಹತ್ತಿ ಬಟ್ಟೆಗಳ ವಿಷಯದ ಬಗ್ಗೆ ಸಾಕಷ್ಟು ಉಲ್ಲೇಖಗಳಿರುವುದು ಕಂಡುಬರುತ್ತದೆ. ಉದಾಹರಣೆಗೆ ವೇದದಲ್ಲಿ ಬರುವ ಹತ್ತಿಯ ಎಳೆಗಳಿಂದ ಮಾಡಿದ ಯಜ್ಞೋಪವೀತ. ಆರ್ಯರ ಆಗಮನಕ್ಕಿಂತ ಮುನ್ನ ದ್ರಾವಿಡರಲ್ಲಿದ್ದ ನಾಗರಿಕತೆಯನ್ನು ಡಾಕ್ಟರ್ ಕಾಲ್ಡ್ವೆಲ್ ಈ ರೀತಿಯಾಗಿ ಗುರುತು ಮಾಡಿದ್ದಾರೆ. "ಅವರಿಗೆ ಕೃಷಿಯಲ್ಲಿ ಒಳ್ಳೆಯ ಜ್ಞಾನವೂ ಯುದ್ಧದಲ್ಲಿ ಆದರವೂ ಇದ್ದವು. ಬಿಲ್ಲು, ಬಾಣ, ಈಟಿ, ಕತ್ತಿ ಎಂಬ ಆಯುಧಗಳೂ ನೂಲುವುದು, ನೇಯುವುದು, ಬಣ್ಣ ಹಾಕುವುದು ಮುಂತಾದ ಕೈಗಾರಿಕೆಗಳೂ ಇದ್ದವು." (ಆರ್ ನರಸಿಂಹಚಾರ್. ೧೯೭೪ ಪು.೪)

ಸಂಸ್ಕೃತದ ಆದಿಕಾವ್ಯವೆನಿಸಿದ ವಾಲ್ಮೀಕಿ ರಾಮಾಯಣದಲ್ಲಿ ಒಂದು ಸಂದರ್ಭ ಹೀಗಿದೆ:- ಕೈಕೆಯು ತಾನು ದಶರಥನಿಂದ ಪಡೆದ ವರದ ಮೇರೆಗೆ ರಾಮನನ್ನು ಕಾಡಿಗೆ ಅಟ್ಟುವಾಗ, ಉಡುವುದಕ್ಕಾಗಿ ನಾರುಬಟ್ಟೆಯನ್ನು ತಾನೇ ಎಲ್ಲರಿಗೂ ತಂದು ಕೊಡುತ್ತಾಳೆ. ರಾಮಲಕ್ಷ್ಮಣರು ತಮ್ಮ ದಿವ್ಯಾಂಬರಗಳನ್ನು ಕಳಚಿ ಈ ತಾಪಸ ವಸ್ತ್ರಗಳನ್ನು ಧರಿಸಿ ಸಿದ್ಧರಾಗುತ್ತಾರೆ. ಆಗ ಸೀತೆಯ ಸರದಿ ಬಂದಿತು.

ಅಥಾತ್ಮ ಪರಿಧಾನಾರ್ಥಂ ಸೀತಾ ಕೌಶೇಯವಾಸಿನೀತಿ

ಸುಪ್ರೇಕ್ಷ್ಯ ಚೀರಂ ಸಂತ್ರಸ್ತಾ ಪೃಷತೀ ವಾಗುರಾಮಿವ

"ಪಟ್ಟೆಯ ಸೀರೆಯನ್ನುಟ್ಟಿದ್ದ ಸೀತೆ ತನಗೆ ಸುತ್ತಿಕೊಳ್ಳುವುದಕ್ಕಾಗಿ ತಂದ ನಾರುಮಡಿಯನ್ನು ನಿಟ್ಟಿಸಿ, ಬಲೆಯನ್ನು ಕಂಡ ಜಿಂಕೆಯಂತೆ ಬೆದರಿದಳು." (ತೀ. ನಂ ಶ್ರೀಕಂಠಯ್ಯ. ೧೯೫೩ ಪುಟ. ೬೦) ರಾಮಾಯಣದ ಕಾಲದಲ್ಲೂ ಎಲ್ಲಾ ವಿಧದ ಬಟ್ಟೆಗಳೂ ಬಳಕೆಯಲ್ಲಿದ್ದುವು ಎಂಬುದನ್ನು ಇದು ಸೂಚಿಸುತ್ತದೆ.

ಮಹಾಭಾರತದ ಸಭಾಪರ್ವದಲ್ಲಿ ದ್ರೌಪದಿಯ ಸೀರೆಯನ್ನೆಳೆವ ಪ್ರಸಂಗವನ್ನು ವಿವರಿಸುತ್ತ ಪುರಂದರದಾಸರು ಹೀಗೆನ್ನುತ್ತಾರೆ.

ಎಳೆಯುತಿರ್ದನು ಖಳನು

ಬೆಳೆಯುತಿರ್ದುದು ಸೀರೆ

ಬಿಳಿಯ ಪೊಂಬಣ್ಣ ನಾನಾ ವಿಚಿತ್ರದ ಬಣ್ಣ

ಹೊಳಲುದುಂಬುವ ತೆರ

ದೊಳೆಳೆದೆಳೆದು ಪಾಪಾತ್ಮ

ಬಳಲಿ ಧರೆಯಲ್ಲಿ ಬಿದ್ದನು.....

(ದಾಸ ಸಾಹಿತ್ಯ ದರ್ಶನ: ೧೯[illegible]: ಪುಟ [illegible])

ಬಟ್ಟೆಗೆ ಬಣ್ಣವನ್ನು ಹಾಕಿ ರಂಗುರಂಗಾಗಿಸುವ ಕಲೆಯಲ್ಲಿ ಮಹಾಭಾರತದ ಕಾಲದ ನೇಕಾರರು ನಿಪುಣರಾಗಿದ್ದರು ಎಂಬುದು ಇದರಿಂದ ತಿಳಿಯುತ್ತದೆ.

ಗೀತೋಪದೇಶದ ಸಂದರ್ಭದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ದೇಹದ ಮೇಲಿನ ವ್ಯಾಮೋಹವನ್ನು ಬಿಡಬೇಕೆಂದು ಹೇಳುತ್ತಾ:

ವಾಸಾಂ ಜೀರ್ಣಾನಿ ಯಥಾ ವಿಹಾಯ

ನವಾನಿ ಗೃಹ್ಣಾತಿ ನರೋಽಪರಾಣಿ

ತಥಾ ಶರೀರಾಣಿ ವಿಹಾಯ ಜೀರ್ಣಾ

ನ್ಯನ್ಯಾನಿ ಸಂಯಾತಿ ನವಾನಿ ದೇಹೀ .....

([illegible])

"ಮನುಷ್ಯನು ಹಳೆಯ ಬಟ್ಟೆಗಳನ್ನು ಹೇಗೆ ಬಿಟ್ಟು ಬೇರೆ ಹೊಸ ವಸ್ತ್ರಗಳನ್ನು ತೆಗೆದುಕೊಳ್ಳುತ್ತಾನೋ ಹಾಗೆಯೇ ದೇಹವನ್ನು ಹೊಂದಿರುವ ಆತ್ಮನು ಜೀರ್ಣವಾದ ಶರೀರಗಳನ್ನು ಬಿಟ್ಟು ಬೇರೆ ಹೊಸ ಶರೀರಗಳನ್ನು ಹೊಂದುತ್ತಾನೆ." ಎಂದು ಬೋಧಿಸುತ್ತಾನೆ. (ಗೀತೋಪದೇಶ : ಅಧ್ಯಾಯ ೩) ಇಲ್ಲಿ ದೇಹವನ್ನು ಬಟ್ಟೆಗೆ ಹೋಲಿಸಿರುವುದು ಅರ್ಥಪೂರ್ಣವಾಗಿದೆ.

ಪ್ರಾಚೀನ ಕಾಲದಿಂದಲೇ ಬೆಳೆದುಬಂದ ಮೂಲಜಾತಿಗಳಲ್ಲಿ ನೇಕಾರ ಜಾತಿ ಪ್ರಥಮ ಸ್ಥಾನದಲ್ಲಿದೆ. ಮಾನವನು ಸೃಷ್ಟಿಯಾದ ಪ್ರಥಮದಲ್ಲಿ ತನ್ನ ಜೀವಿತಾಧಾರಕ್ಕಾಗಿ ಪ್ರಕೃತಿಯಲ್ಲಿ ದೊರೆಯುತ್ತಿದ್ದ ಗೆಡ್ಡೆ,ಗೆಣಸು, ಹಣ್ಣು, ಹಂಪಲುಗಳನ್ನು ತಿಂದು ಬದುಕುತ್ತಿದ್ದ. ಆದರೆ ಪ್ರಕೃತಿಯ ವೈಪರೀತ್ಯಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ವಿಧ ವಿಧ ಜಾತಿಯ ದೇಹ ಸಂರಕ್ಷಣಾ ಸಾಧನಗಳನ್ನು ತಯಾರಿಸಿಕೊಳ್ಳುತ್ತಿದ್ದ. ಇದು ವಸ್ತ್ರ ನಿರ್ಮಾಣದ ಮೊದಲ ಹಂತವೇ ಹೌದು.

ಹೀಗೆ ಎಲೆಗಳು, ಚರ್ಮಗಳು, ಮರದ ತೊಗಟೆಗಳು ಆರಂಭದಲ್ಲಿ ದೇಹವನ್ನು ಸುತ್ತುವ ಸಾಧನಗಳಾಗಿ ಬಳಸಲ್ಪಟ್ಟು, ಕ್ರಮೇಣ ಮಾನವ ನಾಗರಿಕನಾಗುತ್ತಾ ಬರುತ್ತಿರುವಂತೆ, ಈ ಉದ್ಯಮದಲ್ಲಿ ಕುಶಲತೆಯೂ, ನಯಗಾರಿಕೆಯೂ, ವೈಶಿಷ್ಟ್ಯತೆಯೂ, ವಿಭಿನ್ನತೆಯೂ, ರೂಪಾಂತರವೂ ಕಂಡುಬಂದವು.

ವಸ್ತ್ರೋದ್ಯಮದ ಇತಿಹಾಸವನ್ನು ಶೋಧಿಸಲು ಹೊರಟವರಿಗೆ ಅವಶೇಷಗಳು ಸಿಗದೇ ಹೋಗಿದ್ದರೂ, ಇದಕ್ಕೆ ಬಹಳಷ್ಟು ಪ್ರಾಚೀನತೆ ಇದೆ ಎನ್ನುವುದನ್ನು ಒಪ್ಪಿ ಕೊಳ್ಳಲೇಬೇಕು. ನೇಕಾರಿಕೆಗೆ ಸಂಬಂಧಪಟ್ಟ ವಸ್ತುಗಳು ಹೆಚ್ಚು ಕಾಲ ಬಾಳುವಂತಹದ್ದಲ್ಲದ ಕಾರಣದಿಂದ ಅವುಗಳು ಕಾಲಚಕ್ರದ ಅಡಿಗೆ ಸಿಲುಕಿ ನಶಿಸಿಹೋಗಿರುವ ಸಾಧ್ಯತೆಗಳೇ ಹೆಚ್ಚು.

ಇತಿಹಾಸವನ್ನು ಅವಲೋಕಿಸುವಾಗಲೂ ವಸ್ತ್ರೋದ್ಯಮಕ್ಕೂ ತನ್ನದೇ ಆದ ಇತಿಹಾಸವಿರುವುದು ಕಾಣುತ್ತದೆ. ಹತ್ತಿಯನ್ನು ಬಳಸಿಕೊಂಡು ಬಟ್ಟೆಯನ್ನು ಉತ್ಪಾದಿಸಿದವರಲ್ಲಿ ಭಾರತೀಯರೇ ಮೊದಲಿಗರೆಂಬುದರಲ್ಲಿ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯವಿಲ್ಲ. ಕ್ರಿ.ಪೂ. ೧ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಭಾರತದ ಹತ್ತಿ ಬಟ್ಟೆಗಳ ಉತ್ಪಾದನೆಯು ಪ್ರಪಂಚದ ಆಶ್ಚರ್ಯಗಳಲ್ಲಿ ಒಂದಾಗಿತ್ತು. ಭಾರತೀಯರ ಅಸ್ತಿತ್ವದ ಮೂಲದಿಂದ ವಿವೇಚನೆ ಮಾಡಿದಾಗ ಅವರು ಎಂದೂ ಬತ್ತಲೆಯಾಗಿದ್ದುದು ಕಂಡುಬರುವುದಿಲ್ಲ. ಅವರು ನೇಯ್ದ ಬಟ್ಟೆಗಳಿಗೆ ಶತಮಾನಗಳುದ್ದಕ್ಕೂ ಬೇಡಿಕೆಯಿತ್ತು. ನೂಲನ್ನು ಕಳ್ಳತನಮಾಡುವ ಜನರಿಗೆ ದಂಡ ವಿಧಿಸುವ ವಿಷಯವು ಕ್ರಿ.ಪೂ. ೩೦೦ ರಲ್ಲಿಯ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿದಿತವಾಗಿದೆ. ಪ್ರಾಚೀನ ಮಾಸ್ಕಿ ಜವಳಿ ಕೇಂದ್ರವಾದ ಮತ್ತು ರೇಶ್ಮೆ ವಸ್ತ್ರಗಳಿಗೆ ಹೆಸರಾದ ಬನಾರಸದ ಮಸ್ಲಿನ್ ಬಟ್ಟೆಗಳನ್ನು ಬುದ್ಧನ ಶವವನ್ನು ಸುತ್ತಿಡಲು ಬಳಸಿರುವುದು ಇನ್ನೊಂದು ಉಲ್ಲೇಖ. (ಕುರಗ್ಗ ಪುಸ್ತ ೧೧೩ ಪುಟ)

ದಿಲ್ಲಿಯಲ್ಲಿ ಮೊಗಲ ಬಾದಶಹ ಔರಂಗಜೇಬನ ದರ್ಬಾರು ನಡೆಯುವಾಗ ಅವನ ಮಗಳು ಜೇಬುನ್ನೀಸಳು ಸಭೆಗೆ ಬಂದಾಗ ಸಭಿಕರೆಲ್ಲರು ಅವಳೆಡೆಗೆ ಆಶ್ಚರ್ಯದಿಂದ ನೋಡಿದರಂತೆ. ಔರಂಗಜೇಬ ಕೋಪದಿಂದ ಕಿಡಿ ಕಿಡಿಯಾದನಂತೆ. ಇದೆಲ್ಲದಕ್ಕೂ ಕಾರಣ ಅವಳು ಧರಿಸಿದ್ದ ಬಟ್ಟೆಯೇ ಆಗಿತ್ತು. ಆಕೆ ಒಂದರ ಮೇಲೊಂದರಂತೆ ಏಳು ಸುತ್ತು ಸುತ್ತಿಕೊಂಡಿದ್ದಾಗಲೂ ಪಾರದರ್ಶಕವಾದ ಢಾಕಾ ಮಸ್ಲಿನ್ ಬಟ್ಟೆ ಅವಳ ಅಂಗಾಂಗಗಳನ್ನು ಸ್ಪಷ್ಟವಾಗಿ ಪ್ರದರ್ಶಿಸಿತ್ತು.

ಅತೀ ಹಗುರವಾದ ಮಸ್ಲಿನ್ ಬಟ್ಟೆಗಳೂ, ಅತೀ ಮನೋಹರವಾದ ಹತ್ತಿಯ ಬಟ್ಟೆಗಳೂ, ಬಣ್ಣ ಹಾಕಿದ ಸೀರೆಗಳೂ, ರೇಷ್ಮೆಯ ನಯವಾದ ಕುಸುರಿಯಿಂದ ಕೂಡಿದ ವಸ್ತ್ರಗಳೂ ಭಾರತದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ನಿರ್ಮಾಣವಾಗುತ್ತಿದ್ದವು. ಭಾರತೀಯರ ವಸ್ತ್ರೋದ್ಯಮದ ಕುಶಲತೆಯೇ ಪಾಶ್ಚಾತ್ಯರನ್ನು ಭಾರತದ ಕಡೆಗೆ ಆಕರ್ಷಿಸಿತು ಎಂದು ಹೇಳಬಹುದು. ಅತ್ಯಂತ ಮನಮೋಹಕವಾದ ಸೀರೆಗಳು ಕೇವಲ ಇಪ್ಪತ್ತು ಮೂವತ್ತು ಅಡಿ ಉದ್ದವೂ ಏಳೆಂಟು ಅಡಿ ಅಗಲವೂ ಇರುವ ಸಣ್ಣ ಗುಡಿಸಲುಗಳ ಒಳಗೆ ನಿರ್ಮಾಣವಾಗುತ್ತಿದ್ದವು. ಅದಕ್ಕೆ ಬಳಸುವ ಉಪಕರಣಗಳೂ ಬಹಳ ಸರಳವಾದವುಗಳು. ಒಬ್ಬನು ಹೊತ್ತುಕೊಂಡು ಹೋಗಲು ಸಾಧ್ಯವಾಗುವಂತಹುದು. ಗ್ರೀಕರು ಮತ್ತು ರೋಮನರು ಭಾರತದ ಬಟ್ಟೆಗಳಿಗೆ ಹಾತೊರೆಯುತ್ತಿದ್ದರು. ರೋಮನ್ ಸಾಮ್ರಾಜ್ಯವು ಭಾರತದ ಬಟ್ಟೆಗಳಿಗೆ ತನ್ನಲ್ಲಿರುವ ಎಲ್ಲಾ ಬಂಗಾರವನ್ನು ಕೊಟ್ಟು ಅದು ದಿವಾಳಿಯೆದ್ದಿತು ಎಂದು ರೋಮ್‌ನ ಪ್ರಾಚೀನ ಲೇಖಕ ಪ್ಲಿನಿ ಹೇಳಿದ್ದಾನೆ (ಈರಣ್ಣ ಹಟ್ಟಿ ೧೯೮೭:ಪುಟ ೩)

ವಿಜಯನಗರದ ಅರಸರ ಕಾಲದಲ್ಲಿ ಕಲ್ಲಿಕೋಟೆಯು ಮುಖ್ಯ ಬಂದರಾಗಿತ್ತು. ಕಲ್ಲಿಕೋಟೆಯಿಂದ ಸುಮಾರು ೧೬೭ ಮೈಲಿಗಳ ದೂರದಲ್ಲಿ ಕೊಯಮುತ್ತೂರು ಇದೆ. ಇದು ಹತ್ತಿಯ, ರೇಷ್ಮೆಯ ತಯಾರಿಕೆಗೆ ಬಹುದೊಡ್ಡ ಕೇಂದ್ರವಾಗಿತ್ತು. ಗೋವಾದಲ್ಲಿ ಅತ್ಯಂತ ನಯವಾದ ಬಟ್ಟೆ ತಯಾರಾಗುತ್ತಿತ್ತು. ಇವುಗಳ ರಫ್ತು ಕಲ್ಲಿಕೋಟೆ ಮತ್ತು ಪಶ್ಚಿಮದ ಕನ್ನಡ ಕರಾವಳಿಯ ಬಂದರುಗಳ ಮೂಲಕ ನಡೆಯುತ್ತಿತ್ತು. (ಕರ್ನಾಟಕದ ಪರಂಪರೆ : ೧೯೭೦ : ಪುಟ : ೧೦೮)

“ನೇಕಾರ ವೃತ್ತಿಯ ಪ್ರಾಚೀನ ವೈಭವ” ಎನ್ನುವ ಶೀರ್ಷಿಕೆಯಲ್ಲಿ ಡಾ. ಸೂರ್ಯನಾಥ ಕಾಮತ್ ಹೀಗೆ ಬರೆಯುತ್ತಾರೆ. ಪ್ರಾಚೀನ ಕಾಲದಿಂದಲೇ ಭಾರತವು ಕೈಮಗ್ಗದ ವಸ್ತ್ರೋತ್ಪಾದನೆಯಲ್ಲಿ ಹೆಸರಾಗಿತ್ತು. ೨,೫೦೦ ವರ್ಷಗಳ ಹಿಂದೆ ಇದ್ದ ಗ್ರೀಕ್ ಇತಿಹಾಸಕಾರ ಹೆರೊಡೊಟಸ್ “ಭಾರತದಲ್ಲಿ ಒಂದು ವಿಧದ ಉಣ್ಣೆಯನ್ನು ಮರದ ಮೇಲೆ ಬೆಳೆಯುತ್ತಾರೆ. ಇದು ಕುರಿಯ ಉಣ್ಣೆಗಿಂತಲೂ ನವಿರಾಗಿದೆ” ಎಂದಿದ್ದಾನೆ. ಭಾರತದ ಬಟ್ಟೆಗೆ ವಿದೇಶದಲ್ಲಿ ಎಷ್ಟು ಬೇಡಿಕೆ ಇತ್ತೆಂದರೆ, “ರೋಮನ್ ಸಾಮ್ರಾಜ್ಯದಲ್ಲಿ ಹೆಂಗಸರ ಮಿತಿಮೀರಿದ ಭಾರತದ ಬಟ್ಟೆ ಮತ್ತು ಮುತ್ತುಗಳ ಬಗ್ಗೆ ಬೆಳೆದ ಮೋಹದಿಂದಾಗಿ ರೋಮಿನ ಸಂಪತ್ತು

ಪ್ರವಾಹದಂತೆ ಭಾರತಕ್ಕೆ ಹರಿದುಹೋಗುತ್ತದೆ,” ಎಂದು ರೋಮನ್ ಬರಹಗಾರ ಪ್ಲೀನಿ ಹೇಳಿದ್ದಾನೆ. ವೇದಗಳಲ್ಲಿ ನೇಕಾರರನ್ನು 'ವಾಯ' ಎಂದೂ ಮಗ್ಗವನ್ನು 'ವೇಮನ' ಎಂದೂ ಕರೆದಿದೆ. ಕೌಟಿಲ್ಯನು ನೇಕಾರ 'ಶ್ರೇಣಿ' ಗಳ ಬಗ್ಗೆ ಹೇಳಿದ್ದು, ಈ ಶ್ರೇಣಿಯ ಮುಖ್ಯನನ್ನು 'ಸೂತ್ರಾಧ್ಯಕ್ಷ' ಎಂದು ಕರೆದಿದ್ದಾನೆ. ಅಂದಿನ ವಿವಿಧ ವೃತ್ತಿಯ ಜನರ ಸಂಘಟನೆಗಳನ್ನು ಆಗ ಶ್ರೇಣಿ, ನಿಕಾಯ, ನಿಗಮ, ಸಮಯ ಎಂದು ಕರೆಯುತ್ತಿದ್ದರು. ೩೦೦೦ ವರ್ಷಗಳ ಹಿಂದಿನ ಶಾತವಾಹನರ ನಾಸಿಕದ ಒಂದು ಶಾಸನದಲ್ಲಿ 'ಕೋಲಿಕ ನಿಕಾಯ' ಎಂದು ನೇಕಾರರನ್ನು ಉಲ್ಲೇಖಿಸಿದೆ. ಉತ್ತರಭಾರತದಷ್ಟೇ ದಕ್ಷಿಣ ಭಾರತಲ್ಲೂ ನಾಸಿಕ್, ಪುಣೆ, ದೇವಗಿರಿ (ದೌಲತಾಬಾದ್) ಪೆಠಣ ಇನ್ನೂ ದಕ್ಷಿಣಕ್ಕೆ ಚಿಮ್ಮಲಗಿ, ಅಣ್ಣಿಗೇರಿ, ಹುಬ್ಬಳ್ಳಿ, ಹಳೇಬೀಡು, ಅರಸೀಕೆರೆ, ಹಲಸೂರು, ಬೆಳ್ಳೂರು ಹೀಗೆ ನೂರಾರು ನೇಯ್ಗೆ ಕೇಂದ್ರಗಳಿದ್ದವು. ಇಲ್ಲಿ ಇದ್ದ ನೇಕಾರರ ಶ್ರೇಣಿಗಳ ಬಗೆಗೂ ಶಾಸನಗಳಲ್ಲಿ ಉಲ್ಲೇಖಗಳಿದ್ದು ಅಣ್ಣಿಗೇರಿಯಲ್ಲಿ 'ಸಾಲಿಗ ಸಹಸ್ರರು' ಎಂಬ ನೇಕಾರರ ಶ್ರೇಣಿ ಇದ್ದುದು ೯೦೦ ವರ್ಷಗಳ ಹಿಂದಿನ ಶಾಸನದಲ್ಲಿ ಕಾಣಬರುತ್ತದೆ. ತಮಿಳುನಾಡಿನಲ್ಲಿ ಕೈಕೋಳರ್ ಎಂದು ಇವರು ಪ್ರಸಿದ್ಧರು.

ಢಾಕಾದ 'ಮಲ್‌ಮಲ್' ಕಲ್ಲಿಕೋಟೆಯಿಂದ ರಫ್ತಾಗುತ್ತಿದ್ದ 'ಕೆಲಿಕೊ' ಹಾಗೂ ಮಚಲಿಪಟ್ಟಣ ಬಂದರಿನಿಂದ ಪ್ರಸಿದ್ಧವಾದ 'ಮಸ್ಲಿನ್' ನಂಥ ಕೈ ಮಗ್ಗದ ಬಟ್ಟೆಗಳ ಪರಂಪರಾಗತ “ಪೇಟೆಂಟ್” ಗಳನ್ನು ಕೈಗಾರಿಕಾ ಕ್ರಾಂತಿಯ ಅನಂತರ ಐರೋಪ್ಯ ಗಿರಣಿಗಳ ಉತ್ಪಾದಕರು ಅಪಹರಿಸಿದ್ದು ಕಾಣುತ್ತದೆ.

ಬ್ರಿಟಿಷರು ಈ ದೇಶದಲ್ಲಿ ಪ್ರಭುತ್ವ ಸಾಧಿಸುವ ಮೊದಲು ಬಟ್ಟೆಯ ನೇಯ್ಗೆಯಲ್ಲಿ ಭಾರತ ಅತ್ಯಂತ ಸಮೃದ್ಧಿಗೆ ಪ್ರಸಿದ್ಧವಾಗಿತ್ತು. ಒಬ್ಬ ಆಂಗ್ಲ ಪ್ರವಾಸಿ ಹ್ಯಾಮಿಲ್ಟನ್ ಎಂಬಾತನು ಹೇಳುವ ಮಾಹಿತಿ ಇದು: '೧೬೬೬ರಲ್ಲಿ ಬ್ರಿಟಿಷರು ಕಾಳೀನದಿಯ ದಂಡೆಯ 'ಕಡವಾಲ' (ಈಗಿನ ಕಾರವಾರದಿಂದ ೧೦ ಕಿ.ಮೀ. ಒಳನಾಡಿನಲ್ಲಿದೆ)ದಲ್ಲಿ ಸ್ಥಾಪಿಸಿದ ತಮ್ಮ ವ್ಯಾಪಾರಿ ಮಳಿಗೆಯಿಂದ ಒಳನಾಡಿನ ೫೦,೦೦೦ ನೇಕಾರ ಬಟ್ಟೆ ಉತ್ಪಾದಕರ ಜತೆ ಕರಾರು ಮಾಡಿಕೊಂಡಿದ್ದರು.' ಒಳನಾಡು ಎಂದರೆ ಹುಬ್ಬಳ್ಳಿ ಮತ್ತು ಅದರ ಪೂರ್ವಕ್ಕೂ ಇರುವ ಪ್ರದೇಶ. ಹುಬ್ಬಳಿಯಲ್ಲಿ ಒಳನಾಡಿನ ಜತೆ ವ್ಯಾಪಾರಕ್ಕೆ ಮಳಿಗೆಗಳನ್ನು ಬ್ರಿಟಿಷರು ಹೊಂದಿದ್ದರು.

೧೮೦೦ ರಲ್ಲಿ ಬೆಂಗಳೂರಿಗೆ ಬಂದ ಫ್ರಾನ್ಸಿಸ್ ಬುಕ್ಯಾನನ್ ಎಂಬ ಅಧಿಕಾರಿ “ಬೆಂಗಳೂರು ಬಟ್ಟೆ ಉತ್ಪಾದನೆಯ ಗಣ್ಯಕೇಂದ್ರ. ಇಲ್ಲಿನ ನೇಕಾರರು ವೃತ್ತಿಯಲ್ಲಿ ನಿಪುಣರು. ಇಲ್ಲಿ ಮನೆಮನೆಗಳಲ್ಲೂ ತಯಾರಾಗುವ ನೂಲು, ಬಳ್ಳಾರಿಯ ಕೃಷ್ಣಾ ನದೀ ತೀರದಿಂದ ಬರುವ

ನೂಲಿಗಿಂತಲೂ ಹೆಚ್ಚು ನವಿರು. ಇಲ್ಲಿ ಕ್ಷತ್ರಿಯ ಅಥವಾ 'ಕತ್ರಿ' ಎಂಬ ಪಟ್ಟೆಗಾರರು ರೇಶ್ಮೆಯ ಹಾಗೂ ಜರಿಯ ಉತ್ತಮ ಬಟ್ಟೆ ತಯಾರಿಸುತ್ತಾರೆ. ಅಲ್ಲದೆ, ಹತ್ತಿ ಬಟ್ಟೆ ನೇಯುವ 'ಬಿಳಿಮಗ್ಗ' ಎಂಬ ಗುಂಪಿದ್ದು ಇವರಲ್ಲಿ ನಯನಗಾರರು ಅತ್ಯಂತ ಶ್ರೀಮಂತರು" ಎಂದು ಹೇಳುತ್ತಾನೆ. ಇದಲ್ಲದೆ ತೊಗಟವೀರರು, ಕುರುಹಿನ ಶೆಟ್ಟಿಗಳು ಮುಂತಾದ ನೇಕಾರ ವರ್ಗಗಳಿವೆ. ಹಾಗೆಯೇ ತೆಲುಗು ದೇವಾಂಗ ಮತ್ತು ಕನ್ನಡ ದೇವಾಂಗದವರೆಂಬ ನೇಕಾರ ವರ್ಗದವರ ಬಗ್ಗೆ ಕೂಡಾ ಹೇಳುತ್ತಾನೆ. ಸರ್ಜಾಪುರ, ಮಾಲೂರು, ಶಿಡ್ಲಘಟ್ಟ, ಹರಿಹರ ಮುಂತಾದ ನೇಕಾರಿಕೆಯ ಕೇಂದ್ರಗಳ ಬಗ್ಗೆ ಕೂಡಾ ಅವನು ವಿವರ ನೀಡುತ್ತಾನೆ.

ಆದರೆ ಮುಂದೆ ಕೆಲವೇ ವರ್ಷಗಳಲ್ಲಿ ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿ ಉಂಟಾಯಿತು. ಉಗಿಯಂತ್ರ ಬಳಸಿ ಹತ್ತಿಪ್ಪತ್ತು ಜನ ಮಾಡುವ ಕೆಲಸವನ್ನು ಒಂದೇ ಯಂತ್ರ ಮಾಡುವ ವ್ಯವಸ್ಥೆ ಬಂತು. ಹೀಗಿದ್ದರೂ, ಭಾರತದ ಬಟ್ಟೆಗಳ ಬಗ್ಗೆ ಇಂಗ್ಲೆಂಡಿನ ಬೇಡಿಕೆ ಇಲ್ಲದೆ ಹೋಗಲಿಲ್ಲ. ಆದರೆ, ಭಾರತದ ಬಟ್ಟೆ ಇಂಗ್ಲೆಂಡಿನಲ್ಲಿ ತುಟ್ಟಿಯಾಗಬೇಕೆಂದು ಅವರು ಇಲ್ಲಿಂದ ತಮ್ಮ ದೇಶಕ್ಕೆ ಆಮದಾದ ಬಟ್ಟೆಯ ಮೇಲೆ ಶೇಕಡಾ ಎಪ್ಪತ್ತರಿಂದ ಎಂಬತ್ತು ಆಮದು ಸುಂಕ ವಿಧಿಸಿದರು. ಆದರೆ ಭಾರತಕ್ಕೆ ಇಂಗ್ಲೆಂಡಿನಿಂದ ಬರುವ ಬಟ್ಟೆಯ ಮೇಲೆ ಯಾವುದೇ ಆಮದು ಸುಂಕ ಇರಲಿಲ್ಲ. 'ಫ್ರೀ ಟ್ರೇಡ್' ಎಂಬ ಸೂತ್ರ ಭಾರತಕ್ಕೆ ಬರುವ ವಸ್ತುಗಳಿಗೆ ಮಾತ್ರ ಮೀಸಲಾಗಿತ್ತು. ಹೀಗಾಗಿ ಭಾರತದ ಎಲ್ಲಾ ಕೈಗಾರಿಕೆಗಳು, ಅದರಲ್ಲೂ ಮುಖ್ಯವಾಗಿ ವ್ಯಾಪಕವಾದ ಬಟ್ಟೆ ಕೈಗಾರಿಕೆಯು ಮಣ್ಣು ಮುಕ್ಕುವಂತಾಯಿತು. ಲಕ್ಷಾಂತರ ನೇಕಾರರು ಉದ್ಯೋಗ ಕಳಕೊಂಡರು. ಕೋಟ್ಯಾಂತರ ಮಹಿಳೆಯರು ನೂಲುವ ವೃತ್ತಿಗೆ ಎರವಾದರು. ಮಹಿಳೆಯರಿಗೆ ಇದರಿಂದ ಸಂಪಾದನೆಯ ಮಾರ್ಗ ನಷ್ಟವಾಗಿ ಸಾಮಾಜಿಕವಾಗಿ ಕೂಡಾ ಅವರು ತಮಗಿದ್ದ ಸ್ಥಾನಮಾನಕ್ಕೆ ಎರವಾದರು. ಭಾರತದಲ್ಲೂ ನೇಯ್ಗೆ ಉದ್ಯೋಗ ಹಾಳಾದುದರ ಪರಿಣಾಮವೇನು? ಭಾರತದಲ್ಲಿ ೧೮೩೦ ರ ಸುಮಾರಿಗೆ ವೈಸರಾಯ್ ಆಗಿದ್ದ ವಿಲಿಯಂ ಬೆಂಟಿಂಕ್ ಹೇಳುವಂತೆ "ಭಾರತದ ಬಯಲುಗಳೆಲ್ಲ ಸತ್ತು ಹೋದ ನೇಕಾರರ ಮೂಳೆಗಳಿಂದ ಬಿಳುಪಾಗಿವೆ." ಎಂದರೆ ಎಷ್ಟು ಜನ ಉದ್ಯೋಗ ಕಳಕೊಂಡರು, ಉಪವಾಸ ನರಳಿ ಸತ್ತರೆಂದು ಲೆಕ್ಕ ಹಾಕಬೇಕಿಲ್ಲ. (ಪದ್ಮ ಸಂಸ್ಮರಣಿಕಾ ೨೦೦೦ ಪುಟ ೪೧.)

ಒಂದು ಉಂಗುರದ ವ್ಯಾಸದೊಳಗೆ ಬಟ್ಟೆಯ ಪೂರ್ತಿ ಅಗಲವನ್ನು ಎಳೆಯುವಂತೆ, ಒಂದು ಸಣ್ಣ ಬೆಂಕಿ ಪೊಟ್ಟಣದೊಳಗೆ ೧೦ ಗಜ ಬಟ್ಟೆಯನ್ನು ಮಡಚಿ ಇಡುವ ಹಾಗೆ ಹತ್ತು ಪದರಗಳನ್ನಿಟ್ಟರೂ ಬಟ್ಟೆಯು ಪಾರದರ್ಶಕವಾಗಿ ಮೈಮಾಟವನ್ನು ತೋರಿಸುವ ಹಾಗೆ ಪ್ರಾಚೀನ ನೇಕಾರರು ಬಟ್ಟೆ ನೇಯುತ್ತಿದ್ದರು ಎಂದು ನೇಕಾರರ ಇತಿಹಾಸ ಹೇಳುತ್ತದೆ. 'ಕಲಮಕರಿ' ಹೆಸರಿನ ಪ್ರಿಂಟ್ ಬಟ್ಟೆಗಳಿಗೆ ಆಂಧ್ರಪ್ರದೇಶದ ಮಚಲೀಪಟ್ಟಣಮ್ ಮತ್ತು ತಿಪ್ಪಾವಲಿಯೂರು

ಕೇಂದ್ರವಾಗಿತ್ತು. ಗುಜರಾತದ ನೇಕಾರರು ಚಿಪ್ಪಾ ಪ್ರಿಂಟ್ ಬಟ್ಟೆಗಳಿಗೆ ಹೆಸರಾದವರು (ಈಗಲೂ ಅಹಮ್ಮದಾಬಾದಿನಲ್ಲಿ 'ಚಿಪ್ಪಾ ಪ್ರಿಂಟ್ ಸೀರೆ ಉತ್ಪಾದನೆಯಾಗುತ್ತದೆ) ಹತ್ತಿ ಬಟ್ಟೆಗಳ ಉತ್ಕೃಷ್ಟತೆಗೆ ಢಾಕಾ ಮಸ್ಲಿನ್ ಬಟ್ಟೆಗಳು ಹೆಸರುವಾಸಿ. ಆಂಗ್ಲರು ಇವರ ಕುಶಲತೆಗೆ ಕರುಬಿ ಇವರ ಹೆಬ್ಬೆರಳುಗಳನ್ನೆ ಕತ್ತರಿಸಿದ ನಿದರ್ಶನಗಳಿವೆ.

ಮಹಾರಾಷ್ಟ್ರದ ಸೋಲಾಪುರವು 'ಚಾದರ' ಗಳಿಗೆ, ಬೆಂಗಳೂರು ಮೊಣಕಾಲ್ಮೂರು ಸೀರೆಗಳಿಗೆ; ಕಂಚಿ ಕಾಂಜೀವರಂ ಸೀರೆಗಳಿಗೆ; ಧರ್ಮಾವರಂ ಧರ್ಮಾವರಂ ಸೀರೆಗಳಿಗೆ; ಸೇಲಂ, ಇಳಕಲ್, ಹೈದರಾಬಾದ್, ಉಡುಪಿ ಹಲವು ವಿಧದ ಹತ್ತಿ ಸೀರೆಗಳಿಗೆ ಪ್ರಸಿದ್ಧವಾಗಿವೆ. 'ಕಲ್ಕತ್ತಾ' ದ ಹತ್ತಿ ಸೀರೆಗಳಂತೂ ಬಹಳ ಪ್ರಸಿದ್ಧವಾದುದು.

ಕರ್ನಾಟಕದ ಕೆಲವೆಡೆ ದೊರೆತ ಶಾಸನಗಳಲ್ಲಿ 'ಮಗ್ಗದ ಸುಂಕ' 'ಗಾಣದ ಸುಂಕ' ಮುಂತಾದ ಉಲ್ಲೇಖವು ಬರುತ್ತದೆ. ಹಿಂದಿನ ಕಾಲದಲ್ಲಿ ರಾಜರು 'ವೃತ್ತಿ ತೆರಿಗೆ' ಗಳನ್ನು ಹೊರಿಸುತ್ತಿದ್ದರು ಎನ್ನುವುದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಶಾಸನಗಳಿವೆ:-

೧) ಗುಂಡ್ಲುಪೇಟೆ ತಾಲೂಕಿನ ತ್ರಯಂಬಕಪುರದ ಕ್ರಿ.ಶ. ೧೫೨೧ರ ತಾಮ್ರ ಶಾಸನವೊಂದರಲ್ಲಿ ಆ ದೇವರಿಗೆ ಸಲ್ಲಿಸಿದ ಸುಂಕ ವಿವರದ ಯಾದಿಯಲ್ಲಿ

"ತ್ರಿಯಂಬಕ ದೇವರಿಗೆ ಕೊಂಗಿನ ಸೀಮೆಯಲ್ಲಿ ನಡೆದು
ಗ್ರಾಮಗಳ ಸ್ಥಳ ಸುಂಕ ಮಗ್ಗ ಮನೆ ಬೆಲ್ಲ ಸುಂಕ
ಆಡದೆರೆದೂದಾರುಕೆ ವೋಜನವರಿ ಆಸಗರಹಲ
ಗಾಣಿಗರ ಸುಂಕ ಪಲದ ಬೇಡಿಗೆ."

ಎಂದು ಉಲ್ಲೇಖಿತವಾಗಿದೆ.

೨) ಕ್ರಿ.ಶ. ೧೫೧೩ರಲ್ಲಿಯ ಚಾಮರಾಜನಗರ ಜಿಲ್ಲೆಯಲ್ಲಿರುವ ಧರ್ಮಶಾಸನವು ತೆರಕಣಾಂಬೆಯ ಭಂಡಾರಕ್ಕೆ ಹರಿದು ಬರುತ್ತಿದ್ದ ಸುಂಕದ ವಿವರಗಳನ್ನು ಹೀಗೆ ವಿವರಿಸಿದೆ.

ಬೆಟ್ಟದ ಕಾವಲು ಬೋಗಾರದೆರಿಗೆ ಗಣಚಾರಿದೆರಿಗೆ
ಕೋಜುಗಳ ತೆರಿಗೆ ದಾಸುಗಳ ತೆರಿಗೆ ಅಹದೆರೆಗೆ
ಅಸಗರ ತೆರಿಗೆ ನಾಯಿಂದಿರ ತೆರಿಗೆ ಕುಂಬಾರ ತೆರಿಗೆ
ಗಾಣದ ಸುಂಕ ಉಪಿಲಿಗೆ ಕಾವಲಿ ಸುಂಕ ಮಗ್ಗ ಸುಂಕ
ಮಾಗರಿಕೆ ಮುಂತಾದ..........

(ಕನ್ನಡ ಜಾನಪದ ವಿಶ್ವಕೋಶ: ಪುಟ ೬೪೫: ೧೯೮೫)

ಹೊಯ್ಸಳರ ಕಾಲದಲ್ಲಿ ಸುಂಕ ಹೆಗ್ಗಡೆಯು ಮಗ್ಗದೆರೆ, ಆಡುದೆರೆ, ಚಾಲಪಣ, ಗಾಡಿದೆರೆ ಒಕ್ಕಲುದೆರೆ ಈ ಮುಂತಾದ ತೆರಿಗೆಗಳನ್ನು ವಸೂಲು ಮಾಡುತ್ತಿದ್ದನು) ಕರ್ನಾಟಕ ಪರಂಪರೆ: ೧೯೭೦: ಪುಟ. ೬೨೧)

ಕೃಷ್ಣ ದೇವರಾಯನ ಕಾಲದ ವೈಭವವನ್ನು ವರ್ಣಿಸುವಾಗ ಆ ಕಾಲದ ವಿದೇಶೀ ಯಾತ್ರಿಕನಾದ 'ಪಾಯಿಸ್' ಎಂಬಾತನು "ಎಲ್ಲ ಪ್ರಕಾರದ ವಸ್ತ್ರಗಳು, ರತ್ನಖಚಿತ ಅಮೂಲ್ಯ ವಸ್ತ್ರಾಭರಣಗಳು ಅಲ್ಲಿ ಲಭ್ಯವಿದ್ದುವೆಂದು" ಹೇಳುತ್ತಾನೆ.

ಕ್ರಿ.ಪೂ. ೧೨೧ ರಿಂದ ಕ್ರಿ.ಶ ೧೭೪ ರ ವರೆಗೆ ಆಳಿದ ಶಾತವಾಹನರ ಕಾಲದ ಶಾಸನಗಳಲ್ಲಿ ಅನೇಕ ಉದ್ಯೋಗಗಳ ಹೆಸರುಗಳು ಬರುತ್ತವೆ. ಅದರಲ್ಲಿ ಒಂದು ಕೋಲಿಕ (ನೇಕಾರ). ಅದೇ ಕಾಲದ ನಾಸಿಕದ ಒಂದು ಶಾಸನದಲ್ಲಿ 'ಕೋಲಿಕ ನಿಕಾಯ' ಅಥವಾ ಶ್ರೇಣಿಯ (ನೇಕಾರರ ಸಂಘ) ಮತ್ತು ಇತರ ವೃತ್ತಿ ಸಂಘಗಳ ಉಲ್ಲೇಖವಿಧೆ. ಈ ಸಂಘಗಳ ಬಗ್ಗೆ ಹೀಗೆ ಹೇಳಲಾಗಿದೆ. "ಈ ಸಂಘಗಳು ಬಹುಕಾಲದಿಂದ ಅಸ್ತಿತ್ವದಲ್ಲಿದ್ದು, ವ್ಯಾಪಾರಗಳನ್ನು ರೂಢಿಸಿಕೊಂಡ ಸಾಕ್ಷಿಗಳಾಗಿದ್ದು, ವ್ಯವಹಾರದಲ್ಲಿ ಪ್ರಾಮಾಣಿಕತೆ ಹಾಗೂ ದಕ್ಷತೆಗಳನ್ನು ಹೊಂದಿದ್ದವು. ಇಲ್ಲದಿದ್ದರೆ ಜನರು ಇಷ್ಟೊಂದು ಶಾಶ್ವತ ನಿಧಿಯನ್ನು ಇವುಗಳಲ್ಲಿ ತೊಡಗಿಸುತ್ತಿರಲಿಲ್ಲ. ಈ ನಿಧಿಗಳಿಂದ ವ್ಯಾಪಾರಿಗಳಿಗೆ ಒಳ್ಳೆಯ ಬಂಡವಾಳ ಒದಗಿ ವಾಣಿಜ್ಯದ ವಹಿವಾಟಿಗೆ ತುಂಬಾ ಪ್ರೋತ್ಸಾಹ ದೊರಕಿತ್ತು.

ಒಂದನೆಯ ಶತಮಾನದ 'ಪೆರಿಪ್ಲಸ್' ಬನವಾಸಿಯು ಸಂಪತ್ತಿನಲ್ಲಿ ಸುರಪುರವಾದ ಅಮರಾವತಿಯೊಡನೆ ಸ್ಪರ್ಧಿಸುತ್ತಿತ್ತು ಎಂದು ವರ್ಣಿಸಿ; ಇಲ್ಲಿಂದ ರಫ್ತಾಗುತ್ತಿದ್ದ ವಸ್ತುಗಳೆಂದರೆ ಹತ್ತಿಯ ನೂಲು, ಬಟ್ಟೆ, ಒರಟಾದ ಹಾಗೂ ನಯವಾದ ಮಸ್ಲಿನ್ ಬಟ್ಟೆ ಇತ್ಯಾದಿ...." ಎಂದು ವಿವರಿಸಿದ್ದಾನೆ. (ಕರ್ನಾಟಕ ಪರಂಪರೆ: ೧೯೭೦ ಪುಟ ೪೦೨)

ಮನಗೋಳಿಯ ಶಾಸನ (ಕ್ರಿ.ಶ.೧೧೧೬)ದಲ್ಲಿ ತೆಲ್ಲಿಗರು, ನೇಯ್ಗೆಗಾರರು, ಪಾಂಚಾಳರು, ಹಣ್ಣು ಮಾರುವವರು ಈ ಮೊದಲಾದ ಸಂಘಗಳು ನೀಡಿದ ದತ್ತಿಯನ್ನು ಉಲ್ಲೇಖಿಸಿದೆ. (ಎಪಿಗ್ರಾಫಿಯಾ ಇಂಡಿಯಾ ಪುಟ. ೨೨). ಬಾದಾಮಿಯ ಚಾಲುಕ್ಯರ ಕಾಲದಲ್ಲಿ (ಕ್ರಿ.ಶ ೪ ರಿಂದ ೧೧ರ ವರೆಗೆ) ಚೀನಾದ ಪ್ರವಾಸಿ ಹ್ಯುಯೆನ್‌ತ್ಸಾಂಗ್ ಭಾರತಕ್ಕೆ ಭೇಟಿಕೊಟ್ಟಿದ್ದ, (ಕ್ರಿ.ಶ ೭೨೯) ಚಾಲುಕ್ಯ ರಾಜ ಇಮ್ಮಡಿ ಪುಲಕೇಶಿ ಆಳುತ್ತಿದ್ದ ಪ್ರದೇಶಕ್ಕೆ ಭೇಟಿಕೊಟ್ಟ ಹ್ಯುಯೆನ್‌ತ್ಸಾಂಗ್ (ಅದು ಕ್ರಿ.ಶ.೭೨೯ರ ಮತ್ತು ೬೪೫ ರ ಮಧ್ಯಕಾಲ) ಹೀಗನ್ನುತ್ತಾನೆ. "ರಾಜ ಮಹಾರಾಜರ ಹಾಗೂ ಅತ್ಯುನ್ನತವು ದರ್ಜೆಯ ಧನವಂತ ಶ್ರೀಮಂತ ವ್ಯಕ್ತಿಗಳ ವೇಷ-ಭೂಷಣಗಳು ಅಸಾಮಾನ್ಯ ವಾದುದಾಗಿದ್ದವು. ಜನಸಾಮಾನ್ಯರ ಒಳ ಉಡುಪು, ಹೊರ ಉಡುಪುಗಳು ತೊಡಿಗೆಯನ್ನು

ಕಾಣದ ವಸ್ತ್ರಗಳು. ಬಣ್ಣದ ಬಗೆಗೆ ಹೇಳುವುದಾದರೆ, ಶುಭ್ರವರ್ಣವು ಬಹಳ ಮೆಚ್ಚುಗೆಯದು. ಬಣ್ಣ ಬಣ್ಣದ ಉಡುಗೆಯನ್ನು ಅವರು ಮೆಚ್ಚರು. ಗಂಡಸರು ಒಂದು ತುಂಡು ವಸ್ತ್ರವನ್ನು ಟೊಂಕದ ಸುತ್ತ ಕಂಕುಳದ ವರೆಗೆ ಸುತ್ತಿಕೊಂಡು ಬಲದ ಬರಿ ತೋಳನ್ನು ಹೊರಗೆ ಬಿಟ್ಟುಕೊಟ್ಟವರು. ಹೆಂಗಸರು ಬಲು ಉದ್ದವಾದ ವಸ್ತ್ರವನ್ನು ಎರಡೂ ಹೆಗಲುಗಳ ಮೇಲೆ ತುಂಬಾ ಹೊದೆದುಕೊಂಡು, ಅದು ಸಡಿಲಾಗಿ ಜೋಲುವಂತೆ ಮೈತುಂಬ ಉಟ್ಟುಕೊಳ್ಳುವರು 'ಇಲ್ಸೆಂಗ್' ಎನ್ನುವ ಇನ್ನೋರ್ವ ಚೀನೀ ಯಾತ್ರಿಕ ಹ್ಯುಯೆನ್‌ತ್ಸಾಂಗ್‌ನನ್ನು ಅನುಮೋದಿಸುತ್ತ "ಭಾರತದ ಜನಸಾಮಾನ್ಯರು, ಅಧಿಕಾರಿವರ್ಗದವರು ಮತ್ತು ಉಚ್ಚವರ್ಗದವರು ತಮ್ಮ ಉಡುಪಿಗಾಗಿ ಒಂದು ಜತೆ ಮೆತ್ತನೆಯ ಶುಭ್ರ ವಸ್ತ್ರಗಳನ್ನು ಉಪಯೋಗಿಸುವರು. ಬಡ ಹಾಗೂ ಕೆಳದರ್ಜೆಯ ಜನರು ಕೇವಲ ಒಂದು ನಾರು ಬಟ್ಟೆಯ ತುಂಡನ್ನು ಮಾತ್ರ ಬಳಸುವರು. ದೇಶದ ಉಷ್ಣ ವಾತಾವರಣದಿಂದಾಗಿ ಅತ್ಯಲ್ಪ ಹೊದಿಕೆಯೇ ಸಾಕೆನಿಸಿದೆ" ಎನ್ನುತ್ತಾನೆ. ಶಿಲ್ಪಗಳನ್ನು ಕುರಿತು ಹೇಳುತ್ತಾ ಹ್ಯುಯೆನ್‌ತ್ಸಾಂಗನು "ಹೆಣ್ಣು ವಿಗ್ರಹಗಳ ಉಡುಪಿನಲ್ಲಿ ಇರುವ ಮಡಿಕೆಗಳು ಅವು ಸೀರೆಯ ನೆರಿಗೆಗಳೇ ನಿಜ. ಅವು ಕಲ್ಲಿನಲ್ಲಿ ಬಹಳ ಜೋಕೆಯಿಂದ ಕೆತ್ತಲ್ಪಟ್ಟು ಕೆಲವೆಡೆ ಸೀರೆಯ ಮೇಲಿನ ಪಟ್ಟಿಯ ಗೆರೆಗಳೂ ಮನೋಹರವಾಗಿ ಕಂಗೊಳಿಸುತ್ತವೆ. ನಡುಪಟ್ಟಿಗಳು ಆಗ ವಿಶೇಷವಾಗಿ ಪ್ರಚಲಿತವಿದ್ದವು. ಅವುಗಳನ್ನು ನಡುವಿನ ಮೇಲೆ ಧರಿಸಿ, ಎರಡೂ ಹೆಗಲುಗಳ ಮೇಲೆ ಮತ್ತು ತೊಡೆಗಳ ಮೇಲೆ ಹಾದು ಬರುವಂತೆ ಧರಿಸುತ್ತಿದ್ದರು. (ಕರ್ನಾಟಕ ಪರಂಪರೆ ನಂ.೧ ಪು. ೨೬೯-೭೦)

ಪ್ರಾಚೀನ ಶಿಲ್ಪಗಳಲ್ಲಿ ಅಂದಿನ ಜನರು ಧರಿಸುತ್ತಿದ್ದ ಬಟ್ಟೆ ಅತ್ಯಲ್ಪವಾಗಿದ್ದು, ಅವರು ಆಭರಣಪ್ರಿಯರಾಗಿದ್ದರೆಂದು ತಿಳಿದು ಬರುತ್ತದೆ. ಗಂಡಸರು ಬರಿ ಎರಡು ತುಂಡು ಬಟ್ಟೆಗಳನ್ನು ಮಾತ್ರ ಉಡುತ್ತಿದ್ದರು. ಒಂದು ನಡುವಿನಿಂದ ಮೊಣಕಾಲಿನವರೆಗೆ ಸುತ್ತಿಕೊಳ್ಳುವ ಪಂಚೆ, ಇನ್ನೊಂದು ಉತ್ತರೀಯ. ಇದಕ್ಕೂ ಪ್ರಾಚೀನವಾಗಿರುವ ಶಿಲ್ಪಗಳಿಂದ ತಿಳಿದುಬರುವುದೇನೆಂದರೆ, ನಡುವಿಗೆ ಸುತ್ತುವ ಒಂದೇ ಒಂದು ಪಂಚೆ ಸಾಕಾಗಿತ್ತು. ಅದರ ಮುಂದಿನ ಚುಂಗನ್ನು ಹೆಗಲ ಮೇಲೆ ಒಗೆದುಕೊಂಡರಾಯಿತು. ಹೆಂಗಸರು ನಡುವಿನ ಕೆಳಗೆ ಬಟ್ಟೆ ಧರಿಸುತ್ತಿದ್ದರು. ಅನಂತರದ ಕಾಲದಲ್ಲಿ ಮೈಯ ಮೇಲ್ಭಾಗವನ್ನು ಮುಚ್ಚುವ ಕುಪ್ಪಸಗಳು ಬಳಕೆಗೆ ಬಂದವು.

ದಕ್ಷಿಣ ಕನ್ನಡದ 'ಕನ್ಯಾಪು' ಎನ್ನುವ 'ತುಳು ಪಾಡ್ದನ' ದಲ್ಲಿ 'ಕನ್ಯಾಪು' ಎನ್ನುವವಳು ತನಗೆ ಬೇಕಾದ ವಸ್ತುಗಳನ್ನು ಕೇಳುವಾಗ

"ಮಿಂಚುಳ್ಳ ತಿಗಲೆಕ್ ಬಾಲೆ ಕನ್ಯಾಪು<br>
ಪಟ್ಟೆದ ರವಕೆನ್ ....<br>
ಸಣ್ಣುಳ್ಳ ನಡುಗಾವೊಡೆ ಬಾಲೆ ಕನ್ಯಾಪು<br>
ಬಣ್ಣುಳ್ಳ ರಾಜ ಸೀರೆ ....

(ಮಿಂಚುವ ಎದೆಗೆ ಪಟ್ಟೆಯ ಕಂಚುಕ ಸಣ್ಣ ನಡುವಿಗೆ ಬಣ್ಣದ ರಾಜ ಸೀರೆ) ಎಂದು ಕೇಳುತ್ತಾಳೆ.

ಇನ್ನೊಂದು ತುಳು ಪಾಡ್ದನದಲ್ಲಿ ಹೆಣ್ಣೊಬ್ಬಳು ಹೀಗೆ ಕೇಳಿದ್ದಾಳೆ:-

ಕಾವೂರ ಕರಿಯ ಪಟ್ಟೆ

ಬೋಳೂರ ಬೊಳಿಯ ಪಟ್ಟೆ

ಮದೂರ ಮಂಜೊಲ್ ಪಟ್ಟೆ

ಮುನ್ನೂದ ಗಾವುದ ಪಾರಿ ಪಟ್ಟೆ

ಉಗುರ್‌ದ ಕಣ್ಣ್‌ಡ್ ದೆಂಗಿ ಪಟ್ಟೆ

ಅನುವಾದ:-ಕಾವೂರಿನ ಕಪ್ಪು ಪಟ್ಟೆ

ಬೋಳೂರಿನ ಬಿಳಿಯ ಪಟ್ಟೆ

ಮದೂರಿನ ಹಳದಿ ಪಟ್ಟೆ

ಮುನ್ನೂರು ಗಾವುದ ಪಾರಿ ಪಟೆ

ಉಗುರಿನೆಡೆಯಲ್ಲಿ ಹುದುಗೋ ಪಟ್ಟೆ

-(ದಕ್ಷಿಣ ಭಾರತದ ಜಾನಪದ ಪು-೩೬)

ಭಾರತದಲ್ಲಿ ತಯಾರಾದ ಬಟ್ಟೆಗಳು ಗ್ರೀಕ್ ಹಾಗೂ ರೋಮ್‌ಗೆ ಬಹಳ ಹಿಂದಿನಿಂದಲೇ ರಫ್ತಾಗುತ್ತಿದ್ದವು. ಬ್ರಿಟಿಷರು ಭಾರತಕ್ಕೆ ಕಾಲಿಟ್ಟ ಬಳಿಕ ಯುರೋಪಿಯನ್ನರು ಭಾರತೀಯ ವಸ್ತ್ರಗಳ ಕಟ್ಟಾ ಅಭಿಮಾನಿಗಳಾದರು. ಕ್ರಿ. ಶ. ೧೬೦೦ರಲ್ಲಿ ಇಂಗ್ಲೆಂಡಿನಲ್ಲಿ ಈಸ್ಟ್ ಇಂಡಿಯಾ ಕಂಪೆನಿ ಸ್ಥಾಪಿಲ್ಪಟ್ಟಿತು. ಪರಿಣಾಮವಾಗಿ ಭಾರತ ಮತ್ತು ಯುರೋಪಿನ ನಡುವೆ ವಸ್ತ್ರ ವ್ಯಾಪಾರದಲ್ಲಿ ಉತ್ತಮ ಪ್ರಗತಿಯು ಕಂಡು ಬಂತು. ಭಾರತೀಯ ಬಟ್ಟೆ-ಬರೆಗಳು ಹಲವು ಶತಮಾನಗಳ ಮೊದಲೇ ತಮ್ಮ ಗುಣಮಟ್ಟ ಹಾಗೂ ತಾಳಿಕೆ - ಬಾಳಿಕೆಗಳಿಂದ ಖ್ಯಾತಿ ಪಡೆದಿದ್ದವು. ಕ್ರಿ. ಶ. ೧೭ ಮತ್ತು ೧೮ನೆಯ ಶತಮಾನಗಳಲ್ಲಿ ಯುರೋಪ್ ಹಾಗೂ ಅರಬಿಸ್ತಾನಗಳೊಡನೆ ಭಾರತದ ವಸ್ತ್ರ ವ್ಯಾಪಾರ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಊರುಗಳೆಂದರೆ ಗುಜರಾತ್, ರಾಜಸ್ಥಾನ, ಬಂಗಾಳ, ಒರಿಸ್ಸಾ, ಬನಾರಸ್, ಕೋರಮಂಡಲ, ಮಚಲೀಪಟ್ಟಣ, ಮದ್ರಾಸು, ಮೊದಲಾದವು. ಇಂಗ್ಲೀಷರು ಭಾರತದ ವಿಶಿಷ್ಟವಾದ ಹಾಗೂ ಗುಣಮಟ್ಟದ ವಸ್ತ್ರಗಳನ್ನು ಲಂಡನ್ನಿಗೆ ಒಯ್ದು ಅಲ್ಲಿಂದ ಆಫ್ರಿಕಾ, ಈಜಿಪ್ಟ್, ತುರ್ಕಿಸ್ಥಾನ, ಇಂಡೀಸ್ ಮೊದಲಾದ ದೇಶಗಳಿಗೆ ದುಬಾರಿ ಬೆಲೆಗೆ ಮಾರತೊಡಗಿದರು. ನಯ-ನಾಜೂಕು, ಕಲಾತ್ಮಕತೆ ಹಾಗೂ ತಾಳಿಕೆ - ಬಾಳಿಕೆಯುಳ್ಳ ಭಾರತೀಯ ಕೈ ಮಗ್ಗ ವಸ್ತ್ರಗಳ ವೈಖರಿಗೆ ವಿದೇಶೀಯರು ದಂಗಾದರು. ಭಾರತದ ವಿವಿಧ ಕಡೆಗಳ ಬಟ್ಟೆಗಳಲ್ಲಿ ವಿದೇಶೀಯರ ಗಮನ ಸೆಳೆದ ಬಟ್ಟೆಯೆಂದರೆ ಕೇರಳದ ಕಲ್ಲಿಕೋಟೆಯ ಹತ್ತಿ ಬಟ್ಟೆಗಳು. ಕ್ಯಾಲಿಕೋ

ಎಂದು ಅದು ಕರೆಯಲ್ಪಟ್ಟಿತು. ೧೬೩೦ ರಿಂದ ೧೬೭೦ ರವರೆಗೆ ಭಾರತದ ಬಟ್ಟೆಗಳು ವಿಶ್ವದಾದ್ಯಂತ ಬೇಡಿಕೆಗಳನ್ನು ಪಡೆದುಕೊಂಡವು. ಹೆಚ್ಚಿನ ವೈವಿಧ್ಯ ಹಾಗೂ ನವೀನತೆಗಳನ್ನೊಳಗೊಂಡ ಬಟ್ಟೆಗಳು ಭಾರತದ ನೇಕಾರರಿಂದ ನಿರ್ಮಾಣಗೊಂಡವು. ಇಂತಹ ಉತ್ತಮ ದರ್ಜೆಯ ಭಾರತೀಯ ಬಟ್ಟೆಗಳು 'ಸೂರತ್'ನಿಂದ ರಫ್ತಾಗುತ್ತಿದ್ದವು.

ದಕ್ಷಿಣ ಭಾರತದಲ್ಲಿ ಕೋರಮಂಡಲವು ೧೭ ನೆಯ ಶತಮಾನದಲ್ಲಿ ವಸ್ತ್ರೋದ್ಯಮಕ್ಕೆ ಖ್ಯಾತಿ ಪಡೆದಿತ್ತು. ಅದನ್ನು 'ವಸ್ತ್ರೋದ್ಯಮದ ಕಾಶಿ' ಎಂದೇ ಕರೆಯಲಾಗಿತ್ತು. ಅಲ್ಲಿಂದಲೇ ದಕ್ಷಿಣ ಕನ್ನಡದ ಕೈ ಮಗ್ಗದ ಬಟ್ಟೆಗಳು ರಫ್ತಾಗುತ್ತಿದ್ದವು. ಮುಂದೆ ಮದ್ರಾಸು ಕೂಡಾ ವಸ್ತ್ರ ವ್ಯಾಪಾರದ ಪ್ರಮುಖ ಕೇಂದ್ರವಾಗಿ ಮಾರ್ಪಟ್ಟಿತು. (ಪದ್ಮಶಾಲಿ : ೧೯೯೩, ಪುಟ : ೨೫).

ರೇಷ್ಮೆಗೆ ಪ್ರಸಿದ್ಧವಾಗಿರುವ ಮೈಸೂರಿನ ರೇಷ್ಮೆಯು ಟಿಪ್ಪು ಸುಲ್ತಾನನ ಕಾಲದಲ್ಲಿ ಆರಂಭಿಸಲ್ಪಟ್ಟಿತು. ರಾಮನಗರ ಮತ್ತು ಚನ್ನಪಟ್ಟಣ ತಾಲೂಕುಗಳು ಇಂದಿಗೂ ಅತ್ಯಂತ ಪರಿಚಿತವಾದ ರೇಷ್ಮೆ ಉತ್ಪಾದನಾ ಕೇಂದ್ರಗಳಾಗಿವೆ.

ಬಾಸೆಲ್ ಮಿಷನ್ ಸೊಸೈಟಿಯು ೧೮೫೧ರಲ್ಲಿ ಕೈ ಮಗ್ಗದ ನೇಯ್ಗೆಯನ್ನು ಪ್ರಾರಂಭಿಸಿತು. ಜರ್ಮನಿಯವರಿಂದ ಪಡೆದ ಬಹುಮಟ್ಟಿನ ತಾಂತ್ರಿಕ ಜ್ಞಾನಕ್ಕೂ ಅದರಲ್ಲೂ ಮುಖ್ಯವಾಗಿ ವೇಗವಾಗಿ ತಿರುಗುವ ಲಾಳಿಯಿಂದ ಕೂಡಿ, 'ಧರ್ಮಪ್ರಚಾರಕರ ಮಗ್ಗ' ಎಂದು ಹೆಸರು ಪಡೆದ ಮಗ್ಗದ ಬಳಕೆಗೂ ಈ ಸಂಘವೇ ಕಾರಣವಾಗಿದೆ. ಜರ್ಮನಿಯ ಧರ್ಮಪ್ರಚಾರಕರಿಂದ ಪ್ರಾರಂಭಿಸಲ್ಪಟ್ಟ ಈ ಕೈ ಮಗ್ಗದ ಕೈಗಾರಿಕೆಯು ಈಗಲೂ ಅಭಿವೃದ್ಧಿ ಹೊಂದುತ್ತಿದೆ.

೧೮೮೩ ರ ಕಾಲದಲ್ಲಿ ಪುರಾತನ ಕೈಗಾರಿಕೆಗಳನೇಕ ಅವನತಿಯ ಹಾದಿ ಹಿಡಿದವು. ಆಧುನಿಕ ಕೈಗಾರಿಕಾ ಕ್ಷೇತ್ರವು ಕಾಲಿಟ್ಟಿತು. ಬೆಂಗಳೂರು ಕಾಟನ್ ಮತ್ತು ಸಿಲ್ಕ್ ಮಿಲ್ಲು ೧೮೮೩ರಲ್ಲಿ ದಾವಣಗೆರೆ ಕಾಟನ್ ಸ್ಪಿನ್ನಿಂಗ್ ಫ್ಯಾಕ್ಟರಿ ೧೮೮೪ ರಲ್ಲಿ ಸ್ಥಾಪಿತವಾದವು. ೧೮೮೫ ರಲ್ಲಿ ಹೊಸ ಕೈಗಾರಿಕೆಗಳ ಸ್ಥಾಪನೆಯಾಗಿ ದೇಶದಲ್ಲಿ ಉತ್ಪನ್ನವಾಗುತ್ತಿದ್ದ ಹತ್ತಿ, ಉಣ್ಣೆ, ರೇಷ್ಮೆ ಮೊದಲಾದ ವಸ್ತುಗಳ ದರ್ಜೆಯನ್ನು ಉತ್ತಮಗೊಳಿಸಲು ಕೈಗೊಂಡ ಕ್ರಮಗಳು ದೇಶದ ಜನರ ಆರ್ಥಿಕ ಪರಿಸ್ಥಿತಿ ಉತ್ತಮಗೊಳಿಸಲು ಸಹಕಾರಿಯಾದವು.

ಖಾದಿ ಪ್ರಚಾರವು ನೂಲುವ ಹಾಗೂ ನೇಯುವ ಗೃಹ ಕೈಗಾರಿಕೆಗಳನ್ನು ಗಮನಾರ್ಹವಾಗಿ ಬಲಗೊಳಿಸಿತು. ಭಾರತದ ಸ್ವಾತಂತ್ರ್ಯ ಪೂರ್ವ ಕಾಲಾವಧಿಯಲ್ಲಿಯೇ ಖಾದಿ ಉದ್ಯಮಕ್ಕೆ ಪ್ರೋತ್ಸಾಹ ನೀಡಿ, ಕೈಗಾರಿಕೆಯ ಅಭಿವೃದ್ಧಿಗಾಗಿ ಒಂದು ಸಂಸ್ಥೆಯನ್ನು ೧೯೨೭ ರಲ್ಲಿ ಸ್ಥಾಪಿಸಿದ ಮೈಸೂರು ರಾಜ್ಯವು ಅದ್ವಿತೀಯವಾಗಿದ್ದಿತು. ಅಖಿಲ ಭಾರತ ನೂಲುವವರ ಸಂಘದ ಸಹಾಯದಿಂದ ಬದನವಾಳದಲ್ಲಿ ಸ್ಥಾಪನೆಯಾದ ಖಾದಿ ಕೇಂದ್ರವು ಭಾರತದಲ್ಲಿ ಸರ್ಕಾರವೊಂದು ಸ್ಥಾಪಿಸಿದ ಪ್ರಥಮ ಖಾದಿ ಕೇಂದ್ರವಾಗಿದೆ. ಅಲ್ಲಿ ೧೯೨೭ ರಲ್ಲಿ ನೂಲುವವರ ಮತ್ತು

ನೇಯುವವರ ಸಂಖ್ಯೆ ೧೨೫೩ ಇದ್ದುದು ೧೯೪೭ ರಲ್ಲಿ ೯,೫೬೦ ಕ್ಕೆ ಏರಿತು. ೧೯೪೭ ರ ವೇಳೆಗೆ ಇಂತಹ ಖಾದಿ ಕೇಂದ್ರಗಳ ಸಂಖ್ಯೆ ೨೩ಕ್ಕೆ ಏರಿತು.

ಹೀಗೆ ಭಾರತದ ಕೈಮಗ್ಗ ಉದ್ಯಮದ ಬೆಳವಣಿಗೆಯು ಸಿಂಧೂನದಿಯ ಸಂಸ್ಕೃತಿಯಷ್ಟೇ ಪುರಾತನವಾದುದಾಗಿದೆ. ಕ್ರಿ. ಶ. ೧ನೆಯ ಶತಮಾನದಿಂದ ಕ್ರಿ. ಶ. ೧೮ನೆಯ ಶತಮಾನದವರೆಗೆ ಭಾರತದ ಹತ್ತಿಬಟ್ಟೆಗಳ ಉತ್ಪಾದನೆಯು ಜಗತ್ ಪ್ರಸಿದ್ಧವಾಗಿತ್ತು. ಪಾಶ್ಚಾತ್ಯ ದೇಶಗಳಾದ ಯುರೋಪ್, ಆಫ್ರಿಕ, ಇಂಗ್ಲೆಂಡ್‌ಗಳಲ್ಲಿ ಭಾರತದ ಕೈ ಮಗ್ಗದ ವಸ್ತುಗಳಿಗೆ ವಿಶೇಷವಾದ ಬೇಡಿಕೆಗಳಿದ್ದವು. ನಮ್ಮ ದೇಶದ ಬಟ್ಟೆಗಳಿಗಾಗಿಯೇ ವಾಸ್ಕೋಡಗಾಮ ಎಂಬ ನಾವಿಕನು ಭಾರತಕ್ಕೆ ಬಂದನು. (ಆಗ ಕಲ್ಲಿಕೋಟೆಯು ದೊಡ್ಡ ಬಂದರಾಗಿತ್ತು) ೧೮ನೆಯ ಶತಮಾನದಲ್ಲಿ ಇಂಗ್ಲೆಂಡ್ ತಾನು ಉತ್ಪಾದಿಸುವ ಹತ್ತಿ ಬಟ್ಟೆಯನ್ನು ರಕ್ಷಿಸಲು, ಭಾರತದಿಂದ ಆಮದಾಗುತ್ತಿದ್ದ ಹತ್ತಿ ಬಟ್ಟೆಗಳ ಮೇಲೆ ಹೆಚ್ಚಿನ ಸುಂಕವನ್ನು ವಿಧಿಸಿ ಅವುಗಳ ಬೇಡಿಕೆಯನ್ನು ತಗ್ಗಿಸಿ ನಮ್ಮ ದೇಶದ ಕೈ ಮಗ್ಗ ಉದ್ಯಮವು ಅವನತಿಯ ದಾರಿಯನ್ನು ಹಿಡಿಯುವಂತೆ ಮಾಡಿತು.

ಕೈ ಮಗ್ಗ ಉದ್ದಿಮೆಯು ಹತ್ತಿ ಬಟ್ಟೆ ನೇಯ್ಗೆ, ಉಣ್ಣೆ ಬಟ್ಟೆ ನೇಯ್ಗೆ ಮತ್ತು ರೇಷ್ಮೆ ಬಟ್ಟೆ ನೇಯ್ಗೆಯನ್ನು ಒಳಗೊಂಡಿರುತ್ತದೆ. ನೇಯ್ಗೆ ಉದ್ಯಮದ ಚಟುವಟಿಕೆಗಳಲ್ಲಿ ನಿರತರಾದವರಲ್ಲಿ ಶೇಕಡಾ ೯೦ರಷ್ಟು ಜನರು ಹತ್ತಿ ಬಟ್ಟೆ ನೇಕಾರಿಕೆಯಲ್ಲಿ ತೊಡಗಿರುತ್ತಾರೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಕೃಷಿಯ ಅನಂತರ ಕೈ ಮಗ್ಗ ಉದ್ಯಮವು ಬಹು ಜನರ ಜೀವನೋಪಾಯದ ಮಾರ್ಗವಾಗಿದೆ.

## ೨. ನೇಯ್ಗೆ ವೃತ್ತಿ ಹಾಗೂ ವಸ್ತ್ರ ಮಾರಾಟದ ವಿಧಾನಗಳು

"ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು :
ಮೇಟಿಯುಂ ರಾಟಿಯುಂ ನಡೆದುದಲ್ಲದೆ
ದೇಶದಾಟವೆ ಕೆಡುಗು ಸರ್ವಜ್ಞ"

"ಅಗ್ಗ ಬಡವಗೆ ಲೇಸು : ಬುಗ್ಗೆಯಾ ನಗೆ ಲೇಸು
ತಗ್ಗಿನಾ ಗದ್ದೆ ಉಳಲೇಸು ಜೇಡಂಗೆ :
ಮಗ್ಗ ಲೇಸೆಂದ ಸರ್ವಜ್ಞ"

ಸರ್ವಜ್ಞನ ಈ ಎರಡು ವಚನಗಳೂ ನೇಕಾರ ವೃತ್ತಿಯ ಪ್ರಾಮುಖ್ಯತೆಯನ್ನು ಕುರಿತು ಹೇಳಿವೆ. ಮೊದಲನೆಯ ವಚನವು ಕೃಷಿಯ ನಂತರದ ಸ್ಥಾನ ನೇಕಾರಿಕೆಗೆ ಇದೆ ಎನ್ನುವುದನ್ನು ಸೂಚಿಸಿದರೆ, ಎರಡನೆಯ ವಚನವು ನೇಯ್ಗೆ ವೃತ್ತಿಗೂ ನೇಕಾರನಿಗೂ ಇರುವ ಸಂಬಂಧವನ್ನು ಸೂಚಿಸುತ್ತದೆ.

ಬಟ್ಟೆ, ಅದು ಸಂಸ್ಕೃತಿಯ ಪ್ರತೀಕ. ಹುಟ್ಟುವಾಗ ಬೆತ್ತಲೆಯಾಗಿ ಹುಟ್ಟಿದರೂ, ಮುಂದೆ ಬಟ್ಟೆಯಿಂದ ಮೈ ಮುಚ್ಚಿಕೊಳ್ಳಲೇಬೇಕು. ಅದು ಸಂಸ್ಕೃತಿ. ಅಲ್ಲದಿದ್ದರೆ ಅದು ವಿಕೃತಿ. ಬಟ್ಟೆ ತಯಾರಿಕೆಗೆ ಬೇಕಾದ "ಶಾಂಭವೀ" ಮಂತ್ರವನ್ನು ಬ್ರಹ್ಮನು ಭಾವನಾ ಋಷಿಗೆ ಭೋಧಿಸಿದ ಎಂದು ಮಾರ್ಕಂಡೇಯ ಪುರಾಣ ಹೇಳುತ್ತದೆ.

ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ
ಸಮಗಾಲನಿಕ್ಕಿ ಅಣಿಯೇಳ ಮೆಟ್ಟಿದೆ ..
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು ..
ಈ ಸೀರೆಯನು ನೇಯ್ದವನು ನಾನೋ ನೀನೋ ರಾಮನಾಥ

ದೇವಾಂಗ ದಾಸಿಮಯ್ಯನ ಈ ವಚನವು ವಸ್ತ್ರೋತ್ಪಾದನೆಯ ಆರಂಭಿಕ ಹಂತವನ್ನು ಬಹಳ ಚೆನ್ನಾಗಿ ಪ್ರತಿನಿಧೀಕರಿಸುತ್ತದೆ. ನೇಯ್ಗೆ ಕಾಯಕವು 'ಕುಶಲಕಲೆ'ಗಳ ಸಾಲಿಗೆ ಸೇರಿದೆ ಎನ್ನುವುದರಲ್ಲಿ ಇನ್ನೊಂದು ಮಾತಿಲ್ಲ. ಈ ಕಾಯಕವನ್ನು ನಿರ್ವಹಿಸುವ ಮೂಲಭೂತ ವಿಧಾನವು ಒಂದೇ ಆಗಿದ್ದರೂ, ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಬರುವ ಕಾಲದಲ್ಲಿ ನೇಕಾರರು ಕೆಲವೊಮ್ಮೆ ತಮ್ಮ ವೃತ್ತಿಯಲ್ಲಿ ಅಲ್ಪ ಸ್ವಲ್ಪ ಪ್ರಾದೇಶಿಕ ಬದಲಾವಣೆಗಳನ್ನು ಮಾಡಿಕೊಂಡಿರುವುದು ಇದೆ. ಈ ಹಿನ್ನೆಲೆಯಲ್ಲಿ ಕಾಸರಗೋಡಿನ ನೇಕಾರರ ನೇಯ್ಗೆ ವೃತ್ತಿ ಹಾಗೂ ಮಾರಾಟದ ವಿಧಾನಗಳ ಪರಿಚಯವನ್ನು ಇಲ್ಲಿ ಮಾಡಲಾಗುತ್ತಿದೆ.

ನೇಕಾರ ಸಮುದಾಯವು ಎಲ್ಲಾ ಕಡೆಗಳಲ್ಲೂ ಸಮೂಹವಾಗಿಯೇ ಜೀವಿಸುವುದನ್ನು ಕಾಣಬಹುದು. ಆಂಧ್ರ, ಕರ್ನಾಟಕ, ತಮಿಳುನಾಡುಗಳಲ್ಲಿ ಜೀವಿಸುವ ಬೇರೆ ಬೇರೆ ಹೆಸರಿನ ನೇಕಾರರು ತಮ್ಮದೇ ಆದ ಬೀದಿಗಳನ್ನು ನಿರ್ಮಾಣ ಮಾಡಿಕೊಂಡು ಜೀವಿಸುತ್ತಾರೆ. ಹಾಗೇ ಕಾಸರಗೋಡು ಪ್ರದೇಶದ ನೇಕಾರರು ಆರಂಭದಲ್ಲಿ ಪ್ರತ್ಯೇಕವಾಗಿ ಜೀವಿಸುತ್ತಿದ್ದರು. ಸುಮಾರು ಇನ್ನೂರು ವರ್ಷಗಳಿಂದ ಅಲ್ಲಲ್ಲಿ 'ತೆರು'ಗಳನ್ನು ಕಟ್ಟಿ ಜೀವಿಸುತ್ತಿದ್ದಾರೆ. ಒಂದೇ ವೃತ್ತಿಯನ್ನವಲಂಬಿಸಿದವರು ಒಂದೇ ಕಡೆ ಜೀವಿಸಿದಾಗ ಅವರ ಜೀವನವೂ ವೃತ್ತಿಯೂ ಸುಗಮವಾಗಿ ಸಾಗುತ್ತದೆ. ನೇಯ್ಗೆಯಂತಹ ಕಾಯಕಕ್ಕೆ ಪರಸ್ಪರ ಸಹಕಾರ ಬೇಕೇ ಬೇಕು. ನೂಲುಸುತ್ತುವುದು, ನಳಿ ಮಾಡುವುದು, ಹಾಸು ಸುತ್ತುವುದು, ಮಗ್ಗಕ್ಕೆ ಹಾಸು ಏರಿಸುವುದು ಈ ಮೊದಲಾದ ಕೆಲಸಗಳಿಗೆ ಸ್ತ್ರೀಯರೂ, ಮಕ್ಕಳೂ, ಮನೆಯವರೂ ಸಹಾಯಮಾಡಬೇಕು.

ಹಿಂದೆ ಪ್ರತಿಯೊಂದು ಮನೆಗಳಲ್ಲಿಯೂ 'ಮಗ್ಗದ ಕೊಟ್ಟಿಗೆ' ಗಳಿದ್ದವು. ಸಾಮಾನ್ಯನೊಬ್ಬನ ಮನೆಯಲ್ಲಿ ಒಂದು ಮಗ್ಗ, ಒಂದು ಚರಕ, ಒಂದು ರಾಟೆ ಇರುತ್ತಿತ್ತು. ನೇಕಾರ ನೇಯುತ್ತಿದ್ದರೆ ಅವನ ಮಡದಿ ಗಂಜಿಯಲ್ಲಿ ಮುಳುಗಿಸಿದ ನೂಲನ್ನು ರಾಟೆಗೆ ಹಾಕಿ, ಚರಕದಲ್ಲಿ ಹಾಕಿದ ನಳಿಗೆ ಸುತ್ತುವ ದೃಶ್ಯವು ಈ ಪ್ರದೇಶದಲ್ಲಿ ಸಾಮಾನ್ಯವಾಗಿತ್ತು.

ಬಟ್ಟೆಯೊಂದು ಉತ್ಪನ್ನವಾಗಿ ಮಾರುಕಟ್ಟೆಗೆ ತಲಪುವುದಕ್ಕಿಂತ ಮುನ್ನ ಹಲವು ಹಂತಗಳನ್ನು ದಾಟಿ ಬರಬೇಕು. ಫ್ರೇಮ್ ಮಗ್ಗಗಳು ಬರುವುದಕ್ಕಿಂತ ಮುನ್ನ ಈ ಪ್ರದೇಶದಲ್ಲಿ ಗುಳಿ ಮಗ್ಗಗಳೇ ಇದ್ದವು. ಕ್ರಮೇಣ ಕೈ ಮಗ್ಗಗಳು ಬಳಕೆಗೆ ಬಂದವು. ಇತ್ತೀಚೆಗೆ ಗುಳಿಮಗ್ಗವೆಂದರೇನೆಂದೇ ತಿಳಿಯದವರು ನೇಕಾರ ವಲಯದಲ್ಲಿದ್ದಾರೆ. ಹೊಸ ತಲೆಮಾರು ನೇಕಾರಿಕೆ ಎಂದರೇನು? ಎಂದು ಕೇಳಿದರೂ ಆಶ್ಚರ್ಯವಿಲ್ಲ. ಪಾಶ್ಚಾತ್ಯರ ಕೈ ಮಗ್ಗದೊಂದಿಗೆ ಅವರ ಎಲ್ಲ ನೇಕಾರಿಕೆಯ ಸಾಮಾಗ್ರಿಗಳಿಗೆ, ಇನ್ನೂ ಕನ್ನಡದಲ್ಲಿ ಪರ್ಯಾಯ ಹೆಸರು ಸರಿಯಾಗಿ ದೊರೆತಿಲ್ಲ.

<u>ಕೈಮಗ್ಗದ ನೇಕಾರಿಕೆಯಲ್ಲಿ ಅನುಸರಿಸಲಾಗುವ ಹಳೆಯ ಮತ್ತು ಹೊಸ ವಿಧಾನಗಳು</u>

<u>೧) ನೂಲಿಗೆ ಬಣ್ಣ ಹಾಕುವುದು:-</u> ಮಾರುಕಟ್ಟೆಯಿಂದ ನೂಲನ್ನು ತರುವ ಕಾಲದಲ್ಲಿ ಸಾಮಾನ್ಯವಾಗಿ ಬಣ್ಣವಿಲ್ಲದಿರುವುದನ್ನು ತರಲಾಗುತ್ತಿತ್ತು. ಅದನ್ನು 'ಗ್ರೇಯಾರ್ನ್' ಎಂದು ಕರೆಯುತ್ತಾರೆ. ಬಣ್ಣ ಹಾಕುವಲ್ಲಿ ಎರಡು ವಿಧಾನಗಳಿವೆ.

ಅ) <u>ವೇಟ್ ಡೈ</u> : ನೂಲನ್ನು ಬೇಯಿಸಿ ಬಣ್ಣ ಹಾಕುವುದು. ದೊಡ್ಡ ಪಾತ್ರೆಯಲ್ಲಿ ನೂಲನ್ನು ಬೇಯಿಸಿ, ಅದಕ್ಕೇ ಬಣ್ಣವನ್ನು ಹಾಕಬೇಕು. ಅನಂತರ ಅದನ್ನು ತಣ್ಣೀರಿನಿಂದ ಚೆನ್ನಾಗಿ ತೊಳೆಯಬೇಕು ಬಣ್ಣವನ್ನು ಬೆರೆಸಿ ಅದರಲ್ಲಿ ನೂಲನ್ನು ಮುಳುಗಿಸಿ ಸ್ವಲ್ಪ ಹೊತ್ತಿನ ಅನಂತರ ತೆಗೆದು ಒಣಗಿಸಲಾಗುವುದು. (ಇದನ್ನು ಕೋಲ್ಡ್ ಡೈ ಎನ್ನುತ್ತಾರೆ) ಬಣ್ಣ ಹಾಕಲು ನೂಲನ್ನು ತಾಮ್ರದ ಪಾತ್ರೆಯಲ್ಲಿ ಬೇಯಿಸಲಾಗುತ್ತದೆ.

೨) <u>ನೂಲು ಸುತ್ತುವುದು</u>:- ಹಳೆಯ ಕಾಲದಲ್ಲಿ ಹತ್ತಿಯನ್ನು ತಂದು ತಕಲಿಯಲ್ಲಿ ಎಳೆಗಳನ್ನಾಗಿ ಮಾಡಿ ನೂಲು ತಯಾರಿಸಿದ ಮೇಲೆ ಅದನ್ನು ರಾಟೆಗೆ ಹಾಕಿ ನಳಿಗೆ ಸುತ್ತಲಾಗುತ್ತಿತ್ತು. ಸಿದ್ಧವಾದ ನೂಲು ಮಾರುಕಟ್ಟೆಯಲ್ಲಿ ಲಭ್ಯವಾಗಲಾರಂಭಿಸಿದಾಗ ಅದನ್ನೇ ತಂದು ರಾಟೆಯಲ್ಲಿ ಸುತ್ತಿ ಹಾಸಿಗೆ ಬೇಕಾದ ನೂಲನ್ನು ತಯಾರಿಸಲಾಗುತ್ತದೆ.

೩) <u>ಹಾಸು ತಯಾರಿಸುವುದು:</u>

<u>ಹಳೆಯ ವಿಧಾನ:-</u> ಇದನ್ನು ಹಾಸು ಬೀಸುವುದು (ಪಾವ್ ಪೀಯಲ್) ಎಂದು ಹೇಳಲಾಗುತ್ತದೆ. ಉದ್ದನೆಯ ಬಿದಿರಿನ ಓಟೆಯಲ್ಲಿ ನೂಲನ್ನು ಪೋಣಿಸಿ ''ಪೂರಾಣಿ'' ಎಂದು ಕರೆಯಲ್ಪಡುವ ನೆಲದಲ್ಲಿ ಮೂರು ಸಾಲಾಗಿ ನೆಟ್ಟ ಮರದ ಗೂಟಗಳ ಮೂಲಕವಾಗಿ ನೂಲನ್ನು ಪ್ರತ್ಯೇಕ ಪ್ರತ್ಯೇಕವಾಗಿ ಒಂದೊಂದರ ಮಧ್ಯೆಯೂ ಪೋಣಿಸುತ್ತಾ ಸುತ್ತಿಕೊಂಡು ಹೋಗಬೇಕು. ಒಂದು ಕೈಯಲ್ಲಿ ನೂಲಿನ ಕೈ ಹಟ್ಟೆ ಮತ್ತೊಂದು ಕೈಯಲ್ಲಿ ಸಪೂರವಾದ ಬಿದಿರಿನ ಓಟೆ. ನೂಲನ್ನು ಓಟೆಯ ಮೂಲಕವಾಗಿ ಹಾಯಿಸಿ ಈ ಗೂಟಗಳಿಗೆ ಸಿಕ್ಕಿಸುತ್ತಾ ಹಾಸು ತಯಾರಿಸಬೇಕು. ಹೀಗೆ ತಯಾರಿಸಿದ ಹಾಸನ್ನು ಕಟ್ಟಿ ಗಂಜಿಯಲ್ಲಿ ನೆನೆಸಿ ಜಾಗರೂಕತೆಯಿಂದ ತೆಗೆದು ವಿಶಾಲವಾದ ಮೈದಾನದಲ್ಲಿ ನೆಲಕ್ಕಿಂತ ಎತ್ತರದಲ್ಲಿ ಎಳೆದು ಕಟ್ಟಿ, ಅದನ್ನು ಏಟಿಕೋಲಿ (ಹಾಸು ಸುತ್ತುವ ಕೋಲು)ಗೆ ಸುತ್ತಿ ಮಧ್ಯೆ ಮಧ್ಯೆ ಕತ್ತರಿಕೋಲು ಸಿಕ್ಕಿಸಲಾಗುತ್ತದೆ. ಪೂರ್ಣ ಒಣಗಿದ ಅನಂತರ ಅದನ್ನು ಸುತ್ತಿ ಮಗ್ಗದ ಗೂಟಕ್ಕೆ ಎಳೆದು ಕಟ್ಟಲಾಗುತ್ತದೆ. ಈ ಕೆಲಸದಲ್ಲಿ ಹೆಂಗಸರೇ ಪರಿಣಿತರಾಗುತ್ತಿದ್ದರು. ಹುಡುಗಿಯೊಬ್ಬಳಿಗೆ ಮದುವೆ ಮಾಡಬೇಕಿದ್ದರೆ ಮೊದಲು 'ಅವಳಿಗೆ ಹಾಸು ಬೀಸಲು ಬರುತ್ತದೆಯೇ? ಎಂದು ಕೇಳುತ್ತಿದ್ದರು.

ಮಳೆಗಾಲದ ದಿನಗಳಲ್ಲಂತೂ ಹಾಸು ಒಣಗಿಸುವುದು ಬಹಳ ಕಷ್ಟವಾಗುತಿತ್ತು. ಮಗ್ಗಕ್ಕೆ ಹಾಸನ್ನು ಕಟ್ಟಿದ ಮೇಲೂ ಆಗಾಗ ಗಂಜಿಯನ್ನು ನೂಲಿಗೆ ಹಾಕಲೇಬೇಕು. ಇಂತಹ ಸಂದರ್ಭದಲ್ಲಿ ಗಂಜಿ ಹಾಕಿದ ಹಾಸು ಸರಿಯಾಗಿ ಒಣಗದೆ ಹಾಳಾಗುವ ಸಾಧ್ಯತೆ ಇದೆ. ಆಗ ತಟ್ಟೆಯಲ್ಲಿ ಮರದ ಚೆಕ್ಕೆ ಅಥವಾ ಗೆರಟೆಯನ್ನು ಉರಿಸಿ ಕೆಂಡವನ್ನು ತಯಾರಿಸಿ ಅದನ್ನು ಹಾಸಿನ ಮೂಲಕವಾಗಿ ಹಾಯಿಸಲಾಗುತ್ತಿತ್ತು. ಬೆಂಕಿಯ ಕಿಡಿ ಅಥವಾ ನಾಲಗೆ ನೂಲಿಗೆ ಸೋಕದಂತೆ ಬಹಳ ಜಾಗರೂಕತೆ ವಹಿಸಬೇಕಾಗಿತ್ತು.

<u>ಗಂಜಿ ತಯಾರಿ</u>:- ಬಟ್ಟೆಗೆ ಬಳಸುವ ನೂಲಿಗೆ ಗಂಜಿಯನ್ನು ಹಾಕಿದರೆ ಮಾತ್ರ ಅದು ಗಟ್ಟಿಯಾಗಿ ಹೆಚ್ಚು ಕಾಲ ಬಾಳಿಕೆ ಬರಲು ಸಾಧ್ಯವಿದೆ. ಅದಕ್ಕಾಗಿ ಗಂಜಿಯ ತಯಾರಿಕೆಯೂ ಬಹಳ ಮುಖ್ಯ. ಹಿಂದಿನ ಕಾಲದಲ್ಲಿ ಗಂಜಿಯನ್ನು ತಯಾರಿಸಲು ಕಾಡಿನ ಸೀರುಳಿ (ಕಾಂದೇಡಿ)ಯನ್ನು ಬಳಸುತ್ತಿದ್ದರು. ಗೆಡ್ಡೆಯ ರೂಪದ ಅದನ್ನು ಅಗೆದು ತಂದು ಗುದ್ದಿ ನೀರಿನಲ್ಲಿ ಹಾಕಿ ಬೇಯಿಸಿದಾಗ ಗಂಜಿಯು ತಯಾರಾಗುತ್ತಿತ್ತು.

ಈಗ ಅಕ್ಕಿಯ ಹುಡಿಯನ್ನೋ, ಮರಗೆಣಸಿನ ಹುಡಿಯನ್ನೋ ತಂದು ನೀರಿನಲ್ಲಿ ಕಲಸಿ ಗಂಜಿಯನ್ನು ತಯಾರಿಸಲಾಗುತ್ತಿದೆ. ತಯಾರಿಸಿದ ಗಂಜಿಯನ್ನು ಬ್ರಷ್ ನಿಂದ ಹಾಸಿಗೆ ಸವರಲಾಗುತ್ತದೆ. ಹೊಕ್ಕಿಗಾಗಿ ನಳ್ಳಿಯಲ್ಲಿ ನೂಲನ್ನು ಸುತ್ತಲಾಗುತ್ತದೆ. ಗಂಜಿಯಿಲ್ಲದೆ ನೇಕಾರನಿಗೆ ನೇಯಲು ಸಾಧ್ಯವೇ ಇಲ್ಲ. ಆತನಿಗೂ ಗಂಜಿಗೂ ಇರುವ ಸಂಬಂಧವನ್ನು ಸರ್ವಜ್ಞ ಹೀಗಂದಿದ್ದಾನೆ.

ಮಂಜಿನಿಂ ಮಳೆಲೇಸು ಪಂಜು ಇರುಳಲಿ ಲೇಸು
ಪಂಜರವು ಲೇಸು ಅರಗಿಳಿಗೆ ಜಾಡಂಗೆ
ಗಂಜಿ ಲೇಸೆಂದ ಸರ್ವಜ್ಞ

೪) <u>ಹಾಸು ಸುತ್ತುವ ಈಗಿನ ವಿಧಾನ:-</u> ಸುಮಾರು ಐವತ್ತರಷ್ಟು ನೂಲು ಸುತ್ತಿದ ನಳ್ಳಿಗಳನ್ನು ಲೇಂಚಿ ಎನ್ನುವ ಏಣಿಯಂತಹ ಸಾಧನದಲ್ಲಿ ಸಿಲುಕಿಸಿ, ಎಲ್ಲಾ ನೂಲುಗಳನ್ನು ಒಟ್ಟು ಸೇರಿಸಿ ಹಿಡಿಯಲಾಗುತ್ತದೆ. ಅನಂತರ ನೆಲದಲ್ಲಿ ನೆಟ್ಟ ಎತ್ತರವಾದ ಹಾಸುಮರಕ್ಕೆ ಅದನ್ನು ಸುತ್ತಲಾಗುತ್ತದೆ. ಈ ರೀತಿಯಲ್ಲಿ ಮೇಲಿನಿಂದ ಕೆಳಕ್ಕೂ, ಕೆಳಗಿನಿಂದ ಮೇಲಕ್ಕೂ ನೂಲನ್ನು ಸುತ್ತಬೇಕು. ಒಂದು ಕೈ ಹಾಸುಮರವನ್ನು ತಿರುಗಿಸುತ್ತಿರುವಂತೇ, ಇನ್ನೊಂದು ಕೈ ನೂಲನ್ನು ಸುತ್ತಿಕೊಂಡು ಬರುತ್ತದೆ. ಹೀಗೆ ಸುತ್ತಿದ ಹಾಸನ್ನು ಹಾಸುಮರದಿಂದ ತೆಗೆದು ಮಗ್ಗಕ್ಕೆ ಸುತ್ತಲಾಗುತ್ತದೆ.

<u>ಮಗ್ಗದಲ್ಲಿ ನೇಯುವ ವಿಧಾನ:-</u>

೧) ಗುಳಿಮಗ್ಗ:- ಗುಳಿಮಗ್ಗವನ್ನು ಕುಳಿಮಗ್ಗ ಅಥವಾ ಕುಣಿಮಗ್ಗ ಎಂದೂ ಕರೆಯುತ್ತಾರೆ. 'ಗುಳಿ' ಎಂದರೆ 'ಹೊಂಡ' ಎಂದರ್ಥ. ಗುಳಿಮಗ್ಗಕ್ಕೆ ಒಂದು ಹೊಂಡದ ಅಗತ್ಯವಿರುವುದರಿಂದಲೇ ಈ ಹೆಸರು ಬಂದಿದೆ. ನೇಯುವಾತ ನೆಲದಲ್ಲಿ ಕುಳಿತು ಕಾಲನ್ನು ಹೊಂಡದಲ್ಲಿ ಇಳಿಬಿಟ್ಟು ನೇಯುತ್ತಾನೆ.

ಈ ಮಗ್ಗಕ್ಕೆ ಆರು ಗೂಟಗಳಿವೆ. ಈ ಆರು ಗೂಟಗಳ ನೆರವಿನಿಂದ ೨೦-೨೫ ಅಡಿಗಳಷ್ಟು ದೂರದವರೆಗೆ ಹಾಸನ್ನು ಹರಡಿಕೊಂಡು ಬರುವ ವ್ಯವಸ್ಥೆ ಇದಕ್ಕಿದೆ. ಈಗಿನ ಕೈ ಮಗ್ಗದ 'ಬಂಜಮರ' ಇರುವ ಜಾಗದಲ್ಲಿ ಜವಳಿ ಸುತ್ತುವ ರೋಲ್ ಇದೆ. ಇದನ್ನು 'ಪಡಪ್ಪ್' ಎನ್ನುತ್ತಾರೆ. ಅದನ್ನು ಎರಡು ಗೂಟಕ್ಕೆ ಸಿಕ್ಕಿಸಲಾಗುತ್ತದೆ. ನೇಯುವಾತ ನೆಲದ ಮೇಲೆ ಕುಳಿತು ಕಾಲುಗಳನ್ನು ಹೊಂಡಕ್ಕೆ ಇಳಿಬಿಟ್ಟು ಕುಳಿತುಕೊಳ್ಳುತ್ತಾನೆ. ಆತನ ಬಲಬದಿಯಲ್ಲಿ ಒಂದು ಗೂಟವಿದೆ. ಹಾಸನ್ನು ಎಳೆದು ಕಟ್ಟಿದ ಹಗ್ಗವನ್ನು ಈ ಗೂಟಕ್ಕೆ ಕಟ್ಟಲಾಗುತ್ತದೆ. ಜವಳಿಯನ್ನು ರೋಲ್ (ಪಡಪ್ಪ್) ಗೆ ಸುತ್ತುವ ಮೊದಲು ಗೂಟಕ್ಕೆ ಕಟ್ಟಿದ ಹಗ್ಗವನ್ನು ಸಡಿಲ ಮಾಡಬೇಕು. ನೇಯುವಾತನ ಮುಂಭಾಗದಲ್ಲಿ ಎರಡೂ ಬದಿಗಳಲ್ಲಿಎರಡು ಎತ್ತರವಾದ ಗೂಟ. ಈ ಗೂಟವನ್ನು ಅಡ್ಡ ರೀಪಿನಿಂದ ಜೋಡಿಸಲಾಗಿರುತ್ತದೆ. ಅದರ ಮೂಲಕ "ರೆಕ್ಕೆ" ಮತ್ತು ಅದರ ಪಕ್ಕದಲ್ಲಿ ಬಡ್ಡಿ (ಅಚ್ಚೊಣಿ ಅಚ್ಚು ಮತ್ತು ಬಡಿಯುವ ಸಾಧನ ಎರಡೂ ಒಂದೇ ಆದುದರಿಂದ ಈ ಹೆಸರು ಬಂದಿರಬಹುದು)

ಯನ್ನು ಹಗ್ಗದ ಮೂಲಕ ನೇತಾಡಿಸಲಾಗುತ್ತದೆ. ನೇಯುವಾತನ ನೇರ ಎದುರಿಗೆ ಸುಮಾರು ೧೫–೨೦ ಅಡಿಗಳಷ್ಟು ದೂರ ಒಂದು ಗೂಟವಿದೆ. ಹಾಸನ್ನು ನೇಯುವಾತನಿಂದ ಗೂಟದವರೆಗೆ ಹಾಸನ್ನು ಬಿಡಿಸಿಟ್ಟು ಅಲ್ಲಲ್ಲಿ ಕತ್ತರಿ ಕೋಲನ್ನು ಇಟ್ಟು ಗೂಟದ ಹತ್ತಿರಕ್ಕೆ ಬರುವಂತೆ ಒಂದು ಕೋಲಿಗೆ ಮಧ್ಯದಲ್ಲಿ ಹಗ್ಗವನ್ನು ಕಟ್ಟಿ ಆ ಗೂಟಕ್ಕೆ ಸುತ್ತಿ ಆ ಹಗ್ಗವನ್ನು ನೆಯ್ಯುವಾತನ ಬಲಬದಿಯಲ್ಲಿ ಗೂಟಕ್ಕೆ ಎಳೆದು ಕಟ್ಟಲಾಗುತ್ತದೆ.

ನೇಯುವಾತ ಕಾಲನ್ನು ಇಳಿಬಿಟ್ಟ ಹೊಂಡದಲ್ಲಿ ಕಾಲಿನ ಪಾದದಷ್ಟೆ ಉದ್ದದ ಮರದ ಹಲಗೆಯನ್ನು ನೆಲಕ್ಕೆ ಬಿಗಿದು ಕಟ್ಟಲಾಗುತ್ತದೆ. ಪಾದದ ಮುಂಭಾಗದಲ್ಲಿ ಹಗ್ಗವನ್ನು ಕಟ್ಟಿ ಅದನ್ನು ರೆಕ್ಕೆಯ ಕೆಳಬದಿಯ ಕೋಲಿಗೆ ಕಟ್ಟಲಾಗುತ್ತದೆ. ನೇಯುವಾತನ ಹಿಮ್ಮಡಿ ನೆಲದ ಹಂತದಲ್ಲಿ ಇದ್ದು ಪಾದದ ಮುಂಭಾಗ ಮಾತ್ರ ಮೇಲೆ–ಕೆಳಗೆ ಆಗುತ್ತದೆ.

ಎಣ್ಣೆ ಹಚ್ಚಿ ಬಹಳಷ್ಟು ನಯಗೊಳಿಸಿದ ಓಡ (ಲಾಳಿ)ವನ್ನೂ ಹಾಸಿನ ಮೂಲಕ ಒಂದು ತುದಿಯಿಂದ ಇನ್ನೊಂದು ತುದಿಗೆ ಎಸೆಯಲಾಗುತ್ತದೆ. ಈ ಸಂದರ್ಭದಲ್ಲಿ ಕಾಲುಗಳು ಕೆಳಗೆ ಹಾಸನ್ನು ಬಿಡಿಸಲು ಇಟ್ಟಿರುವ ಹಲಗೆಯನ್ನು ಮೆಟ್ಟಿ ಒಂದು ಹಲಗೆಯನ್ನು ಮೆಟ್ಟಿದಾಗ ಹಾಸಿನ ಒಂದು ಭಾಗ ಮೇಲೆ ಬರುವಂತೆಯೂ,ಇನ್ನೊಂದು ಕೋಲನ್ನೂ ಮೆಟ್ಟಿದಾಗ ಇನ್ನೊಂದು ಭಾಗ ಮೇಲೆ ಬರುವಂತೆಯೂ ಮಾಡುತ್ತದೆ. ಎರಡು ಭಾಗವಾದ ನೂಲಿನ ಮಧ್ಯದಿಂದ ನೂಲಿನ ಸಮೇತವಾಗಿ ಲಾಳಿಯನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಎಸೆಯಲಾಗುತ್ತದೆ. ಬಲಗೈಯಿಂದ ಎಸೆದಾಗ ಆಚೆ ಕಡೆಯಲ್ಲಿ ಎಡಗೈಯಿಂದ ಹಿಡಿಯಲಾಗುತ್ತದೆ. ಎಡಗೈಯಿಂದ ಎಸೆದಾಗ ಬಲಬದಿಯಲ್ಲಿ ಬಲಗೈಯಿಂದ ಹಿಡಿಯಲಾಗುತ್ತದೆ. ಇದೇ ಸಂದರ್ಭದಲ್ಲಿ ಹಾಸಿನ ಮೂಲಕ ಹಾದುಹೋದ ನೂಲನ್ನು ಅಚ್ಚೋಡಿಯನ್ನು ಎಳೆಯುವ ಮೂಲಕ ಹತ್ತಿರಕ್ಕೆ ಸೇರಿಸುವ ಕೆಲಸವನ್ನು ಮಾಡಬೇಕು. ಪ್ರತಿಯೊಂದು ನೂಲನ್ನು ಈ ರೀತಿಯಲ್ಲಿ ಸೇರಿಸದೇ ಇದ್ದರೆ ನೂಲು ಎದ್ದು ವಸ್ತ್ರ ವಿಕಾರವಾಗಬಹುದು. ಆದುದರಿಂದ ಬಹಳ ಜಾಗರೂಕರಾಗಿ ಈ ಕೆಲಸವನ್ನು ಮಾಡಬೇಕು. ನಿರ್ದಿಷ್ಟವಾದ ತಾಳಗತಿಯಲ್ಲಿ ಕಣ್ಣು, ಕಾಲು, ಕೈ, ಮನುಸ್ಸುಗಳನ್ನು ಒಂದೆಡೆ ಕೇಂದ್ರೀಕರಿಸಿಕೊಂಡು ನಡೆಸುವ ಅದ್ಭುತ ಕ್ರಿಯೆ ಇದು.

ಗುಳಿಮಗ್ಗದಲ್ಲಿ ೧೬ ಮೊಳದ ಸೀರೆ ಹಾಗೂ ೧೨ ಮೊಳದ ಸೀರೆ ನೇಯಲಾಗುತ್ತಿತ್ತು.

<u>ಕೈಮಗ್ಗದ ನೇಯ್ಗೆ:</u> ಸಾವಿರಾರು ವರ್ಷಗಳಿಂದ ಅಸ್ತಿತ್ವದಲ್ಲಿದ್ದ ಭಾರತೀಯ ನೇಯ್ಗೆ ಉದ್ಯಮವು ಯುರೋಪಿನ ವ್ಯವಸಾಯ ವಿಪ್ಲವ ಫ್ಲೈಯಿಂಗ್ ಷಟಲ್‌ನಂತಹ ಮಗ್ಗಗಳನ್ನು ಕಂಡುಹಿಡಿದ ಮೇಲೆ ಸ್ವಲ್ಪ ಮಟ್ಟಿಗೆ ತೊಂದರೆಗೆ ಸಿಕ್ಕಿಕೊಂಡಿತು.

ವೇದಕಾಲದಿಂದಾರಂಭವಾಗಿ ೧೯ನೇ ಶತಮಾನದವರೆಗೆ ಭಾರತೀಯ ನೇಕಾರರು ಗುಳಿಮಗ್ಗದಲ್ಲೇ ನೇಯ್ಗೆ ಕಾಯಕವನ್ನು ನಡೆಸುತ್ತಿದ್ದರು. ಇದುವೇ ಪರಿಷ್ಕರಣೆಗೊಂಡು ಕೈ ಬಳಿ

ಎಸೆಯುವ ಲಾಳಿಯನ್ನೊಳಗೊಂಡ ಮಗ್ಗ ಫ್ಲೈಯಿಂಗ್ ಷಟಲ್ ಅನುಕರಣೆಯಾಗಿ ಬಂತು ಬಾಸೆಲ್ ಮಿಷನ್, ಎನ್ನುವ ಜರ್ಮನ್ ಸಂಘಟನೆ ಇದನ್ನು ಇಲ್ಲಿ ಪ್ರಚಾರ ಪಡಿಸಿತು. ಖಾಕಿಯಂತಹ ಅಗಲವಾದ ಸಮವಸ್ತ್ರದ ಬಟ್ಟೆಯನ್ನು ಇದರಲ್ಲಿ ನೇಯಲಾಗುತ್ತಿತ್ತು.

ಕೈ ಮಗ್ಗಕ್ಕೆ ಹಾಸನ್ನು ಏರಿಸಬೇಕಿದ್ದರೆ ಕನಿಷ್ಟ ಐದು ಮಂದಿ ಬೇಕು. ಹಾಸುಮರದಿಂದ ತೆಗೆದ ಹಾಸನ್ನು ಹಾಸು ಸುತ್ತುವ ರೋಲರ್‌ಗೆ ಸುತ್ತಬೇಕು. ಮಗ್ಗದ ಒಂದು ತುದಿಯಲ್ಲಿ (ನೇಯುವ ಕಡೆ) ನೆಲದಲ್ಲಿ ಹಾಸನ್ನು ಇರಿಸಿ ಅದನ್ನು ಇನ್ನೊಂದು ತುದಿಗೆ ಮಗ್ಗದ ಮೇಲಿನಿಂದ, ಹಾಯಿಸಲಾಗುತ್ತದೆ. ನೂಲನ್ನು ಎಳೆಎಳೆಯಾಗಿ ಅಗಲಗೊಳಿಸಲು 'ಕೋಂಬು' (ಕೊಂಬು = ಬಾಚಣಿಗೆಯಂತಹ ಸಾಧನ) ನ ಮುಖಾಂತರವಾಗಿ ಹಾಯಿಸಲಾಗುತ್ತದೆ. (ಇಬ್ಬರು ಅದನ್ನು ಆಚೀಚೆಯಿಂದ ಹಿಡಿದಿರುತ್ತಾರೆ) ಎರಡೂ ಬದಿಯಲ್ಲಿ ರೋಲರನ್ನು ಸುತ್ತಲು ಅನುಕೂಲವಾಗುವಂತೆ ಕೋಲುಗಳನ್ನು ರೋಲರಿಗೆ ಕಟ್ಟಲಾಗುತ್ತದೆ. ಒಬ್ಬರು ಅಥವಾ ಇಬ್ಬರು ನೂಲನ್ನು ಕೆಳಗಿನಿಂದ ಗಟ್ಟಿಯಾಗಿ ಎಳೆದು ಹಿಡಿದು ಸ್ವಲ್ಪ ಸ್ವಲ್ಪವಾಗಿಯೇ ಬಿಟ್ಟುಕೊಡುತ್ತಿರಲು ಇನ್ನಿಬ್ಬರು ರೋಲರನ್ನು ಸುತ್ತುತ್ತಾರೆ

ಹೀಗೆ ಸುತ್ತಿದ ನೂಲನ್ನು ಒಂದೊಂದೇ ಎಳೆಯನ್ನು ರೆಕ್ಕೆಯ ಮುಖಾಂತರವಾಗಿ ಹಾಯಿಸಿ ಅನಂತರ ಅಚ್ಚಿನಿಂದ ಒಂದೊಂದನ್ನೂ ಎಳೆದು ತೆಗೆದು ಹಾಸನ್ನು ಮಗ್ಗದಲ್ಲಿ ನೇಯ್ಗೆಗೆ ಅಣಿಗೊಳಿಸುತ್ತಾರೆ ಅನಂತರ ಹೊಕ್ಕಿ (ಊಡ ಎನ್ನುತ್ತಾರೆ) ಗೆ ಬೇಕಾದ ನೂಲನ್ನು ನಳ್ಳಿಯಲ್ಲಿ ಸುತ್ತಿ ಲಾಳಿಗೆ ಸಿಕ್ಕಿಸಿ, ಹಾಸು ನೂಲಿನ ಒಂದು ಭಾಗ ಮೇಲೂ ಇನ್ನೊಂದು ಕೆಳಗೂ ಆಗುವಂತೆ ಕಾಲಿನ ಕೆಳಗಿನ ಕೋಲುಗಳನ್ನು ಮೆಟ್ಟಿ ಬೇರ್ಪಡಿಸಿ, ಮಧ್ಯದಲ್ಲಿ ಈ ಲಾಳಿಯನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಮೇಲಿನಿಂದ ಬಡ್ಡಿಗೆ ಸಿಕ್ಕಿಸಿದ ಹಗ್ಗದ ಸಹಾಯದಿಂದ ಓಡಿಸಲಾಗುತ್ತದೆ. ಅದೇ ಸಮಯದಲ್ಲಿ ಬಡ್ಡಿ (ಅಚ್ಚೋಡಿ) ಎನ್ನುವ ನೂಲಿನ ಅಚ್ಚುಕೋಲನ್ನು ಉಪಯೋಗಿಸಿ ಹಾಯಿಸಿದ ನೂಲು ಗಟ್ಟಿಯಾಗುವಂತೆ ಹತ್ತಿರಕ್ಕೆ ಒತ್ತಲಾಗುತ್ತದೆ.

ಕೈ ಮಗ್ಗವು ನಾಲ್ಕು ಕಂಬಗಳ ಆಯತಾಕಾರದ ಮಗ್ಗ ಇದನ್ನು 'ಫ್ರೇಮ್ ಮಗ್ಗ ಎನ್ನುತ್ತಾರೆ. ಸುಮಾರು ೫೦-೬೦ ವರ್ಷಗಳ ಹಿಂದಿನಿಂದ ಬಳಕೆಯಾಗಲು ಪ್ರಾರಂಭವಾಯಿತು. ಇದರಲ್ಲಿ ನೇಯುವಾತನು ಮೇಲೆ ಕುಳಿತು ನೇಯುತ್ತಾನೆ. ಉಳಿದಂತೆ ಗುಳಿಮಗ್ಗದಲ್ಲಿ ನೇಯುವಂತೆಯೇ ನೇಯಲಾಗುತ್ತದೆ.

೧೮೫೧ ರಲ್ಲಿ ಮಿ. ಹೇಲರ್ ಎನ್ನುವ ನುರಿತ ನೇಯ್ಗೆ ತಜ್ಞನು ಮೊತ್ತಮೊದಲಿಗೆ ಕೈಮಗ್ಗವನ್ನು ಬಳಕೆಗೆ ತಂದನು ಎಂದು ಹೇಳಲಾಗಿದೆ. ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಕಡೆಯ ಶಾಲಿಯರು ಗುಳಿಮಗ್ಗವನ್ನು ಬಿಟ್ಟು ಕೈ ಮಗ್ಗದಲ್ಲೇ ನೇಯತೊಡಗಿದರು. ಗುಳಿಮಗ್ಗ

ಮೂಲೆ ಸೇರಿತು. ಕಾಸರಗೋಡಿನ ನೇಕಾರರ ಸಹಕಾರೀ ಸಂಘದ ವತಿಯಿಂದ ನಡೆಯುವ ನೇಯ್ಗೆ ಕೇಂದ್ರದಲ್ಲಿ ಈಗ ಕೆಲವು ಗುಳಿಮಗ್ಗಗಳಿವೆ. ಆದರಲ್ಲಿ ರೇಶ್ಮೆ ಬಟ್ಟೆಯನ್ನು ನೇಯಲಾಗುತ್ತಿದೆ.

ಗುಳಿಮಗ್ಗಗಳಲ್ಲಿ ಈ ಮೊದಲು ಗಂಡಸರ ಧೋತಿ ಹಾಗೂ ಹೆಂಗಸರ ಕೆಲವೇ ಕೆಲವು ಸೀರೆಗಳು ನೇಯಲ್ಪಡುತ್ತಿದ್ದವು. ಆದರೆ 'ಫ್ರೇಮ್ ಮಗ್ಗ'ಗಳಲ್ಲಿ ಬಣ್ಣಬಣ್ಣದ, ಚೌಕಳಿಯ ಸೀರೆಗಳೂ, ವಲ್ಲಿಗಳೂ ನೇಯಲ್ಪಡಲು ಆರಂಭವಾದವು. ಈಗ ಎಲ್ಲ ಕಡೆಗಳಲ್ಲೂ ಫ್ರೇಮ್ ಮಗ್ಗಗಳೇ ಬಳಸಲ್ಪಡುತ್ತಿವೆ.

ಕೈಮಗ್ಗದಲ್ಲಿ ನೇಯುವ ಸೀರೆಗಳು ಅಂದವಾಗಿ ತಯಾರಾಗುತ್ತವೆ. ಅವುಗಳು ಅಂದವಾಗಲು ಅವುಗಳ ಅಂಚಿನಲ್ಲಿ ನೂಲಿನಿಂದ ಮತ್ತು ಜರಿಯಿಂದ ಕುಸುರಿಯನ್ನು ಮಾಡಲಾಗುತ್ತದೆ. ಸೀರೆಯ ಮಧ್ಯೆ ಬುಟ್ಟಾ ಡಿಸೈನುಗಳು ಬರುತ್ತವೆ. ಅಚ್ಚಿನ ಮುಂದೆ ನಾಲ್ಕು ಕೋಲುಗಳನ್ನು ಕಟ್ಟಿ ಅವುಗಳಿಗೆ ಕಬ್ಬಿಣದ ತಂತಿಗಳನ್ನು ಹಾಕಿ ಆದರಲ್ಲಿ ಜರಿ ಎಳೆ ಅಥವ ಹಳದಿ ಸಿಲ್ಕು ಎಳೆಗಳನ್ನು ತೂರಿಸಿ ನೇಯುವಾಗ ಅಂಚಿನಲ್ಲಿ ಕುಸುರಿಯು ನಿರ್ಮಾಣವಾಗುತ್ತದೆ. ಇದಕ್ಕಾಗಿ 'ಜಕಾರ್ಡ್' ಗಳು ಬಳಕೆಯಾಗುತ್ತವೆ.

ಬಟ್ಟೆ ನೇಯುವ ವಿಧಾನ ಹಾಗೂ ಕೈ ಮಗ್ಗದ ನಮೂನೆಯಲ್ಲಿ ಹಂತ ಹಂತವಾಗಿ ಬದಲಾವಣೆಯಾಗುತ್ತಾ ಬಂದಿದೆ. ಗುಳಿಮಗ್ಗದಿಂದ ಕೈಮಗ್ಗ, ಅಲ್ಲಿಂದ ಯಾಂತ್ರೀಕೃತ ಮಗ್ಗದೆಡೆಗೆ ಆದು ಪರಿವರ್ತನೆ ಹೊಂದಿದೆ. ಗುಡಿ ಕೈಗಾರಿಕೆಯ ರೂಪದಲ್ಲಿದ್ದ ಈ ಕಾಯಕವು 'ಕಾರ್ಖಾನೆ' ಗಳಾಗಿ ಪರಿವರ್ತನೆ ಹೊಂದಿದೆ. ಅಲ್ಲಲ್ಲಿ ನೇಯ್ಗೆ ಕಾರ್ಖಾನೆಗಳು ಹುಟ್ಟಿಕೊಂಡಿವೆ. ಶಾಲಿಯಾ ಸಮುದಾಯವಲ್ಲದೆ ಅನ್ಯ ಸಮುದಾಯದವರೂ ಈ ಉದ್ಯೋಗವನ್ನು ಹಮ್ಮಿಕೊಂಡಿದ್ದಾರೆ.

ಹಿಂದಿನ ಕಾಲದಲ್ಲಿ ಈ ಪ್ರದೇಶದ ಶಾಲಿಯರು ಗುಳಿಮಗ್ಗದಲ್ಲೇ ನೇಯುತ್ತಿದ್ದರು. ಒಂದೊಂದು ಊರಿನಲ್ಲಿ ಒಂದೊಂದು ಕುಟುಂಬದವರು ಒಂದೊಂದು ಗುಳಿಮಗ್ಗವನ್ನು ಹಾಕಿ ತಮ್ಮ ಪಾಡಿಗೆ ತಾವೇ ನೇಯುತ್ತಿದ್ದರು. ತಮ್ಮೂರಿನ ವಸ್ತ್ರದ ಬೇಡಿಕೆಯನ್ನು ಪೂರೈಸುವಷ್ಟು ನೇಯಲು ಅವರಿಂದ ಸಾಧ್ಯವಾಗುತ್ತಿತ್ತು. ಗಂಡಸರ ಮುಂಡು, ಹೆಂಗಸರ ಸೀರೆ, ಮಕ್ಕಳ ಗಿರ್ಗಿ (ಹಿಂದಿನ ಕಾಲದಲ್ಲಿ ಋತುಮತಿಯಾಗುವುದಕ್ಕಿಂತ ಮೊದಲು ಹೆಣ್ಣು ಮಕ್ಕಳು ಧರಿಸುವ ಸಣ್ಣ ಚೌಕಳಿಯ ಬಟ್ಟೆ), 'ಚೌಕ' ಎಂದು ಕರೆಯಲ್ಪಡುವ ಗಂಡಸರು ಲಂಗೋಟಿಯಂತೆ ಸುತ್ತಿಕೊಳ್ಳುವ ಬಟ್ಟೆ, 'ತೋರ್ತು' ಎನ್ನುವ ಮೈ ಒರೆಸುವ ಬೈರಾಸು (ಮ > ಬ ಆಗಿರಬೇಕು; ಮೈ + ಒರಸು - ಮೈಯೊರಸು ಬೈರಾಸು ಎಂದಾಗಿರುವ ಸಾಧ್ಯತೆಯಿದೆ) ವಲ್ಲಿ ಅಥವಾ ಹೊದಿಕೆ, ಹಾಸಿಗೆಗೆ ಹಾಸುವ ಹಾಸು ಬಟ್ಟೆ ಮೊದಲಾದವುಗಳನ್ನು ನೇಯಲಾಗುತ್ತಿತ್ತು. ಶಾಲಿಯಾ ಹುಡುಗರು ಮೊದಲು ನೇಯಲು ಆರಂಭಿಸುವುದು 'ಗಿರ್ಗಿ' ಯನ್ನು.

ಮುಂದೆ 'ಫ್ರೇಮ್' ಮಗ್ಗ ಬಂದ ಮೇಲೆ ಪರಸ್ಪರ ಸಹಕಾರದ ಅಗತ್ಯ ಕಂಡು ಬಂದಾಗ ಒಂದೆಡೆ ಸೇರಿ ವಾಸಿಸಲು ಆರಂಭಿಸಿದರು. ಹಾಗೆ ಕಾಸರಗೋಡು ಪ್ರದೇಶದಲ್ಲಿ ತೆರುಗಳು ಅಸ್ತಿತ್ವಕ್ಕೆ ಬರಲು ಕಾರಣವಾಯಿತು.

ಹಿಂದಿನ ಕಾಲದಲ್ಲಿ ಮಗ್ಗಗಳು ಹಾಳಾದರೆ ಅದನ್ನು ದುರಸ್ತಿಗೊಳಿಸಲು ಬಡಗಿಗಳು ತೆರುವಿಗೇ ಬರುತ್ತಿದ್ದರು. ಇವರು ತೆರುವಿನಲ್ಲಿ ಒಂದು ತಿಂಗಳೋ ಎರಡು ತಿಂಗಳೋ ಠಿಕಾಣಿ ಹೂಡುತ್ತಿದ್ದರು. ಅವರು ಮಗ್ಗದ ಮನೆಗಳಲ್ಲಿಯೇ ವಾಸಿಸುತ್ತಿದ್ದರು. ಅವರಿಗೆ ಅಕ್ಕಿ – ಬೆಲ್ಲ – ತರಕಾರಿ – ಜೀನಸುಗಳನ್ನು ತೆರುವಿನವರು ಒದಗಿಸಿಕೊಡುತ್ತಿದ್ದರು. ಅವರು ಅಲ್ಲೇ ಅಡಿಗೆ ಮಾಡಿ ಊಟ ಮಾಡುತ್ತಾ ಹಾಳಾದ ಮಗ್ಗಗಳನ್ನು ಸರಿಪಡಿಸಿ ಮರಳಿ ಹೋಗುತ್ತಿದ್ದರು.

ಶಾಲಿಯಾ ಸಮುದಾಯದಲ್ಲಿ ನಳ್ಳಿ ಸುತ್ತುವುದು, ನೂಲು ಸುತ್ತುವುದು, ಹಾಸು ತಯಾರಿಸುವುದು, ಮಗ್ಗಕ್ಕೆ ಹಾಸನ್ನು ಏರಿಸುವುದು ಮುಂತಾದ ಕೆಲಸಗಳಿಗೆ ಸ್ತ್ರೀಯರೂ ಮಕ್ಕಳೂ ನೆರೆಯವರೂ ಸಹಾಯ ಮಾಡಬೇಕಾಗುತ್ತದೆ. ಇದರೊಂದಿಗೆ ನೂಲಿಗೆ ಬಣ್ಣವನ್ನು ಹಾಕುವುದು, ಅವುಗಳನ್ನು ಒಣಗಿಸುವುದು, ಹಾಸಿಗೆ ಗಂಜಿ ತಯಾರು ಮಾಡುವುದು. ಈ ಮೊದಲಾದ ಕಾರ್ಯಗಳಲ್ಲಿ ಮನೆಯವರೆಲ್ಲರೂ ತೊಡಗಿಕೊಳ್ಳಬೇಕಾಗುತ್ತದೆ.

ಹಿಂದಿನ ಕಾಲದಲ್ಲಿ ಈ ಪ್ರದೇಶದ ಮಗ್ಗಗಳಲ್ಲಿ ನೇಯುವ ವಸ್ತ್ರಗಳು ಮುಂಡು, ಲುಂಗಿ, ಕಾವಿ, ಗಿರ್ಗಿ (ಇದರಲ್ಲಿ ಕಪ್ಪು ಮತ್ತು ನೀಲಿಯ ಸಣ್ಣ ಚೌಕಳಿಗಳಿರುವುದು ಸಾಮಾನ್ಯ) ಕೆಂಪು ಬಿಳಿ ಚೌಕಳಿಯ ಲಂಗೋಟಿ, ತುದಿಗಳಲ್ಲಿ ಮಾತ್ರ ಪುಟ್ಟ ಕೆಂಪು ಅಂಚುಗಳನ್ನು ಇರಿಸಿದ ಬೈರಾಸು, ಹಲವು ವಿಧಧ ಚೌಕಳಿಗಳನ್ನು ಒಳಗೊಂಡ ಹೊದಿಕೆಗಳು ೪೦,೬೦,೮೦.೧೨೦ ನಂಬ್ರಗಳ ಮುಂಡು ಹಾಗೂ ಸೀರೆಗಳು ಉತ್ಪತ್ತಿಯಾಗುತ್ತಿದ್ದವು.

ಆಯಾ ಜಾತಿಯವರಿಗೆ ಆಯಾ ವಸ್ತ್ರಗಳನ್ನು ನೇಯ್ದು ಕೊಡುವ ಸಂಪ್ರದಾಯ ಇವರಿಗಿತ್ತು. ಕಿರಿ ಅಂಚಿನ ಸೀರೆಗಳನ್ನು ಲೇಯಾ, ಕುಂಬಾರ, ವಾಣಿಯಾ ಹೆಂಗಸರಿಗೆ ನೇಯ್ದು ಕೊಡಲಾಗುತ್ತಿತ್ತು. ದೇವಿರಿ(ಕೆಂಪು ಅಂಚುಳ್ಳ ಸೀರೆ) ಸೀರೆಗಳನ್ನು ಬ್ರಾಹ್ಮಣ ಹೆಂಗಸರಿಗೆ ನೇಯ್ದು ಕೊಡಲಾಗುತ್ತಿತ್ತು. ಅರಿಶಿನ ಮತ್ತು ಸುಣ್ಣದಲ್ಲಿ ಅದ್ದಿ ನೇಯ್ದ 'ಚಿಟ್ಟಾಡ' ಎನ್ನುವ ಬಟ್ಟೆಯನ್ನು ದೇವಾಲಯಗಳಲ್ಲಿ ವಿಗ್ರಹಗಳಿಗೆ ಉಡಿಸಲೋಸುಗ ನೇಯ್ದು ಕೊಡಲಾಗುತ್ತಿತ್ತು.

<u>ಬಟ್ಟೆ ಮಾರಾಟದ ವಿಧಾನಗಳು:</u> "ಬಟ್ಟೆ" ಎಂದರೆ 'ದಾರಿ' ಎಂದರ್ಥವಿದೆ. ಆದುದರಿಂದ 'ಜೀವನವನ್ನು ಮುಟ್ಟ ಮರ್ಯಾದೆಯಿಂದ ಜೀವಿಸುವ ದಾರಿಯನ್ನು ತೋರಿಸುವುದನ್ನೇ' 'ಬಟ್ಟೆ' ಎಂದು ಕರೆದಿರಬಹುದು. ಇದು ನೇಕಾರನ ಜೀವನಕ್ಕೊಂದು ದಾರಿಯನ್ನು ತೋರಿಸುವ ಮಾಧ್ಯಮವೂ

ಹೌದು. ತಾನು ನೇಯ್ದು ಬಟ್ಟೆಯನ್ನು ಇತರರಿಗೆ ಮಾರಿದರೆ ಮಾತ್ರ ನೇಕಾರನ ಮನೆಯಲ್ಲಿ ಒಲೆ ಉರಿಯಲು ಸಾಧ್ಯವಷ್ಟೆ.

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶದ ನೇಕಾರರು ಹಿಂದೆಲ್ಲಾ ತಾವು ನೇಯ್ದ ಬಟ್ಟೆಯನ್ನು ಸಂತೆಗೆ ಕೊಂಡು ಹೋಗಿ ಮಾರಾಟ ಮಾಡುತ್ತಿದ್ದರು. ಅನಂತರ ಮನೆಮನೆಗಳಿಗೆ ಹೋಗಿ ಬಟ್ಟೆ ಮಾರಾಟ ಮಾಡುವಂತಹ ಪದ್ಧತಿ ಬಂತು. ಹೀಗೆ ಊರೂರು ಸುತ್ತಿ ವಸ್ತ್ರ ಮಾರಾಟಮಾಡುತ್ತಿದ್ದ ಶಾಲಿಯರಿಗೆ ಭತ್ತ, ಸೌತೆಕಾಯಿ, ಹಲಸಿನಕಾಯಿ, ಮಾವಿನಕಾಯಿ ಮುಂತಾದವುಗಳು ಪ್ರತಿಫಲವಾಗಿ ದೊರಕುತ್ತಿತ್ತು. ವಸ್ತ್ರದ ಗಂಟುಗಳನ್ನು ತಲೆಯ ಮೇಲಿರಿಸಿಕೊಂಡು ದೂರದ ಊರುಗಳಿಗೆ ಕಾಲ್ನಡಿಗೆಯಲ್ಲೇ ಅವರು ಸಾಗುತ್ತಿದ್ದರು. ಒಂದು ದಿನದಲ್ಲಿ ೨೦–೨೫ ಮೈಲಿಗಳಷ್ಟು ನಡೆಯುವವರೂ ಇದ್ದರು. ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ನೇಕಾರರ ಮನೆಯವರೇ ವಸ್ತ್ರ ಮಾರಾಟ ಮಾಡಬೇಕು ಎಂದು ಮೌನವಾದ ಒಪ್ಪಂದವನ್ನು ಅವರು ಮಾಡಿಕೊಳ್ಳುತ್ತಿದ್ದರು. ಒಬ್ಬರ ಪ್ರದೇಶಕ್ಕೆ ಇನ್ನೊಬ್ಬರು ಪ್ರವೇಶಿಸುವುದು ತೀರಾ ಕಡಿಮೆಯಾಗಿತ್ತು. ಆಯಾ ಪ್ರದೇಶದ ಜನರಿಗೂ, ಆ ನೇಕಾರರಿಗೂ ಪರಿಚಯದೊಂದಿಗೆ, ಒಂದು ರೀತಿಯ ಭಾವನಾತ್ಮಕ ಸಂಬಂಧವೂ ಏರ್ಪಡುತ್ತಿತ್ತು. ಸಾಲದ ರೂಪದಲ್ಲಿ ವಸ್ತ್ರವನ್ನು ಕೊಟ್ಟು ಕ್ರಮೇಣ ಹಣವನ್ನು ತೆಗೆದುಕೊಳ್ಳುತ್ತಿದ್ದರು. ಕೆಲವೊಮ್ಮೆ ವಸ್ತ್ರ ಮಾರಾಟಕ್ಕೆ ಹೋದವರು ೮–೧೦ ದಿನಗಳವರೆಗೂ ಮಾರಾಟದಲ್ಲೆ ನಿರತರಾಗಿರಬೇಕಾದ ಕಾಲದಲ್ಲಿ ಕೆಲವು ಪರಿಚಿತರ ಮನೆಗಳಲ್ಲಿ ತಂಗುತ್ತಿದ್ದರು. ಇಂತಹ ಸಂದರ್ಭದಲ್ಲಿ ತಮಗಿಂತ ಮೇಲ್ಜಾತಿಯವರ ಮನೆಯಲ್ಲಿ ತಂಗಿದ್ದರೆ, ಅವರ ಮನೆಯಲ್ಲೇ ಊಟವನ್ನು ಮಾಡುತ್ತಿದ್ದರು, ತಮಗಿಂತ ಕೆಳಜಾತಿಯವರಾಗಿದ್ದರೆ ತಾವೇ ಪ್ರತ್ಯೇಕವಾದ ಅಡಿಗೆಯನ್ನು ತಯಾರಿಸಿ ಉಣ್ಣುತ್ತಿದ್ದರು. ಕೆಲವರು ತಮ್ಮ ಮನೆಯಲ್ಲಿ ತಂಗಿದ ನೇಕಾರರಿಗೆ ಅಕ್ಕಿ, ಬೆಲ್ಲ, ತೆಂಗಿನಕಾಯಿ ಮತ್ತು ಸಾಂಬಾರ ಜೀನಸುಗಳನ್ನು ತಾವೇ ಒದಗಿಸಿಕೊಡುತ್ತಿದ್ದರು. ಅಂದಿನ ಕಾಲದಲ್ಲಿ ಮಾನವ ಮಾನವರೊಳಗಿನ ಭಾವನಾತ್ಮಕ ಸಂಬಂಧವು ಅಷ್ಟೊಂದು ಗಾಢವಾಗಿತ್ತು ತಾನೇ? ದೂರದಿಂದ ಬಂದವರನ್ನು ಉಪಚರಿಸುವ ಉದಾರ ಮನೋಭಾವದವರೇ ಆಗ ಹೆಚ್ಚಿದ್ದರು. (ತನ್ನ ನೆರೆಯವನನ್ನೇ ಪರಿಚಯವಿಲ್ಲದಂತಹ ಇಂದಿನ ಕಾಲವಲ್ಲ ಅದು) ಬಟ್ಟೆಯ ಗಂಟು ಹೊತ್ತುಕೊಂಡು ಹೋದವನು ಜೇಬಿನಲ್ಲಿ ಹಣದೊಂದಿಗೆ ತಲೆಯಲ್ಲಿ ಊರವರು ಕೊಟ್ಟ ವಿವಿಧ ವಸ್ತುಗಳ ದೊಡ್ಡ ಗಂಟನ್ನು ಹೊತ್ತುಕೊಂಡು ಮರಳಿ ಬರುತ್ತಿದ್ದನು. ಆ ಗಂಟಿನಲ್ಲಿ ಹಪ್ಪಳ, ಸಂಡಿಗೆ, ಸಾಂತಾಣಿ (ಬೇಯಿಸಿ ಒಣಗಿಸಿದ ಹಲಸಿನ ಬೀಜ), ಉಪ್ಪಿನಲ್ಲಿ ಹಾಕಿದ ಹಲಸಿನ ಸೊಳೆ ಮಾವಿನಕಾಯಿ, ಅಕ್ಕಿ, ತೆಂಗಿನಕಾಯಿ, ಕಾಯಿಪಲ್ಲೆ ಎಲ್ಲವೂ ಇರುತ್ತಿತ್ತು. 'ದೇಶ ನೋಡು ಕೋಶ ಓದು' ಎಂಬಂತೆ ಹಲವಾರು ಲೋಕಾನುಭವಗಳೂ ಅವರದಾಗುತ್ತಿತ್ತು.

ಸಂತೆಗಳಲ್ಲಿ ಮಾರಾಟ ಮಾಡುವಾಗ ಇಂತಹವರು ಸಂತೆಯ ಇಂತಹ ಕಡೆಯಲ್ಲೇ ಮಾರಬೇಕು ಎಂದು ನಿರ್ದಿಷ್ಟಗೊಳಿಸಲಾಗುತ್ತಿತ್ತು. ಸಾಧಾರಣವಾಗಿ ಕೊಂಡುಹೋದ ವಸ್ತ್ರಗಳೆಲ್ಲವೂ ಮಾರಾಟವಾಗುತ್ತಿತ್ತು. ಒಂದು ವೇಳೆ ಉಳಿದರೆ ಮನೆಗೆ ತಂದು ಹೆಂಡತಿ ಮಕ್ಕಳಿಗೆ ಅದನ್ನು ಉಡಲು ಕೊಡುತ್ತಿದ್ದರು.

ಹಿಂದಿನ ಕಾಲದಲ್ಲಿ ಒಂದೊಂದು ಮನೆಯಲ್ಲೂ ಮೂರೋ ನಾಲ್ಕೋ ಮಗ್ಗಗಳಿರುತ್ತಿದ್ದವು. ಮನೆಯವರೆಲ್ಲರೂ ನೇಯ್ಗೆಯಲ್ಲಿ ನಿರತರಾಗುತ್ತಿದ್ದರು. ಕ್ರಮೇಣ ಕೆಲವರು ಆರ್ಥಿಕವಾಗಿ ಹಿಂದುಳಿದು ಸ್ವಂತ ಮಗ್ಗಗಳನ್ನು ಇರಿಸಿಕೊಳ್ಳಲು ಅಸಾಧ್ಯವಾದಾಗ, ಸುಧಾರಿತ ಆರ್ಥಿಕ ಸ್ಥಿತಿಯುಳ್ಳವರು ಮಗ್ಗಗಳ ಸಂಖ್ಯೆಯನ್ನು ಜಾಸ್ತಿ ಮಾಡಿ ಇವರಿಂದ ನೇಯಿಸತೊಡಗಿದರು. ಅವರು 'ಮಾಸ್ಟರ್ ವೀವರ್ಸ್' ಎಂದನ್ನಿಸಿಕೊಂಡರು. ಆರ್ಥಿಕ ಸ್ಥಿತಿ ಬಹಳಷ್ಟು ಸುಧಾರಿಸಿದಾಗ ಇವರು ಹತ್ತರಿಂದ ನೂರು ಮಗ್ಗಗಳವರೆಗೂ ಇಟ್ಟುಕೊಂಡು ಸಂಬಳಕ್ಕಾಗಿ ನೇಯಿಸಿ, ದೂರದ ಊರುಗಳಿಗೆ ವಾಹನಗಳಲ್ಲಿ ಬಟ್ಟೆಗಳನ್ನು ಕೊಂಡೊಯ್ದು ಮಾರತೊಡಗಿದರು. ಒಂದು ಕಾಲದಲ್ಲಿ ಸಮಾನ ಆರ್ಥಿಕ ಸ್ಥಿತಿಯಲ್ಲಿದ್ದ ಇವರಲ್ಲಿ ಇದರಿಂದಾಗಿ ಆರ್ಥಿಕ ಅಸಮಾನತೆ ಕಂಡು ಬಂತು. ಬುದ್ಧಿವಂತಿಕೆ ಮತ್ತು ಅಸಮಾನತೆ ಚಾಕಚಕ್ಯತೆವುಳ್ಳವರು ಶ್ರೀಮಂತರೆನಿಸಿಕೊಂಡರು. ಔದಾಸೀನ್ಯದಿಂದ ಕುಳಿತುಕೊಂಡು ಮದ್ಯಪಾನಕ್ಕೆ ದಾಸರಾದವರು ನಿರ್ಗತಿಕರೆನಿಸಿಕೊಂಡರು.

ಮುಂದೆ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ನೇಕಾರರ ಸಹಕಾರೀ ಸಂಘಗಳು ಹುಟ್ಟಿಕೊಂಡು ಸ್ವಲ್ಪ ಮಟ್ಟಿಗೆ ಬಡ ನೇಕಾರರ ಸ್ಥಿತಿಯು ಅಲ್ಪ ಮಟ್ಟಿಗೆ ಸುಧಾರಿಸತೊಡಗಿತು. ಸಹಕಾರೀ ಸಂಘಕ್ಕೆ ಬಟ್ಟೆ ನೇಯ್ದು ಕೊಡುವುದರ ಮೂಲಕ ಉದ್ಯೋಗಕ್ಕೆ ಒಂದು ಸ್ಥಿರತೆಯೂ ಬಂತು. ಅದರೊಂದಿಗೆ ಕೆಲವು ಸವಲತ್ತುಗಳೂ ದೊರೆಯತೊಡಗಿದವು. ಕ್ರಮೇಣ ಮಿಲ್–ಬಟ್ಟೆಗಳು, ಕೈಮಗ್ಗದ ಬಟ್ಟೆಗಳ ಸ್ಥಾನವನ್ನು ಆಕ್ರಮಿಸಿದಾಗ ಕೈಮಗ್ಗದ ಬಟ್ಟೆಗಳನ್ನು ಕೇಳುವವರೇ ಇಲ್ಲ ಎನ್ನುವಂತಹ ಸ್ಥಿತಿಗೆ ಬಂತು. ಇಂತಹ ಔದ್ಯೋಗಿಕ ತೂಗುಯ್ಯಾಲೆಯಲ್ಲಿ ಈ ಪ್ರದೇಶದ ನೇಕಾರ ವರ್ಗವು ಸಾಗತೊಡಗಿ, ಇತ್ತೀಚೆಗೆ 'ಮಗ್ಗದ ಕೊಟ್ಟಿಗೆ' ಗಳು ಬಾಡಿಗೆ ಮನೆಗಳಾಗಿ, ಮಗ್ಗಗಳು ಕಿಟಕಿ ಬಾಗಿಲುಗಳಾಗಿ ಪರಿವರ್ತಿತವಾಗಿರುವುದು ಒಂದು ದುರಂತವೆಂದೇ ಹೇಳಬಹುದು. ಈಗ ಇಲ್ಲಿನ ನೇಕಾರರ ಸ್ಥಿತಿಯು:–

ಬೇಡ ಕಾಯದೆ ಕೆಟ್ಟ: ಜೇಡ ನೇಯದೆ ಕೆಟ್ಟ
ನೋಡದಲೆ ಕೆಟ್ಟ ಕೃಷಿಕನು ಸತಿಯಳ
ಬಿಟ್ಟಾಡಿದವ ಕೆಟ್ಟ ಸರ್ವಜ್ಞ

ಎನ್ನುವ ಸರ್ವಜ್ಞನ ವಚನದಂತೆ ಆಗಿಬಿಟ್ಟಿದೆ.



ನೂಲನ್ನು ಬಣ್ಣ ಹಾಕಿ ಬೇಯಿಸುವ ಪಾತ್ರೆ



ಬಣ್ಣ ಹಾಕಿದ ನೂಲನ್ನು ತೊಳೆಯುವ ಹಳೆಯ ಕಾಲದ ಪಾತ್ರೆ



ಬಣ್ಣ ಹಾಕಿದ ನೂಲನ್ನು ಹಿಂಡುವ ಗೂಟ



ಬಣ್ಣ ಹಾಕಿದ ನೂಲು



ಬಣ್ಣ ಹಾಕಿದ ನೂಲನ್ನು ರಾಟೆಯಲ್ಲಿ ಹಾಕಿ ಸಳಿ ತಯಾರಿಸುವುದು





ನಳಿಯಲ್ಲಿ ಸುತ್ತಿದ ನೂಲಿನಿಂದ ಹಾಸುಮರಕ್ಕೆ ಸುತ್ತಿ ಹಾಸನ್ನು ತಯಾರಿಸುವುದು



ಗುಳಿಮಗ್ಗದಲ್ಲಿ ನೇಯುವುದು



ಹಾಸಿಗೆ ಗಂಜಿ ಹಾಕುವುದು



ನೇಯ್ದು ತಯಾರಾದ ಬಟ್ಟೆಗಳು



ಸ್ತ್ರೀಯರೂ ನೇಯ್ಗೆ ವೃತ್ತಿಯಲ್ಲಿ ನಿರತರಾಗಿರುವುದು

## ೩. ಇತ್ತೀಚಿಗಿನ ಕೈಮಗ್ಗ ನೇಕಾರರ ಸಮಸ್ಯೆಗಳು ಹಾಗೂ ಪರಿಹಾರಗಳು

ಯಾವುದೇ ಕೈಗಾರಿಕೆಯಲ್ಲಿ 'ಯಾಂತ್ರಿಕತೆ ಕಾಲಿಟ್ಟಾಗ ಸಾಂಪ್ರದಾಯಿಕ ತಾಂತ್ರಿಕತೆಯಲ್ಲಿ ಏರು-ಪೇರಾಗುವುದು ಸ್ವಾಭಾವಿಕ. ಇಪ್ಪತ್ತನೇ ಶತಮಾನದಲ್ಲಿ ಭಾರತದ ನೇಯ್ಗೆ ಉದ್ಯಮಕ್ಕೆ ಸಂಭವಿಸಿದ್ದು ಇದೇ. ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಮಹಾತ್ಮಾ ಗಾಂಧಿಯವರ ಆದೇಶದಿಂದ ಕೈಮಗ್ಗ ಉದ್ಯಮಕ್ಕೆ ಬೆಂಬಲ ದೊರೆತು ಸ್ವಲ್ಪ ಮಟ್ಟಿಗೆ ಅದು ಉಸಿರಾಡತೊಡಗಿತು. ಆದರೆ ಈಗ ಪಾಶ್ಚಾತ್ಯ ಮೋಹವು ಹೆಚ್ಚಾಗಿ ಕೈಮಗ್ಗದ ಉದ್ಯಮವು ಕೇಳುವವರಿಲ್ಲದೆ ಮೂಲೆಗುಂಪಾಗಿದೆ. ಕೈಮಗ್ಗ ಉದ್ದಿಮೆಗಾರರು ಭಾರತದಲ್ಲಿ ಎಲ್ಲಿದ್ದರೂ ಅವರ ಸಮಸ್ಯೆ ಒಂದೇ. ಇತ್ತೀಚೆಗೆ ನೇಕಾರ ಎದುರಿಸುತ್ತಿರುವ ಸಮಸ್ಯೆಗಳೇನು? ಅವುಗಳಿಗೆ ಯಾವ ರೀತಿಯಲ್ಲಿ ಪರಿಹಾರ ಒದಗಿಸಬಹುದು ಎನ್ನುವುದರ ಕಡೆಗೊಂದು ಕಿರುನೋಟವಿದು.

ವಸ್ತ್ರ ನಿರ್ಮಾಣವು ಕಲೆಗಳಲ್ಲೆಲ್ಲಾ ಅತ್ಯಂತ ಸೌಂದರ್ಯ ಪೂರ್ಣವಾದುದು. ವೃತ್ತಿಯಾಧಾರಿತವಾಗಿ 'ಜಾತಿ' ನಿರ್ಧರಿತವಾಗುವುದಕ್ಕಿಂತಲೂ ಮುನ್ನವೇ ಜೀವನೋಪಾಯಕ್ಕಾಗಿ ಈ ವೃತ್ತಿಯನ್ನು ಮಾನವರು ಅವಲಂಬಿಸಿದ್ದರು. ಉಣ್ಣೆ, ಹತ್ತಿ, ರೇಷ್ಮೆ ನೂಲಿನಿಂದ ಪ್ರಾರಂಭವಾದ ನೇಯ್ಗೆ ಕಾಯಕದಲ್ಲಿ ಇದೀಗ ನೈಲಾನ್,ಟೆರಿಲಿನ್,ರೆಯಾನ್, ಬೆಂಬರ್ಗ, ಪೋಪಲೀನ್ ಎಂದು ವಿಧವಿಧ ನೂಲುಗಳು ವಸ್ತ್ರಲೋಕವನ್ನು ಆಕ್ರಮಿಸಿವೆ. ವಿಜ್ಞಾನದಿಂದ ನೇಕಾರಿಕೆಯು ಬಹಳಷ್ಟು ಪ್ರಗತಿಯ ಸ್ಥಿತಿಯಲ್ಲಿದೆ. ಕಾಲಕ್ಕೆ ತನ್ನನ್ನು ಹೊಂದಿಸಿಕೊಳ್ಳಬೇಕಾದುದು ಮಾನವನ ನಿತ್ಯ ಕರ್ತವ್ಯ. ಆದುದರಿಂದ ನೇಕಾರರೂ ಇಂತಹ ಆಧುನಿಕ ನೇಕಾರಿಕೆಗೆ ತಮ್ಮನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ೧೯೫೪ ರಿಂದೀಚೆಗೆ ಸ್ಥಾಪಿಸಲ್ಪಟ್ಟ ವಿಭಿನ್ನ ವಸ್ತ್ರೋದ್ಯೋಗ ವಿಚಾರಣಾ ಸಮಿತಿ ಹೀಗೆನ್ನುತ್ತದೆ. "ಪ್ರತಿಯೊಬ್ಬ ಕೈಮಗ್ಗ ನೇಕಾರನ ಹಿಂದೆ ಒಂದು ಯಂತ್ರ ಮಗ್ಗ ಎನ್ನುವ ಸಮೀಕರಣದ ಆಧಾರದ ಮೇರೆಗೆ ಬದಲಾವಣೆಗೆ ಇಂಬುಗೊಡಬೇಕು. ಹಾಗೂ ನೇಕಾರನ ಗುಡಿಸಲಿನಲ್ಲಿಯೇ ಯಂತ್ರಮಗ್ಗ ನೆಲೆಯಾಗಬೇಕು." (ಪದ್ಮಶಾಲಿ. ೯೩: ಪುಟ ೧೫) ಆದರೆ ಈ ಶಿಫಾರಸು ಇನ್ನೂ ಜಾರಿಗೆ ಬಂದಿಲ್ಲ.

ನೇಕಾರಿಕೆಯಲ್ಲಿ ಇರುವಷ್ಟು ಸಮಸ್ಯೆ ಬಹುಶಃ ಬೇರಾವ ವೃತ್ತಿಯಲ್ಲೂ ಇಲ್ಲ ಎಂದು ಹೇಳಬಹುದು. ಇಂದಿನ ಆಧುನಿಕ ಯುಗದಲ್ಲಿ ಸಾಮಾನ್ಯ ನೇಕಾರನೊಬ್ಬನು ತನ್ನ ಹಳೆಯ ಮಗ್ಗವೊಂದನ್ನಿರಿಸಿ ದುಡಿದರೆ ಖಂಡಿತವಾಗಿಯೂ ಅವನ ಜೀವನ ನಿರ್ವಹಣೆ ಸಾಧ್ಯವಿಲ್ಲ.

ನೇಕಾರನೊಬ್ಬನ ಎದುರಿಗಿರುವ ಸಮಸ್ಯೆಗಳು ನೂಲಿನ ಬೆಲೆ ಏರಿಕೆ, ಬಣ್ಣದ ಬೆಲೆ ಏರಿಕೆ, ಉತ್ತಮ ನೂಲಿನ ಕೊರತೆ, ನೇಕಾರಿಕೆಗೆ ಸಂಬಂಧಿಸಿದ ಹೊಸ ವಿಷಯಗಳ ಅರಿವಿನ ಕೊರತೆ ಇತ್ಯಾದಿ.. ಬಡತನದ ರೇಖೆಗಿಂತ ಕೆಳಗಿರುವ ನೇಕಾರರೆಲ್ಲರೂ ಹಳ್ಳಿಯಲ್ಲೇ ಇರುವುದರಿಂದ ವಿದ್ಯಾಭ್ಯಾಸದಿಂದಲೂ ಅವರು ವಂಚಿತರಾಗಿದ್ದಾರೆ. ಒಂದೊಂದು ಮನೆಯಲ್ಲಿ ಒಂದೊಂದು

ಮಗ್ಗವನ್ನಿಟ್ಟು ನೇಯುವವರೂ ಇದ್ದಾರೆ. ಕೂಪಮಂಡೂಕಗಳಂತೆ ಇವರು ನೇಕಾರಿಕೆಗೆ ಅದೇ ಹಳೆಯ ತಂತ್ರಜ್ಞಾನವನ್ನು ಬಳಸಿಕೊಳ್ಳುತ್ತಿದ್ದಾರೆ. ಹಳೆಯ ಫ್ಯಾಶನ್ನಿನ ಈ ಬಟ್ಟೆಯನ್ನು ಉಡುವವರ ಸಂಖ್ಯೆ ಈಗ ತೀರಾ ಕಡಿಮೆಯಾಗಿದೆ. ಕಷ್ಟಪಟ್ಟು ಅವನು ನೇಯ್ದು ಸೀರೆ ಕೊಳ್ಳುವವರಿಲ್ಲದೆ ಅವನ ಮಗ್ಗದಲ್ಲೇ ಉಳಿದು ಬಿಡುತ್ತದೆ. "ನೇಕಾರನ ಹೆಂಡತಿ ಬೆತ್ತಲೆ" ಎಂಬ ಪ್ರಚಲಿತ ಗಾದೆಯಂತೆ, ಅವನ ಹೆಂಡತಿ ಹಳೆಯ ಸೀರೆಯನ್ನುಟ್ಟು, ಮಕ್ಕಳಿಗೆ ಹೊಟ್ಟೆ ತುಂಬಾ ನೀಡಲಾಗುತ್ತಿಲ್ಲವಲ್ಲ ಎಂಬ ಕೊರಗಿನಿಂದ ನಿಟ್ಟುಸಿರು ಬಿಡುತ್ತಾಳೆ. ಗಂಡ ಹೆಂಡತಿ ಇಬ್ಬರೂ ದಿನವಿಡೀ ಸೇರಿ ನೇಯ್ದ ಆರು ಕಾಲು ಮೀಟರಿನ ಸೀರೆಗೆ ರೂ. ೬೦ ಮಜೂರಿ ಸಿಕ್ಕರೆ ಅದೇ ಪುಣ್ಯ. ಹಾಗಿರುವಾಗಮಿಲ್ಲಿನ ಬಟ್ಟೆಯೊಂದಿಗೆ ಪೈಪೋಟಿಗಿಳಿಯುವುದಾದರೂ ಹೇಗೆ? ತಮ್ಮ ಈ ಸ್ಥಿತಿಗೆ ಕಾರಣವಾದ ಪಾರಂಪರಿಕ ಉದ್ಯೋಗದ ಬಗ್ಗೆ ಹೊಸ ತಲೆಮಾರಿನ ಯುವಕರಿಗೆ ಸಹಜವಾಗಿಯೇ ಬೇಸರ ಬಂದು ಬಿಟ್ಟಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಪತ್ರಿಕೋದ್ಯಮದಲ್ಲಿ ಪ್ರಖ್ಯಾತರಾದ ಮಹಿಳೆ 'ಮಾರ್ಗರೇಟ್ ಬರ್ಕ್‌ವೈಟ್'. ಅವರ ದೇಶದ 'ಲೈಫ್' ಪತ್ರಿಕೆಗೆ ವರದಿ ಮಾಡಲು ಭಾರತಕ್ಕೆ ಬಂದು ಕಾರ್ಯನಿರತರಾಗಿದ್ದರು. ಅವರು ಸಂಶೋಧನಾ ಪೂರ್ವಕವಾಗಿ ಬರೆದಿರುವ 'ಬರ್ಕ್‌ವೈಟ್ ಕಂಡ ಭಾರತ'ದಲ್ಲಿ ನೇಕಾರರ ಜೀವನದ ಬಗೆಗಿನ ವಿವರಗಳು ಹೀಗಿದೆ:- "ಸಂದಿಗೊಂದಿಗಳಲ್ಲಿ ನುಗ್ಗಿಕೊಂಡು ಹೋಗುತ್ತಾ ಸಣ್ಣ ಸಣ್ಣ ಬಿಲಗಳಂತಹ ಕೋಣೆಗಳಿರುವ ಜಾಗಕ್ಕೆ ಕಾಲಿಟ್ಟೆ. ಬಡಕಲು ದೇಹ.. ಉಬ್ಬಿದ ನರಗಳು, ಕುಶಲ ಕೈಗಳು, ಕಾತುರ ನಿರೀಕ್ಷೆ ತುಂಬಿದ ಕಣ್ಣಿನ ಚುರುಕು ಜನ... ಇವರಿಗೇ ಆದ ವಿಶಿಷ್ಟ ಸೀರೆ ಧೋತಿಗಳಲ್ಲಿದ್ದರು. ಇವರ ಕೆಲಸ ಸೀರೆಯ ಅಂಚುಗಳಿಗಾಗಿ, ಬಣ್ಣದ ದಾರಗಳನ್ನು ಅಣಿಗೊಳಿಸುವುದು. ಸಣ್ಣ ನೀಲಿ ಅಥವಾ ಕೆಂಪು ನೇಯ್ಗೆ ಅಂಚಿನ ಸೀರೆಗಳು ಅಲ್ಲಿ ನಿರ್ಮಾಣವಾಗುತ್ತಿದ್ದವು. ಅಲ್ಲಿ ಒಂದೇ ಒಂದು ನಲ್ಲಿ ಇತ್ತು. ಅರವತ್ತು ಮನೆಗಳಿಗೆ ಅದೊಂದೇ ನಲ್ಲಿ. ಸ್ನಾನಕ್ಕೆ ಎಲ್ಲಿಯೂ ಅವಕಾಶವಿರಲಿಲ್ಲ. ಒಂದೇ ಗಿರಣಿಯಲ್ಲಿ ೧೫-೩೦ ವರ್ಷಗಳಷ್ಟು ಕಾಲ ಕೆಲಸ ಮಾಡಿದವನು ಕೂಡಾ ಯಾವುದೇ ಕ್ಷಣದಲ್ಲಿ ಕೆಲಸ ಕಳೆದುಕೊಳ್ಳಬಹುದಿತ್ತು. ಬಿಟ್ಟು ಹೋಗುವಾಗ ಅವರಿಗೆ ಕೊಡಬೇಕಾದ ಹಣ ದಲ್ಲಾಳಿಗಳ ಪಾಲಾಗುತ್ತಿತ್ತು. ಇದಕ್ಕಿಂತ ಹೆಚ್ಚು ಚಿಟಿಕಲ್ ಆದ ಮನೆಗಳನ್ನು ನಾನೆಲ್ಲೂ ನೋಡಿರಲಿಲ್ಲ. ಆ ಗೂಡುಗಳ ನೆಲದ ಬದಿಗಳಲ್ಲಿ ಒಂದೇ ರೀತಿಯ ಸಣ್ಣಸಣ್ಣ ಬಿಲದಂತಹ ಗೂಡುಗಳು. ನೆಲದ ಮೇಲೆ ಒತ್ತೊತ್ತಾಗಿ ಸುರುಳಿ ಸುತ್ತಿಕೊಂಡಿದ್ದಂತೆ ಬಿದ್ದಿದ್ದ ಆಕೃತಿಗಳಲ್ಲಿ ಮಲಗಿದ್ದ ಮನುಷ್ಯನವು ಎಂದು ತಕ್ಷಣ ಗುರುತಿಸುವುದು ನನಗೆ ಸಾಧ್ಯವಾಗಲಿಲ್ಲ. ಇವರೆಲ್ಲರೂ ನೇಕಾರರೇ......"(ಉದಯವಾಣಿ ಎಸ್.ಜಿ.ಪುಟ. ೪-೨೦೦೨)

ಸ್ವಾತಂತ್ರ್ಯ ಪೂರ್ವದ ನೇಕಾರರ ಸ್ಥಿತಿಯನ್ನು ಇದು ವಿವರಿಸುತ್ತದೆ. ಆದರೆ, ಇಂದೂ ಕೆಲವೆಡೆ ನೇಕಾರರ ಸ್ಥಿತಿ ಇದಕ್ಕಿಂತ ಉತ್ತಮವಾದುದು ಎಂದು ಬೆನ್ನು ತಟ್ಟಿಕೊಳ್ಳುವಂತಿಲ್ಲ. "ಆಧುನಿಕತೆಯ ನೆಪದಲ್ಲಿ ಅಭಿವೃದ್ಧಿಯ ವೇಗಕ್ಕೆ ಅನುಗುಣವಾಗಿ ಕಂಪ್ಯೂಟರ್ ಹಾಗೂ ಯಂತ್ರಗಳು ಇಡುತ್ತಿರುವ ದಾಂಗುಡಿಗೆ ಗುಡಿಕೈಗಾರಿಕೆಗಳು ಏದುಸಿರು ಬಿಡುವಂತಾಗಿವೆ. ಕುಂಬಾರರು, ಚಮ್ಮಾರರು ಈ ಮೊದಲಾದವರ ಸಾಲಿಗೆ ಈಗ ನೇಕಾರರೂ ಸೇರತೊಡಗಿದ್ದಾರೆ. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿ ಕೈ ಮಗ್ಗದ ನೇಯ್ಗೆಯನ್ನೇ ಕಸುಬನ್ನಾಗಿಸಿಕೊಂಡು ಬದುಕು ಸಾಗಿಸುತ್ತಿರುವ ಸುಮಾರು ೧೫,೦೦೦ ಕ್ಕೂ ಮಿಕ್ಕಿದ ಕುಟುಂಬಗಳು ತಾವು ನೇಯುವ ಬಟ್ಟೆಗಳಿಗೆ ಮಾರುಕಟ್ಟೆಯಿಲ್ಲದೆ ದಿಕ್ಕೆಟ್ಟು ಕೂತಿವೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ೧,೫೦೦ ಕ್ಕೂ ಹೆಚ್ಚಿನ ಕೈಮಗ್ಗಗಳೀಗ ಕಳೆದೆರಡು ವರ್ಷಗಳಿಂದ ಕೆಲಸವಿಲ್ಲದೆ, ಧೂಳು, ಜೇಡರ ಬಲೆ ಹಿಡಿಸಿಕೊಂಡು ಅತಂತ್ರ ಸ್ಥಿತಿಯತ್ತ ಸಾಗಿವೆ. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿರುವ ತಲಾ ನಾಲ್ಕು ಪ್ರಾಥಮಿಕ ನೇಕಾರರ ಸಹಕಾರ ಸೇವಾ ಸಂಘಗಳೂ ಉತ್ಪಾದಿಸಲಾದ ಸುಮಾರು ಒಂದು ಕೋಟಿ ರೂಪಾಯಿ ಮೌಲ್ಯದ ಸೀರೆಗಳು ಸೇರಿದಂತೆ ಜವುಳಿ ಉತ್ಪನ್ನಗಳ ದಾಸ್ತಾನು ಮಾರಾಟವಾಗದೆ, ಮಾರುಕಟ್ಟೆಯಲ್ಲಿ ಬೇಡಿಕೆಯಿಲ್ಲದೆ ಬಾಕಿಯಾಗಿವೆ. ೧೯೬೫ರಲ್ಲಿ ಉತ್ತಮ ಬಟ್ಟೆಗಳ ತಯಾರಿಕೆಗೆ ರಾಷ್ಟ್ರ ಪ್ರಶಸ್ತಿ ಪಡೆದ ಸುಮಾರು ೪೫೦ ಸದಸ್ಯರಿದ್ದ (ಈಗ ೧೫೦ಕ್ಕೆ ಇಳಿದಿದೆ) ತಾಲಿಪ್ಪಾಡಿಯ 'ಪ್ರಾಥಮಿಕ ನೇಕಾರರ ಸಹಕಾರ ಸೇವ ಸಂಘ'ದಲ್ಲಿ ರೂ.೧೬ ಲಕ್ಷದ ದಾಸ್ತಾನು ಉಳಿದುಕೊಂಡಿದ್ದರೆ, ನೇಕಾರರ ಸಹಕಾರಿ ಸಂಘದಲ್ಲಿ ರೂ. ೩೫ ಲಕ್ಷದ ದಾಸ್ತಾನು ಮಾರಾಟವಾಗದೆ ಉಳಿದಿದೆ. ಒಂದು ಕಾಲದಲ್ಲಿ ೨೦-೩೦ ಮಗ್ಗಗಳು ಕಾರ್ಯನಿರತವಾಗಿದ್ದಲ್ಲಿ ಈಗ ೨-೩ ಉಳಿದು ಉಳಿದ ಮಗ್ಗಗಳೆಲ್ಲ ಧೂಳು ಹಿಡಿದು ಕೈಕಾಲು ಕಳಕೊಂಡು ಮೂಲೆಯಲ್ಲಿ ಕುಳಿತಿವೆ. "( ಪದ್ಮಶಾಲಿ ಪತ್ರಿಕೆ ಮೇ.೨೦೦೩ ಪುಟ ೨೧.)

ಇದು ಇತ್ತೀಚಿಗಿನ ನೇಕಾರನ ಸ್ಥಿತಿಯ ವಿವರಣೆ ಕೈಮಗ್ಗದ ಬಟ್ಟೆಗಳಿಗೆ ಬೇಡಿಕೆ ಕಡಿಮೆಯಾದುದೇ ಈ ಸಮಸ್ಯೆಗಳಿಗೆ ಮೂಲ ಖ್ಯಾತ ವಿದ್ವಾಂಸ ಶ್ರೀ ಕೇಶವ ಉಚ್ಚಿಲರು ಹೀಗೆನ್ನುತ್ತಾರೆ:- ಒಂದು ಕಾಲದಲ್ಲಿ ನೇಕಾರಿಕೆಯು ಜಿಲ್ಲೆಯ (ದ.ಕ ಮತ್ತು ಕಾಸರಗೋಡು) ಪ್ರಮುಖವಾದ ವೃತ್ತಿಗಳಲ್ಲಿ ಒಂದಾಗಿತ್ತು. ಹಿಂದೊಮ್ಮೆ ದಕ್ಷಿಣ ಕನ್ನಡದಲ್ಲಿ ತಯರಾದ ಕೈಮಗ್ಗದ ಬಟ್ಟೆಗಳಿಗೆ ಮದರಾಸಿನಂತಹ ಊರುಗಳಿಂದಲೂ ಬೇಡಿಕೆಯಿತ್ತು. ನೂರಾರು ಕುಟುಂಬಗಳು ಈ ವೃತ್ತಿಯನ್ನವಲಂಬಿಸಿದ್ದವು. ಈಗ ಆಧುನಿಕ ಯಾಂತ್ರೀಕೃತ ಗಿರಣಿಗಳಲ್ಲಿ ತಯಾರಾಗುತ್ತಿರುವ ಬಟ್ಟೆಗಳಿಂದಾಗಿ ಕೈ ಮಗ್ಗದ ಬಟ್ಟೆಗಳಿಗೆ ಬೇಡಿಕೆ ಕಡಿಮೆಯಾಗಿ ನೇಕಾರಿಕೆಯ ವೃತ್ತಿ ಹೆಸರಿಗೆ ಮಾತ್ರ ಉಳಿದುಕೊಂಡಿವೆ.(ಕೆನರಾ ೩೦೦;೨೦೦೦; ಪು; ೮೧).

ಕಾಸರಗೋಡು ಪ್ರದೇಶವು ಇಪ್ಪತ್ತು ವರ್ಷಗಳ ಕೆಳಗೆ ನೇಕಾರಿಕೆಗೆ ಪ್ರಸಿದ್ಧವಾಗಿತ್ತು. ನೇಕಾರರ 'ತೆರು'ಗಳಿಂದ ಮಗ್ಗದ ಲಯಬದ್ಧವಾದ ದನಿಯು ಪೈಪೋಟಿಯಲ್ಲಿ ಕೇಳಿಬರುತ್ತಿತ್ತು. ಆರಂಭದಲ್ಲಿ ಸ್ವತಂತ್ರವಾಗಿ ನೇಯುತ್ತಿದ್ದ ನೇಕಾರರು ಕಾಸರಗೋಡಿನಲ್ಲಿ 'ನೇಕಾರರ ಸಹಕಾರೀ ಸಂಘವು ಸ್ಥಾಪಿತವಾದ ಮೇಲೆ ಆದರ ಸದಸ್ಯರಾಗಿ ನೇಕಾರಿಕೆಯನ್ನು ನಡೆಸಲಾರಂಭಿಸಿದರು. ಸರಕಾರೀ ಉದ್ಯೋಗದಂತೆಯೇ ಎಲ್ಲಾ ಸೌಲಭ್ಯಗಳನ್ನು ಪಡೆದುಕೊಳ್ಳತೊಡಗಿದರು.

ಹಲವು ವರ್ಷಗಳ ಕೆಳಗೆ 'ಕೋರಾ' ಎನ್ನುವ ಖಾದಿ ಬಟ್ಟೆಯನ್ನು ಕಾಸರಗೋಡಿನ ನೇಕಾರರು ಸ್ಪರ್ಧಾತ್ಮಕವಾಗಿ ನೇಯ್ದು ಹಣ ಸಂಪಾದನೆ ಮಾಡಿದ್ದರು. ಕೆಲವೆಡೆ 'ಮಾಸ್ಟರ್ ವೀವರ್ಸ್' ಎಂದು ಕರೆಯಲ್ಪಡುತ್ತಿದ್ದ ಆರ್ಥಿಕವಾಗಿ ಅನುಕೂಲಸ್ಥರಾದವರು ಹೆಚ್ಚಿನ ಸಂಖ್ಯೆಗಳಲ್ಲಿ ಮಗ್ಗವನ್ನು ಹಾಕಿ ನೇಯ್ಗೆ ಶಾಲೆಗಳನ್ನು ನಡೆಸುತ್ತಿದ್ದರು. ಅಲ್ಲಿ ವೇತನಕ್ಕಾಗಿ ನೇಯುವವರು ಬೇಕಾದಷ್ಟು ಇದ್ದರು. ಈ ರೀತಿ ನಿರ್ಮಾಣಗೊಂಡ ವಸ್ತ್ರಗಳನ್ನು ದೂರದ ಊರಿಗೆ ಮಾರಾಟ ಮಾಡಲು ಕೊಂಡು ಹೋಗುತ್ತಿದ್ದರು.

ಕಾಸರಗೋಡಿನ ನೇಕಾರರ ನೆಮ್ಮದಿಯ ಜೀವನಕ್ಕೆ ಭಂಗ ಉಂಟಾದದ್ದು. ಮಿಲ್ ಬಟ್ಟೆಗಳ ಆಗಮನದೊಂದಿಗೆ ಕಾಸರಗೋಡಿನ ನೇಕಾರರ ಸಂಘದ ಮೂಲಕ ನಿರ್ಮಾಣವಾದ ವಸ್ತ್ರಗಳಿಗೆ ಬೇಡಿಕೆಯು ಕಡಿಮೆಯಾಯಿತು. 'ಮಾಸ್ಟರ್ ವೀವರ್ಸ್' ನ ನೇಯ್ಗೆ ಶಾಲೆಗಳಲ್ಲಿ ನೇಯ್ದ ಬಟ್ಟೆಗಳು ಮನೆಗಳಲ್ಲಿ ಹಾಗೂ ಶಾಲೆಗಳಲ್ಲಿ ಉಳಿದವು. ಸಹಕಾರಿ ಸಂಘ ನೇಕಾರರಿಗೆ ವೇತನ ನೀಡಲಾಗದೆ ಸಾಲದಲ್ಲಿ ಮುಳುಗಿಹೋಯಿತು. ನೇಕಾರರು ಅನ್ಯ ಉದ್ಯೋಗವನ್ನು ಅರಸುವಂತಹ ದುಸ್ಥಿತಿಯು ಬಂತು. ಗೌರವಪೂರ್ವಕವಾದ ಈ ಉದ್ಯೋಗ ಈಗ ಮೂಲೆಗುಂಪಾಗುವ ಸ್ಥಿತಿಗೆ ಬಂದಿದೆ. ಕಾಸರಗೋಡಿನ ವಿದ್ಯಾನಗರ್ ಎಂಬಲ್ಲಿ ಸಹಕಾರ ಸಂಘದ ವತಿಯಿಂದ ನಡೆಯುವ ಒಂದು ನೇಯ್ಗೆ ಕಾಲನಿ ಇದೆ. ಇಲ್ಲಿ ಈಗಲೂ ಕೆಲವರು ನೇಯುತ್ತಾರೆ. ಯಾವುದೋ ಆಶಾಕಿರಣವೊಂದು ದೂರದಲ್ಲಿ ಕಾಣುತ್ತಿರುವ ಹುಮ್ಮಸ್ಸು ಇವರಿಗೀಗ ಇದೆ. ಸುಶಿಕ್ಷಿತ ಶಾಲಿಯಾ ಸಮುದಾಯ ಅಲ್ಪಮಟ್ಟಿಗೆ ದೂರೀಕರಿಸಿದಂತಹ ಈ ಕಾಯಕವು ಇಲ್ಲಿ ಇತರ ಸಮುದಾಯವರಿಂದಲೂ ನಡೆಯುತ್ತಿದೆ. ಪುರುಷರು ಮಾತ್ರವಲ್ಲದೆ, ಸ್ತ್ರೀಯರೂ ಪ್ರೀತಿಯಿಂದ ಅಭಿಮಾನದಿಂದ ಇಲ್ಲಿ ನೇಯುತ್ತಾರೆ. ತಮ್ಮ ಒಳಗಿನ ವಿಷಾದವನ್ನು ತುಂಬು ಸಂತೃಪ್ತಿಯ ನಗುವಿನಲ್ಲಿ ಅಡಗಿಸಿಡುವ ಪ್ರಯತ್ನ ಮಾಡುತ್ತಿದ್ದಾರೆ.

ಜಗತ್ತಿನ ಮಾನ ಮುಚ್ಚುವ ನೇಕಾರನೇ ಬಾಳಿನಲ್ಲಿ ದಿನೇ-ದಿನೇ ಬತ್ತಲೆಯಾಗುತ್ತಿರುವುದು ಇಂದು ವಾಸ್ತವ ಸಂಗತಿಯಾಗಿದೆ. ವಸ್ತ್ರ ಲೋಕದ ನೇತಾರನಾದ ಈ ನೇಕಾರ ಅತಂತ್ರತೆಯ [illegible] ನೋಡುವ ಪ್ರಸಂಗ ಒದಗಿದೆ.. ಕರಕುಶಲ ಕಲೆ ಯಾರಿಗೂ ಬೇಡದ

ಮಗುವಾಗಿದೆ. ಸರಕಾರ ಸ್ಥಾಪಿಸಿದ ಸಮಿತಿ – ಆಯೋಗಗಳ ಶಿಫಾರಸುಗಳು ಅತ್ತ ದಿಲ್ಲಿಯಲ್ಲಿ ಕೊಳೆಯುತ್ತಿದೆ. ಇತ್ತ ಹಳ್ಳಿಯಲ್ಲಿ ನೇಕಾರ ನರಳುತ್ತಿದ್ದಾನೆ. (ಪದ್ಮಶಾಲಿ ೯೩ : ಪುಟ ೧೩). ನೇಕಾರರು ಇಂದು ಎದುರಿಸುತ್ತಿರುವ ಸಮಸ್ಯೆಗಳಿಗೆ ಈ ಕೆಳಗಿನ ಕಾರಣಗಳನ್ನು ಕೊಡಬಹುದು.

೧. ಕಚ್ಚಾ ಸಾಮಾಗ್ರಿಗಳಾದ ನೂಲು, ಬಣ್ಣ, ಜರಿಗಳ ಬೆಲೆ ಏರಿಕೆ.

೨. ಹಳೆಯ ತಂತ್ರಜ್ಞಾನವನ್ನೇ ಬಳಸುವುದು.

೩. ಮಗ್ಗಗಳನ್ನು ಇರಿಸಲು ಸರಿಯಾದ ಸ್ಥಳಾವಕಾಶವಿಲ್ಲದಿರುವುದು (ಷೆಡ್ಡುಗಳ ಕೊರತೆ)

೪. ಮಾರುಕಟ್ಟೆಯಲ್ಲಿ ಹೆಚ್ಚು ಬೇಡಿಕೆ ಇರುವ ವಸ್ತ್ರ ನಿರ್ಮಾಣವನ್ನು ಮಾಡುವಲ್ಲಿ ಅನುಭವದ ಕೊರತೆ.

೫. ವಿದೇಶೀ ಬಟ್ಟೆಗಳ ಆಮದು ಮತ್ತು ಮಿಲ್ಲು ಬಟ್ಟೆಗಳ ಉತ್ಪಾದನೆಯಿಂದ ಹಳೆಯ ಮಾದರಿಯ ಹತ್ತಿಯ ವಸ್ತ್ರಗಳಿಗೆ ಬೇಡಿಕೆ ಕಡಿಮೆ.

೬. ಅತಿಯಾದ ಬಡತನ.

೭. ನೇಕಾರರಿಗೆ ಸರಕಾರದಿಂದ ದೊರೆಯುವ ಸೌಲಭ್ಯಗಳ ಅರಿವಿಲ್ಲದಿರುವುದು.

೮. ಸಹಕಾರೀ ಸಂಘಗಳ ಉಪಯುಕ್ತತೆಯನ್ನು ಪಡೆದುಕೊಳ್ಳದೆ ಇರುವುದು.

೯. ಸ್ವತಂತ್ರರಾಗಿಯೇ ನೇಯಲು ಬಯಸುವುದು.

೧೦. ಅಗತ್ಯತೆ ಆಧಾರಿತ ಮಗ್ಗಗಳು, ಪೂರಕ ಸಾಮಾಗ್ರಿಗಳು ತತ್ಸಂಬಂಧಿ ಸಲಕರಣೆಗಳ ಅಭಾವ.

೧೧. ತಮ್ಮದೇ ವಲಯದಲ್ಲಿ ಇರಲು ಬಯಸುವುದು.

೧೨. ಹೊಸ ತಲೆಮಾರಿಗೆ ವೃತ್ತಿಯ ಬಗ್ಗೆ ಅಗೌರವದ ಭಾವನೆ ಇರುವುದು.

೧೩. ನೇಕಾರಿಕೆಯ ಉಪಕಾಯಕಗಳಾದ ಹಾಸು ಸುತ್ತುವುದು, ನಳಿ ಸುತ್ತುವುದು ಮುಂತಾದುವುಗಳನ್ನು ಸಮಾನ ಕಾಯಕವಾಗಿ ಪರಿಗಣಿಸದೆ ಇರುವುದು.

೧೪. ಸ್ವತಂತ್ರನಾಗಿ ನೇಯುವ ನೇಕಾರ ಸರಕಾರ ನೀಡುವ ಸೌಲಭ್ಯಗಳಿಂದ ವಂಚಿತನಾಗಿರುವುದು.

೧೫. ಔದಾಸೀನ್ಯ ಮನೋಭಾವ.

೧೬. ಸಂಘಟನಾ ಸಮಸ್ಯೆ.

ಇವುಗಳ ಪರಿಹಾರಕ್ಕಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಪ್ರಯತ್ನಿಸುತ್ತಲೇ ಇವೆ. 'ಸರಕಾರದಿಂದ ಸರಿಯಾದ ಮನ್ನಣೆಯು ದೊರೆಯುತ್ತಾ ಇಲ್ಲ, ಜಾರಿಗೆ ತಂದ ಯೋಜನೆಗಳು ಸಂಬಂಧಪಟ್ಟವರಿಗೆ ತಲುಪುತ್ತಾ ಇಲ್ಲ' ಎನ್ನುವ ಕೂಗು ಅಲ್ಲಲ್ಲಿ ಕೇಳಿ ಬರುತ್ತಾ ಇದೆ. ನೇಕಾರ ಸಹಕಾರ ಸಮಿತಿಗಳು ಹುಟ್ಟಿ ಹಲವು ಕಡೆ ಅವರ ಪ್ರಯೋಜನ ಜನರಿಗೆ ಸಿಕ್ಕಿದೆಯಾದರೂ ಹೆಚ್ಚಿನೆಲ್ಲಾ ಕಡೆಗಳಲ್ಲಿ ನೇಕಾರನ ಜೀವನ ಮಟ್ಟ ಒಂದು ಮೆಟ್ಟಿಲೂ ಮೇಲೆ ಮುಟ್ಟಿಲ್ಲ. ಸಹಕಾರ

ಸಮಿತಿಯ ಪರಿಮಿತಿಯಲ್ಲಿ ದೇಶದ ಶೇಕಡಾ ಮೂವತ್ತು ನೇಕಾರರು ಇರಬಹುದಷ್ಟೇ. ಸರಕಾರವು ೧೯೮೫ ರಲ್ಲಿ ಅಂಗೀಕರಿಸಿದ ವಸ್ತ್ರ ನೀತಿಯ ಅಂಗವಾಗಿ ಸ್ವೀಕರಿಸಲ್ಪಟ್ಟ ಮುಖ್ಯ ಧೋರಣೆಗಳಲ್ಲಿ ಕೆಲವು ವಸ್ತ್ರಗಳನ್ನು ಬರೇ ಕೈ ಮಗ್ಗದಲ್ಲೇ ನಿರ್ಮಿಸಲು ಮೀಸಲಿಡಬೇಕು ಎಂಬುದೂ ಒಂದು. ಈ ಧೋರಣೆಯನ್ನು ಜಾರಿಗೆ ತರುತ್ತಿದ್ದರೆ, ಇಂದು ನೇಕಾರರು ಇಷ್ಟೊಂದು ಸಮಸ್ಯೆಗಳನ್ನು ಎದುರಿಸುತ್ತಿರಲಿಲ್ಲ.

ಯಾವುದೇ ಕಾಯಕಕ್ಕೂ ಬಹಳ ಪ್ರಮುಖವಾಗಿ ಅರ್ಪಣಾ ಮನೋಭಾವ, ಕರ್ತವ್ಯ ನಿಷ್ಠೆ ಮತ್ತು ಏನನ್ನೋ ಸಾಧಿಸಬೇಕು ಎನ್ನುವ ಮಹತ್ವಾಕಾಂಕ್ಷೆಗಳಿರಬೇಕು. ಅವುಗಳ ಕೊರತೆಯುಂಟಾದಾಗ ಸಮಸ್ಯೆಗಳು ಗಂಭೀರವಾಗಿ ಕಾಣುತ್ತದೆ. ಮೇಲೆ ಹೇಳಿದ ಸಮಸ್ಯೆಗಳಲ್ಲಿ ಕೆಲವು ನೇಕಾರನ ವೈಯಕ್ತಿಕ ಮತ್ತು ಆಂತರಿಕ ಸಮಸ್ಯೆಗಳಾಗಿದ್ದರೆ, ಕೆಲವು ಬಾಹ್ಯ ಸಮಸ್ಯೆಗಳು. ವೈಯುಕ್ತಿಕ ಸಮಸ್ಯೆಗಳ ಪರಿಹಾರಕ್ಕೆ ಆತ ತಾನೇ ಪ್ರಯತ್ನಿಸಬೇಕಲ್ಲದೆ, ಅನ್ಯ ಮಾರ್ಗವಿಲ್ಲ. ಬಾಹ್ಯ ಸಮಸ್ಯೆಗಳು ಸೌಲಭ್ಯಗಳ ಕೊರತೆಗಳಿಂದ ಬರುವಂತಹುದು. ಇವುಗಳ ಪರಿಹಾರಕ್ಕಾಗಿ ನೇಕಾರರ ಸೇವಾ ಕೇಂದ್ರಗಳು, ಕೈ ಮಗ್ಗ ಅಭಿವೃದ್ಧಿ ಕೇಂದ್ರಗಳು ನಿರಂತರ ಪ್ರಯತ್ನ ಮಾಡಬೇಕಿದೆ. ಈ ಕೈಮಗ್ಗ ಉದ್ದಿಮೆಯ ಅಭಿವೃದ್ಧಿಗಾಗಿ ಏನೆಲ್ಲಾ ಮಾಡಬಹುದು ಎನ್ನುವುದರ ಕಡೆಗೊಂದು ಅವಲೋಕನ.

೧. ಸರಕಾರವು ಉದ್ಯಮಕ್ಕೆ ಬೇಕಾದ ಕಚ್ಚಾ ಸಾಮಾಗ್ರಿಗಳ ಬೆಲೆಯಲ್ಲಿ ಹಿಡಿತವನ್ನು ತರಲು ಮತ್ತು ರಿಯಾಯಿತಿಗಳನ್ನು ಒದಗಿಸಲು ಪ್ರಯತ್ನಿಸುವುದು. ನೇಕಾರನಿಗೆ ನಿಬಡ್ಡಿಯಾಗಿ ಆರ್ಥಿಕ ನೆರವನ್ನು ನೀಡುವುದು. ಕೈ ಮಗ್ಗದ ಬಿಡಿ ಭಾಗಗಳು, ನೂಲು, ಕೃತಕ ರೇಷ್ಮೆ ಇತ್ಯಾದಿಗಳ ಮೇಲೆ ವಾಣಿಜ್ಯ ತೆರಿಗೆ ರದ್ದು ಮಾಡುವುದು.

೨. ನೇಕಾರರು ಸಾಧ್ಯವಾದಷ್ಟು ಸಹಕಾರಿ ಸಂಘಗಳ ಸದಸ್ಯರಾಗಿ ನೇಕಾರಿಕೆಯನ್ನು ಕೈಗೊಳ್ಳುವುದು.

೩. ನೇಯ್ಗೆ ತಂತ್ರಜ್ಞಾನಗಳನ್ನು ಮತ್ತು ನೇಯ್ಗೆಗೆ ಬಳಸುವ ಪೂರಕ ಸಾಮಾಗ್ರಿಗಳನ್ನು ಮತ್ತು ಸಲಕರಣೆಗಳನ್ನು ಅಭಿವೃದ್ಧಿಪಡಿಸಿ ನೇಕಾರರ ಕೈಗೆಟಕುವ ಹಾಗೇ ಮಾಡುವುದು.

೪. ನೇಯ್ಗೆ, ವಿನ್ಯಾಸ ಮತ್ತು ಸಂಸ್ಕರಣಾ ಕ್ಷೇತ್ರಗಳಲ್ಲಿ ಲಭ್ಯವಿರುವ ತಜ್ಞರೊಂದಿಗೆ ಮಾತುಕತೆ ನಡೆಸಿ, ಆ ಮೂಲಕ ಮಾರುಕಟ್ಟೆಯಲ್ಲಿ ಹೆಚ್ಚು ಬೇಡಿಕೆ ಇರುವ ವಸ್ತುಗಳನ್ನು ತಯಾರಿಸಲು ಉತ್ಪನ್ನಗಳನ್ನು ಅಭಿವೃದ್ಧಿ ಪಡಿಸುವಂತೆ ನೇಕಾರರಿಗೆ ಸಲಹೆಗಳನ್ನು ನೀಡುವುದು.

೫. ನೇಕಾರರ ಸಹಕಾರಿ ಸಂಘಗಳ ಸದಸ್ಯರಿಗೆ ಮಾತ್ರವಲ್ಲ, ಸ್ವತಂತ್ರವಾಗಿ ನೇಯುವ ನೇಕಾರರಿಗೂ ಸುಧಾರಿತ ತಂತ್ರಜ್ಞಾನಗಳನ್ನು ಮತ್ತು ಹೊಸ ವಿನ್ಯಾಸಗಳನ್ನು ಕುರಿತು ಕಾರ್ಯಾಗಾರಗಳನ್ನು ನಡೆಸಿ ತರಬೇತಿ ನೀಡುವುದು. ಈ ಕೈ ಮಗ್ಗ ತಂತ್ರಜ್ಞರ ಸೇವೆ ಅಲ್ಲಲ್ಲಿ ಸ್ಥಳೀಯ ಕೇಂದ್ರಗಳಲ್ಲಿ ದೊರೆಯುವಂತೆ ಮಾಡುವುದು.

೬. ಮಾದರಿ ಬೇಡಿಕೆಗಳ ಅನುಷ್ಠಾನ ಸೇರಿದಂತೆ, ವಿನ್ಯಾಸಕಾರರು, ಉತ್ಪಾದಕರು, ಮತ್ತು ಖರೀದಿದಾರರ ನಡುವೆ ಸಂಪರ್ಕ ಏರ್ಪಡಿಸುವ ಮೂಲಕ ಮಾರುಕಟ್ಟೆಗೆ ಬೆಂಬಲ ಒದಗಿಸುವುದು. ವಿದೇಶಿ ಮಾರುಕಟ್ಟೆಯನ್ನು ಗಳಿಸಿ ಕೊಡುವ ದೃಷ್ಟಿಯಿಂದ ರಫ್ತು ಯೋಗ್ಯ ಬಟ್ಟೆಗಳನ್ನು ಸ್ಥಳೀಯವಾಗಿ ತಕ್ಕ ನಿರ್ದೇಶನದೊಂದಿಗೆ ಮುಂಗಡ ಕಚ್ಚಾ ಸಮಾಗ್ರಿಗಳನ್ನಿತ್ತು ಉತ್ಪಾದಿಸುವುದು ಯಾ ಖರೀದಿಸುವುದು.

೭. ಹೊಸ ಮತ್ತು ಸುಧಾರಿತ ವಿನ್ಯಾಸಗಳು, ಸಲಕರಣೆಗಳು ಹಾಗೂ ಸಂಸ್ಕರಣ ತಂತ್ರಗಳ ಬಗ್ಗೆ ಒತ್ತು ನೀಡುವ ವಸ್ತು ಪ್ರದರ್ಶನಗಳನ್ನು ವಿಚಾರ ಸಂಕಿರಣಗಳನ್ನು ಹಾಗೂ ಕಾರ್ಯಾಗಾರಗಳನ್ನು ವ್ಯವಸ್ಥೆಗೊಳಿಸುವುದು. ನೇಕಾರರೇ ಹೆಚ್ಚಾಗಿ ವಾಸಿಸುವ ಕಡೆಗಳಲ್ಲಿ ಅವುಗಳು ನಡೆಯುವಂತೆ ನೋಡಿಕೊಳ್ಳುವುದು. ದೂರದಿಂದ ಬರುವ ನೇಕಾರರಿಗೆ ಪ್ರಯಾಣ ಭತ್ತೆಗಳನ್ನು ಇತರ ಭತ್ತೆಗಳನ್ನು ನೀಡಿ ಅಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಉತ್ತೇಜನ ನೀಡುವುದು.

೮. ಮಗ್ಗದಲ್ಲಿ ಹೊಸ ತಂತ್ರಜ್ಞಾನಗಳನ್ನು ಅಳವಡಿಸಲು ಮಗ್ಗದ ಶೆಡ್ಡು ನಿರ್ಮಾಣಮಾಡಲು ಧನ ಸಹಾಯ ನೀಡುವುದು.

೯. ನೇಯ್ಗೆ ಕಾಯಕದ ಸಹ ಕಾಯಕಗಳಾದ ಹಾಸು ಸುತ್ತುವುದು, ಬಣ್ಣ ಹಾಕುವುದು, ಹುರಿ ಹಾಕುವುದು, ನಳ್ಳಿ ಸುತ್ತುವುದು ಇತ್ಯಾದಿಗಳನ್ನು ನಡೆಸುವವರಿಗೂ ಸೌಲಭ್ಯಗಳು ದೊರೆಯುವಂತೆ ಮಾಡುವುದು. ನಳ್ಳಿ ಸುತ್ತುವವರು ಹೆಚ್ಚಾಗಿ ಹೆಂಗಸರೇ ಆದುದರಿಂದ ಅವರಿಗೆ ಹೆರಿಗೆ ಭತ್ಯೆಯನ್ನು ನೀಡುವುದು.

೧೦. ಎಲ್ಲಾ ಸರಕಾರಿ ನೌಕರರಿಗೆ ಸಿಗುವಂತಹ ಸೌಲಭ್ಯಗಳು ನೇಕಾರರಿಗೂ ಅನ್ವಯಿಸುವಂತೆ ಮಾಡುವುದು. (ನಿವೃತ್ತಿ ವೇತನ, ಭವಿಷ್ಯ ನಿಧಿ ಇತ್ಯಾದಿ ...)

೧೧. ಅಲ್ಲಲ್ಲಿ ನೇಕಾರರ ಸೇವಾ ಕೇಂದ್ರಗಳನ್ನು ತೆರೆದು ಆಯಾ ಕಾಲದ ಸಮಸ್ಯೆಗಳಿಗೆ ಪರಿಹಾರ ಸೂಚಿಸುವುದು. ದೂರುಪೆಟ್ಟಿಗೆಗಳನ್ನು ಇಟ್ಟು ಗಂಭೀರವಾದವುಗಳನ್ನು ಪರಿಗಣಿಸಿ ಪರಿಹಾರ ನೀಡುವುದು.

೧೨. ನೇಕಾರರ ಸೇವಾ ಕೇಂದ್ರಗಳನ್ನು ಕೈಮಗ್ಗ ವಲಯದ ಅಭಿವೃದ್ಧಿ ಮತ್ತು ಬೆಳವಣಿಗೆಯ ಸ್ಪಂದನಶೀಲ ಕೇಂದ್ರ ಸ್ಥಳವನ್ನಾಗಿ ಮಾಡಲು ಸರಕಾರದಿಂದ ಬೆಂಬಲವನ್ನು ನೀಡುವುದು.

೧೩. ನೇಕಾರರಿಗೆ ಬೇಕಾದ ಸಾಮಾಗ್ರಿಗಳಿಗೆ ತೆರಿಗೆ ವಿನಾಯಿತಿ ಒದಗಿಸುವುದು.

೧೪. ವಸ್ತ್ರೋದ್ಯಮಕ್ಕೆ ಸಂಬಂಧಿಸಿದ ತಾಂತ್ರಿಕ ಕಾಲೇಜ್ ಗಳಲ್ಲಿ ನೇಕಾರರ ಮಕ್ಕಳಿಗೆ ಮೀಸಲಾತಿಯನ್ನು ಒದಗಿಸುವುದು.

೧೫. ಸರಕಾರಿ ಕಛೇರಿಗಳಲ್ಲೂ, ಶಾಲೆಗಳಲ್ಲೂ, ಆಸ್ಪತ್ರೆಗಳಲ್ಲೂ ಕೈ ಮಗ್ಗದ ಬಟ್ಟೆಗಳನ್ನೇ ಕಡ್ಡಾಯವಾಗಿ ಬಳಸಬೇಕೆಂದು ಆದೇಶಗಳನ್ನು ಹೊರಡಿಸುವುದು.

೧೬. ಇಂದಿನ ಜನರ ಅಭಿರುಚಿಗೆ ತಕ್ಕಂತಹ ವಸ್ತ್ರೋತ್ಪಾದನೆಯನ್ನು ಮಾಡುವಂತೆ ನೇಕಾರರಿಗೆ ಸಹಕರಿಸುವುದು.

೧೭. ನೇಕಾರರ ಸಹಕಾರಿ ಕೇಂದ್ರಗಳಲ್ಲಿ ಅರ್ಹ ತಾಂತ್ರಿಕ ಸಿಬ್ಬಂದಿಗಳನ್ನು, ಅವಶ್ಯಕ ಸಹಾಯಕ ಸಿಬ್ಬಂದಿಗಳನ್ನು ನೇಮಕ ಮಾಡುವಾಗ ನೇಕಾರರಿಗೆ ಆದ್ಯತೆಯನ್ನು ನೀಡುವುದು.

೧೮. ನೇಕಾರಿಕೆಗೆ ಸಂಬಂಧಿಸಿದಂತೆ ಹೊಸ ಹೊಸ ಸಂಶೋಧನೆಗಳನ್ನು ನಡೆಸಲು ಉತ್ತೇಜನವನ್ನು ನೀಡುವುದು.

೧೯. ಅಗತ್ಯತೆ ಆಧಾರಿತ ವಿನ್ಯಾಸಗಳ ಅಭಿವೃದ್ಧಿಯಾಗುವಂತೆ ಮಾಡಿ, ಹೊಸ ವಿನ್ಯಾಸಗಳ ಅಳವಡಿಕೆಗಾಗಿ ನೇಕಾರರಿಗೆ ಸಹಕರಿಸುವುದು.

೨೦. ನೇಕಾರರ ಸಹಕಾರೀ ಕೇಂದ್ರಗಳಲ್ಲಿ ಕಂಪ್ಯೂಟರ್ ಗಳನ್ನು ಅಳವಡಿಸಿ ನೂತನ ವಸ್ತ್ರ ವಿನ್ಯಾಸ ವಿಭಾಗಗಳನ್ನು ತೆರೆಯುವುದು.

೨೧. ಪದವಿ ತರಗತಿಗಳಲ್ಲಿ ನೇಕಾರಿಕೆಯನ್ನು ಒಂದು ಅಧ್ಯಯನ ವಿಷಯವಾಗಿ ವಿಶ್ವವಿದ್ಯಾಲಯಗಳು ಅಳವಡಿಸುವಂತೆ ಮಾಡಿ, ಅಂತಹ ಪದವಿ ಪಡೆದವರನ್ನು ಸಹಕಾರಿ ಕೇಂದ್ರಗಳಲ್ಲಿ ನೇಮಕಾತಿ ಮಾಡಿಕೊಳ್ಳುವುದು.

೨೨. ಉಳಿದ ಕ್ಷೇತ್ರಗಳಂತೇ ಸಹಕಾರೀ ಕೇಂದ್ರಗಳಲ್ಲಿ ನೇಯುವವರಿಗೆ ವೃತ್ತಿ ಪದೋನ್ನತಿಯನ್ನು ನೀಡುವುದು.

೨೩. ಸಹಕಾರೀ ಕೇಂದ್ರಗಳಲ್ಲಿ ನೇಕಾರಿಕೆಯ ಪ್ರತಿಯೊಂದೂ ಹಂತದಲ್ಲೂ ಅನುಭವಿಗಳನ್ನು ನೇಮಿಸಿ ಅವರ ಮೇಲ್ವಿಚಾರಣೆ ನಡೆಸುವಂತೆ ಮಾಡುವುದು.

೨೪. ಉತ್ಪಾದನೆಯಾದ ವಸ್ತುಗಳಿಗೆ ಉತ್ತಮ ಮಾರುಕಟ್ಟೆ ಒದಗಿಸುವುದು. ಸ್ವಂತ ನೆಲೆಯಲ್ಲಿ ಉತ್ಪಾದಿಸಿದ ಬಟ್ಟೆಯನ್ನು ಮಾರಾಟ ಮಾಡುವ ವ್ಯವಸ್ಥೆಯನ್ನು ಕೇಂದ್ರ, ರಾಜ್ಯ ಸರಕಾರಗಳು ವಹಿಸಿಕೊಂಡಲ್ಲಿ ನೇಕಾರನಿಗೆ ನೇರ ಪ್ರಯೋಜನ ಸಿಗಬಹುದು.

೨೫. ನೇಕಾರರಿಗೂ ಗೃಹ ನಿರ್ಮಾಣ ಹಾಗೂ ಮಗ್ಗಗಳ ಶೆಡ್ಡುಗಳ ನಿರ್ಮಾಣಕ್ಕಾಗಿ ಆರ್ಥಿಕ ಸಹಾಯವನ್ನೊದಗಿಸುವುದು.

೨೬. ಉತ್ಪನ್ನಗಳ ಅಭಿವೃದ್ಧಿ, ಉತ್ಪನ್ನಗಳ ವೈವಿಧ್ಯತೆ ಉತ್ಪಾದಕತೆಯಲ್ಲಿ ಸುಧಾರಣೆ, ಡೈಯಿಂಗ್ ತಂತ್ರಜ್ಞಾನ ಮಾರುಕಟ್ಟೆಯ ಪರಿಜ್ಞಾನ ಹಾಗೂ ಮಗ್ಗಗಳಲ್ಲಿ ವಿನ್ಯಾಸ ಅಭಿವೃದ್ಧಿಗಳ ಬಗ್ಗೆ ನೇಕಾರರಿಗೆ ತರಬೇತಿ ನೀಡುವುದು.

೨೭. ನೇಕಾರರಿಗೆ ಸರಕಾರ ರೂಪಿಸಿದ ಯೋಜನೆಗಳು ಸರಿಯಾಗಿ ಕಾರ್ಯರೂಪಕ್ಕೆ ಬರುತ್ತಿದೆಯೇ? ಎಂಬುದನ್ನೂ ಮಂಜೂರಾದ ಹಣವು ವಾಸ್ತವವಾಗಿ ಫಲಾನುಭವಿಗಳಿಗೆ ದೊರಕುತ್ತಿದೆಯೇ ಎಂಬುದನ್ನೂ ಆಗಾಗ ಪರಿಶೀಲಿಸುವುದು.

೨೮. ಹೆಚ್ಚಿನ ದಕ್ಷತೆಯನ್ನು ಸಾಧಿಸಲು, ವೆಚ್ಚಗಳಲ್ಲಿ ಸುಧಾರಣೆ ಮತ್ತು ಕಡಿತ ಮಾಡುವ ದೃಷ್ಟಿಯಿಂದ ತಯಾರಿಕೆಯ ವಿವಿಧ ಪ್ರಕ್ರಿಯೆಗಳ ಬಗ್ಗೆ ತನಿಖೆ ನಡೆಸುವುದು ಮತ್ತು ಅವುಗಳ ಸುಧಾರಣೆಗಾಗಿ ನೆರವು ನೀಡುವುದು.

ನಮ್ಮ ಸರಕಾರವು ನೇಕಾರರಿಗೆ ಬಹಳಷ್ಟು ಯೋಜನೆಗಳನ್ನು ಹಮ್ಮಿಕೊಳ್ಳುತ್ತಿದೆ. ಕೆಲವು ಇಲಾಖೆಗಳನ್ನು ನಿಗಮಗಳನ್ನು ಅದಕ್ಕಾಗಿಯೇ ತೆರೆದಿದೆ. ಕೇಂದ್ರ ಹಾಗೂ ರಾಜ್ಯ ಮಟ್ಟದಲ್ಲಿ ಕೈ ಮಗ್ಗ ಮತ್ತು ಜವುಳಿ ಇಲಾಖೆ ಮತ್ತು ಕೈ ಮಗ್ಗ ಅಭಿವೃದ್ಧಿ ನಿಗಮ; ಜಿಲ್ಲೆ ಹಾಗೂ ತಾಲೂಕು ಮಟ್ಟದಲ್ಲಿ ಸಹಕಾರಿ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಭಾರತದ ಉದ್ದಗಲದಲ್ಲೂ ನೇಕಾರರ ಸೇವಾಕೇಂದ್ರಗಳು ತೆರೆಯಲ್ಪಟ್ಟಿವೆ. ಅವುಗಳ ವಿವರ ಹೀಗಿದೆ.

ಉತ್ತರ ವಲಯ : ದೆಹಲಿ, ವಾರಣಾಸಿ, ಚಮೋಲಿ, ಮೀರತ್, ಪಾಣಿಪತ್, ಜೈಪುರ.

ದಕ್ಷಿಣ ವಲಯ : ಚೆನ್ನೈ, ಕಾಂಚೀಪುರಂ, ಬೆಂಗಳೂರು, ಕಣ್ಣಾನೂರು, ವಿಜಯವಾಡ, ಹೈದರಾಬಾದ್, ಸೇಲಂ.

ಪೂರ್ವ ವಲಯ : ಗೌಹಾಟಿ, ಅಗರ್‌ತಲಾ, ಇಂಫಾಲ, ಕಲ್ಕತ್ತ, ಬಾಗಲ್ ಪುರ, ಭುವನೇಶ್ವರ.

ಪಶ್ಚಿಮ ವಲಯ : ಮುಂಬಯಿ, ಅಹಮದಾಬಾದ್, ಇಂಡೋರ್, ನಾಗಪುರ ಮತ್ತು ರಾಯಗಡ.

ಕೇಂದ್ರ ಸರಕಾರವು ನೇಕಾರರ ಸಾಂದ್ರತೆಯಿರುವ ಸ್ಥಳಗಳಲ್ಲಿ ಅವರ ಸರ್ವತೋಮುಖ ಅಭಿವೃದ್ಧಿಗಳಿಗಾಗಿ ನೇಕಾರರಿಗೆ ವಾಸಕ್ಕೆ ಯೋಗ್ಯವಾದ ಮನೆಗಳು, ಉದ್ಯೋಗಕ್ಕೆ ಬೇಕಾದ ಉಪಕರಣಗಳು, ಸಾಮೂಹಿಕ ಕಾರ್ಯಾಗಾರಗಳು, ವಿನ್ಯಾಸ ಅಭಿವೃದ್ಧಿ ಕೇಂದ್ರಗಳು, ಮಗ್ಗಗಳ ಆಧುನೀಕರಣ ಮುಂತಾದ ಸಕಲ ಸೌಲಭ್ಯಗಳನ್ನು ನೀಡುವ ಪ್ರಯತ್ನ ಮಾಡುತ್ತಿದೆ.

ಕೇಂದ್ರ ಸರಕಾರದ ಸಮಗ್ರ ಕೈ ಮಗ್ಗ ಗ್ರಾಮೀಣಾಭಿವೃದ್ಧಿ ಯೋಜನೆಯಡಿಯಲ್ಲಿ ನೇಕಾರರಿಗೆ ತರಬೇತಿ, ಸಮುದಾಯ ಕೇಂದ್ರಗಳ ನಿರ್ಮಾಣ ಮುಂತಾದ ಸೌಲಭ್ಯಗಳನ್ನು ನೀಡುತ್ತಿದೆ. ಇದರೊಂದಿಗೆ ನೂತನ ತಂತ್ರಜ್ಞಾನವನ್ನು ತಿಳಿಯಲು ತರಬೇತಿಯನ್ನು ನೀಡುತ್ತಿವೆ. ಹಾಗೆಯೇ ಪ್ರತಿಯೊಬ್ಬ ನೇಕಾರನಿಗೂ ಭವಿಷ್ಯ ನಿಧಿ, ಸಾಮೂಹಿಕ ವಿಮಾ ಯೋಜನೆ, ರೋಗಗಳ ಚಿಕಿತ್ಸೆಗೆ ಆರ್ಥಿಕ ನೆರವು, ದೃಷ್ಟಿ ಪರೀಕ್ಷೆ ಹಾಗೂ ಕನ್ನಡಕ ಖರೀದಿಗಾಗಿ ನೆರವು, ಮಹಿಳಾ ನೇಕಾರರಿಗೆ ಹೆರಿಗೆ ಭತ್ಯೆ ಇತ್ಯಾದಿಗಳನ್ನು ನೀಡಲಾಗುತ್ತಿದೆ.

ಸ್ವಂತ ಮನೆಗಳಲ್ಲಿ ಮಗ್ಗ ಅಳವಡಿಸಲು ಅವಕಾಶವಿಲ್ಲದವರಿಗೆ ನೇಕಾರರ ಸಹಕಾರಿ ಸಂಘವೇ ಸಾಮೂಹಿಕ ಕಾರ್ಯಾಗಾರ ನಿರ್ಮಿಸಿ ಅದರಲ್ಲಿ ಕೈ ಮಗ್ಗಗಳನ್ನು ಅಳವಡಿಸಿ ಉದ್ಯೋಗಾವಕಾಶ ಕಲ್ಪಿಸುತ್ತಿದೆ.

ಈ ಎಲ್ಲಾ ಯೋಜನೆಗಳ ಪ್ರಯೋಜನಗಳು ಸರಕಾರದಿಂದ ಕಾಲ ಕಾಲಕ್ಕೆ ನಿಗದಿಪಡಿಸಿದ ಅಥವಾ ನಿರ್ದಿಷ್ಟಪಡಿಸಿದ ಕ್ರಮ – ನಿಯಮಗಳಿಗೆ ಅನುಗುಣವಾಗಿ ಫಲಾನುಭವಿಗಳಿಗೆ ದೊರಕುತ್ತವೆ. ಆದರೆ ಕೇಂದ್ರ ಹಾಗೂ ರಾಜ್ಯ ಸರಕಾರದ ಅನೇಕ ತೆರನಾದ ಯೋಜನೆಗಳು ನೇಕಾರರಿಗೆ ತಲುಪುವಲ್ಲಿ ನಿರೀಕ್ಷೆಯಷ್ಟು ಫಲಪ್ರದವಾಗಿಲ್ಲ. ಇಂತಹ ಸಂದರ್ಭದಲ್ಲಿ ಸಮಾಜ ಸೇವಾ ಸಂಸ್ಥೆಗಳು ಮುಂದಾಗಿ ಇದನ್ನು ನೇಕಾರರಿಗೆ ತಲುಪಿಸುವಂತೆ ಮಾಡಬಹುದು.

ನಿರುದ್ಯೋಗ ಸಮಸ್ಯೆ ನಿವಾರಣೆಯ ಬಗ್ಗೆ ಸರಕಾರ ಹಮ್ಮಿಕೊಳ್ಳಬಹುದಾದ ಉಳಿದ ಯೋಜನೆಗಳೊಂದಿಗೆ ನೇಕಾರಿಕೆ ಉದ್ಯಮವನ್ನು ಸೇರಿಸಿಕೊಳ್ಳಬಹುದು. ಸರಕಾರವೇ ನೇಯ್ಗೆಯ ಕೇಂದ್ರಗಳನ್ನು ತೆರೆದರೆ ಮಾರಾಟದ ಬಗ್ಗೆ ವ್ಯವಸ್ಥೆಯನ್ನು ಕೈಗೊಂಡರೆ ಯುವಕರಿಗೆ ಉದ್ಯೋಗವನ್ನು ದೊರಕಿಸಿ ಕೊಡಬಹುದು. ವಿವಿಧ ತಂತ್ರಜ್ಞರನ್ನು ಆಯ್ದು ಸರಕಾರವೇ ನೇಮಕ ಮಾಡಿ ಯೋಗ್ಯ ವೇತನ ನೀಡಿದರೆ ಈ ಉದ್ಯಮ ಗೌರವಾನ್ವಿತವಾಗಿ ಬೆಳೆಯಬಹುದು. ನಿರುದ್ಯೋಗ ಸಮಸ್ಯೆ ನಿವಾರಣೆಗೆ ನೇರವಾಗಿ ಸಹಕರಿಸಿ ಲಕ್ಷಾಂತರ ಕುಟುಂಬಗಳ ಊರುಗೋಲಾಗಬಹುದು.

ಎಲ್ಲ ಸರಕಾರಿ ಉದ್ಯೋಗದಂತೆ ಇಲ್ಲಿಯೂ ಕನಿಷ್ಟ ವಿದ್ಯಾರ್ಹತೆ, ಅನುಭವಕ್ಕೆ ತಕ್ಕ ಮಾನ್ಯತೆ ಇವುಗಳನ್ನು ನೀಡಿದರೆ ಇನ್ನೂ ಒಂದು ಗೌರವಾನ್ವಿತ ಉದ್ಯೋಗವೆಂದು ಸಮಾಜವು ಪರಿಗಣಿಸಬಹುದು. ನೇಕಾರಿಕೆ ವೃತ್ತಿಯೇ ಒಂದು ಕಲೆ. ಶಾಲೆ – ಕಾಲೇಜುಗಳಿಗೆ ಹೋಗಿ ಕಲಿಯದ ಅವಿದ್ಯಾವಂತ ನೇಕಾರರು ಸೀರೆಯ ಅಂಚು ಸೆರಗುಗಳಲಿ ಉತ್ತಮ ರೀತಿಯ ವಿನ್ಯಾಸಗಳನ್ನು ಹಿಂದಿನ ಕಾಲದಲ್ಲಿ ಅಳವಡಿಸಿಕೊಂಡು ಬಂದಿರುವಾಗ, ವಿದ್ಯಾವಂತ ನೇಕಾರರು ಅದನ್ನು ಇನ್ನಷ್ಟು ನಾಜೂಕಾಗಿ ರೂಪಿಸುವ ಸಾಧ್ಯತೆಯಿದೆ.

ಇಂದಿನ ಯುವಕರು ಸಮೂಹವಾಗಿ ಕೆಲಸ ಮಾಡಲು ಬಯಸುತ್ತಾರೆ. ಆದುದರಿಂದ ನೇಕಾರಿಕೆಯನ್ನು ಸಮೂಹ ಉದ್ಯಮವನ್ನಾಗಿಸಿ ಉತ್ಸಾಹವನ್ನು ಯುವಕರಲ್ಲಿ ತುಂಬಲು ನೇಕಾರರ

ಸಹಕಾರಿ ಸಂಘಗಳು ಪ್ರಯತ್ನಿಸುತ್ತಿವೆ. ಶಿಲ್ಪಕಲೆಯಂತೆ ನೇಕಾರಿಕೆಯೂ ಒಂದು ವಿಶಿಷ್ಟ ಹಾಗೂ ಗೌರವಾನಿತ್ವ ಕಲೆ ಎಂಬ ಭಾವನೆ ಇಂದಿನ ನೇಕಾರ ಯುವಕರಲ್ಲಿ ಮೂಡಬೇಕು.

ಮನುಷ್ಯನು ಯಾವ ಕ್ಷೇತ್ರದಲ್ಲಿಯೇ ಕೆಲಸ ಮಾಡಲಿ, ಆತನು ಪಡೆಯ ಬಹುದಾದ ಉನ್ನತ ಸಿದ್ಧಿಯು ಅವನ ಮಾನಸಿಕ ಶಕ್ತಿ, ಸಂಕಲ್ಪ, ಆಸೆ, ಆಕಾಂಕ್ಷೆಗಳ ತೀವ್ರತೆ, ಹಿಡಿದ ಕಾರ್ಯವನ್ನು ಅತ್ಯುತ್ತಮ ರೀತಿಯಲ್ಲಿ ದೃಢನಿಷ್ಠೆಯಿಂದ ಮಾಡಿ ಮುಗಿಸುವ ನಿಷ್ಠೆ – ಇವುಗಳನ್ನು ಹೊಂದಿಕೊಂಡಿದೆ. ಹಾಗೇ ನೇಯ್ಗೆ ವೃತ್ತಿಯೂ ಕೂಡಾ. ಪ್ರತಿಯೊಬ್ಬ ನೇಕಾರನೂ, ಸಮಾಜವೂ ಇದನ್ನು ಅರಿತು ಮುಂದುವರೆದರೆ ಖಂಡಿತವಾಗಿಯೂ ಈ ವೃತ್ತಿಯಲ್ಲಿ ಬಹಳಷ್ಟು ಪ್ರಗತಿಯನ್ನು ಸಾಧಿಸಬಹುದು.

ಯಾವುದೇ ಒಂದು ಸಮಾಜ ಸರ್ವತೋಮುಖ ಅಭಿವೃದ್ಧಿ ಸಾಧಿಸಬೇಕಾದರೆ ಅದರ ಅಂಗಗಳಾದ ಮಾನವರು ದೈಹಿಕ, ಮಾನಸಿಕ, ಬೌದ್ಧಿಕ, ಭಾವನಾತ್ಮಕ ಮತ್ತು ನೈತಿಕ ಅಭಿವೃದ್ಧಿಗಳನ್ನು ಸಾಧಿಸಬೇಕು. ಪೂರ್ವವೈಭವವನ್ನು ಉಳಿಸಿಕೊಂಡು ನವೀನತೆಯನ್ನು ಅರಗಿಸಿಕೊಳ್ಳಬೇಕು. ಅಂದರೆ ಅವುಗಳ ವಿಕಾಸವಾಗಬೇಕು. ಸಮಾಜದ ಪ್ರತಿಯೊಂದು ಅಂಗವೂ ಈ ರೀತಿಯಲ್ಲಿ ವ್ಯಕ್ತಿತ್ವ ವಿಕಾಸ ಹೊಂದಿದಲ್ಲಿ ಉಳಿದವುಗಳೂ ಸೇರಿಕೊಳ್ಳುತ್ತವೆ.

ಕೈ ಮಗ್ಗ ಉದ್ಯಮ ಅಭಿವೃದ್ದಿಯಲ್ಲಿ ಸರಕಾರದ ದೃಷ್ಟಿ ಕೋನ ಬರಿಯ ಸಂರಕ್ಷಣಾ ಉನ್ಮುಖ ಆಗಿದ್ದರೆ ಸಾಲದು; ಅದು ಹೆಚ್ಚು ಹೆಚ್ಚು ಉತ್ತೇಜನಾ ಉನ್ಮುಖವಾಗಿರಬೇಕು. (ಪದ್ಮಶಾಲಿ ೧೯೯೩, ಪುಟ ೧೬).

## ೪. ಕಾಸರಗೋಡು ಪ್ರದೇಶದಲ್ಲಿ ಬಳಕೆಯಾಗುವ ಕೈಮಗ್ಗದ ಸಾಮಾಗ್ರಿಗಳು

### ಗುಳಿಮಗ್ಗದ ಸಾಮಾಗ್ರಿಗಳು

1. ತಾರ್ - ನೂಲು ಸುತ್ತುವ ಸಾಧನ. ಇದನ್ನು ಹಿಂದೆ ಕರವೀರದ ದಂಟಿನಿಂದ ತಯಾರಿಸುತ್ತಿದ್ದರು.
2. ಓಡಂ - ನೇಯುವಾಗ 'ತಾರ್'ನ್ನು ಇಡುವ ಸಾಧನ. ಇದು ದೋಣಿಯಂತೆ ಇರುವುದು. ಈಗ 'ಲಾಳಿ' ಆ ಸ್ಥಾನದಲ್ಲಿದೆ.
3. ಕುಟೆ (ಗುರಿ) - ನೇಯುವವರು ಕಾಲನ್ನು ಇಳಿಬಿಡುವ ಹೊಂಡ
4. ಅಚ್ಚೋಡಿ - ಹಾಸಿದ ನೂಲನ್ನು ಹತ್ತಿರಕ್ಕೆ ತರುವ ಸಾಧನ. ಇದರಿಂದ ನೂಲನ್ನು ಹೊಡೆದು ಹತ್ತಿರ ಮಾಡಲಾಗುತ್ತದೆ. ಇದನ್ನು ಬಡ್ಡಿ ಎಂದೂ ಕರೆಯುವರು.
5. ಪಡಪ್ಪ್ - ಬಟ್ಟೆಯನ್ನು ನೇಯ್ದು ಹಾಗೆ ಸುತ್ತುವ ಮರ
6. ತರ್ನಾರ್ - 'ಪಡಪ್ಪ'ನ್ನು ನಿಲ್ಲಿಸಲು ಉಪಯೋಗಿಸುವ ಕಂಬದಂತಹ ಸಾಧನ
7. ಅಚ್ಚ್ - ನೂಲನ್ನು ಒಂದೊಂದಾಗಿ ಪ್ರತ್ಯೇಕೀಕರಿಸುವ ಸಾಧನ
8. ರೆಕ್ಕೆ - ನೂಲನ್ನು ಬೇರ್ಪಡಿಸಿ ಹೊಂದಿಸುವ ಸಾಧನ
9. ನರಪ್ಪನ್ - ಹಾಸು ಒಣಗಿಸಲು ಉಪಯೋಗಿಸುವ ಬ್ರಶ್
10. ಅಯಲ್ - ಅಡಿಕೆಮರದ ಬೆತ್ತ
11. ಬೆರುಂಗೋಲ್ - ನೂಲು ಸುತ್ತುವ ರೀಲು
12. ಬೀಯಾನ್ - ಹಾಸು ತಯಾರಿಸಲು ಉಪಯೋಗಿಸುವ ಸಾಧನ
13. ಬೀಯಾಂಗೋಲು - ಹಾಸು ಸುತ್ತುವಾಗ ಉಪಯೋಗಿಸುವ ಸಾಧನ

# ಕೈಮಗ್ಗ ನೇಯ್ಗೆ ಸಾಮಾಗ್ರಿಗಳು

1. ಮಗ್ಗಂ - ಮರದ ನಾಲ್ಕು ಕಾಲುಗಳಿರುವ ಚೌಕಕಾರದ ಸಾಧನ
2. ಲಾಳಿ - ಹೊಕ್ಕನ್ನು ಹಾಸಿನೊಂದಿಗೆ ಸೇರಿಸುವ ಸಾಧನ
3. ಪೆಟ್ಟಿಗ್ಸಲಗ - ವಸ್ತ್ರದಲ್ಲಿ ಹೂವನ್ನು ಅಂಚನ್ನೂ ಬಿಡಿಸಲು ಬಳಸುವ ಸಾಧನ
4. ಬ್ರಶ್ - ಹಾಸಿಗೆ ಗಂಜಿ ಹಾಕಲು ಉಪಯೋಗಿಸುವ ಸಾಧನ
5. ನಳಿ - ನೂಲು ಸುತ್ತುವ ಸಾಧನ
6. ರೋಲ್ - ಹಾಸುರೋಲ್ - ಹಾಸನ್ನು ಸುತ್ತಿಡಲು ಇರುವ ಸಾಧನ
   ಬಟ್ಟೆರೋಲು - ನೇಯ್ದ ಬಟ್ಟೆ ಸುತ್ತಿಡಲು ಇರುವ ಸಾಧನ
7. ಕಂಬಾರು ಪಟ್ಟಿ - ನೇಯ್ದ ಬಟ್ಟೆ ಸಂಕುಚಿಸದಂತೆ ಅಗಲಕ್ಕೆ ಕಟ್ಟಿ ಹಿಡಿದುಕೊಳ್ಳುವ ಕೋಲು ಮತ್ತು ಮುಳ್ಳು.
8. ತ್ರೋವ್ - ಅಳತೆ ಇಡುವುದು 2 ಮೊಳ = 1 ಬಾರ
   8 ಬಾರ (16 ಮೊಳ) - ದೊಡ್ಡ ಸೀರೆ
   6 ಬಾರ (12 ಮೊಳ) - ಸಣ್ಣ ಸೀರೆ
9. ಲಟ್ಟಿ - ಸೀರೆಯ ಅಂಚಿಗೆ ಸಿಲ್ಕ್ ನೂಲನ್ನು ಸೇರಿಸುವ ಸಲಕರಣೆ
10. ರೆಕ್ಕೆ - ಹಾಸಿನ ನೂಲನ್ನು ಒಂದೊಂದಾಗಿ ಬೇರ್ಪಡಿಸುವ ಸಾಧನ
11. ಬಡ್ಡಿ - ಹಾಸಿನೊಂದಿಗೆ ಹೊಕ್ಕನ್ನು ಸೇರಿಸಿ ಹೊಡೆಯುವ ಸಾಧನ
12. ಕೇಂಚಿ - ಹಾಸು ತಯಾರಿಕೆಗೆ ಬೇಕಾದ ನೂಲಿನ ರೀಲುಗಳನ್ನು ಸಿಕ್ಕಿಸಿಡುವ ಏಣಿಯಂತಹ ಸಾಧನ
13. ಪಾವ್‌ಮರ - ಹಾಸು ಸುತ್ತಲು ಉಪಯೋಗಿಸುವ ಆಯತಾಕಾರದ ಅಗಲವಾದ ಎತ್ತರವಾದ ಗೂಟ
14. ಕೋಂಬು - ಮಗ್ಗಕ್ಕೆ ಹಾಸನ್ನು ಸುತ್ತುವಾಗ ಸಿಕ್ಕಾಗದಂತೆ ಬೇರ್ಪಡಿಸುವ ಸಾಧನ
15. ಕ್ರಾಸ್ - ಹಾಸಿನ ನೂಲನ್ನು ಸಮವಾಗಿ ಮೇಲೆ ಕೆಳಗೆ ಬೇರ್ಪಡಿಸುವ ಕೋಲು

## ನೂಲು ಸುತ್ತುವ ಚರಕ ಮತ್ತು ರಾಟೆಯ ಭಾಗಗಳು

1. ಕದಿರ್ - ನೂಲುಸುತ್ತುವ ನಳ್ಳಿಯನ್ನು ಸಿಕ್ಕಿಸುವ ಸಾಧನ
2. ಮಾಲ್ - ಚರಕದ ಹಗ್ಗ
3. ಇಲ್ಲಿ - ರಾಟೆಯ ಕೋಲುಗಳು
4. ಕಯುರ್ - ರಾಟೆಯ ಹಗ್ಗ
5. ಕಯುತ್ತೋಟ್ಟಂ - ರಾಟೆ

## ನೂಲಿನ ಅಳತೆ

1. ನೂರು ಗಜಗಳಷ್ಟು ಉದ್ದವನ್ನು ವೃತ್ತಾಕಾರವಾಗಿ ಸುತ್ತಿದಾಗ - 1 ಕಣ್ಣಿ
2. 7 ಕಣ್ಣಿಗಳು - 1 ತಕ್ಕ್
3. 10 ತಕ್ಕ್‌ಗಳು - 1 ಕೈ

# ಉಪಸಂಹಾರ

ತುಳುನಾಡಿನ ಪ್ರದೇಶದಲ್ಲಿ ಕಂಡುಬರುವ ಶಾಲಿಯಾ ಸಮುದಾಯವು ಮೂಲತಃ ಇಲ್ಲಿನವರಲ್ಲ ಎಂಬುದು ಇಷ್ಟರವರೆಗಿನ ಅಧ್ಯಯನದಿಂದ ತಿಳಿದು ಬಂದಿದೆ. ಸುಮಾರು ಕ್ರಿ.ಶ. ೧೨—೧೩ನೇ ಶತಮಾನದಲ್ಲಿ ಪೂರ್ವ ಕರಾವಳಿ ತೀರದಿಂದ ಕೇರಳದ ಕಡೆಗೆ ವಲಸೆ ಬಂದ ನೇಕಾರರ ಗುಂಪು ಮುಂದುವರಿಯುತ್ತಾ ಕ್ರಿ.ಶ. ೧೫—೧೬ನೇ ಶತಮಾನದ ಕಾಲದಲ್ಲಿ ಚಂದ್ರಗಿರಿ ಹೊಳೆಯ ದಕ್ಷಿಣ ಭಾಗಕ್ಕೆ ಬಂದು ನೆಲಸಿ ಕ್ರಿ.ಶ. ೧೭—೧೮ನೇ ಶತಮಾನದಲ್ಲಿ ಅಂದರೆ ಸುಮಾರು ೩೦೦—೪೦೦ ವರ್ಷಗಳ ಕೆಳಗೆ ಇವರು ತುಳುನಾಡಿಗೆ ಬಂದಿರಬೇಕು ಎಂಬ ನಿಗಮನಕ್ಕೆ ಬರಬೇಕಾಗುತ್ತದೆ.

ಕೇರಳದ ಉದ್ದಗಲದಲ್ಲಿ ವಾಸಿಸುವ ನೇಕಾರ ಕುಟುಂಬದವರ ಸಂಖ್ಯೆ ೧೨ ಲಕ್ಷವನ್ನೂ ಮೀರಬಹುದು ಎಂದು ಅಂದಾಜಿಸಲಾಗಿದೆ. ಕೇರಳದ ಉತ್ತರ ಜಿಲ್ಲೆಗಳಾದ ಕಲ್ಲಿಕೋಟೆ (ಕೋಝಿಕ್ಕೋಡು), ಕಣ್ಣೂರು ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ಇವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಎಡಂಗ—ಬಲಂಗ ಎಂಬ ಎರಡು ಪ್ರಭೇದಗಳು ಈ ಭಾಗಗಳಲ್ಲಿ ಕಂಡುಬರುತ್ತದೆ. ಕೇರಳದ ತಳಿಪ್ಪರಂಬದಿಂದ ಉತ್ತರದಲ್ಲಿ "ಎಡಂಗ" ವಿಭಾಗದವರೂ ದಕ್ಷಿಣದಲ್ಲಿ ಬಲಂಗ ವಿಭಾಗದವರೂ ಅಧಿಕವಾಗಿದ್ದಾರೆ. ಎಡಂಗರು ದೇವೀ ಆರಾಧಕರಾದರೆ, ಬಲಂಗರು ಗಣಪತಿಯ ಆರಾಧಕರು. "ಎಡಂಗ—ಬಲಂಗ ತೊಣ್ಣೂಟ್ಟಾರ್ (೯೬)ನಗರೇ" ಎಂದು ಹೇಳುವ ದೈವದ ನುಡಿಗಟ್ಟು ಇವರು ಮೂಲತಃ ಒಂದೇ ವಿಭಾಗದವರು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಕೇರಳದ ಪಟ್ಟುವಂನಿಂದ ಪಣಂಬೂರಿನವರೆಗೆ ಎಡಂಗರು ೧೪ ನಗರಗಳನ್ನು ನಿಯಮಿಸಿಕೊಂಡಿದ್ದಾರೆ ಎಂದರೂ ಅದೀಗ ೨೨ ಆಗಿದೆ. ಅಲ್ಲಿಂದ ದಕ್ಷಿಣಕ್ಕೆ ಬಲಂಗ ೮೨ ನಗರಗಳಿವೆ ಎಂದರೂ ಈಗ ೧೦೨ ಆಗಿ ಕಾಣುತ್ತಿದೆ. ಕೆಲವು ವರ್ಷಗಳ ಕೆಳಗೆ ಸ್ಪಷ್ಟವಾದ ಗಡಿ ರೇಖೆಯನ್ನು ಬರೆದು ದೂರವಾಗಿದ್ದ ಇವರು ಈಗ ಪುನಃ ಒಂದಾಗುತ್ತಿದ್ದಾರೆ.

ಶಾಲಿಯಾ, ಚಾಲಿಯಾ, ದೇವಾಂಗ, ಪದ್ಮಶಾಲಿಯಾ, ಪಟ್ಟಾರ್ಯ ಎನ್ನುವ ಹೆಸರಿನಿಂದ ಕೇರಳದಲ್ಲಿ ಗುರುತಿಸಲ್ಪಡುವ ನೇಕಾರ ವರ್ಗವು ಕೆಲವು ವರ್ಷಗಳ ಹಿಂದೆ ಪಟ್ಟಾರ್ಯ ಸಮಾಜ, ಶಾಲಿಯಾ ಕ್ಷೇಮ ಸಮಿತಿ, ದೇವಾಂಗ ಸಮಾಜ ಸೇವಾ ಸಂಘ, ಎಡಂಗ ಕುವಿಂದ ಮಹಾಜನ ಸಂಘ, ಚೆಟ್ಟ್ಯಾರ್ ಮಹಾಸಭೆ ಮುಂತಾದ ಹೆಸರುಗಳಿಂದ ಕಾರ್ಯವೆಸಗುತ್ತಿದ್ದವು. ಹೀಗೆ ವಿಭಿನ್ನವಾಗಿ ಸಂಘಟಿತರಾದವರು ಒಂದೇ ನೆರಳಿನಲ್ಲಿ ಸೇರಿಸಬೇಕು ಎನ್ನುವ ಆಶಯವನ್ನಿರಿಸಿಕೊಂಡು ೧೯೮೦ರಲ್ಲಿ ಕೋಜಿಕೋಡ್ (ಕಲ್ಲಿಕೋಟೆ)ನಲ್ಲಿ ಜರುಗಿದ ಜಂಟಿ ಸಮ್ಮೇಳನದಲ್ಲಿ ದೇವಾಂಗ, ಶಾಲಿಯಾ ಮತ್ತು ಪಟ್ಟಾರ್ಯ ಈ ಮೂರನ್ನೂ ಸೇರಿಸಿ "ಕೇರಳ ಪದ್ಮಶಾಲಿಯಾ ಮಹಾಸಭೆ" ಎಂದು ಕರೆಯಲಾಯಿತು. ಈ ಹೆಸರನ್ನು ನೀಡುವುದರ ಹಿಂದೆ

ಈ ಕೆಳಗಿನ ಕಾರಣಗಳನ್ನು ನೀಡಲಾಗಿದೆ.

೧) ದೇವಾಂಗ, ಶಾಲಿಯಾ ಅಥವಾ ಪಟ್ಟಾರ್ಯ ಎಂಬುದರಲ್ಲಿ ಯಾವುದಾದರೂ ಒಂದು ಹೆಚ್ಚು ಸಮಂಜಸವಾದರೂ ಅದು ಬಾಕಿ ಇದ್ದ ವಿಭಾಗಗಳಿಗೆ ಸ್ವೀಕಾರ್ಯವಾಗಿರಲಿಲ್ಲ.

೨) ದೇವಾಂಗ ಮತ್ತು ಪಟ್ಟಾರ್ಯ ಎಂದು ಕರೆಯುತ್ತಿದ್ದರೂ ಸಾಮಾನ್ಯವಾಗಿ ಕೇರಳದಾದ್ಯಂತ ಚಾಲಿಯ/ಶಾಲಿಯಾ ಎಂಬ ಹೆಸರೇ ರೂಢಿಯಲ್ಲಿದೆ. ಆದುದರಿಂದ ಯಾವುದೇ ಹೆಸರೂ ಆದರೂ ಅದರಲ್ಲಿ "ಶಾಲಿಯ" ಪದವಿರಬೇಕು ಎಂಬುದು ಒಮ್ಮತದ ಅಭಿಪ್ರಾಯವಾಗಿತ್ತು.

೩) ಅಖಿಲ ಭಾರತ ನೆಲೆಯಲ್ಲಿ ನೇಯ್ಗೆಯವರಲ್ಲಿ ಹೆಚ್ಚಿನವರು ಪದ್ಮಶಾಲಿಗಳು ಎಂದೇ ಕರೆಯಲ್ಪಡುತ್ತಾರೆ. ಕರ್ನಾಟಕ, ತಮಿಳುನಾಡು, ಕೊಯಂಬತ್ತೂರು ಜಿಲ್ಲೆಯಲ್ಲಿ "ದೇವಾಂಗ" ಎಂದು ಇದ್ದರೂ ಮಹಾರಾಷ್ಟ್ರ, ಆಂಧ್ರ, ಒರಿಸ್ಸಾ, ಬಿಹಾರ, ಬಂಗಾಳಗಳಲ್ಲಿ ಹೆಚ್ಚಿನವರು "ಪದ್ಮಶಾಲಿ"ಗಳೆಂದೇ ಕರೆಯಲ್ಪಡುತ್ತಾರೆ. ಆದುದರಿಂದ ಅಖಿಲ ಭಾರತ ನೆಲೆಯಲ್ಲಿ ಸಂಘಟಿತರಾಗಲು ಸಹಾಯಕವಾಗಬಹುದು ಎಂಬ ನಿಗಮನದೊಂದಿಗೆ "ಪದ್ಮಶಾಲಿಯಾ" ಎಂಬ ಹೆಸರು ಸ್ವೀಕಾರ್ಯವಾಯಿತು.

ತಮಿಳುನಾಡು, ಆಂಧ್ರ ಹಾಗೂ ಕರ್ನಾಟಕಗಳಲ್ಲಿ ನೇಕಾರ ಜಾತಿಯವರು ಇನ್ನೂ ಹಲವಾರು ಹೆಸರುಗಳಿಂದ ಗುರುತಿಸಲ್ಪಡುತ್ತಾರೆ.

ಕೇರಳದ ಬಾಲರಾಮಪುರ, ಅಮರವಿಳ ಪ್ರದೇಶಗಳಲ್ಲಿ ನೇಕಾರವರ್ಗ ನೇಕಾರಿಕೆಯಲ್ಲಿ ಬಹಳಷ್ಟು ಪ್ರಗತಿಯನ್ನು ಸಾಧಿಸಿದೆ. ಅಲ್ಲಿನ ನೇಕಾರರಿಗೆ ತಮಿಳುನಾಡಿನವರ ಸಂಪರ್ಕವೇ ಹೆಚ್ಚಾಗಿದೆ. ತಮಿಳು ಸಂಸ್ಕಾರವೇ ಮುಖ್ಯವಾಗಿದೆ. ಮನೆಯಲ್ಲಿ ತಮಿಳನ್ನೇ ಮಾತನಾಡುತ್ತಾರೆ.

ತಮಿಳುನಾಡಿನ ಕನ್ಯಾಕುಮಾರಿ ಜಿಲ್ಲೆಯ ಮೂಲಕ ಕೇರಳದ ದಕ್ಷಿಣ ಭಾಗಕ್ಕೆ ಇವರು ಬಂದಿರಬೇಕೆಂದೂ, ಅಂದಿನ ರಾಜಮನೆತನಗಳಾದ ಕೊಡುಂಗಲ್ಲೂರಿನ ರಾಜರು, ಕೋಟೆಕ್ಕೋಡಿನ ಸಾಮೂದಿರಿ ರಾಜರು ಮತ್ತು ಚಿರಕ್ಕಲ್ (ತಳಿಪ್ಪರಂಬ)ನ ಕೋಲತ್ತಿರಿ ರಾಜರ ಆಶ್ರಿತರಾಗಿ ಬಾಳಿದರು. ರಾಜಾಶ್ರಯವನ್ನು ಕಳೆದುಕೊಂಡಾಗ ಕೇರಳದ ಬೇರೆ ಬೇರೆಡೆ ವಲಸೆ ಹೋದರು. ಹಾಗೆಯೇ ತುಳುನಾಡಿಗೂ ಇವರ ಆಗಮನವಾಯಿತು.

ಕಾಸರಗೋಡಿನ ಶಾಲಿಯರ ಮೂಲ ಆಂಧ್ರ ಹಾಗೂ ತಮಿಳುನಾಡು ಎನ್ನಲು ಆಧಾರಗಳು:

೧) ಕೇರಳದ ಯಾವ ಪ್ರದೇಶದಲ್ಲೂ ಕಾಣದ "ತೆರು" ಅಥವಾ "ಕೇರಿ" ಸಂಸ್ಕೃತಿ : ಕೇರಳದಲ್ಲಿ ಕೆಲವೆಡೆ ಒಂದೇ ಸಮುದಾಯದವರು ಒಟ್ಟಿಗೇ ಜೀವಿಸುವ ಪರಿಪಾಟವಿದ್ದರೂ, ಜೀವಿಸುವ ಪ್ರದೇಶವನ್ನು "ತೆರು" ಎಂದು ಕರೆಯುವುದಿಲ್ಲ. ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲಿ

ಇದು ಸಾಮಾನ್ಯ. ಆದುದರಿಂದ ಈ "ತೆರು" ಪದ್ಧತಿಯೇ ಇವರು ಅಲ್ಲಿನವರು ಎಂಬುದನ್ನು ಸ್ಪಷ್ಟಪಡಿಸುತ್ತದೆ.

೨) ಇವರಲ್ಲಿ ಕಂಡುಬರುವ ಎಡಂಗ ಮತ್ತು ಬಲಂಗ ವಿಭಾಗಗಳು. ತಮಿಳುನಾಡಿನ ಎಡಂಗೈ— ಬಲಂಗೈ ವಿಭಾಗಗಳೇ ಇದಕ್ಕೆ ಮೂಲ. ಕೇರಳದ ಬೇರಾವ ಸಮುದಾಯದಲ್ಲೂ ಈ ವಿಭಜನೆ ಇಲ್ಲ.

೩) ಕೇರಳದ ಉಳಿದ ಸಮುದಾಯಗಳು ಸತ್ತವರಿಗೆ ಅಪರ ಕರ್ಮಗಳನ್ನು ೪೦ನೇ ದಿನ ಮಾಡಿದರೆ, ಇವರು ೧೨ ಮತ್ತು ೧೩ನೇ ದಿನ ಮಾಡುತ್ತಾರೆ. ಪೂರ್ವ ಕರಾವಳೀ ಭಾಗಗಳಲ್ಲಿ ಹಾಗೂ ಇತರೆಡೆ ಈ ಪದ್ಧತಿಯಿದೆ.

೪) ಸಾಮೂದಿರಿ ರಾಜನ ಕಾಲದಲ್ಲಿ ತಮಿಳುನಾಡಿನಿಂದ ಇವರನ್ನು ಸುಮಾರು ೧೨ನೇ ಶತಮಾನದ ಅನಂತರ ಕರೆಸಿರಬೇಕು. ಅಲ್ಲಿಂದ ಚಿರಕ್ಕಲ್ ರಾಜನ ಆಶ್ರಯವನ್ನು ಪಡೆದು, ಅಲ್ಲಿಂದ ಉತ್ತರಕ್ಕೆ ಬಂದು ಕಾಸರಗೋಡನ್ನು ಇವರು ಸೇರಿರುವರು.

೫) ಇವರು ವೃತ್ತಿಗೆ ಅವಲಂಬಿಸುವ ವಿಧಾನವು ತಮಿಳುನಾಡಿನವರ ವಿಧಾನವನ್ನೇ ಹೋಲುತ್ತವೆ.

೬) ಭಾಷೆಯು ಮಲಯಾಳವೇ ಆಗಿದ್ದರೂ, ಕೆಲವು ತಮಿಳು ಪದಗಳು ಇನ್ನೂ ಭಾಷೆಯಲ್ಲಿ ಉಳಿದುಕೊಂಡಿದೆ.

೭) ನೇಕಾರ ಜನಾಂಗವು ಅಧಿಕವಾಗಿರುವುದು ಆಂಧ್ರ ಹಾಗೂ ತಮಿಳುನಾಡಿನ ಭಾಗಗಳಲ್ಲಿ, ಅಲ್ಲೇ ಇವರ ವಿಭಿನ್ನ ವಿಭಾಗಗಳು ಕಂಡುಬರುತ್ತವೆ.

೮) ದಕ್ಷಿಣ ಭಾರತದ ಪೂರ್ವ ಕರಾವಳಿ ಭಾಗವು ಕಪ್ಪು ಮಣ್ಣಿನ ಪ್ರದೇಶ. ಹತ್ತಿ ಬೆಳೆಗೆ ಯೋಗ್ಯವಾದುದು. ಈಗಲೂ ಈ ಪ್ರದೇಶವೇ ನೇಕಾರಿಕೆಗೆ ಪ್ರಸಿದ್ಧವಾಗಿದೆ. ಕೇರಳವು ತೆಂಗಿನ ಕೃಷಿಗೂ ಭತ್ತದ ಕೃಷಿಗೂ ಹೆಸರು ವಾಸಿ. ಕಾಸರಗೋಡಿನ ಭಾಗದಲ್ಲಂತೂ ಕೆಂಪು ಮಿಶ್ರಿತ ಕಪ್ಪು ಮಣ್ಣು ಅಧಿಕವಾಗಿರುವುದರಿಂದ ಹತ್ತಿ ಕೃಷಿಗೆ ಯೋಗ್ಯವಲ್ಲ. ರೇಶ್ಮೆಹುಳಗಳನ್ನೂ ಸಾಕಲು ಬೇಕಾದ ಹಿಪ್ಪು ನೇರಳೆ ಗಿಡಗಳು ಇಲ್ಲಿ ಬೆಳೆಯುವುದಿಲ್ಲ. ಆದುದರಿಂದ ಇಲ್ಲಿನ ಶಾಲಿಯರು ಪೂರ್ವ ಕರಾವಳಿಯ ಭಾಗಗಳಿಂದಲೇ ಬಂದಿರಬೇಕು.

೯) ಇವರಲ್ಲಿ ಬಳಕೆಯಾಗುವ ಚೆಟ್ಟಿಯಾರ್ ಉಪನಾಮವೂ ಅದನ್ನು ಪುಷ್ಟೀಕರಿಸುತ್ತದೆ. ಕೇರಳದುದ್ದಕ್ಕೂ ಶಾಲಿಯರ ಉಪನಾಮ ಚೆಟ್ಟಿಯಾರ್ ಎಂದೇ ಆಗಿದೆ. ಈ ಉಪನಾಮವು ತಮಿಳುನಾಡಿನ ಹಲವು ಸಮುದಾಯಗಳಲ್ಲಿ ಬಳಸಲ್ಪಡುತ್ತದೆ. ಅದರಲ್ಲೂ ಹೆಚ್ಚಾಗಿ ನೇಕಾರ ವರ್ಗದವರು ಸೇರಿಕೊಳ್ಳುತ್ತಾರೆ. ಕಾಸರಗೋಡಿನಲ್ಲಿ ಇತರ ಸಮುದಾಯದವರು ಶಾಲಿಯ ಪುರುಷರನ್ನು "ಚೆಟ್ಟಿಯಾರ್" ಎಂದೂ ಸ್ತ್ರೀಯರನ್ನು "ಚೆಟ್‌ಚಿಯಾರ್" ಎಂದೂ ಗೌರವಪೂರ್ವಕವಾಗಿ ಕರೆಯುತ್ತಾರೆ.

೧೦) ಕಾಸರಗೋಡಿನ ಶಾಲಿಯಾ / ದೇವಾಂಗ ಸಮುದಾಯಗಳಲ್ಲಿ ನಗರಗಳಿಗೆ ಸಲ್ಲಿಸಬೇಕಾದ ಸದಸ್ಯತನದ ಶುಲ್ಕವನ್ನು "ಕಾಲ್‌ವರಿ" ಅಥವಾ "ತಲವರಿ" ಎಂದು ಹೇಳುತ್ತಾರೆ. "ವರಿ" ಎಂಬ ಪದವು ತಮಿಳಿನಲ್ಲಿ "ತೆರಿಗೆ" ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ.

ಈ ಎಲ್ಲಾ ಕಾರಣಗಳೂ ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯರನ್ನು ಪೂರ್ವ ಕರಾವಳಿಯ ಶಾಲಿಯರೊಂದಿಗೆ ಬಂಧಿಸುತ್ತದೆ.

ಮೇಲಿನ ಎಲ್ಲಾ ಅಧ್ಯಾಯಗಳನ್ನು ಆಧರಿಸಿ ಈ ಕೆಳಗಿನ ನಿಗಮನಕ್ಕೆ ಬರಲಾಗಿದೆ.

೧) ತುಳುನಾಡಿನ ಪ್ರದೇಶದಲ್ಲಿ ಕಂಡುಬರುವ "ಶಾಲಿಯಾ/ದೇವಾಂಗ ಸಮುದಾಯ"ವು ಮೂಲತಃ ಇಲ್ಲಿನವರಲ್ಲ. ಸುಮಾರು ಕ್ರಿ.ಶ. ೧೨—೧೩ನೇ ಶತಮಾನದಲ್ಲಿ ಪೂರ್ವ ಕರಾವಳಿ ತೀರದಿಂದ ಕೇರಳದ ಕಡೆಗೆ ವಲಸೆ ಬಂದ ನೇಕಾರರ ಗುಂಪು ಮುಂದುವರಿಯುತ್ತಾ ಕ್ರಿ.ಶ. ೧೫—೧೬ನೇ ಶತಮಾನದ ಕಾಲದಲ್ಲಿ ಚಂದ್ರಗಿರಿ ಹೊಳೆಯ ದಕ್ಷಿಣ ಭಾಗಕ್ಕೆ ಬಂದು ನೆಲೆಸಿ, ಕ್ರಿ.ಶ. ೧೭—೧೮ನೇ ಶತಮಾನದಲ್ಲಿ ಅಂದರೆ ಸುಮಾರು ೩೦೦—೩೫೦ ವರ್ಷಗಳ ಕೆಳಗೆ ತುಳುನಾಡಿಗೆ ಬಂದಿರಬೇಕು.

೨) ಕರ್ನಾಟಕದ ದೇವಾಂಗ, ಆಂಧ್ರದ ಪದ್ಮಶಾಲಿ, ತಮಿಳುನಾಡಿನ ಕೈಕೋಳರ್ ಸಮುದಾಯದ ಜತೆಗೆ ಇಲ್ಲಿನ ಶಾಲಿಯರಿಗೆ ಆಂತರಿಕ ಹಾಗೂ ಬಾಹ್ಯ ಸಂಬಂಧ ಒಂದಲ್ಲ ಒಂದು ರೀತಿಯಿಂದ ಇರುವುದು ಕಾಣುತ್ತದೆ. ಈ ಮೇಲಿನ ನೇಕಾರ ಸಮುದಾಯದಲ್ಲಿ ಯಾವುದೋ ಒಂದರಿಂದ ಅಥವಾ ಇವೆಲ್ಲವೂ ಮಿಶ್ರವಾಗಿ ಈ ಸಮುದಾಯ ಸೃಷ್ಟಿಯಾಗಿರುವ ಸಾಧ್ಯತೆ ಇದೆ.

೩) ತಮಿಳುನಾಡಿನ ನೇಕಾರರಿಗೂ ಇವರಿಗೂ ನಿಕಟ ಸಂಬಂಧವಿದೆ. ಹೆಸರಿನೊಂದಿಗೆ ಇರುವ "ಚೆಟ್ಟಿಯಾರ್" ಉಪನಾಮ, "ತೆರು ಹಾಗೂ ನಗರ ಪದ್ಧತಿ" ಇದನ್ನು ಸ್ಪಷ್ಟಪಡಿಸುತ್ತದೆ. ತಮಿಳುನಾಡಿನಲ್ಲೂ ನೇಕಾರರು ಗುಂಪಾಗಿಯೇ ವಾಸಿಸುತ್ತಾರೆ. ಅದನ್ನು "ನಾಡು" ಎಂದು ಕರೆಯುತ್ತಾರೆ.

೪) ಶಿಸ್ತುಬದ್ಧವಾದ ಜೀವನಕ್ರಮ ಇವರಿಗಿದೆ. ಆಚಾರ—ವಿಚಾರ ಹಾಗೂ ನಗರ ವ್ಯವಸ್ಥೆ ಇದನ್ನು ಪುಷ್ಟೀಕರಿಸುತ್ತದೆ. ಹೆಣ್ಣಿಗೂ ಗಂಡಿಗೂ ಸಮಾಜದಲ್ಲಿ ಸಮಾನವಾದ ಸ್ಥಾನವನ್ನು ಈ ಸಮುದಾಯ ನೀಡುತ್ತದೆ.

೫) ಪ್ರಾಚೀನ ಕಾಲದಿಂದಲೇ ರೂಢಿಸಿಕೊಂಡು ಬಂದ ವಿಶಿಷ್ಟವಾದ "ವೃತ್ತಿ ಜಾನಪದ" ಇವರಿಗಿದೆ. ಆದರೆ ಇತ್ತೀಚೆಗೆ ಅದು ನಶಿಸಿ ಹೋಗಿದೆ.

೬) ಸಮುದಾಯವು ವಿಧಿಸಿದ ವಿಧಿ—ವಿಧಾನಗಳನ್ನು ಸುಲಭವಾಗಿ ಬಿಟ್ಟುಕೊಡುವ ಹವ್ಯಾಸ ಇವರಿಗಿಲ್ಲ. "ಚರಡ್ ಕೆಟ್ಟಲ್, ಎಡಂಗಾಜಾರ, ಪುಳಿಕುಡಿ"ಯಂತಹ ಪದ್ಧತಿಗಳು ಇಂದೂ ಜೀವಂತವಾಗಿರುವುದು ಕಂಡು ಬರುತ್ತದೆ.

೭) ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವ ಇವರು ಬಹುಬೇಗ ಅಲ್ಲಿನ ಪರಿಸರಕ್ಕೆ ಹೊಂದಿಕೊಳ್ಳುವ ಜಾಯಮಾನದವರು. ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು, ಇತರರ ಸಂಸ್ಕೃತಿಯನ್ನು ಗೌರವಿಸಿ, ಸ್ವೀಕರಿಸುವ ಸ್ವಭಾವ ಇವರಿಗಿದೆ. ಇದುವೇ "ಮಿಶ್ರ ಸಂಸ್ಕೃತಿ"ಯು ಬೆಳೆದು ಬರಲು ಕಾರಣವಾಗಿದೆ.

೮) ದಕ್ಷಿಣ ಭಾರತದ ನೇಕಾರ ಸಮುದಾಯದ ಹೆಚ್ಚಿನ ವಿಭಾಗಗಳೂ "ಶಕ್ತಿ"ಯ ಆರಾಧಕರು. ಇದು ಮೂಲತಃ ಇವರು ಒಂದೇ ವರ್ಗವಾಗಿದ್ದು ಕ್ರಮೇಣ ಬೇರ್ಪಟ್ಟುದನ್ನು ಸೂಚಿಸುತ್ತದೆ. ಆದುದರಿಂದಲೇ ತುಳುನಾಡಿನುದ್ದಕ್ಕೂ "ಭಗವತಿ" ಅಥವಾ "ದೇವೀ" ಆರಾಧನೆ ರೂಢಿಯಲ್ಲಿದೆ.

೯) ಈ ಸಮುದಾಯಕ್ಕೆ ಅವರದೇ ಆದ ವಿಶಿಷ್ಟ ಸಂಪ್ರದಾಯವಿದೆ. ಹಾಗೇ ಜಾನಪದ ಕಲೆಗಳೂ ಇವೆ. ಇವರ "ಶಾಲಿಯಾ ಪೊರಾಟ್" ಕೇರಳದ ಜಾನಪದ ಲೋಕಕ್ಕೆ ಒಂದು ವಿಶಿಷ್ಟ ಕೊಡುಗೆ ಎನ್ನಬಹುದು.

೧೦) ತುಳುನಾಡಿನ "ಶಾಲಿಯಾ/ದೇವಾಂಗ" ಸಮುದಾಯಕ್ಕೆ ಇತರ ಸಮುದಾಯಗಳಿಗೆ ಇರುವ ಹಾಗೇ ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆಗಳಿವೆ. ಇವುಗಳು ಸಮುದಾಯದ ಮೂಲ ಹಾಗೂ ಸಂಸ್ಕೃತಿಯ ಅಧ್ಯಯನಕ್ಕೆ ಸಹಾಯವನ್ನು ನೀಡುತ್ತವೆ.

ಈ ನಿಗಮನಗಳು ಸಂಶೋಧನೆಯ ಹಿನ್ನೆಲೆಯಿಂದ ಕಂಡುಕೊಂಡವುಗಳು. ಈ ಸಮುದಾಯದ ಸೂಕ್ಷ್ಮವಾದ ಅಧ್ಯಯನಕ್ಕೆ ಇವು ಸಹಕಾರಿಯಾಗಬಹುದು ಅನ್ನಿಸುತ್ತದೆ.

# ಅನುಬಂಧ

ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನಲ್ಲಿ ಹೆಚ್ಚು ಕಡಿಮೆ ಸಮಾನವಾದ ಸಂಸ್ಕೃತಿಯುಳ್ಳ ನಾಲ್ಕು ಸಮುದಾಯಗಳು ಕಂಡುಬರುತ್ತವೆ. ಅವು ತೀಯಾ, ಮೋಯಾ, ವಾಣಿಯಾ ಮತ್ತು ಶಾಲಿಯಾ, ಬ್ರಾಹ್ಮಣೇತರ ವರ್ಗಗಳಾದ ಈ ಸಮುದಾಯಗಳ ಆಚಾರ - ವಿಚಾರ, ಸಂಪ್ರದಾಯಗಳಲ್ಲಿ ಬಹಳಷ್ಟು ಸಾಮ್ಯತೆಗಳು ಕಂಡುಬರುತ್ತದೆ. ಇವರ ಪ್ರಮುಖ ಆರಾಧನಾ ದೈವವೂ ಭಗವತಿಯೇ ಆಗಿದ್ದಾಳೆ. ಇವರಲ್ಲಿ ತೀಯಾ ಸಮುದಾಯವನ್ನು ಬಿಟ್ಟರೆ ಉಳಿದ ಮೂರು ಸಮುದಾಯವೂ ಪೂರ್ವ ಕರಾವಳೀ ತೀರದಿಂದ ಕೇರಳ ಮಾರ್ಗವಾಗಿ ಈ ಪ್ರದೇಶಕ್ಕೆ ಬಂದಿರಬಹುದು ಎಂದು ಊಹಿಸಲಾಗಿದೆ. (ಸ್ವಲ್ಪ ಕಾಲ ಕೇರಳದಲ್ಲಿ ನೆಲಸಿದ ಇವರು ಅಲ್ಲಿನ ಬರಗಾಲದಿಂದಾಗಿ ಉತ್ತರಕ್ಕೆ ವಲಸೆ ಬಂದರು ಎಂಬ ಊಹೆಯೂ ಇದೆ. )

**ವಾಣಿಯಾ :** ಮಲಯಾಳದಲ್ಲಿ 'ವಾಣಿಯಾ' ಎಂದು ಕರೆಯಲ್ಪಡುವ 'ಗಾಣಿಗ' ಸಮುದಾಯದ ಮೂಲವೃತ್ತಿ ಎಣ್ಣೆಗಾರಿಕೆ ' ವಣಿಕ ' ಎಂದರೆ ' ವ್ಯಾಪಾರ ' ಎನ್ನುವ ಅರ್ಥವಿದೆ. ಮೂಲ ಪದದಿಂದ ಈ ' ವಾಣಿಯಾ ' ಎನ್ನುವ ಪದವು ಹುಟ್ಟಿಕೊಂಡಿದೆ. ಇದರಲ್ಲಿ ತುಳು ಹಾಗೂ ಮಲಯಾಳೀ ಮಾತೃಭಾಷೆಯವರು ಇದ್ದಾರೆ. ಶಾಲಿಯಾರಂತೆಯೇ ಇವರ ಆರಾಧನಾಲಯವು ' ತಾನಂ' ಎಂದೇ ಕರೆಯಲ್ಪಡುತ್ತದೆ. ಇವರ ಪ್ರಧಾನ ಆರಾಧನಾ ದೈವ ಮುಚ್ಚಿಲೋಟು ಭಗವತಿ. ಕಣ್ಣಂಗಾಟ್ ಭಗವತಿ, ಮೂವಾಳಂಕುಳಿ ಚಾಮುಂಡಿ, ಪುಲ್ಲೂರಾಳಿ, ಪಡಿಂಞಾರ್ ಚಾಮುಂಡಿ ಮೊದಲಾದ ಮಲಯಾಳೀ ದೈವಗಳನ್ನೂ ವಿಷ್ಣು ಮೂರ್ತಿ, ಮಲರಾಯ, ರಾಜದೈವಗಳಂತಹ ತುಳುದೈವಗಳನ್ನೂ ಇವರು ಆರಾಧಿಸುತ್ತಾರೆ. ಚೆವ್ವಿಳಕ್ಕ್ ಪುತ್ತರಿ, ಪೂರಂ, ಕಳಿಯಾಟಂಗಳ ಮೂಲಕ ದೈವಗಳ ಆರಾಧನೆ ನಡೆಯುತ್ತದೆ. ಮೀನ ಮಾಸದಲ್ಲಿ ಪೂರಂ ಸಮಯದಲ್ಲಿ ದೇವಾಲಯಗಳಲ್ಲಿ ' ಪೂರಕ್ಕಳಿ' ಯನ್ನು ಆಡುತ್ತಾರೆ. ವರ್ಷಂಪ್ರತಿ 'ತಾನಂ' ಗಳಲ್ಲಿ ಸಾಮೂಹಿಕ ವಿವಾಹವನ್ನು ನಡೆಸುವುದು ಈ ಸಮುದಾಯದ ವಿಶಿಷ್ಟವಾದ ಪದ್ಧತಿಯಾಗಿದೆ. ವಾಣಿಯಾ ಜಾತಿಯವರು ತಮ್ಮ ಮನೆಗಳಲ್ಲಿ ಪ್ರತ್ಯೇಕ ವಿವಾಹಗಳನ್ನು ನಡೆಸುವ ಹಾಗಿಲ್ಲ ಶಾಲಿಯಾ ಸಮುದಾಯದಲ್ಲಿರುವಂತೆಯೇ ' ಚಪ್ಪರದ ಮದುವೆ ' ಯನ್ನು ಕನ್ನಿಕೆಯರಿಗೆ ನಡೆಸುತ್ತಾರೆ. ಶಾಲಿಯಾ ಸಮುದಾಯದಲ್ಲಿ ' ಚೆಟ್ಟಿಯಾರ್' ಹುಡುಗಿಗೆ ' ತಾಲಿ' ಕಟ್ಟಿದರೆ, ವಾಣಿಯಾರಲ್ಲಿ ' ವಲಿಯಕೋಮರಂ ' ತಾಲಿ ಕಟ್ಟುತ್ತಾರೆ. ಏಳು ಮಂದಿ 'ಕಾರ್ನವರು' ಸೇರಿಕೊಂಡು 'ತಾನಂ' ನ ಆಡಳಿತವನ್ನು ನಡೆಸುತ್ತಾರೆ. ಪ್ರತಿ ಮನೆಯಿಂದಲೂ 'ಪಟ್ಟಿಕ್ಕಾರನ್' ಎನ್ನುವವನು ನಿಶ್ಚಿತ ' ವಂತಿಗೆ ' ಯನ್ನು ವಸೂಲು ಮಾಡಿ 'ತಾನಂ' ಗೆ ಪ್ರತಿ ವರ್ಷವೂ ತಲುಪಿಸುತ್ತಾನೆ. ದೈವದ ದರ್ಶನ ಪಾತ್ರಿಗಳನ್ನು 'ಕೋಮರಂ' ಎನ್ನುತ್ತಾರೆ ಇವರಲ್ಲಿ ' ಎಟ್ಟಿಲ್ಲಂ' ಎಂದರೆ ಎಂಟು ಮೂಲ ಕುಟುಂಬಗಳಿವೆ.

ಇವರು ಮೂಲತಃ ಗುಜರಾತಿನವರು ಎಂಬ ಅಭಿಪ್ರಾಯವಿದೆ. ತಮಿಳುನಾಡಿನಿಂದ ಕೇರಳಕ್ಕೆ ಆಗಮಿಸಿದ ಇವರ ಒಂದು ವಿಭಾಗ 'ಪಯ್ಯನ್ನೂರಿನಲ್ಲೂ ', ಇನ್ನೊಂದು ವಿಭಾಗ ತಿರುವಿ ' ದಾಂಕೂರಿ ' ನಲ್ಲೂ ನೆಲಸಿತು. ಕ್ರಮೇಣ ಕೇರಳದ ಉದ್ದಗಲಕ್ಕೂ ಇವರು ವ್ಯಾಪಿಸಿದರು. ತಾವು ಉತ್ಪಾದಿಸಿದ ಎಣ್ಣೆಯನ್ನು ಊರೂರು ಸುತ್ತಿ ಮಾರಾಟಮಾಡುವ ಹಿನ್ನೆಲೆಯಲ್ಲಿ ಬೇರೆ ಬೇರೆ ಕಡೆ ನೆಲಸಿರುವ ಸಾಧ್ಯತೆಯಿದೆ. ಶಾಲಿಯಾರಂತೆ ಕೇರಳದ ಬೇರೆ ಬೇರೆ ಭಾಗಗಳಲ್ಲಿ ವಿಭಿನ್ನ ಹೆಸರುಗಳಿಂದ ಇವರು ಗುರುತಿಸಲ್ಪಡುತ್ತಾರೆ. ತಿರುವಿದಾಂಕೂರಿನಲ್ಲಿ 'ವಾಣಿಯಾ ವೈಶ್ಯರೆಂದೂ, ಮಧ್ಯ ತಿರುವಿದಾಂಕೂರಿನಲ್ಲಿ ' ಚಕ್ಕಾಲನ್ ನಾಯರ್ ' ಎಂದೂ, ಉತ್ತರ ಮಲಬಾರಿನಲ್ಲಿ ವಾಣಿಯಾ ಎಂದೂ ಕಾಸರಗೋಡು ಹಾಗೂ ದಕ್ಷಿಣ ಕನ್ನಡದಲ್ಲಿ ಪಾಟಾಳಿಗಳೆಂದೂ, ಗಾಣಿಗರೆಂದೂ ಗುರುತಿಸಲ್ಪಡುತ್ತಾರೆ. (ಕೇರಳದ ಶಾಲಿಯಾರಲ್ಲಿ ದೇವಾಂಗ, ಪಟ್ಟಾರ್ಯ, ಶಾಲಿಯಾ ಎಂದಿರುವಂತೆ ) ಇವರು ' ವಾಣಿಯ ಚೆಟ್ಟಿ' ಎಂದೂ ಗುರುತಿಸಲ್ಪಡುತ್ತಾರೆ. ನಾಯರ್, ನಂಬಿಯಾರ್, ಚೆಟ್ಟಿಯಾರ್ ಎಂಬ ಉಪನಾಮಗಳನ್ನು ಇವರು ಬಳಸುತ್ತಾರೆ. ಇವರಿಗೂ ತುಳುನಾಡಿನಲ್ಲಿ ಹದಿನೆಂಟು ಆರಾಧನಾಲಯಗಳಿವೆ. ಕೆಲವರು ಶಾಲಿಯಾ ಸಮುದಾಯಕ್ಕೂ ವಾಣಿಯಾ ಸಮುದಾಯಕ್ಕೂ ನಿಕಟ ಸಂಬಂಧವನ್ನು ಕಲ್ಪಿಸಿ, " ಶಾಲಿಯಾ ಮತ್ತು ವಾಣಿಯಾ ಸಮುದಾಯದವರು ಸೋದರಿಯರ ಮಕ್ಕಳು " ಎಂದು ಅಭಿಪ್ರಾಯಪಡುತ್ತಾರೆ. 1901 ರ ಮದರಾಸು ಜನಗಣತಿ ವರದಿಯಲ್ಲಿ ಚಾಲಿಯನ್ನರು ವಾಣಿಯರಲ್ಲಿಯೇ ಒಂದು ಉಪಜಾತಿಯೆಂದು ಹೇಳಲಾಗಿದೆ.

<u>ತೀಯಾ ಸಮುದಾಯ:</u> ಇವರು ಮೂಲತಃ ಮಲಯಾಳ ನಾಡಿನಿಂದ ಬಂದವರು. ಇವರನ್ನು ಮಲಯಾಳಿ ಬಿಲ್ಲವರೆಂದೂ ಬೆಳ್ಚಪ್ಪಾಡ (ದರ್ಶನ ಪಾತ್ರಿ) ರೆಂದೂ ಕರೆಯುತ್ತಾರೆ. ಕೇರಳದ ಕೋಲತ್ತುನಾಡಿನಿಂದ ಸುಮಾರು 4-5 ನೆಯ ಶತಮಾನದ ಕಾಲದಿಂದೀಚೆಗೆ ಇವರು ಈ ಪ್ರದೇಶಕ್ಕೆ ಬಂದಿರಬಹುದು ಎಂದು ಊಹಿಸಲಾಗಿದೆ. ಕೋಲತ್ತಿರಿಯ ಸೇನೆಯಲ್ಲಿ ಬಿಲ್ಗಾರರಾಗಿ ಪ್ರಾವೀಣ್ಯತೆಯನ್ನು ಪಡೆದವರಾದುದರಿಂದ 'ಬಿಲ್ಲವರು' ಎನ್ನುವ ಬಿರುದು ಇವರದಾಯಿತೆನ್ನಲಾಗಿದೆ. ಇವರೊಂದಿಗೆ ಇವರ ಆರಾಧ್ಯದೇವತೆಯಾದ 'ಶ್ರೀ ಕುರುಂಬಾ ಭಗವತಿ' ಯ ಆಗಮನವೂ ಆಯಿತು. ಶಾಲಿಯಾರಂತೆಯೇ ಇವರ ಆರಾಧನಾಲಯವನ್ನು 'ತಾನಂ' ಎಂದೇ ಕರೆಯುತ್ತಾರೆ. ಹದಿನೆಂಟು 'ತಾನಂ'ಗಳು ಕಾಸರಗೋಡು ಹಾಗೂ ದಕ್ಷಿಣ ಕನ್ನಡದಲ್ಲಿವೆ. ಭಗವತಿಯೊಂದಿಗೆ ಹಲವು ಉಪದೈವಗಳ ಆರಾಧನೆಯೂ ಇಲ್ಲಿ ನಡೆಯುತ್ತದೆ. ಶಾಲಿಯಾರಂತೆ ಇವರೂ 'ತಾನಂ'ಗಳ ಆಚಾರಪಟ್ಟವನ್ನು ವಹಿಸಿದವರನ್ನು 'ಅಚ್ಚಮ್ಮಾರ್ ' ಎಂದೇ ಕರೆಯುತ್ತಾರೆ. ಹಾಗೇ ಸಮಾಜಕ್ಕೆ ಯುವಕನೊಬ್ಬನನ್ನು ಸದಸ್ಯನನ್ನಾಗಿಸುವ ಕ್ರಮವೂ ಇತ್ತು. ಅದನ್ನು 'ಮೋತ್‌ವಾಳ್ ಕರ್ಮ' ವೆಂದು ಕರೆಯುತ್ತಿದ್ದರು. 'ಮೊತ್ತ

ಆಳ್ ' ಎಂದರೆ ' ಹಿರಿಯ ವ್ಯಕ್ತಿ 'ಎಂದರ್ಥ. ಕ್ರಮೇಣ ಅದು ಮೋತ್‌ವಾಳ್ ಆಗಿರಬಹುದು. ಮದುವೆಯ ಸಂಪ್ರದಾಯವೂ ಹೆಚ್ಚುಕಡಿಮೆ ಶಾಲಿಯಾರಂತೇ ಇದೆ. ವಾಣಿಯಾರಂತೇ ಸಾಮೂಹಿಕ ಮದುವೆಗಳೂ ಹಿಂದೆ ರೂಢಿಯಲ್ಲಿತ್ತು. ಇದರಲ್ಲೂ 'ಎಟ್ಟಿಲಂ' ಇದೆ. ಆದರೆ ವಾಣಿಯಾ ಸಮುದಾಯದವರ ಜತೆಗಿರುವ ನಿಕಟ ಸಂಬಂಧ ಶಾಲಿಯಾ ಸಮುದಾಯಕ್ಕೆ ತೀಯಾ ಸಮುದಾಯದವರೊಂದಿಗೆ ಇದ್ದುದರ ಬಗ್ಗೆ ಎಲ್ಲೂ ಉಲ್ಲೇಖವಿಲ್ಲ.

**ಮೋಯಾ ಸಮುದಾಯ:-** ಕನ್ನಡದಲ್ಲಿ 'ಮೊಗವೀರ ' ಎಂದು ಕರೆಯಲ್ಪಡುವ ಸಮುದಾಯವು ಮಲಯಾಳದಲ್ಲಿ 'ಮೋಯಾ' ಎಂದು ಕರೆಯಲ್ಪಟ್ಟಿದೆ. ಈ ಪ್ರದೇಶದಲ್ಲಿ ಇವರಲ್ಲೂ ತುಳು ಮತ್ತು ಮಲಯಾಳ ಪ್ರಭೇದಗಳಿವೆ. ಪೂರ್ವಕರಾವಳಿಯಿಂದ ಸಮುದ್ರದ ಮೂಲಕ ಉದ್ಯೋಗಾರ್ಥ ಇಲ್ಲಿಗೆ ಬಂದು ನೆಲೆಸಿದರು ಎಂದು ಹೇಳಲಾಗುತ್ತದೆ. ನೀಲೇಶ್ವರದ ಅರಸರ ಅಸಮಾಧಾನಕ್ಕೆ ಗುರಿಯಾಗಿ ಕೆಲವರು ದಕ್ಷಿಣಕ್ಕೆ ಹೋಗಿ ನೆಲೆಸಿದರು ಎಂದೂ ನಂಬಲಾಗಿದೆ. ಇವರ ಆರಾಧ್ಯದೈವವೂ ಭಗವತಿಯೇ, ಶಾಲಿಯಾರ, 'ಚೀರುಂಬಾ ಭಗವತಿಯನ್ನು ಇವರು 'ಕುರುಂಬಾ' ಭಗವತಿ ಎನ್ನುತ್ತಾರೆ. ಆರಾಧನಾಲಯವನ್ನು ಇವರೂ 'ತಾನಂ' ಎಂದೇ ಹೇಳುತ್ತಾರೆ. ಈ ಪ್ರದೇಶದಲ್ಲಿ ಇವರಿಗೆ ೧೧ ಸ್ಥಾನಗಳು ಇವೆ. ಇದರಲ್ಲಿ ೭ ಸ್ಥಾನಗಳು ಚಂದ್ರಗಿರಿಯ ಉತ್ತರಕ್ಕೂ ೪ ಸ್ಥಾನಗಳು ಚಂದ್ರಗಿರಿಯ ದಕ್ಷಿಣಕ್ಕೂ ಇದೆ. ಮೀನುಗಾರಿಕೆ ಪ್ರಧಾನವೃತ್ತಿಯಾದರೂ, ಬಹಳಷ್ಟು ದೇಹದಾರ್ಢ್ಯತೆಯುಳ್ಳ ಇವರು ಒಂದು ಕಾಲದಲ್ಲಿ ರಾಜರ ಆಶ್ರಯದಲ್ಲಿ ಯೋಧರಾಗಿಯೂ, ಅಂಗರಕ್ಷಕರಾಗಿಯೂ, ಪಲ್ಲಕ್ಕಿಯನ್ನು ಹೊರುವವರಾಗಿಯೂ (ಬೋವಿ) ಇದ್ದರು. ಇವರಲ್ಲಿ ಪ್ರಧಾನ ಕುಟುಂಬಗಳು 'ಹತ್ತು'. ಕುಟುಂಬದ ಹಿರಿಯರನ್ನು 'ಕಾರ್ನವರು' ಎಂದು ಕರೆಯುತ್ತಾರೆ. ಶಾಲಿಯಾರ 'ನಗರಂ' ಗಳಂತೇ ಇವರಿಗೆ 'ನಗರಸಭಾ'ಗಳು ಇವೆ. ಇವರ ದೈವಸ್ಥಾನಗಳಲ್ಲಿ 'ಶಾಲಿಯಾ' ಸಮುದಾಯದವರಿಂದ 'ಪೂರಕ್ಕಳಿ' ನಡೆಯುತ್ತದೆ. ಶಾಲಿಯಾರಂತೇ ಬಾಲಕಿಯರಿಗೆ 'ತಾಳಿಕೆಟ್ಟುಕಲ್ಯಾಣಂ' ಎಂಬ 'ಅಣಕುಮದುವೆ ' ವಿಧಿಯಿತ್ತು ಎನ್ನಲಾಗಿದೆ.

ಶಾಲಿಯಾ, ಮೋಯಾ, ವಾಣಿಯಾ ಮತ್ತು ತೀಯಾ ಎನ್ನುವ 'ಯ' ಕಾರಾಂತವಾದ ಹೆಸರುಗಳಲ್ಲೂ ಒಂದು ರೀತಿಯ ಸಾಮ್ಯತೆಯನ್ನು ಗುರುತಿಸಬಹುದು. ತೀಯಾ ಮತ್ತು ಮೋಯಾ ಸಮುದಾಯಕ್ಕೆ ಇರುವ ನಿಕಟ ಸಂಬಂಧವನ್ನು 'ಕಡಲೇರ್ ಮಡಲೇರ್' ಎಂಬ ತುಳು ನುಡಿಗಟ್ಟು ಹೇಳುತ್ತದೆ. (ಕಡಲಾಯ, ಮಡಲಾಯ ಎಂದೂ ಏಕವಚನದಲ್ಲಿ ಹೇಳುತ್ತಾರೆ.) ಇಲ್ಲಿನ ಬಂಟ ಸಮುದಾಯಕ್ಕೂ ತೀಯಾ ಮತ್ತು ಮೋಯ ಸಮುದಾಯಕ್ಕೂ ಇರುವ ಸಂಬಂಧವನ್ನು ತುಳು ಪಾಡ್ದನವೊಂದು ಹೀಗೆ ಹೇಳುತ್ತದೆ.

"ಮಲ್ಲ ಮಲ್ಲ ಒಕ್ಕೆಲಾಕುಲು

ಆಜಿ ಮೊಲ ಕಾಂಗ್ ತುತ್ತೈರ್ ಮೂಜಿ ಮೊಲ ಮುನ್ನಿ ಬುಡಿಯರ್,

ಕಾಟು ಕಟ್ಯೆರ್, ಕರ್ಬಾಸು ದೆತ್ತೆರ್, ಆಜಿ ಜೋಡು

ಉರುಕಟ್ಯೆರ್, ಮೂಜಿ ಜೋಡು ಬೋರಿದೆತ್ತೆರ್

ಮೂಜಿ ಬಳ್ಳ ಬಿತ್ತ್ಯೆರ್ ಮುಪ್ಪ ಕೊಯಿಲು ಕೊಯ್ಯೆರ್

ಕಡಲೇರ್ ಮಡಲೇರ್ ಪಾಲ್ ಪಾಲು ಕೇಂಡರ್

ಪಾಲು ಮಲ್ತೊಂಡೆರ್, ಲೇ..ಲೇ..."

ಬಂಟರು ಕೃಷಿ ಮಾಡಿದುದನ್ನೂ ಕಡಲೇರ್ (ಸಮುದ್ರದಲ್ಲಿ ದುಡಿಯುವವರು ಮೋಯರು) ಹಾಗೂ ಮಡಲೇರ್ (ಮಡಲು (ತೆಂಗಿನಗರಿ) ಗಳಲ್ಲಿ ಕುಳಿತು ದುಡಿಯುವವರು ಅಂದರೆ ಹೆಂಡ ತಯಾರಿಸುವವರು) ಅದರಲ್ಲಿ ಪಾಲು ಕೇಳಿದುದನ್ನೂ ಇದು ಹೇಳುತ್ತದೆ. ಇವರ ಮಧ್ಯೆ ಯಾವುದೋ ಸಂಬಂಧವಿದ್ದೇ ಪಾಲು ಕೇಳಿರುವ ಸಾಧ್ಯತೆ ಇದೆ.

ಶಾಲಿಯ ಮತ್ತು ವಾಣಿಯಾ ಸಮುದಾಯದ ಮಧ್ಯೆಯೂ ಇಂತಹದೇ ಯಾವುದೋ ಸಂಬಂಧವಿರಬೇಕು. ಆಚಾರ, ವಿಚಾರ, ಸಂಪ್ರದಾಯಗಳಲ್ಲಿ ಉಳಿದೆರಡು ಸಮುದಾಯಗಳಿಗಿಂತಲೂ (ತೀಯ ಮೋಯಾ) ಈ ಎರಡು ಸಮುದಾಯಗಳಿಗೆ ಹೆಚ್ಚಿನ ಸಾಮ್ಯತೆಯಿದೆ. "ಚೆಟ್ಟಿಯಾರ್" ಎನ್ನುವ ಉಪನಾಮದ ಬಳಕೆಯಲ್ಲೂ, 'ಚಾಲಿಯನ್‌ರಲ್ಲಿಯೂ ಕೆಲವರು ಎಣ್ಣೆ ಮಾರುವ ವೃತ್ತಿಯನ್ನೂ ಕೈಗೊಳ್ಳುತ್ತಾರೆ ' ಎನ್ನುವ ಎಡ್ಗರ್ ಥರ್ಸ್ಟನ್ ' ನ ಹೇಳಿಕೆಯಲ್ಲೂ (Edger Thurstan: The castes and tribes of southern India Vol II P.14) ಶಾಲಿಯ ಮತ್ತು ವಾಣಿಯಾರು ಸೋದರಿಯರ ಮಕ್ಕಳು ಎನ್ನುವ ಜಾನಪದ ಹೇಳಿಕೆಯಲ್ಲೂ ನಾವಿದನ್ನು ಕಾಣಬಹುದು.

ವೃತ್ತಿಯಾಧಾರಿತವಾದ ಸಮಾಜ ವಿಂಗಡಣೆಯು ಸ್ಪಷ್ಟವಾಗುವುದಕ್ಕಿಂತಲೂ ಮುನ್ನ ಇವೆಲ್ಲವೂ ಒಂದೇ ಸಮುದಾಯವಾಗಿದ್ದು, ಕ್ರಮೇಣ ಒಂದೊಂದೇ ಒಡೆದು ಪ್ರತ್ಯೇಕಗೊಂಡು ಜಾತಿಯು ನಿಖರಗೊಂಡಿರುವ ಸಾಧ್ಯತೆಗಳು ಇವೆ. ಜನಪದರ ಬಾಯಿಯಲ್ಲಿ ಅದಿನ್ನೂ ಉಳಿದಿರುವುದರಿಂದ ವೃತ್ತಿ ಹಾಗೂ ಜಾತಿಯು ನಿರ್ದಿಷ್ಟಗೊಂಡು ಹೆಚ್ಚು ಕಾಲವಾಗಿರುವ ಸಾಧ್ಯತೆಗಳು ಇಲ್ಲ. ಉತ್ತರದ ಆರ್ಯನರ ಸಂಪರ್ಕ ದಕ್ಷಿಣದ ದ್ರಾವಿಡರಿಗೆ ಉಂಟಾದ ಹಲವು ಶತಮಾನಗಳ ನಂತರವೇ ಇದು ಸೃಷ್ಟಿಯಾಗಿರಬಹುದು. (ಸುಮಾರು ಕ್ರಿಸ್ತ ಶಕ ೪-೫ನೇ ಶತಮಾನ) ಅದಕ್ಕಿಂತ ಮುನ್ನ ದಕ್ಷಿಣದಲ್ಲಿ 'ಜಾತಿ ವ್ಯವಸ್ಥೆ' ಯು

ನಿರ್ದಿಷ್ಟವಾಗಿರಲಿಲ್ಲ ಎನ್ನುವುದನ್ನು ಇದರಿಂದ ತಿಳಿದುಕೊಳ್ಳಬಹುದು. ಯಾವುದೇ ಭಿನ್ನತೆಯಿಲ್ಲದೆ ಸೌಹಾರ್ದತೆಯಿಂದ ಬದುಕುತ್ತಿದ್ದ ದಕ್ಷಿಣದ ಜನಾಂಗದ ಮೇಲೆ ವೃತ್ತಿಯಾಧಾರಿತವಾದ 'ಜಾತಿ' ಯ ಹೇರಿಕೆಯು ಕ್ರಮೇಣ ಘರ್ಷಣೆಗೆ ಕಾರಣವಾಗಿ ಅವರಲ್ಲಿಯೇ ಮೇಲು-ಕೀಳು ಎನ್ನುವುದನ್ನು ಹುಟ್ಟು ಹಾಕಿತು. ಇದುವೇ ದಕ್ಷಿಣದಲ್ಲಿ ೧೧ನೇ ಶತಮಾನದ 'ಎಡಂಗೈ-ಬಲಂಗೈ' ಎನ್ನುವ ವಿವಾದಕ್ಕೆ ಕಾರಣವಾಯಿತು ಎನ್ನಬಹುದು.

**ಶಾಲಿಯರ ಕೆಲವು ಜಾನಪದ ಹಾಡುಗಳು:-**

ಅ) **ಹಾಸ್ಯ ಪ್ರಧಾನವಾದ ಹಾಡುಗಳು:-**

೧ ಬೊಡ್ಡೂಸ್ ಚಂದು ಬಂಡಿಯಿಲ್ ಪೋಂಬೊ

ಬಂಡಿಯಿಲೆಲ್ಲಂ ಚೇರ...

ಚೇರೆನ್ ಕೊಲ್ಲಾನ್ ಬಡಿಕ್ಕ್ ಪೋಂಬೊ

ಬಡಿಯಿಲೆಲ್ಲಂ ಚೋರಾ..

ಚೋರೆನ ಕವ್ವಾನ್ ಪೊಯಕ್ಕ್ ಪೋಂಬೊ

ಪೊಯೆಯಿಲೆಲ್ಲಾಂ ಮೀನ್..

ಮೀನ್‌ನೆ ಪಿಡಿಕ್ಕಾನ್ ಬಲಕ್ಕ್ ಪೋಂಬೊ

ಬಲಯೆಲ್ಲಂ ಒಟ್ಟು..

ಒಟ್ಟೆನ ತುನ್ನಾನ್ ತೂಯಿಕ್ ಪೋಂಬೊ

ತೊಯಿ ರಂಡ್ ಕಂಡೊ..

ತೊಯಿನೆ ಕೊಂಡ್ ಕೊಲ್ಲಂದಡ್ಕ ಪೋಂಬೊ

ಕೊಲ್ಲಂದೆ ಓಳ್ ಪೆಟ್ಟು...

(ಬೊಡ್ಡನಾದ ಚಂದು ಗಾಡಿಯಲ್ಲಿ ಹೋಗಲು ಹೊರಟರೆ..

ಗಾಡಿಯಲ್ಲೆಲ್ಲ ಕೇರೆ...(ಕೇರೆ ಹಾವು...)

ಕೇರೆಯನ್ನು ಕೊಲ್ಲಲು ಬೆತ್ತಕ್ಕೆ ಹೋಗಲು..

ಬೆತ್ತದಲ್ಲೆಲ್ಲ ರಕ್ತ....

ರಕ್ತವ ತೊಳೆಯಲು ಹೊಳೆಗೆ ಹೋದರೆ..

ಹೊಳೆಯಲ್ಲೆಲ್ಲಾ ಮೀನು..

ಮೀನನ್ನು ಹಿಡಿಯಲು ಬಲೆಗೆ ಹೋದರೆ

ಬಲೆ ಎಲ್ಲ ತೂತು...

ತೂತನ್ನು ಹೊಲಿಯಲು ಸೂಜಿಗೆ ಹೋದರೆ

ಸೂಜಿ ಎರಡು ತುಂಡು...

ಸೂಜಿಯನ್ನು ತಗೊಂಡು ಕಮ್ಮಾರನ ಬಳಿ ಹೋದರೆ..

ಕಮ್ಮಾರನ ಹೆಂಡತಿ ಹೆತ್ತಳು..)

ಕೊನೆಗೂ ಚಂದುವಿಗೆ ಗಾಡಿಯಲ್ಲಿ ಹೋಗಲಾಗಲಿಲ್ಲ.

೨. ನಂಡ್ ಪಿಡಿಚ್ಚು ಮುಂಡಿಲಿಟ್ಟು

ಮುಂಡ್ ಕೀರಿ ನಂಡ್ ಪಾಞು...

(ಏಡಿಯನ್ನು ಹಿಡಿದು ಮುಂಡಿನಲ್ಲಿ ಹಾಕಿದ

ಮುಂಡು ಹರಿಯಿತು ಏಡಿ ಓಡಿತು)

೩. ಮುಕ್ಕಂಡ ಚಾಲ್ಯ... ಮೂಳಂಡ ಚಾಲ್ಯ

ಮೂರೊಂಬೊ ವನ್ನಾಲ್ ಇನಿಯೊರಿ ಪೊದಿತೆರ...

(ಮುಕ್ಕಬೇಡ ಚಾಲ್ಯ.... ಹೂಂಗುಡ ಬೇಡ ಚಾಲ್ಯ...

ಕೊಯ್ಯುವಾಗ ಬಂದರೆ ಇನ್ನೊಂದು ಮುಡಿ ಕೊಡುವ.)

ಬಹುಶಃ ದುಡಿತಕ್ಕೆ ತಕ್ಕ ಪ್ರತಿಫಲವನ್ನು ದುಡಿಸಿಕೊಂಡವರು ನೀಡದೇ ಇದ್ದಾಗ ತನ್ನ ಅತೃಪ್ತಿಯನ್ನು ಆತ ಔದಾಸೀನ್ಯದಿಂದ ಹೂಂಗುಟ್ಟಿ ತೋರಿಸಿರಬಹುದು. ದುಡಿತದ ಫಲವನ್ನು ಇನ್ನಾವಾಗಲೊ ಕೊಡುವ ಜಮೀನ್ದಾರರನ್ನೂ, ದುಡಿದವರನ್ನೂ ಜತೆಗೆ ಇದು ವಿಡಂಬಿಸುತ್ತದೆ.

೪ ಅ) **ಮಕ್ಕಳನ್ನು ಆಡಿಸುವ ಹಾಡುಗಳು:-**

೧. ಇದನ್ನು ತಾಯಿ ಮಗುವನ್ನು ಮಡಿಲಲ್ಲಿ ಇಟ್ಟು ಆಡಿಸುತ್ತಾ ಹಾಡುತ್ತಾಳೆ.

ಆನೆ....... ಆನೆ..... ಆನೆ.....

ಆನೆ ಆಡಿತ್ ಕುಂಞನೆ ಉರಕ್ಕೊಂಬೊಳ್

ಗುಮ್ಮನ್ ಬನ್ನ್‌ತ್ ಮೂಳ್ಕೊಲು...

ಆಣಾನೊ ಪೆಣ್ಣಾನೋ,..

ಇಜಕ್ ಆಣಾವು... (ಮಗು ಗಂಡಾಗಿದ್ದರೆ)

ಇಜಕ್ ಪೆಣ್ಣಾವು (ಮಗು ಹೆಣ್ಣಾಗಿದ್ದರೆ)

(ಆನೆ.. ಆನೆ... ಆನೆ..

ಆನೆ ಆಡಿಸುತ್ತಾ ಮಗುವನ್ನು ನಿದ್ರೆ ಮಾಡಿಸಲು

ಗೂಬೆಯೊಂದು ಬಂದು ಕೂಗಿತು.

ಮಗು ಗಂಡೋ ಹೆಣ್ಣೋ?

ನಮಗೆ ಗಂಡಾದೀತು...

(ತೊಡೆಯಲ್ಲಿರುವ ಮಗು ಗಂಡಾದರೆ ಹೀಗನ್ನುತ್ತಾರೆ ಮಗು ನಮಗೆ ಹೆಣ್ಣಾದೀತು....

೨ ಬಡತನದಲ್ಲಿದ್ದರೂ ತನ್ನ ಮಗುವಿಗೆ ಶ್ರೀಮಂತವಾದ ಆಹಾರ ನೀಡಬೇಕು ಎಂಬ ತಾಯಿಯ ಮನಸ್ಸು ಈ ಪದ್ಯದಲ್ಲಿದೆ. ಮಗುವಿಗೆ ಗಗನದಲ್ಲಿರುವ ಚಂದ್ರನನ್ನು ತೋರಿಸುತ್ತಾ ತಾಯಿ ಹೀಗೆ ಹಾಡುತ್ತಾಳೆ....

ಚಂದಮಾಮಾ ಬಾ... ಬಾ...

ಇಜಕ್ ಉಪ್ಪುಂ ಚೋರುಂ....

ಇಜಳೆ ಕುಂಞಿಕ್ ಪಾಲುಂ ಚೋರುಂ

ತನ್ನಿತ್ ಕಾತೋಳೊಣೆ

(ಚಂದಮಾಮಾ ಬಾ... ಬಾ...

ನಮಗೆ ಉಪ್ಪು ಅನ್ನವನ್ನೂ...

ನಮ್ಮ ಮಗುವಿಗೆ ಹಾಲನ್ನವನ್ನೂ

ನೀಡಿ ರಕ್ಷಿಸುತ್ತಾ ಇರಬೇಕು..)

೩ ತಾಯಿ ತನ್ನ ಮಗುವಿನ ತಲೆಯಿಂದ ಹೇನನ್ನು ಹುಡುಕುತ್ತಾ ಹೀಗೆ ಹಾಡುತ್ತಾಳೆ.

ಚೆಟ್ಟಪ್ಪೇನೆ ಚೋರಪ್ಪೇನೆ..

ವಾಯ ವಳಪ್ಪಿಲ್

ಚೋರ ಕುಡಿಕ್ಕಾನ್

ವಾ ಪೇನೆ ವಾ...

ಅಕ್ಕರ ಕುನ್ನಿಲ್ ಚಕ್ಕರಕಂಞಿ

ವೆಚ್ಚಿ ವೆಳಂಬಣಂ

ವಾ... ಪೇನೆ... ವಾ...

(ರಕ್ತಹೀರದ ಹೇನೆ... ರಕ್ತ ಹೀರಿದ ಹೇನೆ...

ಬಾಳೆಯ ತೋಟದಲ್ಲಿ

ರಕ್ತವನ್ನು ಕುಡಿಯಲು

ಬಾ ಹೇನೆ ಬಾ...

ಆಚೆ ಗುಡ್ಡದಲ್ಲಿ ಓಲೆ ಬೆಲ್ಲ ಗಂಜಿ
ಮಾಡಿ ಉಣ್ಣಬೇಕು
ಬಾ ಹೇನೆ... ಬಾ...

೪ ಮಗುವಿಗೆ ಹೇಳುವ ಬುದ್ಧಿ ಮಾತುಗಳನ್ನೊಳಗೊಂಡ ಹಾಡು. ದೇವರನ್ನು ಮರೆಯಬಾರದು ಆತ ನಮ್ಮನ್ನು ರಕ್ಷಿಸುತ್ತಾನೆ ಎಂದು ತಾಯಿ ಮಗುವಿಗೆ ಹೀಗೆ ಹಾಡಿ ತಿಳಿಸುತ್ತಾಳೆ.

ಬ್ರಹ್ಮಮೇ ಸತ್ಯಂ ಬ್ರಹ್ಮಮೆ ಸತ್ಯಂಞ್ಞೊ

ಕುಟ್ಟಿ ನಮ್ಮಳ್‌ಕ್ ಅವನೆ ಪಿತಾವ್...

ನಮ್ಮಳವನೆ ನಿತ್ಯಂ ನಿರಿಕ್ಕುಂ

ನಲ್ಕುಂ ಆ ಸ್ವಾಮಿ ನಮಕ್ಕ್ ತನ್ನಯುಂ..

ನಮ್ಮಳೆ ನಿರ್ಮಿಚ್ಚ ತಂಬುರಾನವನಲ್ಲೊ..

ನಮ್ಮಳ್‌ಕ್ ಅವನ್ ತನ್ನೆ ರಕ್ಷ...

ಅವನ್ ತನ್ನೆ ತಂಬುರಾನಲ್ಲೊ...

ನಮಕ್ಕೆಲ್ಲಾಂ ತೆರುನ್ನೋನಲ್ಲೊ...

ಅವನ್ ತನ್ನೆ ತಂಬುರಾನಲ್ಲೊ..

ಮುಟ್ಟ್‌ಕುತ್ತುನ್ನ ಪ್ರಾಯಂ ಕಯಿಞೂಲ್

ಅವನ್ ನಮ್ಮಳೆ ವಿಟ್ಟ್ ಪೋವಲ್ಲೊ....

ಕಷ್ಟ ಪ್ರವೃತ್ತಿ ಚೆಯ್ದಾಲ್

ಅವನ್ ದುಷ್ಟನಾಯ್ ತೀರು ಮಲ್ಲೊ...

(ಬ್ರಹ್ಮಮೇ ಸತ್ಯ ಬ್ರಹ್ಮವೆ ಸತ್ಯ ಇದ ನೀನು ತಿಳದುಕೊ..

ಮಗುವೆ ನಮಗವನೇ ತಂದೆ

ನಾವು ದಿನಾ ಅವನನ್ನ ನೆನೆಯಬೇಕು..

ಆಗ ಅವನು ತನ್ನನ್ನೇ ನಮಗೆ ಕೊಡುತ್ತಾನೆ.

ಅವನು ನಮ್ಮನ್ನು ನಿರ್ಮಿಸಿದ ದೇವನಲ್ಲವೇ?

ನಮಗೆಲ್ಲವನ್ನು ಕೊಡುವವನಲ್ಲವೇ?

ಅವನು ನಮ್ಮ ದೇವರಲ್ಲವೇ?

ನಮಗವನೇ ರಕ್ಷಕನಲ್ಲವೇ?

ಅಂಬೆಗಾಲಿಡುವ ಪ್ರಾಯ ಕಳೆದಾಗ

ಅವನು ನಮ್ಮನ್ನು ಬಿಟ್ಟು ಹೋಗುತ್ತಾನೆ..

ಕೆಟ್ಟ ಕೆಲಸ ಮಾಡಿದಾಗ

ಅವನು ದುಷ್ಟನಾಗಿ ಮಾರ್ಪಡುತ್ತಾನೆ...)

೫ ಕರೆಯುವ ದನವೊಂದು ಕಾಣದೇ ಇರುವಾಗ ಕಂಡವರಲ್ಲಿ ಕೇಳುವ ತಾಯಿಯೊಬ್ಬಳ ಆತಂಕ. ಆ ದನಕ್ಕೂ ತನ್ನನ್ನು ಸಾಕಿದ ಅವಳ ದನಿ ಕೇಳಿದಾಗ ಉಂಟಾಗುವ ಹರ್ಷ ಈ ಹಾಡಿನಲ್ಲಿದೆ..

ಇಜಳೆ ಒಂಬೆನ ಕಂಡಿನ್ನ ಕಂಡಿನ್ನ....

ನಿಜಳೆ ಒಂಬೆನ ಇಜಳ್ ಕಂಡಿಲ್ಲ....

ನಿಜಳೆ ಒಂಬಕ್ಕ್ ಎಂದಾಣ್ ಅಡಯಾಳಂ

ಇಜಳೆ ಒಂಬಕ್ಕ್ ನೆಟ್ಟಿಲ್ ಚೊಟ್ಟ್...

ಇಜಳೆ ಒಂಬಕ್ ವಾಲಾ ಪೂಂಬಾಲ್..

ಇಜಳೆ ಒಂಬಕ್ ತವುಡ್ ನಿರಂ

ಕಂಡಿನಿ ಕಂಡಿನಿ ಇಜಳುಂ ಕಂಡಿನಿ...

ಮಿಂಗಾಚಿ ತೋಟಿಲ್ ವೆಳ್ಳಂ ಕುಡಿಕ್ಕ್‌ನ್ನೆ

ಕಂಡಿನಿ ಕಂಡಿನಿ ಇಜಳುಂ ಕಂಡಿನಿ...

ವೆಳ್ಳಮಾಂ ಕಲ್ಲಿಲ್ ಉರಸ್‌ನೆ ಕಂಡಿನಿ....

ತಣಲ್ ಕೊಂಡ ಪುಲ್ಲರಿ ಮೇಯಿನ್ನೆ ಕಂಡಿನಿ...

ಕಂಡಿನಿ ಕಂಡಿನಿ ಇಜಳ್ ಕಂಡಿನಿ...

ಅಪ್ಪೊ ವಿಳಿಕ್ಕುನ್ನು ಪೆಟ್ಟಮ್ಮ ತಾನೊರು..

ಒನ್ನ್ ವಿಳಿಕ್ಕವಳ್ ಚೆವುಡೋರ್ತು ನಿನ್ನು...

ರಂಡಾಂ ವಿಳಿಕ್ಕವಳ್ ತಿರಿಚ್ಚಿ ವನ್ನು..

ಮೂನ್ನಾ ವಿಳಿಕ್ಕವಳ್ ಆಲಕ್ಕಯಂ...

ಒನ್ನಾಂ ಕಿಂಡಿ ಪಾಲ್ ಶ್ರೀ ಕೃಷ್ಣನಿ ಕೊಡುತ್ತು..

ರಂಡಾಂ ಕಿಂಡಿ ಪಾಲ್ ಕುಞ್ಞಿನಿ ಕೊಡುತ್ತು...

ಮೂನ್ನಾಂಕಿಂಡಿ ಪೆಟ್ಟಮ್ಮ ಎಡುತ್ತು.

(ನಮ್ಮ ದನವನ್ನು ಕಂಡಿರಾ ಕಂಡಿರಾ?

ನಿಮ್ಮ ದನಕ್ಕೆ ಏನಿದೆ ಗುರುತು ?

ನಮ್ಮ ದನಕ್ಕೆ ಹಣೆಯಲ್ಲಿ ಬೊಟ್ಟು..

ನಮ್ಮ ದನಕ್ಕೆ ಬಾಲ ಹೂ ಬಾಲ..

ನಮ್ಮ ದನಕ್ಕೆ ತವುಡಿನ ಬಣ್ಣ...

ಕಂಡಿದ್ದೇವೆ ಕಂಡಿದ್ದೇವೆ ನಾವೂ ಕಂಡಿದ್ದೇವೆ..

'ಮಿಂಗಾಚಿ' ತೋಟದಲ್ಲಿ ನೀರು ಕುಡಿಯುತ್ತಿತ್ತು..

ಕಂಡಿದ್ದೇವೆ ಕಂಡಿದ್ದೇವೆ ನಾವೂ ಕಂಡಿದ್ದೇವೆ

ವೆಳ್ಳಮಾನ್ ಕಲ್ಲಿಗೆ ಮೈಯೊರಸುತ್ತಿತ್ತು...

ಕಂಡಿದ್ದೇವೆ ಕಂಡಿದ್ದೇವೆ ನಾವೂ ಕಂಡಿದ್ದೇವೆ.

ಆಗ ಕರೆದಳು ಹೆತ್ತಮ್ಮ ತಾನಾಗಿ ...

ಒಂದು ಬಾರಿ ಕರೆದಾಗ ಕಿವಿಗೊಟ್ಟು ನಿಂತಳು..

ಎರಡನೆಯ ಬಾರಿ ಕರೆದಾಗ ತಿರುಗಿ ಬಂದಳು...

ಒಂದು ಗಿಂಡಿ ಹಾಲನ್ನು ಶ್ರೀ ಕೃಷ್ಣನಿಗಿತ್ತಳು...

ಎರಡನೆಯ ಗಿಂಡಿ ಹಾಲನ್ನು ಮಗುವಿಗೆ ಇತ್ತಳು

ಮೂರನೆಯ ಗಿಂಡಿ ಹಾಲನ್ನು ಹೆತ್ತ ತಾಯಿ ತೆಗೆದುಕೊಂಡಳು.)

೬ ಹಾಡು ಮತ್ತು ಆಟ ಎರಡೂ ಒಂದಾಗಿರವ ಶಾಲಿಯಾರ ಒಂದು ಜಾನಪದ :-

ಮಕ್ಕಳು ಆಡಲು ಸುತ್ತಲೂ ಕುಳಿತು ಈ ಹಾಡನ್ನು ಹಾಡುತ್ತಾ ಆಡುತ್ತಾರೆ. ಮೂರೋ ನಾಲ್ಕೋ ಮಕ್ಕಳು ಇದರಲ್ಲಿರಬಹುದು. ಪ್ರತಿಯೊಬ್ಬರ ಒಂದು ಕಾಲನ್ನೂ, ಒಂದು ಕೈಯನ್ನೂ ಒಂದರ ಮೇಲೆ ಒಂದರಂತೆ

ಪೇರಿಸಿಡುತ್ತಾರೆ. (ಮಕ್ಕಳ ಸಂಖ್ಯೆ ಜಾಸ್ತಿಯಿದ್ದರೆ ಕೈ ಮಾತ್ರ ಸಾಕಾಗುತ್ತದೆ.) ಇದು ಹಲಸಿನ ಮರಕ್ಕೆ ಸಂಕೇತ. ಅದನ್ನು ಎಲ್ಲರೂ ಸೇರಿ ಸುತ್ತಲೂ ತಿರುಗಿಸುತ್ತಾರೆ. ಇದು ಹಲಸಿನ ಕಾಯಿಯಿಂದ ಮರವು ಭಾರವಾಗಿ ತೂಗುತ್ತಿದೆ ಎನ್ನುವುದನ್ನು ಸಂಕೇತಿಸುತ್ತದೆ. ಗುಂಪಿನಲ್ಲಿಯೇ ಒಬ್ಬ ತನಗೆ ಹಲಸಿನ ಕಾಯಿ ಬೇಕೆಂದು ಹೀಗೆ ಕೇಳುತ್ತಾನೆ.

ಚಕ್ಕೇಂ ಬೇಕೆ ಚಾರೇಂ ಬೇರೆ

ಏ ಕೇಚು... ಒರಿ ಚಕ್ಕ ತೆರುವಾ?

(ಹಲಸಿನ ಕಾಯಿ ಬೇರೆಯಾಯಿತು...

ಸಿಪ್ಪೆ ಬೇರೆಯಾಯಿತು..

ಏ... ಕೇಚು (ಕೇಶವ)

ಒಂದು ಹಲಸಿನ ಕಾಯಿ ಕೊಡುವೆಯಾ?)

ಆಗ ಉಳಿದವರು ಕೇಳುತ್ತಾರೆ:-

ಇನ್ನಲೆ ತನ್ನದ್ ಏಡ ಪೋಯಿ?

(ನಿನ್ನೆ ಕೊಟ್ಟಿರುವುದು ಏನಾಯಿತು?)

ಆಗ ಅವನು:-

ಅದು ತೀಕ್ ವೀಣು

(ಅದು ಬೆಂಕಿಯಲ್ಲಿ ಬಿತ್ತು)

<u>ಆಗ ಉಳಿದವರು:-</u>

ಕಡೇನ್ ನೋಕಿತ್ ಕೊಡೀನ್ ಕೊತ್ತಿಕೊ...

(ಬುಡವನ್ನು ನೋಡಿ ತುದಿಯಿಂದ ಕಡಿದುಕೊ..)

ಆತ ಕಡಿದಂತೆ ಮಾಡುತ್ತಾನೆ. ಇದೇ ರೀತಿ ಪುನರಾವರ್ತನೆಯಾಗುತ್ತಲೇ ಹೋಗುತ್ತದೆ. ಪ್ರತಿಬಾರಿಯೂ ಆತನೂ ಇತರರೂ ಒಂದೊಂದೇ ಕಾರಣಗಳನ್ನು ಕೊಡುತ್ತಾ ಒಂದೊಂದೇ ಕಾಯಿಗಳನ್ನು ಕೊಯ್ಯುವಂತೆ ಮಾಡಿ ಕೈಗಳನ್ನೂ ಕಾಲುಗಳನ್ನೂ ಪ್ರತ್ಯೇಕೀಕರಿಸುತ್ತಾರೆ. ಕೊನೆಗೆ ಒಂದು ಮಾತ್ರ ಉಳಿದಾಗ ಎಲ್ಲರೂ ಸೇರಿ ಅದನ್ನು ಎಳೆಯತೊಡಗುತ್ತಾನೆ. ಮಕ್ಕಳೆಲ್ಲಾ ಜೋರಾಗಿ ಗಲಭೆಯೆಬ್ಬಿಸುತ್ತಾರೆ.

# ಗ್ರಂಥ ಸೂಚಿ

## ೧. ಕನ್ನಡ ಗ್ರಂಥಗಳು


೧. ಅಂಬಾತನಯ ಮುದ್ರಾಡಿ - ಶ್ರೀ ವೀರಭದ್ರ ಸ್ತುತಿ (೧೯೯೬) ವಿದ್ಯಾವಿಕಾಸ, ಕಳವಾ (ಪಶ್ಚಿಮ) ಮುಂಬಯಿ.

೨. ಅಮೃತ ಸೋಮೇಶ್ವರ - ಅವಿಲು (೧೯೭೮) ಕನ್ನಡ ಸಂಘ, ವಿವೇಕಾನಂದ ಕಾಲೇಜು, ಪುತ್ತೂರು.

೩. ಅಮೃತ ಸೋಮೇಶ್ವರ - ಭಗವತೀ ಆರಾಧನೆ (೧೯೮೮) ಪ್ರಕೃತಿ ಪ್ರಕಾಶನ, ಕೋಟೆಕಾರು.

೪. ಈರಣ್ಣ ಹಟ್ಟಿ - ಕುಂಟುತ್ತಿರುವ ಕೈಮಗ್ಗ ಉದ್ದಿಮೆ (೧೯೭೬)ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. ಈರಣ್ಣ ಹಟ್ಟಿ - ನೇಕಾರಿಕೆ ಮತ್ತು ಸರಕಾರ (೧೯೮೨) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಉಕ್ಕಡಗಾತ್ರಿ ಆರ್. ಎಸ್. - ಪದ್ಮಪುರಾಣ (೧೯೮೦) ಶಾಂತಿ ಕಾಲನಿ, ಹುಬ್ಬಳ್ಳಿ

೭. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, - ದಾಸ ಸಾಹಿತ್ಯ ದರ್ಶನ, (೧೯೮೫)

೮. ಕಲಬುರ್ಗಿ ಎಂ. ಎಂ. - ಹರಿಹರನ ರಗಳೆಗಳು (೧೯೯೯) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೯. ಕಲಬುರ್ಗಿ ಎಂ. ಎಂ. - ಜನಪದ ಸಾಹಿತ್ಯ ದರ್ಶನ ಭಾಗ - ೧೫ (೧೯೯೪), ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ,ಧಾರವಾಡ

೧೦. ಕೃಷ್ಣ ಶಾಸ್ತ್ರಿ ಎ. ಆರ್. - ಸರ್ವಜ್ಞ ಕವಿ (೧೯೪೮) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೧೧. ಗಣೇಶ ಮೊಗಳ್ಳಿ - ಸೊಲ್ಲು, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ಹಂಪಿ.

೧೨. ಗಂಗಾಧರ ದೈವಜ್ಞ - ಬುಡಕಟ್ಟು ಸಮಾಜ - ಹುಟ್ಟು ಸಾವಿನ ನಡವೆ (೨೦೦೦) ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ.

೧೩. ಗೋವಿಂದರಾಜು ಟಿ - ಕಣ (೨೦೦೦)ಶ್ರೀ ರಾಜೇಂದ್ರ ಪ್ರಿಂಟರ್ಸ್ ಎಂಡ್ ಪಬ್ಲಿಕೇಶನ್, ಬೆಂಗಳೂರು.

೧೪. ಚಂದ್ರಶೇಖರ ಕಂಬಾರ - ಕನ್ನಡ ಜಾನಪದ ವಿಶ್ವಕೋಶ, ಸಂಪುಟ I ([illegible])

೧೫. ಚನ್ನವೀರಪ್ಪ - ಗಾಣ-ಗಾಣಿಗರು (೧೯೯೮) ಹಸ್ತಪ್ರತಿ ವಿಭಾಗ, ಹಂಪಿ.

೧೬. ಚಿನ್ನಪ್ಪ ಗೌಡ - ಭೂತಾರಾಧನೆ (೧೯೯೦) ಮದಿಪು ಪ್ರಕಾಶನ, ಮಂಗಳಗಂಗೋತ್ರಿ, ಕೋಣಾಜೆ.

೧೭. ಚಿನ್ನಪ್ಪ ಗೌಡ - ಭೂತಾರಾಧನೆ ಕೆಲವು ಅಧ್ಯಯನಗಳು (೧೯೮೩) ತುಳುವ ಪ್ರಕಾಶನ, ಮಂಗಳೂರು.

೧೮. ಜಿಂಕಾ ಜಿ. ವಿ. ತಿಮ್ಮಯ್ಯ - ಶ್ರೀ ಭಾವನಾಋಷಿ ಸ್ತುತಿ (೧೯೯೮) ಪ್ರಕಾಶಕರು : ಲೇಖಕರೇ.

೧೯. ನಾಗೇಶ್ ಎಚ್. ವಿ. - ಬದಲಾಗುತ್ತಿರುವ ಭಾರತೀಯ ಗ್ರಾಮ (೧೯೮೨) ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೦. ನಾರಾಯಣ ಪ್ರಸಾದ್ ಕೆ. ಜಿ. - ಕುಮಾರ ವಾಲ್ಮೀಕಿ (೧೯೭೨) ಕನ್ನಡ ಸಂಘ, ಮಂಗಳ ಗಂಗೋತ್ರಿ, ಕೋಣಾಜೆ.

೨೧. ನಾಯಕ್ ಎಸ್. ಆರ್. - ಉತ್ತರ ಕನ್ನಡ ಜಿಲ್ಲೆಯ ನಾಡವರ ಸಂಸ್ಕೃತಿ (೨೦೦೧) ಜಾನಪದ ಪ್ರಕಾಶನ, ಹೊನ್ನಾವರ.

೨೨. ಪರಮಶಿವಯ್ಯ ಜೀ. ಶಂ. - ದಕ್ಷಿಣ ಕರ್ನಾಟಕದ ಜಾನಪದ ಕಾವ್ಯ ಪ್ರಕಾರಗಳು (೧೯೭೯) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೨೩. ಪಾಂಡುರಂಗ ಡಿ. ಆರ್. - ದಕ್ಷಿಣ ಕನ್ನಡ ಜಿಲ್ಲೆಯ ಭೈರರು (೧೯೯೦) ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೨೪. ಪಾಪಣ್ಣ ಹುಂಡಿ ಈಶ್ವರ - ಶ್ರೀ ದೇವಲ ಮಹರ್ಷಿ (೧೯೯೯) ಶ್ರೀ ದೇವಲ ಪ್ರಕಾಶನ, ಬೆಂಗಳೂರು.

೨೫. ಪುರುಷೋತ್ತಮ ಬಿಳಿಮಲೆ, ಚೆಲುವರಾಜು - ಹಂಪಿ ಜಾನಪದ (೧೯೯೬) ಪ್ರಸಾರಾಂಗ ಕನ್ನಡ ವಿ. ವಿ., ಹಂಪಿ.

೨೬. ಪುರುಷೋತ್ತಮ ಸಿ. ಜಿ. - ಅಥರ್ವವೇದ (೧೯೫೮)ನಿರ್ದೇಶಕರು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ

೨೭. ಪುಟ್ಟಪ್ಪ ಕೆ. ವಿ. (ಸಂ.) ಕರ್ನಾಟಕ ಭಾರತ ಕಥಾಮಂಜರಿ (೧೯೫೮) ಪ್ರಸಾರಾಂಗ, ಬೆಂಗಳೂರು, ಮೈಸೂರು ವಿಶ್ವವಿದ್ಯಾಲಯ

೨೮. ಪುಟ್ಟಪ್ಪ ಕೆ. ವಿ. (ಸಂ.)[illegible] ಭಾರತ (೧೯೭೬) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೨೯. ಫಕೀರ್ ಮಹಮ್ಮದ್ ಕಟ್ಪಾಡಿ - ಕೇರಳದಲ್ಲಿ ಹದಿನೈದು ದಿನಗಳು (೧೯೮೯) ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೦. ಬಸವರಾಜು ಎಲ್. - ದೇವರ ದಾಸಿಮಯ್ಯನ ವಚನಗಳು (೧೯೭೮)ಗೀತಾ ಬುಕ್ ಹೌಸ್, ಮೈಸೂರು.

೩೧. ಭಾನುಮತಿ ವೈ. ಸಿ. - ಮಲೆನಾಡಿನ ಶೈವ ಒಕ್ಕಲಿಗರು ಜಾನಪದೀಯ ಅಧ್ಯಯನ (೧೯೯೪) ಕೇಶವ ಪ್ರಕಾಶನ, ಮೈಸೂರು.

೩೨. ಮರಿಯಪ್ಪ ಭಟ್ಟ - ಕನ್ನಡ ಸಂಸ್ಕೃತಿ ಪ್ರಬಂಧ ಸಂಕಲನ, (೧೯೬೭) ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ ನಿಯಮಿತ.

೩೩. ಮಹೇಶ ತಿಪ್ಪ ಶೆಟ್ಟಿ - ಪುಣ್ಯಕೋಟಿ ಒಂದು ಸಾಂಸ್ಕೃತಿಕ ಅಧ್ಯಯನ (೧೯೮೯) ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೪. ಮೋಹನ್ ಕೃಷ್ಣ ರೈ - "ತುಳು ಸಂಸ್ಕೃತಿ" ಚತುರ್ಮುಖೀ ಅಧ್ಯಯನ (೧೯೯೯) ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಹಂಪಿ.

೩೫. ಯಜ್ಞನಾರಾಯಣ ಉಡುಪ - ಪುರಾಣ ಭಾರತ ಕೋಶ (೧೯೭೪) ಕನ್ನಡ ಪುಸ್ತಕ ಪ್ರಾಧಿಕಾರ.

೩೬. ರಮೇಶ್ ಕೆ. ವಿ. - ತುಳುನಾಡಿನ ಇತಿಹಾಸ (೧೯೮೯) ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೩೭. ರಾಮ ಎಂ. (ಅನು) - ಕೇರಳ ಕಲಾಮಾಲ - ಕರ್ನಾಟಕ ಸಂಘ, ತಿರುವನಂತಪುರ

೩೮. ರಾಮಚಂದ್ರ ಎಸ್. ಜಿ. - ದೇವಾಂಗರು ಒಂದು ಕಿರು ಅಧ್ಯಯನ (೨೦೦೨) ದೇವಾಂಗ ಪ್ರಕಾಶನ, ಬೆಂಗಳೂರು.

೩೯. ರುದ್ರಮೂರ್ತಿ ಶಾಸ್ತ್ರಿ - ಸರ್ವಜ್ಞ ವಚನ ಸಂಗ್ರಹ (೧೯೯೦) ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು.

೪೦. ರೂಪ್ಲಾ ನಾಯಕ್ - ರಂಗು ರಂಗಿನ ಬಂಜಾರ / ಲಂಬಾಣಿ ಜನಾಂಗ (೧೯೯೯) ಎಸ್. ಬಿ. ಸಿ. ಪಬ್ಲಿಕೇಶನ್ಸ್.

೪೧. ವಸಂತ ಕುಮಾರ್ ತಾಳ್ತಜೆ - ಸಾಂಸ್ಕೃತಿಕ ಸಂಶೋಧನೆ ಒಂದು ಮುನ್ನೋಟ (೧೯೯೮) ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ವೆಂಕಟಕೃಷ್ಣಯ್ಯ ಕೆ. (ಸಂ.) ಮಧುಪುರ (೧೯೬೩) ಗೀತಾ ಪ್ರಕಾಶನ, ಕಾಸರಗೋಡು.

೪೩. [illegible] - [illegible] (೧೯[illegible]) [illegible] ಸಮಿತಿ, ಕಾಸರಗೋಡು.

೪೪. [illegible] ರೈ - [illegible] (೧೯[illegible]) [illegible], ಬೆಂಗಳೂರು

೪೫. ಶಿವರಾಮಯ್ಯ - ಗ್ರಾಮೀಣ ಸಂಸ್ಕೃತಿ ಪ್ರಬಂಧಕೋಶ (೨೦೦೦) ಕಲಾ ಪ್ರಕಾಶನ, ಬೆಂಗಳೂರು.

೪೬. ಶೀನಪ್ಪ ಹೆಗ್ಡೆ - ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು, (೧೯೮೧) ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೪೭. ಶ್ರೀಕಂಠಯ್ಯ ಬಿ. ಎಂ. - ಭಾರತೀಯ ಕಾವ್ಯ ಮೀಮಾಂಸೆ (೧೯೫೨) ಮೈಸೂರು ವಿಶ್ವವಿದ್ಯಾಲಯದ ಕನ್ನಡ ಗ್ರಂಥ ಮಾಲೆ.

೪೮. ಶ್ರೀ ಗಾಯತ್ರೀ ಪೀಠ ಮಹಾ ಸಂಸ್ಥಾನ (೧೯೯೮) ಶ್ರೀ ದೇವಾಂಗ ಪುರಾಣವು.

೪೯. ಶೈಲಾ ಟಿ. ವರ್ಮ - ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ (೨೦೦೨) ಜ್ಞಾನೋದಯ ಪಬ್ಲಿಕೇಶನ್ಸ್, ಬೆಂಗಳೂರು.

೫೦. ಸಾಂಬ ಮೂರ್ತಿ - ನೇಕಾರ ವೃತ್ತಿ ಪದಕೋಶ (೨೦೦೦) ಪ್ರಸಾರಾಂಗ ಕನ್ನಡ ವಿ. ವಿ., ಹಂಪಿ.

೫೧. ಸುಬ್ಬಣ್ಣ ರೈ ಎ. - ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು (೧೯೯೪) ಮಾಣಿ ಜೂನಿಯರ್ ಚೇಂಬರ್, ಮಾಣಿ.

೫೨. ಸುಶೀಲ ಪಿ. ಉಪಾಧ್ಯಾಯ - ದಕ್ಷಿಣ ಭಾರತದ ಜಾನಪದ (೧೯೯೮) ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೫೩. ಹಂಜಿ ಎಸ್. ವಿ. (ಸಂ) ಸಂಸ್ಕೃತ ಕನ್ನಡ ಶಬ್ದಕೋಶ (೧೯೯೨) ಮೆ. ಬಿ. ಜಿ. ಸಂಕೇಶ್ವರ ಆಂಡ್ ಕಂಪೆನಿ, ಗದಗ.

೫೪. ಹರಿಲಾಲ್ ಪವಾರ - ಲಂಬಾಣಿಗರಲ್ಲಿ ಮದುವೆ ಸಂಪ್ರದಾಯಗಳು (೧೯೯೬) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೫. ಹೊಸಬೆಟ್ಟು ಸೀತಾರಾಮ ಆಚಾರ್ - ಕುಮಾರ ವಾಲ್ಮೀಕಿ ಒಂದು ಅಧ್ಯಯನ, (೧೯೭೬) ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ.

## ೨. ಸ್ಮರಣ ಸಂಚಿಕೆಗಳು

೧. [illegible] - ೧ - [illegible] (೧೯೯[illegible]) ಶ್ರೀ [illegible] ಭಗವತಿ ದೇವಾಂಗ ಸಮಾಜ (ರಿ) ಮಂಗಳೂರು.

೨. [illegible] (೧೯[illegible]) ಶ್ರೀ [illegible] ಭಗವತಿ ದೇವಾಂಗ ಸಮಾಜ(ರಿ) ಮಂಗಳೂರು.

೩. ಸಂಕ್ರಾಂತಿ - ೩ - ತೃತೀಯ ಪಂಚಮ ಮಹೋತ್ಸವ (೧೯೯೭) ದೇವಾಂಗ ಸಮಾಜ (ರಿ) ಮಂಗಳೂರು.

೪. ಸಂಕ್ರಾಂತಿ - ೪ - ದ್ವಿ ದಶಾವಧಿ ಉತ್ಸವ (೨೦೦೨) ದೇವಾಂಗ ಸಮಾಜ (ರಿ) ಮಂಗಳೂರು.

೫. ನಮನ - ಬಹ್ಮಕಲಶೋತ್ಸವ (೧೯೯೮) ಕುಕ್ಕಾಡಿ ಶ್ರೀ ಅರಸು ಮುಂಡತ್ತಾಯ ದೇವಸ್ಥಾನ ಸಮಿತಿ.

೬. ಹೊಂಬೆಳಕು (೧೯೯೭) ಕರಾವಳಿ ದೇವಾಂಗ ಸಮಾಜ, ಬೆಂಗಳೂರು.

೭. ಹೇಮತುಂಗ - ವಿಶೇಷ ಸಂಚಿಕೆ (೧೯೯೯) ಪ್ರಕಾಶಕರು, ಗಾಯತ್ರಿ ಪೀಠ ಮಹಾ ಸಂಸ್ಥಾನ

೮. ಹೇಮಕೂಟ - ಅಖಿಲ ಭಾರತ ದೇವಾಂಗ ಮಹಾ ಸಮ್ಮೇಳನ (೧೯೯೮) ಅಖಿಲ ಭಾರತ ದೇವಾಂಗ ಮಹಾ ಸಮ್ಮೇಳನ ವ್ಯವಸ್ಥಾಪಕ ಸಮಿತಿ, ಬೆಂಗಳೂರು.

೯. ಸ್ಮರಣ ಸಂಚಿಕೆ (೨೦೦೦) - ದಕ್ಷಿಣ ಕನ್ನಡ ಜಿಲ್ಲಾ ಪದ್ಮಶಾಲಿ ವಿದ್ಯಾವರ್ಧಕ ಸಂಘ (ರಿ)

೧೦. ಸ್ಮರಣ ಸಂಚಿಕೆ (೧೯೭೩) - ದಕ್ಷಿಣ ಕನ್ನಡ ಜಿಲ್ಲಾ ಪದ್ಮಶಾಲಿ ಸಮಾಜ ಸಂಘ (ರಿ)

೧೧. ಸುವರ್ಣ ಪದ್ಮ (೧೯೮೦) - ಸುವರ್ಣ ಮಹೋತ್ಸವ, , ಕರ್ನಾಟಕ ಪದ್ಮಶಾಲಿ ಸಂಘ, ಬೆಂಗಳೂರು

೧೨. ಪದ್ಮಶಾಲಿ ಸುವರ್ಣಧಾರೆ (೧೯೯೬) - ದಕ್ಷಿಣ ಕನ್ನಡ ಜಿಲ್ಲಾ ಪದ್ಮಶಾಲಿ ಮಹಾಸಭೆ

೧೩. ಪದ್ಮ ಸಂಸ್ಮರಣಿಕ (೨೦೦೧) ಶ್ರೀ ವೀರಭದ್ರ ಶಾಂತದುರ್ಗ ಮಹಾಗಣಪತಿ ದೇವಸ್ಥಾನ, ಕಿನ್ನಿಮೂಲ್ಕಿ - ಉಡುಪಿ.

೧೪. ಮಗ್ಗದ ಸೀರೆ (೧೯೯೪) ದಕ್ಷಿಣ ಕನ್ನಡ ಜಿಲ್ಲಾ ನೇಕಾರ ಸಮ್ಮೇಳನ, ಮಂಗಳೂರು.

೧೫. ಸಂಘಸ್ಮೃತಿ (ಮಲಯಾಳಂ - ೨೦೦೨) -ಚಂದನಡುಕ್ಕಂ ಶ್ರೀ ಚೀರುಂಬಾ ಭಗವತಿ ಕ್ಷೇತ್ರಂ, ಕಾಡಗಂ.

೧೬. ಊಡುಂ - ಪಾವುಂ (ಮಲಯಾಳಂ - ೨೦೦೨) ಶ್ರೀ ಅಞೂಟ್ಟಂಬಲಂ ವೀರರ್‌ಕಾವ್ ದೇವಸ್ಥಾನ, ತೆರು - ನಿಲೇಶ್ವರಂ

೧೭. ಪೊಲಿ - ಕೆನರಾ ೨೦೦ (೨೦೦೦) ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ೩. ಮಲಯಾಳಂ ಗ್ರಂಥಗಳು

೧. ಕೃಷ್ಣನ್ ಪಾರ್‍ಯಂ - ಕೇರಳ ಪದ್ಮಶಾಲಿಯಾ ಸಮುದಾಯಂ (೧೯೯೭)

೨. ಬಾಲನ್ ಸಿ. (ಪ್ರಧಾನ ಸಂಪಾದಕರು) - ಕಾಸರಗೋಡು ಚರಿತ್ರವುಂ ಸಮೂಹವುಂ

೩. ವಿಶ್ವನಾಥನ್ ನಾಯರ್ - ಕೇರಳ ಚರಿತ್ರಂ (೧೯೯೩) ನೇಷನಲ್ ಪಬ್ಲಿಷಿಂಗ್ ಹೌಸ್

೪. ವಿಷ್ಣು ನಂಬೂದಿರಿ ಎಂ. ವಿ.- ಉತ್ತರ ಕೇರಳತ್ತಿಲೆ ತೊಟ್ಟಂ ಪಾಟುಗಳ್ (೧೯೮೧) ಕೇರಳ ಸಾಹಿತ್ಯ ಅಕಾಡೆಮಿ

೫. ಶ್ರೀನಿ ಪಟ್ಟತ್ತಾನಂ - ಕೇರಳತ್ತಿಲೆ ಕೇತ್ರಂಗಳುಂ ದಿವ್ಯಾದ್ಭುತ ರಹಸ್ಯಂಗಳುಂ (೧೯೮೭) - ಮಾಸ್ ಪಬ್ಲಿಕೇಷನ್ಸ್, ಕ್ವಿಲೋನ್, ಕೇರಳ

೬. ತೆಯ್ಯಂ : ಕೇರಳ - ಸಂಗೀತ ನಾಟಕ ಅಕಾಡೆಮಿ (೧೯೭೮)

## ೪. ಆಂಗ್ಲ ಗ್ರಂಥಗಳು

1. Blunt - The Caste System of Northern India (1931), S. Chand & Company, Delhi.

2. Edger Thurston - Castes and Tribes of Southern India (1990), Vol II, III & IV

3. Edger Thurston – Ethnographic Note in Southern India (Part II), Cosmo Publications, India (1975)

4. Emile Senart - Caste in India (1988)

5. Ghurye G. S. - Caste and Race in India (1933), Popular Prakashan, Bombay.

6. Gribb. H.A.R. (Trans). Travels in Asia and Africa (Iban Bathootha, 1325-134), London (1929).

7. Gururaj Bhat P - The Studies of Tuluva History & Culture (1975)

8. Havanur L. G. - Karnataka Backward Class Commission Report, Bangalore (1977) Govt. of Karnataka.

9. Herskuvite Meville : Cultural Anthropology (1974) Oxford and I.B.H. Publications, New Delhi.

10. Hutton J. H. - Caste in India (1946)

11. Joseph Athickal - Maram Nagar, A Socio Cultural Study (1992), Mittal Publications, New Delhi.

12. Krishna Chaithanya - Kerala (1992) National Book Trust India

13. Peter J Clause - Thuluva Darshana (1987).

14. Miley - Canara Past and Present (1875).

15. Mobinuddeen Raz – The process of Socialization (1976) Chethan Publications, New Delhi.

16. Rajendra P. - The Pre History of Kerala (1978) Journal of Kerala Studies.

17. Saletore B. A. - Ancient Karnataka Tuluva History (1936) Oriental Book Agency, Poona.

18. Sharma L. P. - History of Ancient India (1981) Konark Publications.

19. Vaidyanathan K. R. - Temple and Legends of Kerala (1994), Bharatiya Vidya Bhavan, Bombay.

20. Vaman Shivarama Apte - Sanskrit English Dictionary (1965) Motilal Banarasidas, Delhi.

21. Wahab A. Doddamane : Muslims in Dakshina Kannada (1993), Greenwords Publications.

## ೪. ಇತರ ಸಂದರ್ಭ ಗ್ರಂಥಗಳು

1. Herald A Stuart - Madras District Manuals, South Kanara, Vol. II (1895).

2. Nanjundiah H. V. and Ananthkrishnaiah K. - The Mysore Tribes and Castes (IV Vol.) 1926.

3. J. Sturruck, Madras District Manuals, South Kanara Vol. I (1894)

4. Mansel Longworth Dames - The Book of Duarte Barbosa Vol.I (1918).

5. R. N. Saletore : Encyclopedia of Indian Culture (1965) Sterling Publications, New Dehli.
S.

6. Encyclopedia of World and its people, Vol. IV

7. Thurston Edger - Ethnographic Notes in Southern India (1906), Madras Govt. Press.

8. The Handloom Industry in Karnataka and Sholapur (1959) National Council of Applied Economic Research, New Delhi.

9. Karnataka State Gazette - South Canara District (1973)

10. Herman Gundart - Malayalam - English Dictionary (1872)

11. Herman Gundart - Keralapazhama (1868)

12. William Logan - Malabar Manual (1886)

13. ಕರ್ನಾಟಕದ ಪರಂಪರೆ - ಸಂಪುಟ ೧ ಮತ್ತು ೨ (1920), ಮೈಸೂರು ರಾಜ್ಯ ಸರಕಾರ

14. ಭಾರತದ ಗಜೆಟಿಯರ್ (೧೯೮೬)

15. ಹಾವನೂರು ವರದಿ ಸಮಗ್ರ ಅಧ್ಯಯನ : ದೇವೇಂದ್ರ ದೇಸಾಯಿ (ಸಂ.) (೧೯೨೯)

16. ದ್ರಾವಿಡ ಅಧ್ಯಯನ ಸಂಪುಟ ೨, ಸಂಚಿಕೆ ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

17. ಗಡಿನಾಡಿನ ಕಿಡಿ (೧೯೯೦) ಲಲಿತ ಕಲಾ ಸದನ, ಕಾಸರಗೋಡು.

18. ಪದ್ಮಶಾಲಿ ಪತ್ರಿಕೆ : ಮೇ ೨೦೦೧, ಜೂನ್ ೨೦೦೧, ಜುಲೈ ೨೦೦೧, ನವೆಂಬರ್ ೨೦೦೧.

19. ಪದ್ಮಶಾಲಿ ಪತ್ರಿಕೆ ೧೪ನೇ ವಾರ್ಷಿಕೋತ್ಸವ ವಿಶೇಷ ಸಂಚಿಕೆ - ೧೯೯೨

20. ಪದ್ಮಶಾಲಿ ಪತ್ರಿಕೆ ೨೦ನೇ ವಾರ್ಷಿಕೋತ್ಸವ ವಿಶೇಷ ಸಂಚಿಕೆ - ೧೯೯೫

21. ಮಾತೃಭೂಮಿ ಪತ್ರಿಕೆ - ಏಪ್ರಿಲ್ ೧೦, ೧೯೯೪.

# ವಕ್ತೃ ಮಾಹಿತಿ

| ಹೆಸರು | ವಯಸ್ಸು ಮತ್ತು ಲಿಂಗ | ಉದ್ಯೋಗ | ವಿಳಾಸ |
|---|---|---|---|
| ಟಿ. ದಾಮೋದರ | ೬೦ : ಪುರುಷ | ನಿವೃತ್ತ ಅಭಿಯಂತರರು | ವಿದ್ಯಾನಗರ, ಕಾಸರಗೋಡು |
| ದಾಮೋದರನ್ ಕೆ. | ೬೫ : ಪುರುಷ | ನಿವೃತ್ತ ಅಧ್ಯಾಪಕರು | ಅಧ್ಯಕ್ಷರು, ಪದ್ಮಶಾಲಿಯಾ ಸಂಘ, ಕಣ್ಣಾನೂರು |
| ರಾಘವನ್ ಸಿ. | ೬೫ : ಪುರುಷ | ನಿವೃತ್ತ ಅಧ್ಯಾಪಕರು | ತ್ರಿವೇಣಿ, ಪಿಲಿಕುಂಜೆ, ಕಾಸರಗೋಡು |
| ವೇಲಾಯುಧನ್ ಇ. | ೬೦ : ಪುರುಷ | ನಿವೃತ್ತ ಜಂಟಿ ನಿರ್ದೇಶಕರು | ಪಂಚಾಯತ್ ಹಾಗೂ ಗ್ರಾಮೀಣ ಅಭಿವೃದ್ಧಿ ವಿಭಾಗ, ನೀಲೇಶ್ವರ. |
| ಮಾನ ಮಾಸ್ಟರ್ | ೬೮ : ಪುರುಷ | ನಿವೃತ್ತ ಅಧ್ಯಾಪಕರು, | ಶಾರದಾ ನಗರ, ಅಣಂಗೂರು, ಕಾಸರಗೋಡು |
| ಗೋಪಾಲಕೃಷ್ಣ ಕೆ. | ೭೦ : ಪುರುಷ | ನಿವೃತ್ತ ಅಧ್ಯಾಪಕರು | ಪಾರೆಕಟ್ಟೆ, ರಾಮದಾಸ್ ನಗರ, ಕಾಸರಗೋಡು |
| ಕೃಷ್ಣ ಮಾಸ್ಟರ್ ಉಪ್ಪಳ | ೬೫ : ಪುರುಷ | ನಿವೃತ್ತ ಅಧ್ಯಾಪಕರು | ಬೋವಿ ಶಾಲೆಯ ಬಳಿ, ನಯಾ ಬಜಾರ್, ಉಪ್ಪಳ, ಕಾಸರಗೋಡು |
| ಮಿತ್ತಳಂ ಕೃಷ್ಣ | ೬೫ : ಪುರುಷ | ನೇಯ್ಗೆ | ನೀರ್ಚಾಲ್, ಮಾನ್ಯ |
| ಬಟ್ಯ ಎಕ್ರಾಜೆ | ೬೫ : ಪುರುಷ | ನೇಯ್ಗೆ | ಮಲ್ಲ ದೇವಸ್ಥಾನದ ಬಳಿ, ಮಲ್ಲ, ಕಾಸರಗೋಡು |
| ಕುಂಬ್ಳೆ ಸುಂದರರಾವ್ | ೬೫ : ಪುರುಷ | ಮಾಜಿ ಶಾಸಕರು | ಪಡೀಲ್, ಮಂಗಳೂರು. |
| ಮಂಟಂಪಾಡಿ ದಾಮೋದರ್ | ೬೦ : ಪುರುಷ | ನಿವೃತ್ತ ಅಧಿಕಾರಿ | ಕಾಸರಗೋಡು ವೀವರ್ಸ್ ಕೋ-ಆಪರೇಟಿವ್ ಸೊಸೈಟಿ, ಕಾಸರಗೋಡು. |
| ಚಂದ್ರಶೇಖರ ಕೆ.ವಿ. (ದಿವಂಗತ) | ೬೦ : ಪುರುಷ | ನಿವೃತ್ತ ಅಧ್ಯಾಪಕ | ಕಾಸರಗೋಡು ವೀವರ್ಸ್ ಕಾಲನಿ, |
| ಶೇಖರ ಕೆ. | ೫೦ : ಪುರುಷ | ನೇಕಾರ | ಕಾಸರಗೋಡು ವೀವರ್ಸ್ ಕಾಲನಿ |
| ಆನಂದ ಕಾರ್ನವ | ೬೦ : ಪುರುಷ | ನೇಯ್ಗೆ | ಜೋಡುಕಲ್ಲು, ಉಪ್ಪಳ, ಕಾಸರಗೋಡು |
| ಬ್ರಹ್ಮಾನಂದ ಪದ್ಮಶಾಲಿ | ೭೫ : ಪುರುಷ | ವರ್ತಕರು | [illegible], ಮಂಗಳೂರು |
| [illegible] | ೬[illegible] : ಪುರುಷ | ನೇಕಾರ | [illegible], ಕಾಸರಗೋಡು |
| [illegible] | ೬೫ : ಪುರುಷ | ನಿವೃತ್ತ ತಹಶೀಲ್ದಾರರು | ಶಾರದಾ ನಗರ, ಅಣಂಗೂರು, ಕಾಸರಗೋಡು |

| | | | |
|---|---|---|---|
| ಕುಮಾರನ್ | ೫೫ : ಪುರುಷ | ಕಂದಾಯ ಅಧಿಕಾರಿ | ಚಿನ್ಮಯ ಕಾಲನಿ, ವಿದ್ಯಾನಗರ, ಕಾಸರಗೋಡು |
| ಚಂದ್ರಶೇಖರ್ ಕೆ.ಪಿ. | ೬೦ : ಪುರುಷ | ನೇಕಾರ | ನಾಯಿಕಾಪು, ಕುಂಬಳೆ, ಕಾಸರಗೋಡು |
| ರಾಘವನ್ | ೬೦ : ಪುರುಷ | ನಿವೃತ್ತ ಅಭಿಯಂತರರು | ಚಿನ್ಮಯ ಕಾಲನಿ, ವಿದ್ಯಾನಗರ, ಕಾಸರಗೋಡು |
| ಪ್ರೊ. ಪಿ. ಶ್ರೀಕೃಷ್ಣ ಭಟ್ | ೬೦ : ಪುರುಷ | ನಿವೃತ್ತ ಪ್ರಾಧ್ಯಾಪಕರು | ಚಿನ್ಮಯ ಕಾಲನಿ, ವಿದ್ಯಾನಗರ, ಕಾಸರಗೋಡು |
| ನಾರಾಯಣ ಕೆ. | ೫೦ : ಪುರುಷ | ಪ್ರಬಂಧಕರು | ಕಾಸರಗೋಡು ಜಿಲ್ಲಾ ಸಹಕಾರಿ ಬ್ಯಾಂಕ್, ಕುಂಬಳೆ ಶಾಖೆ |
| ಮುಂಡಪ್ಪ ಬೋಳೂರು | ೬೫ : ಪುರುಷ | ನಿವೃತ್ತ ಅಧ್ಯಾಪಕರು | ಮಾಣಿಕ್ಯ, ಮರೋಳಿ, ಕುಲಶೇಖರ, ಮಂಗಳೂರು |
| ಮೋಹನದಾಸ್ ಕೆ. | ೭೦ : ಪುರುಷ | ಟೈಲರ್ | ಸಿಟಿ ಬಸ್ ಸ್ಟ್ಯಾಂಡ್ ಬಳಿ, ಕಾಸರಗೋಡು |
| ಭಾಸ್ಕರ್ ಜೋಡುಕಲ್ಲು | ೫೫ : ಪುರುಷ | ವರ್ತಕರು | ಜೋಡುಕಲ್ಲು, ಉಪ್ಪಳ, ಕಾಸರಗೋಡು |
| ಕಮಲಾಕ್ಷ ಪಿ. | ೫೦ : ಪುರುಷ | ಉಪನ್ಯಾಸಕರು | ಸರಕಾರಿ ಕಾಲೇಜು, ವಿದ್ಯಾನಗರ, ಕಾಸರಗೋಡು |
| ತಿಮ್ಮಪ್ಪ ಮಾಸ್ಟರ್ | ೬೫ : ಪುರುಷ | ನಿವೃತ್ತ ಅಧ್ಯಾಪಕರು | ಜೋಡುಕಲ್ಲು, ಉಪ್ಪಳ, ಕಾಸರಗೋಡು |
| ಮಾಧವನ್ ಸಿ. | ೬೦ : ಪುರುಷ | ನಿವೃತ್ತ ಅಧ್ಯಾಪಕರು | ಉದುಮಾ, ಕಾಸರಗೋಡು |
| ಭಾಸ್ಕರನ್ ಸಿ. | ೬೩ : ಪುರುಷ | ನಿವೃತ್ತ ಅಧ್ಯಾಪಕರು | ಉದುಮಾ, ಕಾಸರಗೋಡು |
| ಜೀವಿ ಶೆಟ್ಟಿಗಾರ | ೫೫ : ಪುರುಷ | ಸರಕಾರಿ ಅಧಿಕಾರಿ | ಕಳವಾ (ಪಶ್ಚಿಮ), ಮುಂಬಯಿ |
| ಕಲ್ಯಾಣಿ | ೭೦ : ಸ್ತ್ರೀ | ಮನೆವಾರ್ತೆ | ಶಾರದಾ ನಗರ, ಅಣಂಗೂರು, ಕಾಸರಗೋಡು |
| ಮಾಧವಿ | ೬೦ : ಸ್ತ್ರೀ | ನೇಯ್ಗೆ | ಕೋಟೆಕಣಿ, ರಾಮದಾಸ ನಗರ, ಕಾಸರಗೋಡು. |
| ದೇವಕಿ | ೬೦ : ಸ್ತ್ರೀ | ಮನೆವಾರ್ತೆ | ಅಶೋಕನಗರ, ಮಂಗಳೂರು |
| [illegible] | ೭೫ : ಸ್ತ್ರೀ | ನೇಯ್ಗೆ | ಕೋಟೆಕಣಿ, ರಾಮದಾಸ ನಗರ, ಕಾಸರಗೋಡು |
| ಜಾನಕಿ | ೬೦ : ಸ್ತ್ರೀ | ನಿವೃತ್ತ ಅಧ್ಯಾಪಕಿ | ಜೋಡುಕಲ್ಲು, ಉಪ್ಪಳ, ಕಾಸರಗೋಡು |

